# ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕಾದಂಬರಿಗಳ ಅಧ್ಯಯನ

## (ಆಯ್ದ ಕಾದಂಬರಿಗಳನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

**ರಶ್ಮಿ**

ಮಾರ್ಗದರ್ಶಕರು

**ಡಾ.ಅಮರೇಶ ಎನ್.**

ಪ್ರಾಧ್ಯಾಪಕರು





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೬

# ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕಾದಂಬರಿಗಳ ಅಧ್ಯಯನ

## (ಆಯ್ದ ಕಾದಂಬರಿಗಳನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

**ರಶ್ಮಿ**

ಮಾರ್ಗದರ್ಶಕರು

**ಡಾ.ಅಮರೇಶ ಎನ್.**

ಪ್ರಾಧ್ಯಾಪಕರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೬



## ಸಂಶೋಧಕರ ಘೋಷಣಾ ಪತ್ರ

**ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕಾದಂಬರಿಗಳ ಅಧ್ಯಯನ(ಆಯ್ದ ಕಾದಂಬರಿಗಳನ್ನು ಅನುಲಕ್ಷಿಸಿ)** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದ, ಪ್ರಾಧ್ಯಾಪಕರಾದ **ಡಾ.ಅಮರೇಶ ಎನ್.** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

Rashmi

**ರಶ್ಮಿ**

ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿನಿ

**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

**ವಿದ್ಯಾರಣ್ಯ ೫೮೩ ೨೭೬**

**ಸ್ಥಳ** : ವಿದ್ಯಾರಣ್ಯ

**ದಿನಾಂಕ** : 05/2/2016

## ಮಾರ್ಗದರ್ಶಕರ ದೃಢೀಕರಣ ಪತ್ರ

**ರಶ್ಮಿ** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕಾದಂಬರಿಗಳ ಅಧ್ಯಯನ(ಆಯ್ದ ಕಾದಂಬರಿಗಳನ್ನು ಅನುಲಕ್ಷಿಸಿ)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಅಮರೇಶ ಎನ್.**
ಪ್ರಾಧ್ಯಾಪಕರು
**ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ** : ವಿದ್ಯಾರಣ್ಯ
**ದಿನಾಂಕ:** 05/12/2016

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ, ವೈಧಾನಿಕತೆ

## ಪ್ರವೇಶ

ಆಧುನಿಕ ಕನ್ನಡ ಸಾಹಿತ್ಯದ ಮೊದಲ ಘಟ್ಟದಲ್ಲಿ ಆಯಾ ಸಮಾಜದ ಆಶೋತ್ತರ, ಅಭಿರುಚಿ, ಸಂಸ್ಕೃತಿಗಳನ್ನು ವಿವರವಾಗಿ ಕಟ್ಟಿಕೊಡುವ ಮತ್ತು ಸಾಂಸ್ಕೃತಿಕ ರೂಪವಾಗಿ ಬರೆಹಗಾರರ ಒಲವುಗಳಿಸಿದ ಪ್ರಕಾರವೆಂದರೆ ಕಾವ್ಯಕ್ಕಿಂತಲೂ ಮೊದಲು ಕಾದಂಬರಿಯಲ್ಲಿ ಕಾಣಿಸಿಕೊಂಡಿತೆನ್ನುವುದು ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ತಿಳಿಯಲಾಗುತ್ತದೆ. ೧೮೭೫ ರಿಂದ ೧೯೩೦ರ ವರೆಗಿನ ಕಾಲವನ್ನು ಕಾದಂಬರಿಯ ಉದಯ ಕಾಲವೆಂದು ಹಾಗೂ ಇದಕ್ಕೆ ಮುಖ್ಯ ಪ್ರೇರಣೆ ಇಂಗ್ಲಿಷ್ ಶಿಕ್ಷಣದಿಂದ ನೇರವಾಗಿ ಬಂಗಾಲಿ ಹಾಗೂ ಮರಾಠಿಗಳಂತ ಭಾರತೀಯ ಭಾಷೆಗಳಿಂದ ಸುತ್ತಾಗಿ ಹರಿದು ಬಂದ ಪಾಶ್ಚಾತ್ಯ ಪ್ರಭಾವವೆಂದು ಗುರುತಿಸಲಾಗಿದೆ. ಅದರಲ್ಲೂ ಅನುವಾದದ ಮೂಲಕ ಬಿ.ವೆಂಕಟಾಚಾರ್ಯರಿಂದ (ಬಂಗಾಳಿ ಪ್ರೇರಣೆ) 'ಕಾದಂಬರಿ' ಎಂಬ ಹೆಸರಿನಿಂದ ಪ್ರವೇಶಿಸಿದ ಈ ಕಲಾ ಪ್ರಕಾರ ನಂತರ ಸ್ವತಂತ್ರ ಅಸ್ತಿತ್ವವನ್ನು ಪಡೆದು ಐತಿಹಾಸಿಕ, ಸಾಮಾಜಿಕ ಪತ್ತೇದಾರಿ ಮೊದಲಾದ ವಸ್ತುವನ್ನೊಳಗೊಂಡು ಜನಪ್ರಿಯವಾಯಿತು. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಸ್ವಾತಂತ್ರ್ಯಪೂರ್ವ ಕಾಲಘಟ್ಟವು ಸಂಕ್ರಮಣ ಕಾಲ. ಏಕೆಂದರೆ ಬ್ರಿಟೀಷರ ಮೂಲಕ ಭಾರತದಲ್ಲಿ ಚಲಾವಣೆಗೆ ಬಂದ ಆಧುನಿಕ ಶಿಕ್ಷಣ ಪದ್ಧತಿ ಮತ್ತು ಆ ಮೂಲಕ ಸಂಪರ್ಕಕ್ಕೆ ಬಂದ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯ ಭಾರತೀಯ ಸಮಾಜದ ಮೇಲೆ ಗಂಭೀರ ಪರಿಣಾಮಗಳನ್ನುಂಟು ಮಾಡಿದವು. ಅದುವರೆಗಿನ ಶಿಕ್ಷಣ ಕ್ಷೇತ್ರದ ಸೌಲಭ್ಯಗಳೆಲ್ಲಾ ಮೇಲ್ಜಾತಿಯವರಿಗೆ ಮಾತ್ರ ಮೀಸಲಾಗಿದ್ದವು. ಹೊಸ ಶಿಕ್ಷಣ ನೀತಿಯಿಂದಾಗಿ, ಶಿಕ್ಷಣದಿಂದ ವಂಚಿತರಾದ ಜನರಿಗೆ ಈ ಸೌಲಭ್ಯಗಳು ದೊರಕುವಂತಾದವು. ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯ ಒಂದು ದೃಷ್ಟಿಯಲ್ಲಿ ಭಾರತೀಯ ಸಮಾಜದಲ್ಲಿ ದೊಡ್ಡ ಎಚ್ಚರವನ್ನೇ

ಉಂಟು ಮಾಡಿತು. ಜೊತೆಗೆ ಇಂಗ್ಲಿಷ್ ನಂತರ ಹೊರಗಿನ ಭಾಷೆ ಮತ್ತು ಸಂಸ್ಕೃತಿಗಳ ಸಂಪರ್ಕದಿಂದಾಗಿ ಇಲ್ಲಿ ಹೊಸಗಾಳಿ ಬೀಸಲಾರಂಭಿಸಿತು. ಸಾಹಿತ್ಯದಲ್ಲಿ ಅನುಭವಗಳು ದಾಖಲಾದದ್ದು ಈ ಕಾಲದಲ್ಲಿಯೇ. ಗದ್ಯ ಸಾಹಿತ್ಯದ ಬೆಳವಣಿಗೆಯಂತೂ ಸಾಮಾಜಿಕ ಜಾಗೃತಿಯನ್ನೆ ಮುಖ್ಯ ಉದ್ದೇಶವಾಗಿರಿಸಿಕೊಂಡು ರೂಪುಗೊಂಡದ್ದಾಗಿದೆ. ಈ ಕಾರಣದಿಂದ ಭಾರತೀಯ ಸಮಾಜದಲ್ಲಿ ಪಾರಂಪರಿಕವಾಗಿ ಉಳಿದುಕೊಂಡು ಬಂದಿದ್ದ ನಂಬಿಕೆ, ಸಂಪ್ರದಾಯಗಳನ್ನು ಪರಿಶೀಲಿಸುವ ಪ್ರಯತ್ನ ನಡೆಯಿತು. ಇಂತಹ ಪ್ರಯತ್ನಗಳ ಹಿಂದೆ, ಎರಡು ಉದ್ದೇಶಗಳಿದ್ದುದು ಸ್ಪಷ್ಟವಾಗಿದೆ. ಒಂದು ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯದಿಂದ ಸಂಪರ್ಕಕ್ಕೆ ಬಂದ ಆಧುನಿಕ ವಿಚಾರ ಮತ್ತು ಅನುಭವಗಳ ಎದುರಿನಲ್ಲಿ ಗತಕಾಲದ ನಮ್ಮ ಪರಂಪರೆ ಕೊಚ್ಚಿ ಹೋಗಬಾರದೆಂಬ ಆತಂಕದಿಂದ ಅದನ್ನು ಉಳಿಸಿಕೊಳ್ಳುವ ಶ್ರದ್ಧೆ ಪ್ರಕಟವಾಗಿದೆ. ಅಂಧಶ್ರದ್ಧೆ ಮತ್ತು ಕಂದಾಚಾರಗಳನ್ನು ನಿರಾಕರಿಸಿ, ಹೊಸ ಮೌಲ್ಯಗಳನ್ನು ಆವಿಷ್ಕಾರ ಮಾಡಿಕೊಳ್ಳುವ ಹಂಬಲ ಕಾಣಿಸಿಕೊಂಡಿದೆ. ಈ ಕಾರಣದಿಂದಾಗಿ ಕನ್ನಡ ಕಾದಂಬರಿ ಸಾಹಿತ್ಯದ ಕೃತಿಗಳು ಸಾಮಾಜಿಕ ಸಮಸ್ಯೆಗಳನ್ನು ಆಧರಿಸಿ ರಚಿತವಾಗಿವೆ. ಅದರಲ್ಲೂ ವಿಶೇಷವಾಗಿ ಸ್ತ್ರೀ ಜೀವನವನ್ನು ಕುರಿತಂತೆ ಹೆಚ್ಚು ಕಾದಂಬರಿಗಳು ಈ ಕಾಲದಲ್ಲಿ ರಚನೆಯಾಗಿವೆ.

ಕನ್ನಡ ಕಾದಂಬರಿಯ ಮೊದಲ ಹಂತದ ಬೆಳವಣಿಗೆಯನ್ನು ನೋಡಿದರೆ ಸ್ತ್ರೀ ಜೀವನವನ್ನು ಕುರಿತ ಕಾದಂಬರಿಗಳೇ ಹೆಚ್ಚಾಗಿ ಬಂದಿದೆ. ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ'(೧೮೯೯), ಬೋಳಾರ ಬಾಬುರಾಯರ 'ವಾಗ್ದೇವಿ'(೧೯೦೫) ಕೆರೂರು ವಾಸುದೇವಾಚಾರ್ಯರ 'ಇಂದಿರೆ' (೧೯೦೮), ಎಂ.ಎಸ್.ಪುಟ್ಟಣ್ಣನವರ 'ಮಾಡಿದುಣ್ಣೊ ಮಹಾರಾಯ'(೧೯೧೫), ಸಂತೂಬಾಯಿ ನೀಲಗಾರರ 'ಸದ್ಗುಣಿ ಕೃಷ್ಣಾಬಾಯಿ ಮತ್ತು ಉತ್ತಮ ಗೃಹಿಣಿ'(೧೯೦೫). ನಂಜನಗೂಡು ತಿರುಮಲಾಂಬಾ ಅವರ 'ಸುಶೀಲೆ'(೧೯೧೩), 'ನಭಾ'(೧೯೧೪), ಆರ್.ಕಲ್ಯಾಣಮ್ಮನವರ ನಿರ್ಭಾಗ್ಯ 'ವನಿತೆ'(೧೯೨೧), ಶಿವರಾಮ ಕಾರಂತರ 'ಸರಸಮ್ಮನ ಸಮಾಧಿ'(೧೯೩೭) ಮತ್ತು ಕುವೆಂಪು ಅವರ 'ಕಾನೂರು ಹೆಗ್ಗಡಿತಿ'(೧೯೩೬) ಕಾದಂಬರಿಗಳು ಸ್ತ್ರೀ ಜೀವನವನ್ನೇ ಮುಖ್ಯ ವಸ್ತುವಾಗಿರಿಸಿಕೊಂಡು ರಚನೆಯಾಗಿವೆ. ಇಲ್ಲಿಯ ವಿಶೇಷತೆ ಎಂದರೆ ಮೇಲೆ ಉದಾಹರಿಸಲಾದ ಎಲ್ಲಾ ಕಾದಂಬರಿಗಳ ಹೆಸರುಗಳು ಸಹ ಸ್ತ್ರೀವಾಚಿಯಾಗಿಯೇ ಇವೆ. ಆ ಕಾಲದ ಕನ್ನಡ ಕಾದಂಬರಿಕಾರರಿಗೆ ಸ್ತ್ರೀ ಜೀವನದ ಮೇಲೆ ಹೆಣ್ಣಿನ ಆಸಕ್ತಿ ಪ್ರಕಟವಾಗಿರುವುದು ಕುತೂಹಲಕರವಾದ ಸಂಗತಿಯಾಗಿದೆ.

ವಸ್ತು, ಧೋರಣೆ, ಅಭಿವ್ಯಕ್ತಿಗಳ ದೃಷ್ಟಿಯಿಂದ ಒಂದು ನಿರ್ದಿಷ್ಟ ಕಾಲ ಸಂದರ್ಭದಲ್ಲಿ ಹೊಸದೊಂದು ಕಲಾ ಪ್ರಕಾರವು ಮೈದಾಳಲು ಹಾಗೂ ಜನಪ್ರಿಯಗೊಳ್ಳಲು ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಕಾರಣಗಳಿರುತ್ತವೆ. ಜೊತೆಗೆ ಆರಂಭದ ಕಾದಂಬರಿಗಳು ಹೆಚ್ಚು 'ಸ್ತ್ರೀ' ಕೇಂದ್ರ

ಬಿಂದುವಾಗಿಟ್ಟುಕೊಂಡು ರಚನೆ ಮಾಡಿರುವುದು ಯಾಕೆ? ಈ ಕಾಲದ ಲೇಖಕರೆಲ್ಲಾ ತಮ್ಮ ಸಂಸ್ಕೃತಿಯಲ್ಲಿ ಆಳವಾಗಿ ಬೇರು ಬಿಟ್ಟವರಾಗಿದ್ದು, ಸನಾತನ ಧರ್ಮದ ಮೌಲ್ಯಗಳನ್ನು ನಂಬಿದವರಾಗಿದ್ದರು. ಪಾಶ್ಚಾತ್ಯ ಸಂಸ್ಕೃತಿಯ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ಅನುಭವಗಳು ಅವರಿಗಿದ್ದರೂ ಅದಕ್ಕೆ ಪ್ರತಿಕ್ರಿಯಿಸುವ ರೀತಿ ಮಾತ್ರ ಬೇರೆ ಬೇರೆಯಾಗಿತ್ತು. ಅದು ಯಾಕೆ ಎಂಬ ಪ್ರಶ್ನೆಗೆ ಉದಾಹರಣೆಗೆ ಗಳಗನಾಥರು ಮತ್ತು ಎಂ.ಎಸ್.ಪುಟ್ಟಣ್ಣ ಇವರನ್ನು ಒಟ್ಟಿಗೆ ನೋಡಬಹುದು. ಗಳಗನಾಥರ 'ಕುಮುದಿನಿ' ಐತಿಹಾಸಿಕ ಕಾದಂಬರಿಯಾದರೆ ಪುಟ್ಟಣ್ಣವರ 'ಮಾಡಿದುಣ್ಣೊ ಮಹಾರಾಯ' ಸಾಮಾಜಿಕ ಕಾದಂಬರಿ. ಆದರೆ ಎರಡೂ ಕಾದಂಬರಿಗಳು ಪಾತಿವ್ರತ್ಯ, ಸ್ವಾಮಿ ಭಕ್ತಿಗಳಂಥ ಪಾರಂಪರಿಕ ಮೌಲ್ಯಗಳನ್ನೆ ವಿಜೃಂಭಿಸುತ್ತವೆ. ಇಂಗ್ಲಿಷ್ ಶಿಕ್ಷಣವನ್ನು ಪಡೆದು ಪಾಶ್ಚಾತ್ಯರ ಕೀಟಗಳು ಮತ್ತು 'ಪ್ರಾಗ್ದೇಶಿಯ ಕ್ರಿಮಿ'ಗಳಂತ ಹುಟ್ಟಿದ ಪರಕೀಯ ಸಂಸ್ಕೃತಿ ದುಷ್ಪರಿಣಾಮಗಳನ್ನು ವಿರೋಧಿಸಿದರೆ ಇಂತಹ ನೇರ ಅನುಭವವಿಲ್ಲದ ಗಳಗನಾಥರು ಸ್ವಸಂಸ್ಕೃತಿಯ ಸಮರ್ಥನೆಗೆ ಇತಿಹಾಸ ಹಾಗೂ ಕಲ್ಪನೆಗಳನ್ನು ಅವಲಂಭಿಸಿದರು. ಇದೇ ಸಾಂಸ್ಕೃತಿಕ ಸಂದರ್ಭದಲ್ಲಿ ಕಾದಂಬರಿ ರಚನೆಗೆ ಕೈ ಹಾಕಿದ ಗುಲ್ವಾಡಿ ವೆಂಕಟರಾಯರು ಮತ್ತು ಬೋಳಾರ ಬಾಬುರಾಯರ ಮನೋಧರ್ಮ. ಗಳಗನಾಥ ಹಾಗೂ ಪುಟ್ಟಣ್ಣನವರ ಮನೋಧರ್ಮಕ್ಕಿಂತ ಬೇರೆಯಾಗಿತ್ತು. 'ಇಂದಿರಾಬಾಯಿ' ಕಾದಂಬರಿಯಲ್ಲಿ ಸದ್ಧರ್ಮ ವಿಜಯವನ್ನೆ ಗುಲ್ವಾಡಿಯವರು ತೋರಿಸಿದರಾದರೂ ಅದರ ಲಕ್ಷ್ಯ ಸಮಾಜದ ಅನಿಷ್ಟಗಳನ್ನು ವಿಡಂಬಿಸುವುದರ ಕಡೆಗಿತ್ತು. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ಗುಲ್ವಾಡಿಯವರ ಮೇಲೆ ದಟ್ಟವಾಗಿ ಬಿದ್ದಿತ್ತಾದುದರಿಂದ ಅವರು ತಮ್ಮ ಸಮಕಾಲೀನ ಸಾಂಸ್ಕೃತಿಕ ಜೀವನವನ್ನು ಹೊರಗಿನಿಂದ ನೋಡಲು ಶಕ್ತರಾದರು.

ಬೋಳಾರ ಬಾಬುರಾಯ ಅವರ 'ವಾಗ್ದೇವಿ' ಇದಕ್ಕೂ ಮುಂದೆ ಹೋಗಿ ನೈತಿಕ ತಾಟಸ್ಥ್ಯವನ್ನು ಆರಿಸಿಕೊಂಡಿತು. ಕೆರೂರು ವಾಸುದೇವಚಾರ್ಯರ 'ಇಂದಿರೆ'(೧೯೦೮) ಸ್ತ್ರೀ ಶಿಕ್ಷಣ, ಸ್ತ್ರೀ ಸ್ವಾತಂತ್ರ್ಯ ಹಾಗೂ ವಿಧವಾ ವಿವಾಹ ನಂತರ ಸಮಸ್ಯೆಗಳನ್ನು ಚರ್ಚಿಸಿ ಈ ಕಾದಂಬರಿ ಹೊಸ ಕಾಲದ ಹೊಸ ಮೌಲ್ಯಗಳನ್ನು ಅಳವಡಿಸಿಕೊಳ್ಳುವ ಸಂಘರ್ಷದ ಮಟ್ಟದಲ್ಲಿಯೇ ನಿಲ್ಲುತ್ತದೆ. ಸುಧಾರಣಾವಾದದ ಪ್ರಬಲ ಸಮರ್ಥನೆ ಮಾಡಿರುವುದು ಪಂಡಿತ ರಾಧಾಬಾಯಿಯ ಪಾತ್ರದ ಮೂಲಕ ವಿಫಲಗೊಳಿಸುತ್ತದೆ.

ತಿರುಮಲಾಂಬಾ, ಸಂತೂಬಾಯಿ ನೀಲಗಾರ, ಕಲ್ಯಾಣಮ್ಮನವರ ಕಾದಂಬರಿಗಳಲ್ಲಿ ಸ್ತ್ರೀಪರ ಚಿಂತನೆ ಮತ್ತು ಸ್ತ್ರೀ ಸಂವೇದನೆಯ ಸಾಂಸ್ಕೃತಿಕ ಅನಾವರಣವನ್ನು ನೋಡಬಹುದು. ಕೌಟುಂಬಿಕ ಬದುಕಿನಲ್ಲಿ ಗೃಹಿಣಿಯರು ಒಳಗಾಗುತ್ತಿದ್ದ ಅನ್ಯಾಯಗಳ ಬಗೆಗಳನ್ನು ಕಲ್ಯಾಣಮ್ಮ ತಮ್ಮ ಕಾದಂಬರಿಗಳಲ್ಲಿ ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಬಾಲ್ಯವಿವಾಹ, ವರದಕ್ಷಿಣೆ, ವೈಧವ್ಯದ ಸಮಸ್ಯೆಗಳಲ್ಲಿ ಕುಟುಂಬದ ದ್ವಿಸ್ತರ ನೀತಿಯಿಂದ ಸ್ತ್ರೀಯರಿಗಾಗುವ ಅನ್ಯಾಯಗಳನ್ನು ಪ್ರಿಯಂವದಾ ಆಕೆಯ ತಾಯಿ ಅತ್ತೆ, ನಾದಿನಿಯರ

ಪಾತ್ರಗಳಲ್ಲಿ ಮತ್ತು 'ನಿರ್ಭಾಗ್ಯ ವನಿತೆ' ಕಾದಂಬರಿಯ ಇಂದಿರೆ, ಸ್ವರ್ಣಾ ಮುಂತಾದ ಪಾತ್ರಗಳಲ್ಲಿ ಲೇಖಕಿ ಗ್ರಹಿಸಿದ್ದಾರೆ. ಆದರೆ ಈ ಎಲ್ಲಾ ಸಮಸ್ಯೆಗಳ ಆಳದಲ್ಲಿರುವ ವ್ಯವಸ್ಥೆಯ ಶಕ್ತಿಗಳನ್ನು ಗ್ರಹಿಸುವಲ್ಲಿ ಅವರು ತಮ್ಮ ಕಾಲದ ನಂಬಿಕೆಗಳಿಗೆ ಬದ್ಧರಾಗಿ ಉಳಿದಿರುವುದು ಕಾಣಬಹುದು.

ಪುಟ್ಟಣ್ಣನವರ ಧೋರಣೆಗಳಿಗೆ ತದ್ವಿರುದ್ಧವಾಗಿ ವೈಜ್ಞಾನಿಕ ಚಿಂತನೆ, ಮಾನವತವಾದದ ಮೂಲಕ ಸಂಪ್ರದಾಯಸ್ಥ ಸಮಾಜದ ರೂಢಿಗತ ಬದುಕನ್ನು ಚಿಕಿತ್ಸಕ ದೃಷ್ಟಿಯಿಂದ ನೋಡುವ ಶಿವರಾಮ ಕಾರಂತರ 'ಸರಸಮ್ಮನ ಸಮಾಧಿ' ಕಾದಂಬರಿಯ ಈ ಸರಸಮ್ಮ, ಅರುಂದಮ್ಮ ಮುಂತಾದ ಸತಿಯರ ಸುತ್ತಲಿರುವ ಪವಾಡದ ಸತ್ಯವನ್ನು ಹೊರಹಾಕಲು ಯತ್ನಿಸಿದೆ. ಕುವೆಂಪು ಅವರ 'ಕಾನೂರು ಹೆಗ್ಗಡಿತಿ' ಯಜಮಾನ್ಯ ಪದ್ಧತಿಯ ಎಲ್ಲಾ ಸ್ತರಗಳನ್ನು ಒಳಗೊಂಡಿದೆ. ಮಿರ್ಜಿ ಅಣ್ಣಾರಾಯರ 'ನಿಸರ್ಗ' ಕಾದಂಬರಿಯಲ್ಲಿ ಆದರ್ಶ ಪ್ರೇಮದ ನಂಬಿಕೆಗೂ, ವಿವಾಹ ಸಂಸ್ಥೆಗೂ ಉಂಟಾಗುವ ಸಂಘರ್ಷದ ನಯವಾದ ಚಿತ್ರಣವಿದೆ. ಕಾದಂಬರಿಯ ಉದ್ದಕ್ಕೂ ಲಿಂಗಭೇದದಿಂದ ಉದ್ಭವಿಸುವ ದ್ವಿಸ್ತರ ನ್ಯಾಯದ ಅಂಶಗಳ ಪ್ರಸ್ತಾಪವಿದೆ.

ಹೀಗೆ ಸ್ವಾತಂತ್ರ್ಯಪೂರ್ವದಲ್ಲಿ ಲೇಖಕರ ದೃಷ್ಟಿಕೋನ ವಿಭಿನ್ನತೆಯಿದ್ದರೂ ಅವರು ಆಯ್ಕೆ ಮಾಡಿಕೊಂಡ ವಸ್ತು ಹೆಚ್ಚು ಕಡಿಮೆ ಸ್ತ್ರೀಯರೇ ಆಗಿದ್ದಾರೆ. ಹಾಗಾಗಿ ಈ ಅಧ್ಯಯನದಲ್ಲಿ ಕಾಲದಿಂದ ಕಾಲಕ್ಕೆ ಸಮಾಜ ಬದಲಾದಂತೆ ಸ್ತ್ರೀ ಜೀವನದ ಸ್ವರೂಪ ಹಾಗೂ ಸಮಸ್ಯೆಗಳು ಬದಲಾಗುತ್ತವೆ. ಹಾಗೆಯೇ ಸ್ಥಾನಮಾನಗಳು ಬದಲಾಗುತ್ತವೆ. ಆದಾಗ್ಯೂ ಮಹಿಳೆ ಒಂದಲ್ಲಾ ಒಂದು ರೀತಿಯಲ್ಲಿ ಸಮಸ್ಯೆಯನ್ನು ಎದುರಿಸುತ್ತಿದ್ದಾಳೆ. ಅದು ಕುಟುಂಬದಲ್ಲಿ ಇರಬಹುದು ಅಥವಾ ಇತರ ಕ್ಷೇತ್ರಗಳಲ್ಲಿರ ಬಹುದು. ಈ ಹಿನ್ನೆಲೆಯಲ್ಲಿ ವಿಭಿನ್ನ ಪ್ರಾದೇಶಿಕ ವಲಯದಿಂದ ತಮ್ಮದೇ ಆದ ಸಮುದಾಯ ಹಿನ್ನಲೆಯಲ್ಲಿ ಬಂದ ಕಾದಂಬರಿಕಾರ ಅಭಿವ್ಯಕ್ತಿಯಲ್ಲಿ, ಪಾತ್ರ ಚಿತ್ರಣದಲ್ಲಿ, ಸಾಂಸ್ಕೃತಿಕ ಒಳನೋಟ ಗಳೊಂದಿಗೆ ವೈಚಾರಿಕ ಹೊಳಹು ಇರುವುದರಿಂದ ಸ್ತ್ರೀಯರ ನೆಲೆಯಿಂದ ಪ್ರಶ್ನಿಸುವ, ಆ ಮೂಲಕ ಉತ್ತರ ಕಂಡುಕೊಳ್ಳುವ ಪ್ರಯತ್ನ ಮಾಡುವುದರಿಂದ ಈ ಅಧ್ಯಯನವು ಪ್ರಮುಖವಾಗಿದೆ.

## ಅಧ್ಯಯನದ ಉದ್ದೇಶ

ಸ್ವಾತಂತ್ರ್ಯಪೂರ್ವ ಕಾಲಘಟ್ಟದ ಕಾದಂಬರಿಗಳೆಲ್ಲವೂ ಹಾಗೂ ಆರಂಭದ ಕಾದಂಬರಿಗಳೆಲ್ಲವೂ ಸ್ತ್ರೀ ಕೇಂದ್ರಿತವಾಗಿವೆ. ಇದು ಕುತೂಹಲಕಾರಿಯಾಗಿದೆ ಹಾಗೂ ಆರಂಭದ ಕಾದಂಬರಿಕಾರರು ಸಾಮಾಜಿಕ ಸಮಸ್ಯೆಯನ್ನೆ ಗುರಿಯಾಗಿಸಿಕೊಂಡಿದ್ದಂತೆ ಸ್ತ್ರೀ ಸಮಸ್ಯೆಯನ್ನು ಸಹ ಅಷ್ಟೇ ಗಂಭೀರವಾಗಿ ಪರಿಗಣಿಸಿದ್ದರು. ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ವೈಧವ್ಯ, ಕೇಶಮುಂಡನೆ, ವಿಧವಾ ವಿವಾಹದಂತಹ ಹಲವು ಸಮಸ್ಯೆಗಳು ಅವರ ಕಾದಂಬರಿಯ ಮುಖ್ಯ ವಸ್ತುಗಳಾದವು. ವಿಶೇಷವಾಗಿ ಹೆಣ್ಣಿನ ಮೇಲಿನ ದಬ್ಬಾಳಿಕೆ ಮತ್ತು ಬಿಗಿಯಾದ ಜಾತಿಯ ಕಟ್ಟುಪಾಡುಗಳ ಮೇಲೆ ಗಮನಹರಿಸಿದ ನಮ್ಮ

ಆರಂಭದ ಕಾದಂಬರಿಕಾರರು ಆ ವಿಷಯಗಳನ್ನು ಹೆಚ್ಚಾಗಿ ತಮ್ಮ ಕಾದಂಬರಿಯ ವಸ್ತುಗಳನ್ನಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಈ ಅಂಶಗಳು ಹೆಣ್ಣಿನ ಸಮಸ್ಯೆ ಬಗೆಗಿದ್ದ ಕಾದಂಬರಿಕಾರರ ಕಾಳಜಿಯಾದುದನ್ನು ತಿಳಿಸುತ್ತದೆ. ಅವು ಯಾವ ಬಗೆಯದ್ದು ಹಾಗೂ ಆರಂಭದ ಕಾದಂಬರಿಗಳು ಮಹಿಳೆಯ ಬಿಕ್ಕಟ್ಟುಗಳನ್ನು ಅನಾವರಣಗೊಳಿಸಿರುವುದರ ಹಿಂದೆ ಅವರ ಬದುಕನ್ನು ಪುರುಷ ಜಗತ್ತು ಯಾವ ರೀತಿಯಲ್ಲಿ ನಿಯಂತ್ರಿಸಿವೆ ಎನ್ನುವುದು ಕಂಡುಕೊಳ್ಳುವ ಉದ್ದೇಶವಿದೆ.

ಕನ್ನಡದ ಮೊದಲ ಕಾದಂಬರಿಕಾರ್ತಿಯೆಂದು ಗುರುತಿಸಬೇಕಾಗಿರುವ ಉತ್ತರ ಕರ್ನಾಟಕದ ಸಂತೂಬಾಯಿ ನೀಲಗಾರರೂ ಸೇರಿದಂತೆ ತಿರುಮಲಾಂಬಾ, ಕಲ್ಯಾಣಮ್ಮ, ಅವರ ಕಾದಂಬರಿಗಳಲ್ಲಿ ಸಂಪ್ರದಾಯ ಮತ್ತು ಆಧುನಿಕತೆ, ಆದರ್ಶ ಹಾಗೂ ವಾಸ್ತವಗಳನ್ನು ಹೇಗೆ ಕಾದಂಬರಿಗಳಲ್ಲಿ ಪಾತ್ರಗಳ ಮೂಲಕ ಚಿತ್ರಿಸಿದ್ದಾರೆ ಎಂಬುವುದನ್ನು ಅರಿಯುವುದಾಗಿದೆ.

* ಸ್ವಾತಂತ್ರ್ಯ ಪೂರ್ವ ಕನ್ನಡ ಕಾದಂಬರಿಗಳಲ್ಲಿ ದಾಖಲುಗೊಂಡಿರುವ ಸ್ತ್ರೀ ಜೀವನದ ವಿವಿಧ ಮುಖಗಳನ್ನು ಪರಿಚಯಿಸುವುದು. ಇಲ್ಲಿ ಮುಖ್ಯವಾಗಿದೆ. ನಮ್ಮ ನಡುವೆ ಪುರುಷ ಪ್ರಧಾನ ಸಮಾಜವಿದ್ದರೂ ಈ ಸಮಾಜ ಸ್ತ್ರೀಯನ್ನು ನಡೆಸಿಕೊಂಡಿರುವ ರೀತಿಯನ್ನು ತಿಳಿಯಲು ಕಾದಂಬರಿಗಳು ನೆರವಾಗಬಲ್ಲವು. ಪುರುಷನಿಂದ ಕಡೆಗಣಿಸಿಲ್ಪಟ್ಟಿದ್ದರೂ ಒಟ್ಟಾರೆ ಜೀವನದಲ್ಲಿ ಪುರುಷನಿಗೆ ಹೆಗಲೆಣೆಯಾಗಿ ನಿಂತು, ಪುರುಷನ ಮಹತ್ಕಾರ್ಯಗಳಲ್ಲಿ ಸಹಾಯಕಳಾಗುವವಳು ಮಹಿಳೆಯೇ. ಆಕೆ ಸಾಮಾನ್ಯ ನೆಲೆಯಲ್ಲಿ ಪುರುಷಾವಲಂಬಿಯಾಗಿ ಕಂಡಲ್ಲಿ ಜೀವಿತದ ಸಂದಿಗ್ಧ ಪರಿಸ್ಥಿತಿಗಳಲ್ಲಿ ತನ್ನ ವೈಶಿಷ್ಟ್ಯತೆಯನ್ನು ತೋರಿಸಬಲ್ಲವಳಾಗಿದ್ದಾಳೆಂಬುದನ್ನು ಕಾದಂಬರಿಕಾರರು ಪ್ರಸ್ತಾಪಿಸಿದ್ದಾರೆ. ಈ ದೃಷ್ಟಿಯಿಂದ ಸ್ತ್ರೀ ಜೀವನದ ವಿವಿಧ ನೆಲೆಗಳನ್ನು ಗುರುತಿಸುವುದು.

* ಪುರುಷರ ಜಗತ್ತನ್ನೆ ತನ್ನದು ಎಂದು ಪರಿಭಾವಿಸಿಕೊಂಡು ಬದುಕುವ ಸ್ತ್ರೀಯರ ಒಟ್ಟು ಬದುಕಿನಲ್ಲಿ ಪ್ರಾಪಂಚಿಕ ಅನುಭವ ಎನ್ನುವುದು ಸಾರ್ವತ್ರಿಕ ರೂಪದಲ್ಲಿಯೇ ಪರಿಭಾವಿತ ಗೊಂಡಿದೆ. ಕನ್ನಡದಲ್ಲಿ ಕಾದಂಬರಿಕಾರ್ತಿಯರು ಈ ಪ್ರಪಂಚದ ಅನುಭವಗಳನ್ನು ಅವುಗಳ ಸಾರ್ವತ್ರಿಕ ಸ್ವರೂಪದಲ್ಲಿ ಗ್ರಹಿಸುವ ಬದಲು ವಿಶೇಷ ದೃಷ್ಟಿಕೋನಗಳಿಂದ ಕಾಣಲು ಯತ್ನಿಸಿದ್ದಾರೆ. ಹೀಗೆ ಒಳಗೊಂಡಿರಬಹುದಾದ ಸಾಂಸ್ಕೃತಿಕ ನೆಲೆಗಳನ್ನು ವಿವೇಚಿಸುವುದು.

* ಸ್ವಾತಂತ್ರ್ಯಪೂರ್ವ ಕಾಲದ ಕನ್ನಡ ಕಾದಂಬರಿಕಾರರು ಸಾಮಾಜಿಕ ಉದ್ದೇಶಗಳನ್ನು ಪ್ರಧಾನವಾಗಿಸಿಕೊಂಡು ಕೃತಿ ರಚನೆ ಮಾಡಿರುವುದು ಸ್ಪಷ್ಟವಾಗಿದೆ. ಈ ನಿಟ್ಟಿನಲ್ಲಿ ಸ್ತ್ರೀಪರ ಆಲೋಚನೆ ಹಾಗೂ ಸ್ತ್ರೀಪರ ಕಾಳಜಿಗಳು ಯಾವ ರೀತಿಯಲ್ಲಿ ವ್ಯಕ್ತವಾಗಿದೆ ಎಂಬುವುದನ್ನು ಗುರುತಿಸುವುದು.

* ಕಾದಂಬರಿಗಳಲ್ಲಿ ಚಿತ್ರಿಸಿರುವ ಸ್ತ್ರೀ ಜೀವನ ಸ್ವರೂಪವನ್ನು ಕೌಟುಂಬಿಕ, ಸಾಮಾಜಿಕ, ಧಾರ್ಮಿಕವಾಗಿ ಸ್ತ್ರೀ ಸಂವೇದನೆಯ ಹಿನ್ನಲೆಯಲ್ಲಿ ವಿಶ್ಲೇಷಿಸುವುದು.
* ಹೆಚ್ಚಾಗಿ ಕಾದಂಬರಿಗಳಲ್ಲಿ ವಿವಾಹ ಮತ್ತು ಕುಟುಂಬದ ನೆಲೆಯೇ ಸ್ತ್ರೀಯರ ಇರುವಿಕೆಯ ಸ್ಥಿತಿಯಾಗಿರುವುದರಿಂದ ಸಮಗ್ರ ಬದುಕಿನ ಮೇಲೆ ಯಾವ ಬಗೆಯಲ್ಲಿ ಪ್ರಭಾವ ಬೀರಿವೆ ಹಾಗೂ ಅವರ ಬದುಕನ್ನು ಹೇಗೆ ನಿಯಂತ್ರಿಸಿವೆ ಎನ್ನುವುದನ್ನು ಕಂಡುಕೊಳ್ಳುವ ಉದ್ದೇಶವಿದೆ.
* ಪ್ರಾದೇಶಿಕತೆಯ ಭಿನ್ನತೆ, ಕಾಲದ ಪರಿಮಿತಿ, ಸಾಂಸ್ಕೃತಿಕ ಸಂದರ್ಭಗಳನ್ನು ಗಮನದಲ್ಲಿಟ್ಟು ಕೊಂಡು ಕಾದಂಬರಿಗಳ ಭಾಷೆ, ಶೈಲಿ, ತಂತ್ರ ನಿರೂಪಣಾ ವೈಶಿಷ್ಟ್ಯತೆಯನ್ನು ಗುರುತಿಸುವುದರ ಮೂಲಕ ಚರ್ಚಿಸುವುದು.

ಈ ಎಲ್ಲಾ ಕಾರಣಗಳಿಂದ ಕಾದಂಬರಿಯ ಕಾಲ, ಧೋರಣೆ ಮತ್ತು ಪ್ರಯೋಗಗಳನ್ನು ವಿಶ್ಲೇಷಿಸುವ, ವಿಮರ್ಶಿಸುವುದಾಗಿದೆ ಮತ್ತು ಪ್ರಯೋಗಗಳು ಹೇಗೆ ಸ್ತ್ರೀ ಪಾತ್ರಗಳ ಮೂಲಕ ಅಭಿವ್ಯಕ್ತಿಗೊಂಡಿವೆ ಎಂಬುವುದು ವಿವೇಚಿಸುವುದು.

## ಅಧ್ಯಯನದ ಮಹತ್ವ

ಆರಂಭದ ಕಾದಂಬರಿಗಳೆಲ್ಲವೂ ಪ್ರಾತಿನಿಧಿಕವಾಗಿ ಸ್ತ್ರೀ ಕೇಂದ್ರಿತವಾಗಿದ್ದು ಸುಧಾರಣಾವಾದಿ ಚಳುವಳಿಗಳ ಪ್ರಭಾವ, ಬ್ರಿಟಿಷ್ ವಸಾಹತುಶಾಹಿಯಿಂದ ಕಲಿತ ಆಂಗ್ಲಭಾಷೆ ಮತ್ತು ರಾಷ್ಟ್ರೀಯ ಜಾಗೃತಿಯ ಪ್ರೇರಣೆಯಿಂದ ಆ ಕಾಲಘಟ್ಟದ ಕಾದಂಬರಿಗಳು ಧಾರ್ಮಿಕ ಮೂಢನಂಬಿಕೆಗಳ ಖಂಡನೆ, ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ವೈಧವ್ಯ, ಕೇಶಮುಂಡನೆ, ವಿಧವಾವಿವಾಹ, ಆದರ್ಶ ಮತ್ತು ವಾಸ್ತವ, ಸಂಪ್ರದಾಯ ಮತ್ತು ಆಧುನಿಕತೆ, ಸನಾತನ ಮೌಲ್ಯ, ಸಂಘರ್ಷ ಮೊದಲಾದವುಗಳ ಬಗೆಗಿನ ಚರ್ಚೆಯನ್ನು ಒಳಗೊಂಡಿರುವುದರಿಂದ ಈ ಅಧ್ಯಯನ ಮಹತ್ವವಾಗಿದೆ.

ಕಾದಂಬರಿಕಾರರ ಅಭಿವ್ಯಕ್ತಿಯಲ್ಲಿ ಹಾಗೂ ಪಾತ್ರ ಚಿತ್ರಣದಲ್ಲಿ ಮಹತ್ವದ ಚಿಂತನೆಗಳಿವೆ. ಮಹಿಳೆ ಬದುಕನ್ನು ಗ್ರಹಿಸುವ ಬಗೆ ಬೇರೆ, ಪುರುಷರಿಗಿಂತ ಭಿನ್ನವಾದ ಗ್ರಹಿಕೆ, ನಿರೀಕ್ಷೆ, ಹತಾಶೆ, ಹಂಬಲ, ಕನಸು, ಸುಖ, ದುಃಖಗಳು ಹೆಣ್ಣಿನವಾಗಿವೆ ಎಂದು ನಂಬಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅವಳು ಬದುಕನ್ನು ಕಂಡುದ್ದರ ಪಾತ್ರ ಇದ್ದೆ ಇರುತ್ತದೆ. ಅಂತಹುಗಳನ್ನು ಸಹ ಅಧ್ಯಯನ ಮಾಡಲಾಗುತ್ತದೆ. ಅದೇ ರೀತಿ ಯಾವುದೇ ಅರ್ಥವಿರದ ತನ್ನ ಒಳಬದುಕನ್ನು ತುಂಬಿಕೊಳ್ಳಲು ತಾನಿರುವ ಪರಿಸ್ಥಿತಿಯ ವಿರುದ್ಧ ಬಂಡೆದ್ದು ತನ್ನನ್ನು ಪ್ರತಿಪಾದಿಸಿ ಕೊಳ್ಳಲು ಕಾದಂಬರಿಕಾರ್ತಿ ಯತ್ನಿಸುತ್ತಾಳೆ. ಇದರಲ್ಲಿ ತಾನು ಬದುಕುವುದಕ್ಕಿಂತ ಭಿನ್ನವಾದ ಪ್ರಪಂಚವನ್ನು ಸೃಷ್ಟಿಸಲು ಆಕೆಗೆ ಆತ್ಮಾಭಿವ್ಯಕ್ತಿಗೆ ತೊಡಗುವುದೊಂದೇ ಮಾರ್ಗ. ಹೀಗೆ ಬರವಣಿಗೆ ಯನ್ನು ಆಯ್ದುಕೊಂಡು ಮಹಿಳೆ

ಅತ್ಯಲ್ಪ ಆಕಾಂಕ್ಷೆಯ ಜೊತೆ ತನ್ನ ನೆನಪುಗಳನ್ನು ಬರೆಯ ತೊಡಗುತ್ತಾಳೆ. ಆತ್ಮಕಥೆಯನ್ನು ಕಾದಂಬರಿಯಾಗಿಸುತ್ತಾಳೆ. ಹಾಗಾಗಿ ಇಂತಹ ಕಾದಂಬರಿಗಳಲ್ಲಿನ ಅಂಶಗಳನ್ನು ಸ್ತ್ರೀ ಮೂಲಕ ಅಧ್ಯಯನ ಮಾಡುವುದು.

ಪ್ರಾದೇಶಿಕ ಭಿನ್ನತೆಯ ಹಿನ್ನೆಲೆಯಿಂದ ರಚನೆಯಾದ ಕಾದಂಬರಿಗಳಲ್ಲಿ ಸ್ತ್ರೀ ವಿವಿಧ ರೀತಿಯಲ್ಲಿ ಹೇಗೆ ಅಭಿವ್ಯಕ್ತಿಗೊಂಡಿದ್ದಾಳೆ ಎಂಬುವುದನ್ನು ಒಳಗೊಂಡಿದೆ.

ಪ್ರಸ್ತುತತೆಯಲ್ಲಿ ಸ್ತ್ರೀವಾದಿ ಅಧ್ಯಯನಗಳು ಹೆಣ್ಣಿನ ಜೈವಿಕತೆಯನ್ನು ಪ್ರಧಾನವಾಗಿಟ್ಟುಕೊಂಡು ಪುರುಷನು ಸ್ತ್ರೀವಾದಿ ಚಿಂತನೆಯು ಮೂಡಿಸಿರುವ ಹೊಸ ಬಗೆಯ ಸಾಹಿತ್ಯಾಧ್ಯಯನದಲ್ಲಿ ಸಾಹಿತ್ಯ ಪಠ್ಯಗಳು ಸಾಂಸ್ಕೃತಿಕ ಉತ್ಪಾದನೆಗಳೆಂದೂ, ಪ್ರಚಲಿತ ವ್ಯವಸ್ಥೆಯನ್ನು ಅವು ತಮ್ಮ ರೂಪಕ ಸಂಕೇತಗಳಿಂದ ಪ್ರತಿನಿಧಿಸುತ್ತಿರುತ್ತವೆಂದೂ ನಂಬಲಾಗುತ್ತದೆ. ಈ ರೀತಿ ಸಾಂಸ್ಕೃತಿಕ ಹಿನ್ನೆಲೆಯ ವಿಮರ್ಶೆಯಂತೆ ಸ್ತ್ರೀವಾದ ವಿಮರ್ಶೆಯೂ ಕೃತಿಯೊಂದನ್ನು ತನ್ನ ಆಶಯದ ವಸ್ತುವನ್ನು ಹೇಗೆ ಹೇಳುತ್ತದೆ. ಯಾವ ಭಾಷೆ, ಎಂಥ ತಂತ್ರ, ಏನು ಆಕೃತಿ, ನಿರೂಪಣೆ ಎಂಬ ಸಾಹಿತ್ಯ ಲಕ್ಷಣಗಳಿಗೆ ಒತ್ತು ಕೊಡುವ ಕೃತಿ ನಿಷ್ಠ ಓದುವಿಕೆಗಿಂತ ಭಿನ್ನವಾಗಿರಲು ಯತ್ನಿಸುತ್ತದೆ. ವಿಷಯವನ್ನು ಹೇಗೆ ಹೇಳಲಾಗುತ್ತದೆ. ಹಾಗೆ ಹೇಳುವುದರ ಹಿಂದಿನ ಉದ್ದೇಶಗಳೇನು, ಹಿತಾಸಕ್ತಿಗಳೇನು ಎಂಬುದನ್ನು ಈ ಸ್ತ್ರೀವಾದಿ ಅಧ್ಯಯನ ಗಮನಿಸುತ್ತದೆ. ಈ ಹಿನ್ನೆಲೆಯಲ್ಲಿ 'ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕಾದಂಬರಿಗಳ ಅಧ್ಯಯನವು ಮಹತ್ವವನ್ನು ಹೊಂದಿದೆ.

## ಅಧ್ಯಯನದ ವ್ಯಾಪ್ತಿ

ಆಧುನಿಕ ಕನ್ನಡ ಸಾಹಿತ್ಯದ ಮೊದಲ ಘಟ್ಟದಲ್ಲಿ ಬರೆಹಗಾರರ ಒಲವುಗಳಿಸಿದ ಪ್ರಕಾರವೆಂದರೆ ಕಾದಂಬರಿ ಸಾಹಿತ್ಯ. ಹೀಗೆ ಕಾದಂಬರಿಗಳ ಮೂಲಕ ಕಾದಂಬರಿಕಾರರು ಮತ್ತು ಕಾದಂಬರಿ ಕಾರ್ತಿಯರು ಮೊದಲ ಘಟ್ಟದಲ್ಲಿ ಸ್ತ್ರೀ ಸಮಸ್ಯೆಗಳನ್ನು ಕುರಿತು ಹೆಚ್ಚು ಚರ್ಚಿಸಿದ್ದಾರೆ. ಇಂತಹ ಕೆಲವು ಆಯ್ದ ಕನ್ನಡ ಕಾದಂಬರಿಗಳ ವ್ಯವಸ್ಥಿತ ಅಧ್ಯಯನ ಆಗಬೇಕಾಗಿರುವುದು ಅವಶ್ಯಕತೆ ಇದೆ.

ಅಧ್ಯಯನ ಶಿಸ್ತಿಗೆ ಒಂದು ಚೌಕಟ್ಟು ಕೊಡುವ ದೃಷ್ಟಿಯಿಂದ ಅಧ್ಯಯನದ ವ್ಯಾಪ್ತಿಯನ್ನು ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ(೧೮೯೯ ರಿಂದ ೧೯೪೫)ರಲ್ಲಿ ರಚನೆಯಾಗಿರುವ ಅದರಲ್ಲೂ ಪ್ರಮುಖವಾಗಿ ಸ್ತ್ರೀ ಕೇಂದ್ರಿತವಾಗಿರುವ ೨೧ ಕಾದಂಬರಿಗಳನ್ನು ಮಾತ್ರ ಇಲ್ಲಿ ಸಂಶೋಧನೆಗೆ ಅಳವಡಿಸಿಕೊಳ್ಳಲಾಗಿದೆ. ೧. ಇಂದಿರಾಬಾಯಿ(೧೮೯೯), ೨. ಸದ್ಗುಣಿ ಕೃಷ್ಣಾಬಾಯಿ(೧೯೦೫), ೩. ವಾಗ್ದೇವಿ(೧೯೦೫), ೪. ಇಂದಿರೆ(೧೯೦೮), ೫. ಸುಶೀಲೆ(೧೯೧೩), ೬. ನಭಾ(೧೯೧೩), ೭. ವಿರಾಗಿಣಿ(೧೯೧೪), ೮. ಮಾಡಿದುಣ್ಣೋ ಮಹಾರಾಯ(೧೯೧೫), ೯. ಮಾತೃನಂದಿನಿ(೧೯೧೬),

೧೦. ಪೂರ್ಣಕಲಾ(೧೯೧೭), ೧೧. ವಿದ್ಯುಲತಾ(೧೯೧೭), ೧೨. ನಿರ್ಭಾಗ್ಯ ವನಿತೆ(೧೯೨೧), ೧೩. ಸುಖಲತಾ(೧೯೨೭), ೧೪. ಸುಬ್ಬಣ್ಣ(೧೯೨೮), ೧೫. ಚೋಮನದುಡಿ(೧೯೩೩), ೧೬. ಕಾನೂರು ಹೆಗ್ಗಡಿತಿ(೧೯೩೬), ೧೭. ಸರಸಮ್ಮನ ಸಮಾಧಿ(೧೯೩೭), ೧೮. ಮರಳಿ ಮಣ್ಣಿಗೆ(೧೯೪೨), ೧೯. ಬೆಟ್ಟದ ಜೀವ(೧೯೪೩), ೨೦. ನಿಸರ್ಗ(೧೯೪೫), ೨೧. ಮಲೆಗಳಲ್ಲಿ ಮದುಮಗಳು(೧೯೬೭).

ಈ ಮೇಲೆ ಹೆಸರಿಸಿದ ಕಾದಂಬರಿಗಳು ಅವು ಮೊದಲ ಮುದ್ರಣದ ವರ್ಷಗಳನ್ನು ತಿಳಿಸಲಾಗಿದೆ. ಅನುಬಂಧದಲ್ಲಿ ಮೂಲಪಠ್ಯಗಳು ಎನ್ನುವ ಶೀರ್ಷಿಕೆಯಡಿಯಲ್ಲಿ ಕೊಡಲಾದ ಕಾದಂಬರಿಗಳನ್ನು ಈ ಅಧ್ಯಯನಕ್ಕೆ ಬಳಸಿದ ಮುದ್ರಣದ ವರ್ಷಗಳನ್ನು ತಿಳಿಸಲಾಗಿದೆ.

### ವೈಧಾನಿಕತೆ

ಚಾರಿತ್ರಿಕ ಸಂದರ್ಭದ ಸಾಂಸ್ಕೃತಿಕ ವಿದ್ಯಮಾನಗಳನ್ನು ಗ್ರಹಿಸಿ ಅವುಗಳ ಹಿನ್ನೆಲೆಯಲ್ಲಿ ಕಾದಂಬರಿಯನ್ನು ಅಧ್ಯಯನ ಮಾಡುವ ಆಶಯ ಹೊಂದಿದೆ. ಜೊತೆಗೆ ಸ್ತ್ರೀ ಕೇಂದ್ರಿತವಿರುವುದರಿಂದ ಸ್ತ್ರೀವಾದಿ ನೆಲೆಯಲ್ಲಿ ಇದನ್ನು ಗ್ರಹಿಸುವ ಪ್ರಯತ್ನ ಮಾಡಲಾಗಿದೆ.

ಈವರೆಗಿನ ಅಧ್ಯಯನಗಳು ಕರ್ತೃಕೇಂದ್ರಿತ, ಓದುಗಕೇಂದ್ರಿತ, ಕೃತಿಕೇಂದ್ರಿತ ದೃಷ್ಟಿಕೋನಗಳಿಂದ ಕಾದಂಬರಿಗಳನ್ನು ನಿರ್ವಚಿಸಿದೆ. ಆದರೆ ಈ ಕಾದಂಬರಿ ಸಾಹಿತ್ಯ ಅಧ್ಯಯನಗಳ ಹಿಂದಿನ ತಾತ್ವಿಕತೆ ಕುರಿತು ಕೈಗೊಂಡ ವಿಶ್ಲೇಷಣೆಯಿಂದ ಆಯ್ದ ಕಾದಂಬರಿಗಳನ್ನು ಭಿನ್ನ ವಿಧಾನ ಮತ್ತು ದೃಷ್ಟಿಕೋನಗಳಿಂದ ಪರಿಭಾವಿಸುವ ಸಾಧ್ಯತೆ ಮತ್ತು ಅಗತ್ಯಗಳಿವೆ ಎಂಬ ಅಭಿಪ್ರಾಯ ರೂಪುಗೊಳ್ಳುತ್ತದೆ.

ಹೀಗೆ ಅನ್ಯವೂ, ಭಿನ್ನವೂ ಆದ ಅಧ್ಯಯನ ವಿಧಾನವನ್ನು ರೂಪಿಸಿಕೊಳ್ಳುವಾಗ ಕಾದಂಬರಿ ನಿರ್ಮಾಣವಾಗಲು ಒತ್ತಾಸೆಯಾಗಿರುವ ಅಂಶಗಳ ಪರಾಮರ್ಶನ ಅಗತ್ಯ ಈ ಮಾದರಿಯ ಮುಂದಿನ ಮತ್ತು ಮುಖ್ಯಸೆಲೆ ವರ್ತಮಾನದ ಆಲೋಚನೆಯ ವಿನ್ಯಾಸಗಳ ಮೂಲಕ ಶೋಧಿಸುವ, ಅರ್ಥೈಸುವ, ಸಾಂಸ್ಕೃತಿಕ ಗ್ರಹಿಕೆಯಾಗಿದೆ. ಕಾದಂಬರಿಕಾರರು ತನ್ನ ಸುತ್ತಣ ಸಮಾಜವನ್ನು ಪರಿಭಾವಿಸುವ ಆ ಮೂಲಕ ನಿರ್ವಚಿಸುವ ಸಮಸ್ಯೆ, ಎದುರಿಸಬಹುದಾದ ಸಂದೇಹಗಳನ್ನು ಪಠ್ಯರೂಪದಲ್ಲಿ ಸಾಕಾರಗೊಳಿಸುವ ರೀತಿಗಳನ್ನು ಅರ್ಥೈಸಿಕೊಳ್ಳಲು ಸಾಂಸ್ಕೃತಿಕ ಅಧ್ಯಯನ ಸಹಕರಿಸುತ್ತದೆ.

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಕಾದಂಬರಿಕಾರರು ಬೇರೆ ಬೇರೆ ಪ್ರಾದೇಶಿಕ ಹಿನ್ನಲೆಯಿಂದ ಬಂದವರಾದ್ದರಿಂದ ಅವರ ಅಭಿವ್ಯಕ್ತಿಯ ವಿಧಾನವು ಮತ್ತು ಪ್ರತಿಕ್ರಿಯೆಗಳು ಭಿನ್ನವಾಗಿ ಕಂಡು ಬರುವುದರಿಂದ ತೌಲನಿಕವಾಗಿ ಗ್ರಹಿಸುವುದು ಅಧ್ಯಯನದಲ್ಲಿ ಒಳಗೊಂಡಿರುತ್ತದೆ.

## ಅಧ್ಯಾಯ ಎರಡು

# ಈವರೆಗೆ ನಡೆದ ಅಧ್ಯಯನದ ಕುರಿತ ತಾತ್ವಿಕ ಸಮೀಕ್ಷೆ

ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕಾದಂಬರಿಗಳ ಅಧ್ಯಯನ ಕುರಿತ ಹಿನ್ನೆಲೆಯಲ್ಲಿ ಈವರೆಗೆ ನಡೆದಿರುವ ಅಧ್ಯಯನಗಳ ಸ್ಥೂಲ ಮತ್ತು ತಾತ್ವಿಕ ಸಮೀಕ್ಷೆಯನ್ನು ಗಮನಿಸಲಾಗಿ ಮುಂದಿನ ಅಧ್ಯಯನಕ್ಕೆ ಪೂರ್ವಸಿದ್ಧತೆ ಹಾಗೂ ಸೂಕ್ತ ಹಿನ್ನಲೆಯೊಂದನ್ನು ಕಟ್ಟಿಕೊಳ್ಳುವ ಉದ್ದೇಶದಿಂದ ತಾತ್ವಿಕ ಚರ್ಚೆ ಅತ್ಯಗತ್ಯ.

'ಕನ್ನಡ ಕಾದಂಬರಿಗಳ ಮೊದಲ ಹೆಜ್ಜೆಗಳು' ಎಂಬ ಕೃತಿ ಕನ್ನಡದ ಮೊದಲ ಕಾದಂಬರಿಗಳ ಉಗಮದ ಸಾಂಸ್ಕೃತಿಕ ಹಿನ್ನೆಲೆ ಮತ್ತು ಕನ್ನಡ ಸಂಪ್ರದಾಯಿಕ ಕಥನ ಕಾದಂಬರಿಗಳ ಅಂತರ್ ಸಂಬಂಧ ಅವುಗಳಲ್ಲಿರುವ ಆದರ್ಶ ಮತ್ತು ವಾಸ್ತವದ ಮುಖಾಮುಖಿ ಕನ್ನಡದ ಮೊದಲ ಕಾದಂಬರಿಗಳಲ್ಲಿ ಭಾಷೆ ಮತ್ತು ಶೈಲಿ ಕುರಿತು ಬಿಡಿ, ಬಿಡಿ ಚರ್ಚೆಯನ್ನು ಕೈಗೆತ್ತಿಕೊಂಡಿದ್ದಾರೆ ಹಾಗೂ ಒಟ್ಟು ಕಾದಂಬರಿಗಳನ್ನು ಚರ್ಚಿಸದೆ ಕೆಲವೊಂದು ಕಾದಂಬರಿಗಳನ್ನು ಮಾತ್ರ ಚರ್ಚಿಸಲಾಗಿದೆ. ಉದಾ: ಮಾಡಿದುಣ್ಣೋ ಮಹಾರಾಯ, ಇಂದಿರಾಬಾಯಿ, ಇಂದಿರೆ, ವಾಗ್ದೇವಿ ಹೀಗೆ ಕೆಲವು ಮಾತ್ರ. "ಬಿ.ದಾಮೋದರ್‌ರಾವ್ ಅವರು ಕನ್ನಡದ ಮೊದಲ ಕಾದಂಬರಿಗಳಲ್ಲಿ ಹೆಚ್ಚಿನವುಗಳ ಹೆಸರುಗಳು ಹೆಂಗಸರದ್ದು. ಈ ವಿಷಯವನ್ನು ಗಮನಿಸುತ್ತಾ ಇಂದಿರಾಬಾಯಿ, ವಾಗ್ದೇವಿ, ಇಂದಿರಾ, ರೋಹಿಣಿ, ಸೀಮಂತಿನಿ, ಭಾಗಿರಥಿ... ಇದೇ ರೀತಿ ಭಾರತದ ಎಲ್ಲಾ ಭಾಷೆಗಳ ಮೊದಲ ಕಾದಂಬರಿಗಳಲ್ಲಿ ಹೆಂಗಸರ ಹೆಸರುಗಳು ಬರುತ್ತವೆ. ಇದಕ್ಕೆ ಕಾರಣ ಏನಿರಬಹುದು? ನಮ್ಮ ಸಂಸ್ಕೃತಿಯಲ್ಲಿ ಸ್ತ್ರೀಗೆ ಅಷ್ಟೊಂದು ಮಹತ್ವ ಇತ್ತೆ? ಇದೆಯೇ? ಅಥವಾ ೧೯ನೇ ಶತಮಾನದ ಸುಧಾರಕ ಪಂಥದವರಿಗೆ, ಸ್ತ್ರೀ ಬಹಳ ಮುಖ್ಯವಾದ ವಸ್ತುವಾಗಿ ಸುಧಾರಣೆಗೆ ಬೇಕಾದ ವಸ್ತುವಾಗಿ ಕಂಡಳೆ? ಅಂತೂ ಇಂಥ ಶೀರ್ಷಿಕೆಗಳು ಬರುವುದಕ್ಕೆ ಕಾರಣವೇನು?"[೧] ಎಂಬ ಪ್ರಶ್ನೆ ಎತ್ತುತ್ತಾರೆ. ಈ ಪ್ರಶ್ನೆ ನೇರವಾಗಿ ವಿಸ್ತಾರವಾದ, ಆಳವಾದ ಸಂಶೋಧನೆಯನ್ನು ಅಪೇಕ್ಷಿಸುವ ಬಗೆಯದ್ದಾಗಿದ್ದು ಪ್ರಸ್ತುತ ಅಧ್ಯಯನಕ್ಕೆ ಪ್ರೇರಣೆ.

'ಕನ್ನಡದ ಮೊದಲ ಕಾದಂಬರಿಗಳ ಅಧ್ಯಯನ' ಎನ್ನುವ ಸಂಶೋಧನಾ ಕೃತಿ 'ನಾಡ-ನುಡಿಯ ರೂಪಕ' ಹೆಸರಿನಲ್ಲಿ ಪ್ರಕಟಗೊಂಡಿದ್ದು, ಅಲ್ಲಿ ಇಂಗ್ಲಿಷ್‌ನ 'ನಾವೆಲ್' ಮತ್ತು ಕನ್ನಡದ ಕಾದಂಬರಿಯ ಪರಿಕಲ್ಪನೆಯನ್ನು ಚಾರಿತ್ರಿಕ ಮತ್ತು ಸಮಾಜಶಾಸ್ತ್ರೀಯ ನೆಲೆಗಳಲ್ಲಿ ವಿವೇಚಿಸಿ ಅನುವಾದ ಮತ್ತು ರೂಪಾಂತರದ ತತ್ವಗಳನ್ನು ಸಾಂಸ್ಕೃತಿಕ ನೆಲೆಯಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಪಾಶ್ಚಾತ್ಯ ಮತ್ತು ಸ್ವದೇಶಿ ಎನ್ನುವ ಪರಿಕಲ್ಪನೆಗಳು ಸರಳ ದ್ವಂದ್ವ ಗೊಂದಲಗಳು ಅಲ್ಲ ಎನ್ನುವುದು ಕೃತಿಯಲ್ಲಿ ಚರ್ಚಿಸಿ ತನ್ನದ್ದು ಮತ್ತು ಪರರದ್ದು ಎನ್ನುವ ಸರಳ ಗೃಹೀತಗಳನ್ನು ಒಡೆದು ಸಾಂಸ್ಕೃತಿಕ ಕಟ್ಟುವಿಕೆಗಳ ಭಿನ್ನ ಮಾದರಿಗಳನ್ನು ಚರ್ಚಿಸಿದ್ದಾರೆ."[೨] ಹೀಗೆ 'ನಾವೆಲ್' ಎನ್ನುವ ಸಾಹಿತ್ಯ ಪ್ರಕಾರವು ಒಂದು ಸರಳ ಏಕಸೂತ್ರಾತ್ಮಕ ಆಕೃತಿ ಯಾಕೆ ಅಲ್ಲ ಎನ್ನುವ ವೈಚಾರಿಕ ನೆಲೆಯನ್ನು ರೂಪಿಸುತ್ತಾರೆ. ಹಾಗಾಗಿ ನಾವೆಲ್‌ನ ನಿರ್ವಚನವೇ ಸಮಸ್ಯಾತ್ಮಕವಾದುದು ಎಂಬುವುದರೊಂದಿಗೆ ಸಂಶೋಧನೆ ಆರಂಭವಾಗುತ್ತದೆ. ಆಧುನಿಕತೆಯನ್ನು ಮತ್ತು ಪಾಶ್ಚಾತ್ಯ ಸಂಸ್ಕೃತಿಯನ್ನು ತಮ್ಮ ಸಂಸ್ಕೃತಿಯ ಜೊತೆಗೆ ಪರ ಮತ್ತು ವಿರೋಧದ ನೆಲೆಗಳಲ್ಲಿ ಪರಿಭಾವಿಸುವ ಕನ್ನಡ ಕಾದಂಬರಿಕಾರರ ಭಿನ್ನ ನಿಲುವುಗಳ ಕುರಿತಾದ ತಾತ್ವಿಕ ಚರ್ಚೆ ಮಾಡಿದ್ದಾರೆ. ಹಾಗೆಯೇ ಮೊದಲ ಅನುವಾದಕರ ಆಯ್ಕೆಯ ವಿನ್ಯಾಸ, ಕನ್ನಡದಲ್ಲಿ ಅವು ಪಡೆದ ಕೃತಿ, ಅನುವಾದಕರ ಆಲೋಚನಾ ವಿನ್ಯಾಸ, ಕರ್ನಾಟಕ ಸಂಸ್ಕೃತಿಯನ್ನು ರೂಪಿಸಿದ ಬಗೆ ಮರುಬರವಣಿಗೆ, ಆಧುನಿಕತೆಯ ರೂಪಾಂತರ ಎನ್ನುವ ವೈಚಾರಿಕ ನೆಲೆಗಳು. ಇವರ ಅಧ್ಯಯನದಲ್ಲಿ ಮುಖ್ಯವಾಗಿದೆ. ಓದುಗವರ್ಗದ ನಿರೀಕ್ಷೆಗಳು ಮತ್ತು ಆಶೋತ್ತರಗಳು, ಕನ್ನಡ ಕಾದಂಬರಿ ಪ್ರಕಾರದ ಉಗಮದ ಕುರಿತ ದೇಶಿಯ ನೆಲೆಗಟ್ಟಿನ ಚರ್ಚೆ. ಹೀಗೆ ಹಲವು ತಾತ್ವಿಕ ಸಂಗತಿಗಳ ವಿಶ್ಲೇಷಣೆಯು ಈ ಕೃತಿ ಮಾಡಿದೆ.

'ಇದು ಮಾನುಷಿಯ ಓದು' ಮಹೇಶ್ವರಿ ಯು. ಇವರ ಸಂಶೋಧನಾ ಕೃತಿಯಲ್ಲಿ ಸ್ಥಿತ್ಯಂತರ ಯುಗದ ಹೆಣ್ಣು ಕಾದಂಬರಿ ಪ್ರಕಾರದ ಜೊತೆ ಅವಿನಾಭಾವದಿಂದ ಹೇಗೆ ಬೆಸೆದುಕೊಂಡಿದ್ದಾಳೆ ಎಂಬ ಪ್ರಶ್ನೆಯೊಂದಿಗೆ ಅಧ್ಯಯನ ಮುಂದುವರೆಯುತ್ತದೆ ಮತ್ತು ಕರ್ನಾಟಕದ ಸಂದರ್ಭದಲ್ಲಿ ನಡೆದ ಮಹಿಳೋದ್ಧಾರದ ಚಿಂತನೆ, ಪತ್ರಿಕಾ ಪ್ರಪಂಚದಲ್ಲಿ ಕಾಣಿಸಿಕೊಂಡ ಬಗೆಯನ್ನು ಸಾಧಾರಣವಾಗಿ ಚರ್ಚಿಸಲಾಗಿದೆ. ಮುಂದುವರೆದು "ಅನುವಾದಿತ ಕಾದಂಬರಿಗಳ ಅಧ್ಯಯನದಲ್ಲಿ ಬಂಗಾಳಿ, ಮರಾಠಿ ಹಾಗೂ ತೆಲುಗು ಕಾದಂಬರಿಗಳ ಪ್ರತ್ಯೇಕ ವಿಶ್ಲೇಷಣೆ ಕೈಗೊಂಡು ಅದರಲ್ಲೂ ಸಾಹಿತ್ಯ ಚರಿತ್ರೆಯಲ್ಲಿ ಇದುವರೆಗೆ ಅಷ್ಟೇನೂ ಚರ್ಚಿತವಾಗದ ವೀರೇಶಲಿಂಗ ಪಂತಲು ಅವರ ತೆಲುಗು ಕಾದಂಬರಿಗಳ ಕುರಿತಾದ ಚರ್ಚೆ ಇದೆ."[೩] ಹರಿಕಥೆ ಮಾಡುವ ಹರಿದಾಸರಂತೆ ಅಥವಾ ಪುರಾಣ ವಚನ ಮಾಡುವ ಪುರಾಣಿಕರ ಶೈಲಿಯಲ್ಲಿ ಹೆಚ್ಚಾಗಿ

ಪುರಾಣ ಕೆಲವೊಮ್ಮೆ ಇತಿಹಾಸದಿಂದ ನಾರಿ-ಮಣಿಯರ ಜೀವನ ಚರಿತ್ರೆಯನ್ನು ಹೇಳುವ ಕಾದಂಬರಿಗಳ ಪ್ರತ್ಯೇಕ ವರ್ಗವನ್ನು ಗುರುತಿಸಿದ್ದಾರೆ. ಕಾದಂಬರಿ ಪುರಾಣಗಳೆಂಬ ಪ್ರತ್ಯೇಕ ವರ್ಗವನ್ನು ಗುರುತಿಸಿ ಅವು ನಿರ್ದಿಷ್ಟವಾಗಿ ಸ್ತ್ರೀಪುರಾಣಗಳಾಗಿರುವ ಬಗೆಯನ್ನು ಗುರುತಿಸಿದ್ದಾರೆ

'ಮಹಿಳೆ: ಅಸ್ತಿತ್ವದ ಸಂಕಥನ' ಡಾ.ಕವಿತಾ ರೈ ಈ ಸಂಶೋಧನಾ ಕೃತಿಯಲ್ಲಿ ಕಾದಂಬರಿಕಾರ್ತಿಯರ ಕಾದಂಬರಿಗಳನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ ಹಾಗೂ ವಿವಾಹ ಮತ್ತು ಕುಟುಂಬದ ಪರಿಕಲ್ಪನೆಯ ನೆಲೆಯಲ್ಲಿ ಸ್ತ್ರೀಯರ ಇರುವಿಕೆಯ ಮತ್ತು ಅವರ ಸಮಗ್ರ ಬದುಕಿನ ಮೇಲೆ ಯಾವ ಬಗೆಯಲ್ಲಿ ಪ್ರಭಾವಗಳನ್ನು ಬೀರಿವೆ. ಅವರ ಬದುಕನ್ನು ಹೇಗೆ ನಿಯಂತ್ರಿಸಿವೆ ಎನ್ನುವುದನ್ನು ಕಂಡುಕೊಳ್ಳುವ ಉದ್ದೇಶದ ಮೂಲಕ ಅಧ್ಯಯನ ಆರಂಭಿಸಿದ್ದಾರೆ. ಆಯ್ಕೆ ಮಾಡಿಕೊಂಡ ಹನ್ನೆರಡು ಕಾದಂಬರಿಕಾರ್ತಿಯರ ಕಾದಂಬರಿಗಳನ್ನು ಚರ್ಚೆಗೆ ಎತ್ತಿಗೊಂಡು, ಪ್ರಾದೇಶಿಕ ಭಿನ್ನತೆ, ಕಾಲದ ಪರಿಮಿತಿ, ಸಾಂಸ್ಕೃತಿಕ ಸಂದರ್ಭವನ್ನು ಗಮನದಲ್ಲಿಟ್ಟುಕೊಂಡು ನಂಜನಗೂಡು, ತಿರುಮಲಾಂಬಾ, ಆರ್.ಕಲ್ಯಾಣಮ್ಮ, ತ್ರಿವೇಣಿ, ಎಂ.ಕೆ.ಇಂದಿರಾ, ಗೀತಾ ನಾಗಭೂಷಣ, ಸಾರಾ ಅಬೂಬಕರ್, ಅನುಪಮಾ ನಿರಂಜನ, ವೀಣಾ ಶಾಂತೇಶ್ವರ, ಕೆ.ತಾರಾಭಟ್, ಸವಿತಾ ನಾಗಭೂಷಣ್, ಎಚ್.ಎಸ್.ಚಂಪಾವತಿ, ಉಮಾರಾವ್, ಅವರ ಪ್ರಾತಿನಿಧಿಕ ಕಾದಂಬರಿಗಳನ್ನು ಆಯ್ಕೆ ಮಾಡಿಕೊಂಡು, ಸ್ತ್ರೀವಾದದ ಸೈದ್ಧಾಂತಿಕ ಅಥವಾ ತಾತ್ವಿಕತೆಯ ಚೌಕಟ್ಟಿನಲ್ಲಿ ಅನ್ಯಜ್ಞಾನ ಶಿಸ್ತು(ಸಮಾಜಶಾಸ್ತ್ರ, ಅರ್ಥಶಾಸ್ತ್ರ, ರಾಜ್ಯಶಾಸ್ತ್ರ)ಗಳ ನೆರವು ಪಡೆದು ವಾಗ್ವಾದವನ್ನು ಮಂಡಿಸುವಾಗ ಬಹುಮುಖಿನೆಲೆಯ ಆಯಾಮಗಳಿಗೆ ಮಹತ್ವ ನೀಡಿರುವುದು ಗುರುತಿಸಬಹುದಾಗಿದೆ. ಸಮಗ್ರವಾಗಿ ಹೇಳುವುದಾದರೆ ಉದಾರವಾದಿ ಸಾಂಸ್ಕೃತಿಕ ನೆಲೆ, ಸ್ಥಿತ್ಯಂತರ ಸಾಂಸ್ಕೃತಿಕ ನೆಲೆ, ಅನನ್ಯ ಸಾಂಸ್ಕೃತಿಕ ನೆಲೆಯ ಕಾದಂಬರಿಗಳು ವಿವಾಹ ಮತ್ತು ಕುಟುಂಬವನ್ನು ಸ್ತ್ರೀಯ ಅಸ್ತಿತ್ವದ ಮೂಲದಲ್ಲಿ ಶೋಧಿಸುವ ಸಂಕಥನಗಳಾಗಿವೆ. ಹೀಗಾಗಿ ಇದರಲ್ಲಿ ಸಹಜವಾಗಿ ಆಯಾ ಪರಿಸರದ ಕಾಲಘಟ್ಟದ ಸಾಮಾಜಿಕ ಧೋರಣೆ ಪ್ರಭಾವ, ಪಲ್ಲಟಗಳನ್ನು ಶಕ್ತವಾಗಿ ತೆರೆದಿಡಲು ಇಲ್ಲಿನ ಕಥನಗಳಿಗೆ ಸಾಧ್ಯವಾಗಿದೆ ಎಂದು ಹೇಳಬಹುದು.

'ಕನ್ನಡ ಕಾದಂಬರಿಗಳಲ್ಲಿ ಸ್ತ್ರೀ' ಶಿವಲಿಂಗಪ್ಪ ಆಯ್. ಭಂಡಾರಿ. ಈ ಸಂಶೋಧನಾ ಕೃತಿಯಲ್ಲಿ ಕಾದಂಬರಿಗಳನ್ನು ಮಾತ್ರ ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಂಡಿದ್ದಾರೆ ಮತ್ತು ಸ್ತ್ರೀ ಜೀವನವನ್ನು ಪ್ರಧಾನವಾಗಿ ಚಿತ್ರಿಸಿದ ಕಾದಂಬರಿಗಳನ್ನು ತೆಗೆದುಕೊಂಡು ಕಾದಂಬರಿಯ ಸ್ವರೂಪದ ಹಿನ್ನಲೆಯಲ್ಲಿ ಸ್ತ್ರೀ ಜೀವನವನ್ನು ಕುರಿತು ಕೌಟುಂಬಿಕ, ಸಾಮಾಜಿಕ, ಆರ್ಥಿಕ, ಧಾರ್ಮಿಕ ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ.

'ನಂಜನಗೂಡು ತಿರುಮಲಾಂಬಾ' ಅರ್ಜುನಪುರಿ ಅಪ್ಪಾಜಿಗೌಡ. ಪ್ರಸ್ತುತ ನಿಬಂಧದಲ್ಲಿ ತಿರುಮಲಾಂಬಾ ಅವರ ಜೀವನದ ಪರಿಚಯ, ಸಾಕಷ್ಟು ಸಮಗ್ರವಾಗಿ ಬಂದಿರುವುದು ಮಾತ್ರವಲ್ಲದೆ

ಆ ಕಾಲದ ಪರಿಸರದ ಹಿನ್ನೆಲೆಯಲ್ಲಿ ಅವರ ಕೃತಿಗಳ ಮೌಲ್ಯಮಾಪನ, ಆ ಕಾಲದ ಭಾಷೆ, ಶೈಲಿ ಕನ್ನಡದ ಮೇಲೆ ಇಂಗ್ಲಿಷಿನ ಪ್ರಭಾವ ಇತ್ಯಾದಿಗಳ ವಿವರವಾದ ಮಾಹಿತಿ ಒದಗಿಸಿದ್ದಾರೆ.

'ಕನ್ನಡದ ಮೊದಲ ಕಾದಂಬರಿಗಳು' ಸಂ.ಜಿ.ಎನ್.ರಂಗನಾಥರಾವ್. ಲೇಖನಗಳ ಸಂಪಾದಿತ ಈ ಕೃತಿ ಕನ್ನಡ ಕಾದಂಬರಿಗಳ ಮೊದಲ ಹೆಜ್ಜೆ ಗುರುತುಗಳನ್ನು ಅ ಕಾಲದ ಸಾಮಾಜಿಕ, ಸಾಂಸ್ಕೃತಿಕ, ಸ್ಥಿತ್ಯಂತರಗಳನ್ನು ಕೂಲಂಕುಶವಾಗಿ ವಿಶ್ಲೇಷಿಸುವ, ಸಂಕಲನದಲ್ಲಿ ೧೩ ಲೇಖನಗಳನ್ನು ಒಳಗೊಂಡಿವೆ. ಇಂದಿರಾಬಾಯಿ, ಇಂದಿರೆ, ಮಾಡಿದುಣ್ಣೋ ಮಹಾರಾಯ, ವಾಗ್ದೇವಿ, ಕುಮುದಿನಿ ಕಾದಂಬರಿಗಳ ಚರ್ಚೆ ಇದೆ.

'ಸ್ವಾತಂತ್ರ್ಯಪೂರ್ವ ಮಹಿಳಾ ಸಾಹಿತ್ಯ: ಸ್ವರೂಪ ಮತ್ತು ತಾತ್ವಿಕತೆ' ಗೀತಾ ಪ್ರಸಾದ್. ಈ ಸಂಶೋಧನಾ ಕೃತಿಯಲ್ಲಿ ೧೯೦೦ ರಿಂದ ೧೯೫೦ರ ಅವಧಿಯಲ್ಲಿ ರಚಿತವಾದ ಕನ್ನಡದ ಪ್ರಾತಿನಿಧಿಕ ಮಹಿಳಾ ಸಾಹಿತ್ಯ ಸಾಹಿತ್ಯೇತರ ಬರಹವನ್ನು(ಪತ್ರಿಕೋದ್ಯಮ, ಪ್ರಕಾಶನ, ಲೇಖನ, ಅಂಕಣ ಬರೆಹ) ಆಯ್ಕೆ ಮಾಡಿಕೊಂಡು ನಂತರ ಕಾದಂಬರಿ, ನಾಟಕ, ಸಣ್ಣಕತೆ, ಕವಿತೆ ಮತ್ತು ಪ್ರಾತಿನಿಧಿಕವಾಗಿ ಲೇಖಕಿಯರನ್ನು ಆಯ್ಕೆ ಮಾಡಿಕೊಂಡು ಮಹಿಳಾ ಸಾಹಿತ್ಯ ಎಂಬ ಪರಿಕಲ್ಪನೆಯಲ್ಲಿನ ಅಂತರ್ವಿರೋಧವನ್ನು ಗುರುತಿಸುತ್ತಾ ಮಾಸ್ತಿ ಮೊದಲಾದವರ 'ಮಹಿಳಾ ಸಾಹಿತ್ಯ'ದ ಬಗೆಗಿನ ವಿಮರ್ಶೆಯ ಲಿಂಗ ತಾರತಮ್ಯ ಧೋರಣೆಯನ್ನು ಪ್ರಶ್ನಿಸುತ್ತಾ ಮಹಿಳಾ ಸಾಹಿತ್ಯ ಪರಿಕಲ್ಪನೆಯನ್ನು ಕಟ್ಟಿಕೊಟ್ಟಿದ್ದಾರೆ. ಸ್ವಾತಂತ್ರ್ಯಪೂರ್ವ ಲೇಖಕಿಯರ ವಿಚಾರಧಾರೆ ಸ್ವಾತಂತ್ರ್ಯೋತ್ತರ ಮಹಿಳಾ ಸಾಹಿತ್ಯ ಸಂದರ್ಭದಲ್ಲಿ ಪಡೆದುಕೊಂಡ ಆಯಾಮ, ತಿರುವುಗಳನ್ನು ಲೇಖಕಿಯರ ನಡುವಿನ ಪರಸ್ಪರ ಅಭಿವ್ಯಕ್ತಿ ಪ್ರಕ್ರಿಯೆ ಸ್ವರೂಪವನ್ನು ವಿವೇಚಿಸಿರುವುದು ಕಂಡುಬರುತ್ತದೆ.

'ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ' ಎಲ್.ಜಿ.ಮೀರಾ ಎಂಬ ಸಂಶೋಧನಾ ಕೃತಿಯಲ್ಲಿ ಆಧುನಿಕ ಕನ್ನಡ ಕಥನ ಸಾಹಿತ್ಯದಲ್ಲಿ ವಾಸ್ತವವು ಪ್ರತಿನಿಧಿಕರಣಗೊಂಡಿರುವ ಕ್ರಮವನ್ನು ಸ್ತ್ರೀವಾದಿ ದೃಷ್ಟಿಯಿಂದ ಅಧ್ಯಯನ ಮಾಡಿದ್ದಾರೆ ಹಾಗೂ ಕುವೆಂಪು, ಕಾರಂತ, ಅನಕೃ, ಅನಂತಮೂರ್ತಿ ಅವರ ಕೃತಿಗಳಲ್ಲಿ ಸ್ತ್ರೀ ಪಾತ್ರಗಳಿಗೆ ಮತ್ತು ಸ್ತ್ರೀ ಬದುಕಿಗೆ ಹೆಚ್ಚು ಪ್ರಾಮುಖ್ಯತೆ ನೀಡಿರುವ ಕೃತಿಗಳನ್ನು ಆಯ್ದುಕೊಂಡು ಪಿತೃಪ್ರಧಾನ ಚೌಕಟ್ಟು, ವರ್ಣಿತವಾಗಿರುವ ಕ್ರಮದ ಬಗ್ಗೆ ಆಳವಾಗಿ ಚರ್ಚಿಸಿದ್ದಾರೆ. "ಎಲ್.ಜಿ.ಮೀರಾ ಅವರ ನಿಲುವು, ಏನೆಂದರೆ, ಸ್ತ್ರೀ ಸಂವೇದನೆ ಮಾನವ ಪರ ಮೌಲ್ಯಗಳನ್ನು ಬೆಂಬಲಿಸುವ ಪ್ರಜ್ಞಾಪೂರ್ವಕ ನಿಲುವು, ಅದು ಪುರುಷರಲ್ಲಿಯೂ ಇರಬಹುದು ಸ್ತ್ರೀಯರಲ್ಲಿ ಇಲ್ಲದೆಯೂ ಇರಬಹುದು."[೪] ಇದೇ ಬಗೆಯ ವ್ಯಾಖ್ಯಾನವನ್ನು ಇತರ ಸಂದರ್ಭಗಳಲ್ಲಿಯೂ ಅವರು ಮಂಡಿಸುತ್ತಾರೆ.

ಸ್ತ್ರೀ ವಾದದ ಮುಖ್ಯ ಅಂಶಗಳಾದ ಜೈವಿಕ, ಸಾಮಾಜಿಕ, ಲಿಂಗ ಪರಿಕಲ್ಪನೆ, ಪುರುಷ ಪ್ರಧಾನ ವ್ಯವಸ್ಥೆಗೂ ಮತ್ತು ಅಧಿಕಾರಕ್ಕೂ ಇರುವ ಕಡೆ ಸಂಬಂಧ ಪುರುಷ ಕೇಂದ್ರೀತ ವ್ಯವಸ್ಥೆಯಲ್ಲಿ ಸ್ತ್ರೀಯರನ್ನು ತನ್ನ ಅಧೀನದಲ್ಲಿರಿಸಿಕೊಳ್ಳಲು ಸೃಷ್ಟಿಸಿರುವ ಮತ್ತು ಆದರ್ಶದಂತೆ ಎತ್ತಿ ಹಿಡಿಯುವ ತಾಯಿ, ಪತಿವ್ರತೆ, ವೇಶ್ಯೆ ಮುಂತಾದ ಪಡಿಯಚ್ಚುಗಳು, ಪಠ್ಯಗಳ ಅವಕೇಂದ್ರೀಕರಣ ಲೇಖಕರಲ್ಲಿ/ಲೇಖಕಿಯರಲ್ಲಿ ಅಪ್ರಜ್ಞಾ ಪೂರ್ವಕವಾಗಿ ಇದ್ದು ಅವನ/ಅವಳ ಕೃತಿಗಳಲ್ಲಿ ಹುದುಗಿ ಕೊಂಡಿರುವ ಪಿತೃ ವ್ಯವಸ್ಥೆಯ ಮೌಲ್ಯಗಳನ್ನು ಅನಾವರಣಗೊಳಿಸಲು ಸ್ತ್ರೀವಾದಿಗಳು ರೂಢಿಸಿ ಕೊಂಡಿರುವ ವಿರುದ್ಧ ಓದಿನ ಕ್ರಮ ಇತ್ಯಾದಿಗಳನ್ನು ಮೀರಾ ಅವರು ಸಮರ್ಥವಾಗಿ ಮಂಡಿಸಿದ್ದಾರೆ.

'ಕನ್ನಡ ಕಥನ ಸಾಹಿತ್ಯ ಕಾದಂಬರಿ' ಜಿ.ಎಸ್.ಅಮೂರ ಅವರ ವಿಮರ್ಶಾಕೃತಿಯಲ್ಲಿ ಇಂದಿರಾಬಾಯಿ, ಇಂದಿರೆ, ಮಾಡಿದುಣ್ಣೊ ಮಹಾರಾಯ, ಕಾದಂಬರಿಗಳಲ್ಲಿ ಆದರ್ಶ–ವಾಸ್ತವಗಳ ಸಂಯೋಗದ ಕುರಿತಾದ ಲೇಖನದಲ್ಲಿ ಆದರ್ಶದ ನೆಲೆಗಳನ್ನು ಗುರುತಿಸಿದ್ದಾರೆ ಹಾಗೂ ವಾಸ್ತವ ಮಾರ್ಗದ ಪ್ರಮುಖ ಕಾದಂಬರಿಕಾರರಾದ ಮಾಸ್ತಿ, ಕುವೆಂಪು, ಕಾರಂತ, ಅನಕೃ, ಶ್ರೀರಂಗ, ರಾವ್‌ಬಹದ್ದೂರ್, ಅನಂತಮೂರ್ತಿ, ತೇಜಸ್ವಿ, ಲಂಕೇಶ್, ಚಿತ್ತಾಲ, ಭೈರಪ್ಪ, ದೇವನೂರು, ಮಹಾದೇವ ಮೊದಲಾದವರು ೩೦ಕ್ಕೂ ಮೇಲ್ಪಟ್ಟ ಲೇಖಕರ ಕೃತಿಗಳು ಸೂಕ್ಷ್ಮ ವಿಶ್ಲೇಷಣೆಯ ಮೂಲಕ ತನ್ನ ಎಲ್ಲಾ ಸಂಕೀರ್ಣತೆಯೊಂದಿಗೆ ಮೂಡಿಬಂದಿದೆ.

'ತಲೆಮಾರುಗಳ ಸಂಕಥನ' ಹಳೆಮನೆ ರಾಜಶೇಖರ, ಅವರ ಸಂಶೋಧನಾ ಕೃತಿಯಲ್ಲಿ (ಇಂದಿರಾಬಾಯಿ, ಮಲೆಗಳಲ್ಲಿ ಮದುಮಗಳು, ಕಾನೂರು ಹೆಗ್ಗಡಿತಿ, ಜೋಮನದುಡಿ, ಮರಳಿ ಮಣ್ಣಿಗೆ, ಗಂಗವ್ವ ಗಂಗಾಮಾಯಿ, ಮುಸ್ಸಂಜೆ ಕಥಾ ಪ್ರಸಂಗ, ಬೀಜ, ಮಾಡಿ ಮಡಿದವರು) ಕಾದಂಬರಿಗಳನ್ನು ಪ್ರಾತಿನಿಧಿಕವಾಗಿ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಮೂರು ತಲೆಮಾರಿನ ಲೇಖಕರನ್ನು ಆಯ್ದುಕೊಂಡು, ನವೋದಯ ಪೂರ್ವ, ನವೋದಯ, ಪ್ರಗತಿಶೀಲ, ದಲಿತ ಬಂಡಾಯ ಕಾಲಘಟ್ಟಗಳಲ್ಲಿ ರಚನೆಗೊಂಡ ಈ ಕಾದಂಬರಿಗಳಲ್ಲಿ ತಲೆಮಾರುಗಳ ಸಂಘರ್ಷ ಎಂಬ ತಾತ್ವಿಕತೆಯ ಮೇಲೆ ಅಧ್ಯಯನ ಮಾಡಿದ್ದಾರೆ.

ಸ್ತ್ರೀಕೇಂದ್ರಿತವಾದ ಬಿಡಿ, ಬಿಡಿ ಕಾದಂಬರಿಗಳ ಕುರಿತು ವಿಮರ್ಶೆ, ವಿಚಾರ ಸಂಕಿರಣ, ಮೊದಲಾದ ಅಧ್ಯಯನಗಳು ಕನ್ನಡದಲ್ಲಿ ಸಾಕಷ್ಟು ನಡೆದಿದೆ ಹಾಗೂ ನಡೆಯುತ್ತಲೂ ಇದೆ. ಹಾಗೆಯೇ ಇವೆಲ್ಲವುಗಳ ನೆರವಿನಿಂದ. ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕಾದಂಬರಿಗಳ ಅಧ್ಯಯನ ಕುರಿತ ತಾತ್ವಿಕತೆಯನ್ನು ಸಮೀಕ್ಷಿಸಿ, ಸ್ತ್ರೀ ನಿಷ್ಠ ಪ್ರಜ್ಞೆಯ ವಿಮರ್ಶಾ ಮಾನದಂಡಗಳನ್ನು ಅನ್ವಯಿಸುವ ಮುಖಾಂತರ, ಮೊದಲ ಹಂತದ ಕಾದಂಬರಿಗಳು ಮುಖ್ಯವಾಗಿ ಸ್ತ್ರೀ ಕೇಂದ್ರಿತ ನೆಲೆಯಲ್ಲಿ ರಚಿತವಾಗಿರುವ ಹಾಗೂ ಅವುಗಳ ಸಮಗ್ರವಾದ ಅಧ್ಯಯನ ಅವಶ್ಯಕತೆ ಕಂಡುಬಂದಿರುವುದರಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

**ಕೊನೆಟಿಪ್ಪಣಿಗಳು**

೧. ವಿವೇಕ ರೈ ಬಿ.ಎ.(ಸಂ)., **'ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು'**, ಪು.೯.

೨. ಶಿವರಾಮ ಪಡಿಕ್ಕಲ್, **'ನಾಡು ನುಡಿಯ ರೂಪಕ'**, ಪು.೧೫.

೩. ಮಹೇಶ್ವರಿ ಯು., **'ಇದು ಮಾನುಷಿಯ ಓದು'**, ಪು.೨೫.

೪. ಮೀರಾ ಎಲ್.ಜಿ., **'ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ'**, ಪು.೭೨.

## ಅಧ್ಯಾಯ ಮೂರು

# ಅಧ್ಯಯನದ ಪೂರ್ವಭೂಮಿಕೆಯ ಪ್ರಮುಖ ಅಂಶಗಳು

೩.೧. ಸ್ತ್ರೀ ಕೇಂದ್ರಿತ ನೆಲೆಯಲ್ಲಿ, ಸಂಸ್ಕೃತಿ, ಸಮಾಜ, ಕುಟುಂಬ, ವರ್ತಮಾನದ ಬದುಕು, ಅರ್ಥಮಾಡಿಕೊಳ್ಳುವ ಅಗತ್ಯವಿದೆಯೇ ಮತ್ತು ಅರ್ಥ ಮಾಡಿಕೊಳ್ಳುವ ಸ್ವರೂಪ.

೩.೨. ಸ್ತ್ರೀ ಕೇಂದ್ರಿತ ನೆಲೆಯಲ್ಲಿ ಸಾಹಿತ್ಯವನ್ನು ಅರ್ಥಮಾಡಿಕೊಳ್ಳುವ ಅಗತ್ಯವೇನಿದೆ ಮತ್ತು ಅದರ ಸ್ವರೂಪ.

೩.೩. ನಿರ್ದಿಷ್ಟವಾಗಿ ಕಾದಂಬರಿಗಳನ್ನು ಸ್ತ್ರೀ ದೃಷ್ಟಿಕೋನದಲ್ಲಿ ನೋಡುವ ಅಗತ್ಯವಿದ್ದರೆ ಯಾಕೆ ಇದೆ ಮತ್ತು ಅದರ ಸ್ವರೂಪ.

೩.೪. ಸ್ವಾತಂತ್ರ್ಯಪೂರ್ವ ಕನ್ನಡ ಕಾದಂಬರಿಗಳನ್ನು ಸ್ತ್ರೀ ಕೇಂದ್ರಿತ ನೆಲೆಯಲ್ಲಿ ಅಧ್ಯಯನ ಮಾಡುವುದರ ಅಗತ್ಯವೇನಿದೆ ಅದರ ಸ್ವರೂಪ.

೩.೫. ಸ್ವಾತಂತ್ರ್ಯಪೂರ್ವ ಕಾಲಘಟ್ಟ ತೆಗೆದುಕೊಳ್ಳಲು ಕಾರಣಗಳೇನು? ಅದರ ಸ್ವರೂಪ.

ಅಧ್ಯಾಯ ಮೂರು

# ಅಧ್ಯಯನದ ಪೂರ್ವಭೂಮಿಕೆಯ ಪ್ರಮುಖ ಅಂಶಗಳು

ಈ ಪ್ರಪಂಚವು ನಾನಾ ರೀತಿಯ ಅಸಮಾನತೆ ಮತ್ತು ಭೇದಗಳಿಂದ ಕೂಡಿರುವಂಥದ್ದು. ವರ್ಗ, ವರ್ಣ, ಜಾತಿ, ಲಿಂಗ, ಜನಾಂಗ, ಸಂಸ್ಕೃತಿ, ಸಮಾಜ, ಸಮುದಾಯ, ಕುಟುಂಬ ಸಂಸ್ಥೆ, ವರ್ತಮಾನದ ಬದುಕು ಹೀಗೆ ಹಲವು ಸಂಗತಿಗಳು ಮನುಷ್ಯನನ್ನು ಮನುಷ್ಯರಿಂದ ಬೇರ್ಪಡಿಸಿವೆ. ಇವುಗಳಲ್ಲಿ ಲಿಂಗಭೇದವು ಒಂದು ಮೂಲಭೂತ ವಿಭಾಗವಾಗಿದೆ. ನಮಗೆ ಉಂಟಾಗುವ ಮೊತ್ತ ಮೊದಲ ಸಾಮಾಜಿಕ ಅರಿವುಗಳಲ್ಲಿ ಇದು ಒಂದು. ಲಿಂಗಭೇದವನ್ನು ಆಧರಿಸಿ ಬೆಳೆದಿರುವ ಸಮಾಜವು ಪುರುಷ ಪ್ರಧಾನವಾಗಿದೆ ಅಥವಾ ಪಿತೃ ಪ್ರಧಾನವಾಗಿದೆ. ಇದು ಸಹಜವೆಂಬಂತೆ ಬೆಳೆದು ಬಿಟ್ಟಿದೆ.

## ೩.೧. ಸ್ತ್ರೀ ಕೇಂದ್ರಿತ ನೆಲೆಯಲ್ಲಿ, ಸಂಸ್ಕೃತಿ, ಸಮಾಜ, ಕುಟುಂಬ, ವರ್ತಮಾನದ ಬದುಕು, ಅರ್ಥಮಾಡಿಕೊಳ್ಳುವ ಅಗತ್ಯವಿದೆಯೇ ಮತ್ತು ಅರ್ಥ ಮಾಡಿಕೊಳ್ಳುವ ಸ್ವರೂಪ

ಈ ಸಮಾಜವು ಪುರುಷಾನುಕೂಲಿಯಾದ ನಿಲುವುಗಳು ಕೆಲಸ ಮಾಡುತ್ತಿರುತ್ತವೆ. ಅವು ಎಷ್ಟು ಗಾಢವಾಗಿ ಹರಡಿ ಬಿಟ್ಟಿರುತ್ತವೆ ಅಂದರೆ ಮಾನವ ಜನಾಂಗದ ಅರ್ಧ ಭಾಗಕ್ಕೆ ಮಾತ್ರ ಅನುಕೂಲಕರವಾಗಿವೆ ಎಂದು ತಿಳಿಯಲಾರದಷ್ಟು, ಸಮಾಜದಲ್ಲಿ ಪುರುಷ ಪಕ್ಷಪಾತವಿದ್ದಾಗ ಸ್ತ್ರೀಯನ್ನು ಪುರುಷನ ದೃಷ್ಟಿಯಿಂದ ನೋಡಲಾಗುತ್ತದೆ ಮತ್ತು ವ್ಯಾಖ್ಯಾನಿಸಲಾಗುತ್ತದೆ. ದೈಹಿಕವಾಗಿ ಪುರುಷನಿಂದ ಬೇರೆಯಾಗಿರುವ ಸ್ತ್ರೀ ಪುರುಷ ಪ್ರಪಂಚದಲ್ಲಿ ಪರಕೀಯಳಾಗುತ್ತಾಳೆ. ಇಂತಹ ಸಮಾಜದಲ್ಲಿ ಸ್ತ್ರೀಯನ್ನು ಎರಡನೇ ದರ್ಜೆಯ ಪ್ರಜೆಯೆಂದು ಪರಿಗಣಿಸಲಾಗುತ್ತದೆ. ಹಾಗೂ ಆ ಮೂಲಕ ಪುರುಷರು ಮಹಿಳೆಯರ ಮೇಲೆ ಪ್ರಭುತ್ವ ಸ್ಥಾಪಿಸಿ ಅಧಿಕಾರ ಚಲಾಯಿಸುತ್ತಾರೆ. ಹಾಗೂ ಸ್ತ್ರೀಯ ಅಭಿಪ್ರಾಯ, ವರ್ತನೆ, ಅಭಿವ್ಯಕ್ತಿ ಇದಾವುದಕ್ಕೂ ಮಾನ್ಯತೆ ದೊರೆಯುತ್ತಿಲ್ಲ ಎಂದರೆ ಇಂದಿಗೂ ಮಹಿಳೆಯರು ಅಸಹಾಯಕರಾಗಿಯೇ ಉಳಿದಿರುವುದು ಗೋಚರಿಸುತ್ತದೆ.

ಅಷ್ಟೇ ಅಲ್ಲದೆ ಬದುಕಿನ ಅಸ್ತಿತ್ವದ ಎಲ್ಲ ನೆಲೆಗಳಲ್ಲಿಯೂ ಸಾಮಾಜಿಕ ಚೌಕಟ್ಟಿನ ಬಂಧನ ಅವಳನ್ನು ಸುತ್ತುವರಿದಿದೆ. ಸ್ತ್ರೀಯರನ್ನು ತುಳಿಯುವ, ದಮನ ಮಾಡುವ ಶೋಷಿತ ಪ್ರವೃತ್ತಿ ಪುರುಷರಲ್ಲಿ ಪರಂಪರಾಗತವಾಗಿ ಬೇರೂರಿದೆ. ಪಿತೃ ಪ್ರಧಾನ ವ್ಯವಸ್ಥೆಯ ಮೌಲ್ಯಗಳೇ ತುಂಬಿರುವ ಇಂಥ ನೆಲೆಗಟ್ಟಿನಲ್ಲಿ ಮಹಿಳೆಯರು ಪುರುಷರೊಂದಿಗೆ ಸಮಾನ ಸ್ಥಾನಮಾನವನ್ನು ಹೊಂದಿಲ್ಲ. ಅದಕ್ಕಿಂತ ಘೋರವಾಗಿ ದಾರುಣ ದುಃಖದಿಂದ ಹೊರಬರಲಾರದೆ ಸೆರೆವಾಸದ ಕಟ್ಟುನಿಟ್ಟನ್ನು ಒಪ್ಪಿಕೊಳ್ಳಬೇಕಾಗಿದೆ. ಹುಟ್ಟುವ ಮುಂಚಿನಿಂದಲೂ 'ಹೆಣ್ಣು ಹಡಿಯಲು ಬ್ಯಾಡ, ಹೆರವರಿಗಿ ಕೊಡಬ್ಯಾಡ' ಎಂಬ ಸೂಚನೆ ಅಥವಾ ಎಚ್ಚರಿಕೆಯೊಂದಿಗೆ ಭೂಮಿಗೆ ಆಗಮಿಸುವ ಸ್ತ್ರೀ ಎಂಬ ಮಗುವಿಗೆ ಅಲ್ಲಿಂದಲೇ ಅಸ್ತಿತ್ವದ ಪ್ರಶ್ನೆ ಉದ್ಭವಿಸುತ್ತದೆ. ಆಧುನಿಕತೆಯ ತುತ್ತ ತುದಿಯಲ್ಲಿರುವ ಸಮಾಜಗಳಲ್ಲಿರುವವರೂ, ಸಹ ಸ್ತ್ರೀಗೆ, ಸಂಸ್ಕೃತಿಯಲ್ಲಿ, ಸಮುದಾಯದಲ್ಲಿ, ಕುಟುಂಬದಲ್ಲಿ, ಸಂಘ ಸಂಸ್ಥೆಗಳಲ್ಲಿ ವರ್ತಮಾನದ ಬದುಕಿನಲ್ಲಿ ನಾನಾ ತರಹದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅವುಗಳೆಂದರೆ,

೧. ವರದಕ್ಷಿಣೆ ಸಮಸ್ಯೆ, ೨, ಲಿಂಗ ತಾರತಮ್ಯ, ೩. ಶಿಕ್ಷಣದ ಸಮಸ್ಯೆ, ೪. ಜಾತಿ ವ್ಯವಸ್ಥೆ, ೫. ದಾಂಪತ್ಯದ ಸಮಸ್ಯೆ, ೬. ಅತ್ಯಾಚಾರ, ಲೈಂಗಿಕ ಕಿರುಕುಳ, ಆರೋಗ್ಯ, ಅವಕಾಶ, ಆಯ್ಕೆ ಸ್ವಾತಂತ್ರ್ಯ, ಬಾಲಾಪರಾಧ, ವೇಶ್ಯಾವಾಟಿಕೆ, ಬಾಲ್ಯವಿವಾಹ, ಅಪಹರಣ, ಶಿಶುಹತ್ಯೆ, ಸಹೋದ್ಯೋಗಿಗಳ ಕಿರುಕುಳ, ಅಧಿಕಾರಿಗಳ ಅಸಭ್ಯ ವರ್ತನೆ, ಎಲ್ಲಕ್ಕಿಂತ ಹೆಚ್ಚಾಗಿ ಉದ್ಯೋಗ ಹಾಗೂ ಕುಟುಂಬ ಎರಡೂ ಸ್ಥಳಗಳಲ್ಲಿ ಸಮರ್ಥವಾಗಿ ನಿರ್ವಹಿಸಬೇಕಾದ ದ್ವಂದ್ವ ಪಾತ್ರ, ದ್ವಂದ್ವ ನೀತಿ, ದುಡಿದುದನ್ನು ಕಿತ್ತುಕೊಳ್ಳುವ ಪುರುಷ ವರ್ಗ, ಪರಿತ್ಯಕ್ತ ಮಹಿಳೆಯರು. ಹೀಗೆ ಒಂದೇ ಎರಡೇ ಮಹಿಳೆಯ ಜೀವನದುದ್ದಕ್ಕೂ ಕೇವಲ ಪ್ರಶ್ನೆಗಳು ಮತ್ತು ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ ಹಾಗೂ ಇವೆಲ್ಲದರ ಮಧ್ಯೆ ತನ್ನ ಹೋರಾಟವನ್ನು ತಾನೇ ಮುಂದುವರಿಸಿ ಬದುಕು ಸವೆಸುತ್ತಿದ್ದಾಳೆ.

ಈ ಹಿನ್ನೆಲೆಯಿಂದ ಅಧ್ಯಯನಕ್ಕೆ ಪೂರ್ವಭಾವಿಯಾಗಿ ಪ್ರಸ್ತುತ ಸಮಾಜದೊಳಗೆ, ಸ್ತ್ರೀ ಕೇಂದ್ರಿತ ನೆಲೆಯಲ್ಲಿ ಸಂಸ್ಕೃತಿಯನ್ನು, ಸಮುದಾಯವನ್ನು, ಕುಟುಂಬವನ್ನು, ಸಂಸ್ಥೆಯನ್ನು, ವರ್ತಮಾನದ ಬದುಕನ್ನು ಅರ್ಥಮಾಡಿಕೊಳ್ಳುವ ಅಗತ್ಯದ ಸ್ವರೂಪ ಇದೆ. ಅವುಗಳನ್ನು ಈ ಕೆಳಗಿನಂತೆ ಒಂದೊಂದಾಗಿ ವಿವರಿಸಲಾಗಿದೆ.

### ೩.೧.೧. ಸಂಸ್ಕೃತಿಯಲ್ಲಿ ಸ್ತ್ರೀ

ಸಂಸ್ಕೃತಿ ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. ಮಾನವ ಸಮುದಾಯದ ಸಂಪ್ರದಾಯಗಳಿಂದ ಹಿಡಿದು ತೀರ ವೈಯಕ್ತಿಕ ಆಚರಣೆಗಳವರೆಗೂ ಅದರ ವ್ಯಾಪ್ತಿ ಹರಡಿದೆ. ಮಾನವ ಜನಾಂಗಗಳ

ಇತಿಹಾಸವನ್ನು ಚಿತ್ರಿಸುವಾಗ 'ನಾಗರಿಕತೆ' ಎಂಬ ಪದವನ್ನೂ ಬಳಸಲಾಗುತ್ತದೆ. ಸಂಸ್ಕೃತಿಯು ವ್ಯಕ್ತಿಯ ಮಾನಸಿಕ ವಿಕಾಸದ ಅಭಿವ್ಯಕ್ತಿ ಎನ್ನಬಹುದು. ವ್ಯಕ್ತಿಯ ಜೀವನದಲ್ಲಿ ಹಂತ ಹಂತವಾಗಿ ಸಂಸ್ಕೃತಿ ವ್ಯಾಪಿಸುತ್ತದೆ. ಇದಕ್ಕೆ ಸಾಮಾಜಿಕ ವಾತಾವರಣ, ಸಹಬಾಳ್ವೆ, ಸೌಜನ್ಯ, ಶೀಲವಂತಿಕೆ, ಸದಾಚಾರ, ಸದ್ವರ್ತನೆ, ಆತ್ಮಶಿಕ್ಷಣ ಇವೆಲ್ಲವೂ ಸಂಸ್ಕೃತಿಯ ಎಲ್ಲಾ ಚಟುವಟಿಕೆಗಳಲ್ಲೂ ಸಂಸ್ಕೃತಿಯ ಪ್ರಭಾವ ಎದ್ದು ಕಾಣುತ್ತದೆ. ಪ್ರತಿಯೊಂದು ಸಮಾಜವೂ ಆದರ್ಶಪ್ರಾಯವೆಂದು ನಂಬುವ ಮೌಲ್ಯಗಳು ಹಾಗೂ ಆಚರಣೆಗಳನ್ನು ತಲೆಮಾರಿನಿಂದ ತಲೆಮಾರಿಗೆ ವರ್ಗಾಯಿಸುವ ಮೂಲಕ ಸಂಸ್ಕೃತಿಯನ್ನು ಸಂರಕ್ಷಿಸಲು ಪ್ರಯತ್ನಿಸುತ್ತದೆ. ಇದೇ ಉದ್ದೇಶದಿಂದ ಸಾಮಾಜಿಕ ಸಂಸ್ಥೆಗಳು ರೂಪುಗೊಂಡಿವೆ. ಸ್ತ್ರೀ ಪುರುಷರಲ್ಲಿ ಸಮಾನ ಸ್ಥಾನಮಾನದ ಅರಿವು ಭವಿಷ್ಯದ ಜನಾಂಗವನ್ನು ಆರೋಗ್ಯಕರ ವಾತಾವರಣದಲ್ಲಿ ಬೆಳೆಸುವುದು. ನೆಲ, ಜಲ ಹಾಗೂ ವಾಯು ಪರಿಶುದ್ಧತೆಯನ್ನು ಕಾಪಾಡುವುದು ಇವೆಲ್ಲದರ ಮೂಲಕ ವ್ಯಕ್ತಿತ್ವ ವಿಕಾಸನ, ಕುಟುಂಬ ಕಲ್ಯಾಣ ಇದೇ ಸಂಸ್ಕೃತಿಯ ಹಿರಿಮೆ ಎನ್ನಬಹುದು. ಆದುದರಿಂದ ಸಂಸ್ಕೃತಿಯು ಲಿಂಗ ವ್ಯವಸ್ಥೆಯಲ್ಲಿ ಅತಿಮುಖ್ಯ ಪಾತ್ರ ವಹಿಸುತ್ತದೆ. ಕೇವಲ ಬೌದ್ಧಿಕ ಸಂಪತ್ತು ಮಾತ್ರವೇ ಸಂಸ್ಕೃತಿಯಾಗುವುದಿಲ್ಲ. ಅದು ನಮ್ಮ ಹೃದಯದ ಪರಿಪಕ್ವತೆಗೆ ಸಹಕಾರಿಯಾಗಬೇಕು. ಸುತ್ತಲಿನ ಜನರ ಸುಖ ದುಃಖದಲ್ಲಿ ಭಾಗಿ ಯಾಗುವಂತಹ ಸಹಾನುಭೂತಿ ಹುಟ್ಟಬೇಕು.

"ಮ್ಯಾಥ್ಯೂ ಅರ್ನಾಲ್ಡ್ ವೈಜ್ಞಾನಿಕ ಕುತೂಹಲವಷ್ಟೇ ಸಂಸ್ಕೃತಿಯಾಗುವುದಿಲ್ಲ, ಪರಿಪೂರ್ಣ ಪ್ರೇಮವೇ ಅದರ ಮೂಲ ಗುಣ ಹಾಗೂ ಅಂತಹ ಪರಿಪೂರ್ಣ ಅಧ್ಯಯನವೇ ಸಂಸ್ಕೃತಿ ಎಂದು ವಿವರಿಸಿದ್ದಾರೆ"[೧] ಆದ್ದರಿಂದ ಸಮಾಜದಲ್ಲಿ ಮಾನವ ವಿಕಾಸವನ್ನೆ ಸಂಸ್ಕೃತಿಯ ಮೂಲ ಉದ್ದೇಶ ಹಾಗೂ ಅದೇ ಮಾನವ ಸಂಸ್ಕೃತಿ ಎನ್ನಬಹುದು.

ಇ.ಬಿ.ಟೈಲರ್ ಎಂಬ ಸಮಾಜಶಾಸ್ತ್ರಜ್ಞ ಸಂಸ್ಕೃತಿ ಎಂದರೆ "ಜ್ಞಾನ, ನಂಬಿಕೆ, ಕಲೆ, ನೀತಿ, ಕಾನೂನು, ಸಂಪ್ರದಾಯ ಮತ್ತು ಮಾನವನು ಸಮಾಜದ ಸದಸ್ಯನಾಗಿ ಪಡೆದ ಎಲ್ಲಾ ಸಾಮರ್ಥ್ಯಗಳನ್ನೊಳಗೊಂಡ ಸಂಕೀರ್ಣ ವ್ಯವಸ್ಥೆ"[೨] ಎಂದಿದ್ದಾನೆ.

"ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗಿಬರುವ ಸಾಮಾಜಿಕ ಪರಂಪರೆಯೇ ಸಂಸ್ಕೃತಿ ಎಂದಿದ್ದಾನೆ ಲಿಂಟನ್. ಸಂಸ್ಕೃತಿ ಎಂಬ ಶಬ್ದವನ್ನು ಇಂಗ್ಲಿಷ್ ಭಾಷೆಯ Culture ಎಂಬ ಪದಕ್ಕೆ ಸಂವಾದಿಯಾಗಿ 'Cult' ಎಂಬ ಶಬ್ದಕ್ಕೆ ಆರಾಧನಾ ಪದ್ಧತಿ, ವಿಧಿ, ಮತ, ಶ್ರದ್ಧೆ, ಪಂಥ, ಉಪಾಸನೆ, ಭಕ್ತಿ, ಆಸಕ್ತಿ ಮುಂತಾದ ಅರ್ಥಗಳಿವೆ."[೩]

ಒಟ್ಟಿನಲ್ಲಿ ಮಾನವ ಅಂತರಂಗದ ಜೀವನದ ಅಭಿವ್ಯಕ್ತಿಯೇ ಸಂಸ್ಕೃತಿ ಎನ್ನಬಹುದು. ಇಂತಹ ಸಂಸ್ಕೃತಿಯಲ್ಲಿ ಸ್ತ್ರೀಯನ್ನು ಅತ್ಯಂತ ಕೀಳಾಗಿ, ಕಾಣುವುದರ ಮುಖಾಂತರ ಅವಳನ್ನು

ಮೂಲೆಗುಂಪು ಮಾಡಲಾಗಿದೆ. ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಸಮಾಜವನ್ನು ಕಟ್ಟುವ ಹಾಗೂ ಕೆಡಹುವ ಎರಡೂ ಕಾರ್ಯಗಳನ್ನು ತಾನೇ ಮಾಡುತ್ತಾ ಬಂದಿದೆ. ಈ ಬಗ್ಗೆ ಸ್ತ್ರೀ ಲೋಕದ ಎಲ್ಲಾ ಬಗೆಯ ಚಿಂತನೆಗಳನ್ನು ತಡೆದಿದ್ದರಿಂದ, ಸ್ತ್ರೀಯರನ್ನು ಮೂಲೆಗುಂಪು ಮಾಡಿದ್ದರಿಂದ ಮಹಿಳಾ ಪರಂಪರೆಗಳನ್ನೆಲ್ಲಾ ಅಪಮೌಲ್ಯಗೊಳಿಸಿದೆ. ಆಚಾರ, ವಿಚಾರಗಳಲ್ಲಿ ಮೂಢನಂಬಿಕೆಗಳಂಥ ಮೌಲ್ಯಗಳನ್ನು ಹೇಳಿ ಅವಳನ್ನು ಕಟ್ಟಿ ಹಾಕಲಾಗುತ್ತದೆ. ಸ್ತ್ರೀಯರನ್ನು ಕುರಿತು ಧರ್ಮದ ಧೋರಣೆಗಳು ದ್ವಿಮುಖ ಮೌಲ್ಯಗಳನ್ನೂ ಪ್ರತಿಪಾದಿಸುತ್ತವೆ. ಒಂದೆಡೆ ಆಕೆಯನ್ನು ದೇವತೆಯೆಂದು ಪೂಜಿಸುವುದು, ಮತ್ತೊಂದೆಡೆ ಆಕೆಯ ಮೇಲಿನ ದೌರ್ಜನ್ಯಕ್ಕೆ ಮಾನ್ಯತೆ ನೀಡುವುದು. ಇದು ಧರ್ಮದಲ್ಲಿ ಅಡಗಿರುವ ವೈರುಧ್ಯಗಳಿಗೆ ಒಂದು ಉದಾಹರಣೆಯಷ್ಟೇ.

ಹುಟ್ಟು, ವಿವಾಹ, ಶಿಕ್ಷಣ, ವೈಧವ್ಯ, ಸಾವು ಮುಂತಾದ ಸಂದರ್ಭಗಳಲ್ಲಿ ಸ್ತ್ರೀಯರು ಮಾಡಬಹುದಾದ ಅಥವಾ ಮಾಡಬಾರದಂತ ಕೆಲಸಗಳ ಪಟ್ಟಿಯನ್ನು ಪ್ರತಿ ಧರ್ಮವೂ ಸೃಷ್ಟಿಸಿದೆ. 'ಮಾತೃದೇವೋಭವ' ಎಂದು ಸಾರುವುದರ ಮೂಲಕ ಸ್ತ್ರೀಯರನ್ನು ದೈವತ್ವದ ಪಟ್ಟಕ್ಕೇರಿಸಿದ ಧರ್ಮ ಆಕೆಯನ್ನು ಸತ್ತ ಪತಿಯೊಡನೆ ಜೀವಂತವಾಗಿ ಚಿತೆಯೇರುವಂತ ಅಮಾನುಷ ಆಚರಣೆಗೂ ಅಂಗೀಕಾರ ನೀಡಿದೆ. ಮನುಕುಲದ ಸೃಷ್ಟಿ ಹಾಗೂ ಪಾಲನೆ–ಪೋಷಣೆಯನ್ನು ಹೊತ್ತ ಸ್ತ್ರೀಗೆ ಯಾವ ಧರ್ಮವೂ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡಿಲ್ಲ. ಅವಳಿಗೆ ನೀಡಿರುವ ಹಕ್ಕುಗಳು ಹಲವು, ಹೇರಿರುವ ನಿರ್ಬಂಧಗಳು ನೂರಾರು. ಇದು ಸ್ತ್ರೀಯರನ್ನು ಕುರಿತಂತೆ ಧರ್ಮ ತಳೆದಿರುವ ನಿಲುವಿಗೆ ಸಾಕ್ಷಿ. ಸ್ತ್ರೀಯರಿಗೆ ನೀಡಿದಂಥ ಹಲವು ಹಕ್ಕುಗಳನ್ನು ಕೂಡ ಅವರು ಸಂಸಾರ ಎಂಬ ಸಾಂಸ್ಥಿಕ ಚೌಕಟ್ಟಿನ ಒಳಗೆ ಮಾತ್ರ ಅನುಭವಿಸಬೇಕು ಎನ್ನುವ ನಿರ್ಬಂಧವಂತೂ ಇಂದಿಗೂ ಆಚರಣೆಯಲ್ಲಿದ್ದು ಬಹುಪಾಲು ಸ್ತ್ರೀಯರೂ ಈ ನಂಬಿಕೆಗೆ ಬದ್ಧರಾಗಿರುವುದು ದೂರದೃಷ್ಟಕರ.

## ಸಂಸ್ಕೃತಿ ಮತ್ತು ಲಿಂಗ ವ್ಯವಸ್ಥೆಯ ನಿರ್ಮಾಣ

"ಲಿಂಗ ಮತ್ತು ಲಿಂಗವ್ಯವಸ್ಥೆ ಎಂಬ ಪರಿಕಲ್ಪನೆಗಳಿಗೆ ವ್ಯತ್ಯಾಸಗಳನ್ನು ಗುರುತಿಸುವುದೇ ಸಂಸ್ಕೃತಿ ಎನ್ನುವ ಪದವನ್ನು ಬಳಸಿಕೊಳ್ಳುವುದರ ಮೂಲಕ ಲಿಂಗ ಎನ್ನುವುದು ಸ್ತ್ರೀ–ಪುರುಷರ ನಡುವಣ ಜೈವಿಕ ವ್ಯತ್ಯಾಸಗಳನ್ನು ತಿಳಿಸುವಂತಹ ಒಂದು ಪರಿಕಲ್ಪನೆಯಾದರೆ, ಲಿಂಗ ವ್ಯವಸ್ಥೆ ಎನ್ನುವುದು ಸಂಸ್ಕೃತಿಯಿಂದ ನಿರ್ಮಿತವಾದಂತ ಒಂದು ಸಾಮಾಜಿಕ ಸೃಷ್ಟಿ. ಸ್ತ್ರೀ–ಪುರುಷರ ನಡುವಣ ಜೈವಿಕ ವ್ಯತ್ಯಾಸಗಳು ಒಂದು ವಾಸ್ತವವಷ್ಟೇ. ಇದನ್ನು ತಿರಸ್ಕರಿಸುವುದಾಗಲಿ, ಆ ವ್ಯತ್ಯಾಸಗಳಿಗೆ ಅತಿಯಾದ ಪ್ರಾಮುಖ್ಯತೆಯನ್ನು ನೀಡುವುದಾಗಲಿ ವೃಥಾ ಕಾಲಹರಣವಷ್ಟೇ. ಭಿನ್ನ ಜೈವಿಕತೆಯ ಕಾರಣದಿಂದಾಗಿ ಸ್ತ್ರೀ ಪುರುಷರು ಮಾಡಬಹುದಾದ ಅಥವಾ ಮಾಡಬಾರದ

ಕಾರ್ಯಗಳಲ್ಲೂ ವ್ಯತ್ಯಾಸಗಳಿರಬೇಕೆನ್ನುವುದು ಸಂಸ್ಕೃತಿ ನಿರ್ಮಾಣ ಮಾಡಿ ಪೋಷಿಸಿಕೊಂಡು ಬಂದಿರುವಂಥ ಒಂದು ಮಿಥ್ಯೆ. ಸ್ತ್ರೀಯರನ್ನು ದುರ್ಬಲೆ ಎನ್ನುವುದು, ಹಲವು ಜವಾಬ್ದಾರಿಗಳು ಆಕೆಗೆ ಮೀಸಲು ಎಂದು ಮೌಲ್ಯವನ್ನು ಭಿತ್ತಿ ಪುರುಷರು ಆ ಕೆಲಸಗಳಿಂದ ದೂರವಿರುವಂತೆ ಮಾಡಿರುವುದು. ಸ್ತ್ರೀಯರು ಸ್ವತಂತ್ರ ಜೀವನ ನಡೆಸಲು ನಾನಾ ಅಡ್ಡಿಗಳನ್ನು ಒಡ್ಡುವುದು ಇವೆಲ್ಲವೂ ಸಂಸ್ಕೃತಿಯ ಸೃಷ್ಟಿಯೇ ಸರಿ."[೪]

ಸ್ತ್ರೀಯು ನಿರ್ವಹಿಸುವ ಜೈವಿಕ ಪಾತ್ರಗಳು ಆಕೆಯ ದೇಹ ರಚನೆಯ ಕಾರಣದಿಂದಾಗಿ ಎಂಬುದು ನಿಜ. ಗರ್ಭಧಾರಣೆ, ಶಿಶುವಿಗೆ ಜನನ ನೀಡುವುದು ಹಾಗೂ ಶಿಶುವಿಗೆ ಹಾಲನ್ನುಣಿಸುವುದು ಈ ಮೂರು ಸ್ತ್ರೀಯರು ನಿರ್ವಹಿಸುವ ಜೈವಿಕ ಪಾತ್ರಗಳು ಎನ್ನುವುದೇನೋ ಸರಿ. ಆದರೆ ಸಮಾಜದ ಮತ್ಯಾವುದೇ ಚಟುವಟಿಕೆಯಲ್ಲಿ ಸ್ತ್ರೀಯರು ಪಾಲ್ಗೊಳ್ಳಬಾರದು ಎಂಬುದಕ್ಕೆ ಯಾವ ಆಧಾರವೂ ಇಲ್ಲ. ಭಿನ್ನ ಜೈವಿಕತೆ, ಭಿನ್ನ ಪಾತ್ರ ಹಂಚಿಕೆಗೆ ಕಾರಣವಾಗಿ, ಅದೇ ಪ್ರವೃತ್ತಿ ಇಂದಿಗೂ ಮುಂದುವರೆದುಕೊಂಡು ಬಂದಿರುವುದಕ್ಕೆ ಸಾಂಸ್ಕೃತಿಕ ವ್ಯವಸ್ಥೆಯೇ ಕಾರಣ ಎಂದೇನೂ ಪ್ರತ್ಯೇಕವಾಗಿ ಹೇಳಬೇಕಿಲ್ಲ. ಸ್ತ್ರೀಯು ತನ್ನ ಜೀವನದಲ್ಲಿ ಹಲವಾರು ಸಂದರ್ಭಗಳಲ್ಲಿ ಎಂದರೆ ಋತುಮತಿಯಾದಾಗ, ಶಿಶುವಿಗೆ ಜನನ ನೀಡಿದಾಗ ಅವುಗಳನ್ನು ತಾತ್ಕಾಲಿಕವಾಗಿ ಸಕ್ರಿಯ ಸಾಮಾಜಿಕ ಜೀವನದಿಂದ ದೂರವಿಡುವಂತ ಒಂದು ವ್ಯವಸ್ಥೆ ಸೃಷ್ಟಿಯಾಗಿ, ಅದನ್ನೇ ಮುಂದಿಟ್ಟುಕೊಂಡು ಅವಳ ಬದುಕಿನಲ್ಲಿ ವಿವಾಹ, ತಾಯ್ತನ, ಮಕ್ಕಳ ಲಾಲನೆ–ಪಾಲನೆ, ಇವುಗಳೇ ಮುಖ್ಯವಾದ ಜವಾಬ್ದಾರಿಗಳು ಎನ್ನುವ ಒಂದು ಮಿಥ್ಯೆಯನ್ನು ಸಂಸ್ಕೃತಿ ನಿರ್ಮಿಸಿದೆ. ಈ ಸಮಯದಲ್ಲಿ ಅವರು ಹೆಚ್ಚಾಗಿ ಮನೆಯೊಳಗೆ ಇರುತ್ತಿದ್ದರಾದ್ದರಿಂದ, ಮನೆಯ ಒಳಗೆ ಹಾಗೂ ಮನೆಯ ಸುತ್ತ–ಮುತ್ತ ನಿರ್ವಹಿಸಬೇಕಾದಂಥ ಜವಾಬ್ದಾರಿಗಳಿಗೆ ಅವರು ಹೊಣೆಗಾರರಾಗುತ್ತಿದ್ದರು. ಹಾಗೆಂದ ಮಾತ್ರಕ್ಕೆ ಆ ಕೆಲಸಗಳು ಒಂದು ಕುಟುಂಬದ ಅಥವಾ ಸಮುದಾಯದ ಉಳಿವು ಹಾಗೂ ದೃಷ್ಟಿಯಿಂದ ಅಮುಖ್ಯವಾದವು ಎಂಬರ್ಥವಿರಲಿಲ್ಲ. ಆಹಾರನ್ವೇಷಣೆಯ ಹಂತದಲ್ಲಿ ಮಾನವರು ಗುಂಪು ಗುಂಪಾಗಿ ಚಲಿಸುತ್ತಿದ್ದುದರಿಂದ ಯಾರು ಮೇಲು, ಯಾರು ಕೀಳು ಎಂಬ ಕಲ್ಪನೆಗಳಿಗೆ ಆ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ಥಾನವಿರಲಿಲ್ಲ. ಆದರೆ ಕುಟುಂಬ ಎಂಬ ಸಂಸ್ಥೆ ಅಸ್ತಿತ್ವಕ್ಕೆ ಬಂದು, ಪುರುಷ ಆಹಾರವನ್ನು ಉತ್ಪಾದಿಸುವವ ಮಹಿಳೆ ಅದರ ಬಳಕೆದಾರಳು ಎಂಬ ಭಾವನೆ ಜಾಗೃತವಾದಾಗ ಪುರುಷ ಕೆಲಸಕ್ಕೆ ಬೆಲೆಕಟ್ಟುವಂಥ ಪ್ರವೃತ್ತಿ ಬೆಳೆಯಿತು. ಮನೆಯ ಹೊರಗಿನ ದುಡಿಮೆಗೆ ಬೆಲೆ ಇದೆ. ಆದರೆ ಮನೆಯ ಒಳಗೆ ದಿನವಿಡಿ ದುಡಿದರೂ ಅದಕ್ಕೆ ಯಾವುದೇ ಬೆಲೆಯಿಲ್ಲ ಎಂಬ ವ್ಯವಸ್ಥೆ ಸೃಷ್ಟಿಯಾಯಿತು. ಮಕ್ಕಳಿಗೆ ಜನ್ಮ ನೀಡುವುದು, ಅವರನ್ನು ಬೆಳೆಸುವುದು, ರೋಗಿಗಳ ಶುಶ್ರೂಷೆ ಮಾಡುವುದು ಹೀಗೆ ಮನೆಯ ಒಳಗೆ ಮತ್ತು ಹೊರಗೆ ಮಹಿಳೆಯರು ಮಾಡುವ ಅನೇಕ ಕೆಲಸಗಳಿಗೆ

ಮೌಲ್ಯವೇ ಇಲ್ಲದಂಥ ಸಂಸ್ಕೃತಿ ನಿರ್ಮಾಣವಾಗಿ ಇದೇ ಒಂದು ಸ್ಥಾಪಿತ ವ್ಯವಸ್ಥೆಯಾಯಿತು. ಹೀಗೆ ಸಂಸ್ಕೃತಿ ಹೆಸರಲ್ಲಿ ಪುರುಷರ ಕೆಲಸ, ಮಹಿಳೆಯರ ಕೆಲಸ ಎಂದು ಎರಡು ಭಾಗಗಳಾಗಿ ವಿಂಗಡಿಸಿ ಮಹಿಳೆಯರ ಕೆಲಸ ಎಂದರೆ ಅದು ಅನುತ್ಪಾದಕ ಅಥವಾ ಅಪ್ರಯೋಜಕ ಎನ್ನುವ ಭಾವನೆಯನ್ನು ಬಿತ್ತುವುದರ ಮೂಲಕ ಸಂಸ್ಕೃತಿಯಲ್ಲಿ ಲಿಂಗಭೇದವನ್ನು ಒಂದು ಸ್ಥಾಪಿತ ವ್ಯವಸ್ಥೆಯನ್ನಾಗಿಸಿವೆ.

ಸಮಾಜದ ಎಲ್ಲಾ ಸಂಸ್ಥೆಗಳಲ್ಲೂ ಒಂದಲ್ಲ ಒಂದು ಬಗೆಯಲ್ಲಿ ಲಿಂಗ ತಾರತಮ್ಯ ಸಾಂಸ್ಕೃತಿಕ ವ್ಯವಸ್ಥೆಯ ಮೂಲಕ ಬೇರೂರುತ್ತದೆ. ಕುಟುಂಬದಲ್ಲಿ ಗಂಡು ಮಗುವಿಗೆ ನೀಡುವ ಅತಿ ಪ್ರಾಶಸ್ತ್ಯ, ಹೆಣ್ಣು ಮಗುವಿಗೆ ತಾತ್ಸರ ಮನೋಭಾವ, ಸಂಪನ್ಮೂಲಗಳ ಹಂಚಿಕೆಯಲ್ಲಿ ತಾರತಮ್ಯ, ಸ್ತ್ರೀ ಮೇಲೆ ನಡೆಯುವ ಕೌಟುಂಬಿಕ ದೌರ್ಜನ್ಯದ ವಿವಿಧ ಮುಖಗಳು ಇವೆಲ್ಲಾ ಲಿಂಗ ವ್ಯವಸ್ಥೆಯ ಪೂರ್ವಗ್ರಹಗಳನ್ನು ಎಳೆಯ ವಯಸ್ಸಿನಿಂದಲೇ ರೂಢಿಸಿಕೊಳ್ಳುವಲ್ಲಿ ವ್ಯಕ್ತಿಗಳಿಗೆ ತರಬೇತಿಯನ್ನು ನೀಡುತ್ತವೆ. ಶಿಕ್ಷಣ ಲಿಂಗಭೇದವನ್ನು ತೊಡೆದು ಹಾಕಲು ಅತ್ಯಂತ ಉಪಯುಕ್ತ ವಾದ ಸಾಧನ ಎನ್ನುವುದು ನಿಜವಾದರೂ, ಈ ಶಿಕ್ಷಣ ವ್ಯವಸ್ಥೆಯಲ್ಲಿಯೇ ಲಿಂಗ ತಾರತಮ್ಯ ಹಾಸು ಹೊಕ್ಕಾಗಿದೆ. ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿ–ವಿದ್ಯಾರ್ಥಿನಿಯರ ನಡವಳಿಕೆ, ಶಿಕ್ಷಕರು, ಲಿಂಗ ಸಂಬಂಧಿ ವಿಚಾರಗಳ ಬಗ್ಗೆ, ತಳೆಯುವ ನಿಲುವುಗಳು, ಹೆಣ್ಣು–ಗಂಡು ಮಕ್ಕಳಿಗೆ ದೊರೆಯುವ ವಿಭಿನ್ನ ಅವಕಾಶಗಳು, ಅವರ ಮೇಲೆ ಹೇರುವ ವಿಭಿನ್ನ ನಿರ್ಬಂಧನೆಗಳು, ಆಧುನಿಕತೆಯ ಮೌಲ್ಯಗಳನ್ನು ಬಿತ್ತುವ ಶಿಕ್ಷಣದಂಥ ಒಂದು ವ್ಯವಸ್ಥೆ ಕೂಡ ಸಂಪ್ರದಾಯಿಕ ಸಾಂಸ್ಕೃತಿಕ ಸಂದರ್ಭಗಳ ಹಿಡಿತದಿಂದ ಹೊರಬಂದಿಲ್ಲ ಎನ್ನುವುದಕ್ಕೆ ಸಾಕ್ಷಿಯಾಗಿದೆ.

### ಧಾರ್ಮಿಕ ನೆಲೆಯಲ್ಲಿ ಸ್ತ್ರೀ

ಧರ್ಮ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗ. ಧರ್ಮ ಸಾಮಾಜಿಕ ನಿಯಂತ್ರಣದ ಒಂದು ಸಾಧನವೂ ಹೌದು. ಸಂಸ್ಕೃತಿಯ ವರ್ಗಾವಣೆಯ ಜವಾಬ್ದಾರಿಯನ್ನು ಹೊತ್ತಿರುವಂಥ ಒಂದು ಸಾಮಾಜಿಕ ಸಂಸ್ಥೆಯೂ ಹೌದು. ಸರಳ ಸಮಾಜದಿಂದ ಹಿಡಿದು, ಸಂಕೀರ್ಣ ಸಮಾಜದವರೆಗೂ ಧರ್ಮದ ಪ್ರಭಾವ ಸಾಮಾಜಿಕ ಜನಜೀವನದ ಮೇಲೆ ಜೀವಂತವಾಗಿರುವುದನ್ನು ನಾವು ಕಾಣಬಹುದು. ಧರ್ಮ ಸಂಸ್ಕೃತಿಯನ್ನು ರೂಪಿಸುವಂತಹ ಪ್ರಮುಖ ಸಾಧನವೂ ಆಗಿರುವುದರಿಂದ ಲಿಂಗ ವ್ಯವಸ್ಥೆಯನ್ನು ಕುರಿತಂತೆ ಸಂಸ್ಕೃತಿಯ ನಿಲುವುಗಳು ರೂಪುಗೊಳ್ಳುವುದಕ್ಕೆ ಧಾರ್ಮಿಕ ಪದ್ಧತಿಗಳು ಕಾರಣವಾಗುತ್ತದೆ ಎಂದೇನೂ ಪ್ರತ್ಯೇಕವಾಗಿ ಹೇಳಬೇಕಿಲ್ಲ.

ಧಾರ್ಮಿಕ ಪದ್ಧತಿಗಳು ಸ್ತ್ರೀ ವಿರೋಧಿಯಾಗಿದ್ದರೂ ಸಂಸ್ಕೃತಿಯಲ್ಲಿ ಮಹಿಳೆಯರ ಬಗ್ಗೆ ದ್ವಿಮುಖ ನಿಲುವುಗಳಿವೆ. ಸ್ತ್ರೀಯನ್ನು ದೇವತೆಗಳೆಂದು, ದೇವಿ ಸಮಾನಳೆಂದು ಗೌರವಿಸುವುದು,

ಪೂಜೆ ಮಾಡುವುದು, ಇನ್ನೊಂದೆಡೆ ಹೆಂಗಸರನ್ನು ವರದಕ್ಷಿಣೆ, ಹೆಣ್ಣುಭ್ರೂಣ ಹತ್ಯೆ, ಶಿಶು ಹತ್ಯೆ, ವಿಧವೆಯರ ಮೇಲಿನ ದೌರ್ಜನ್ಯ, ದೇವದಾಸಿ ಪದ್ಧತಿ, ಬಹುಪತ್ನಿತ್ವ, ಪುರುಷ ದಬ್ಬಾಳಿಕೆ ನಡೆಸುವುದು ಇವೆಲ್ಲವೂ ಧರ್ಮ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ನಡೆಸಲಾಗುವ ದುಷ್ಟ ಪದ್ಧತಿಗಳಾಗಿವೆ. ಇದು ಕೇವಲ ಕನ್ನಡಿಯಲ್ಲಿ ಗಂಟು ತೋರಿಸಿ, ಕತ್ತು ಹಿಸುಕಿ ಕೊಲ್ಲುವಂಥ ವಂಚಕ ಪ್ರವೃತ್ತಿಯೇ ಆಗಿದೆ.

ಯಾವುದೇ ಸಮಾಜದಲ್ಲಿ ಲಿಂಗ ವ್ಯವಸ್ಥೆಯ ನ್ಯಾಯವನ್ನು ಪ್ರತಿಪಾದಿಸಬೇಕಾಗಿರುವುದು ಆ ಸಮಾಜ ಸೃಷ್ಟಿಸಿರುವಂಥ ನ್ಯಾಯ ಪಾಲನಾ ವ್ಯವಸ್ಥೆ ಭಾರತೀಯ ಸಮಾಜದಲ್ಲಿ ಸಂವಿಧಾನ ಲಿಂಗ ತಾರತಮ್ಯವನ್ನು ನಿಷೇಧಿಸಿ ಎಲ್ಲಾ ಪ್ರಜೆಗಳಿಗೂ ಸಮಾನ ಅವಕಾಶಗಳನ್ನು ನೀಡಿದ್ದರೂ ಇಂದಿಗೂ ಲಿಂಗ ತಾರತಮ್ಯ ಹಾಗೂ ಲಿಂಗ ಪೂರ್ವಗ್ರಹಗಳು ಎಲ್ಲಾ ಸಂಸ್ಥೆಗಳಲ್ಲೂ ಅಸ್ತಿತ್ವ ದಲ್ಲಿರುವುದು ಎಲ್ಲರಿಗೂ ತಿಳಿದ ವಿಷಯವೇ ಸರಿ. ಹೆಣ್ಣೆಂಬ ಏಕೈಕ ಕಾರಣಕ್ಕಾಗಿ ಸಮಾನ ಅವಕಾಶಗಳಿಂದ ವಂಚಿತಳಾದಾಗ ಆಕೆಗೆ ನ್ಯಾಯ ದೊರಕಿಸುವ ವ್ಯವಸ್ಥೆ ಯಾವುದು? ನಮ್ಮ ಆರಕ್ಷಕರು ಮತ್ತು ನ್ಯಾಯಲಯಗಳು ತಾನೇ? ಆದರೆ ವಾಸ್ತವದಲ್ಲಿ ಈ ಸಂಸ್ಥೆಗಳೂ ಲಿಂಗ ಪೂರ್ವಗ್ರಹಗಳಿಂದ ಮುಕ್ತವಾಗಿಲ್ಲ ಎನ್ನುವುದಕ್ಕೆ ಪುರಾವೆಗಳು ಒಂದು, ಎರಡು ಇಲ್ಲ ಸಾವಿರಗಳಿವೆ. ಪುರುಷ ಪ್ರಧಾನ ಸಂಸ್ಕೃತಿಯ ಬಿಗಿ ಹಿಡಿತದಲ್ಲಿರುವ ಈ ಸಂಸ್ಥೆಗಳಲ್ಲಿ ಮಹಿಳೆಗೆ ನ್ಯಾಯ ದೊರೆಯುವ ಬದಲು ಅನೇಕ ಸಂದರ್ಭಗಳಲ್ಲಿ ಮತ್ತಷ್ಟು ಅವಮಾನಗಳು ಅನ್ಯಾಯಗಳು ಆಗಿರುವುದು ಇಂದು ಮಹಿಳಾ ಹೋರಾಟದ ಇತಿಹಾಸದ ಪುಟಗಳಲ್ಲಿ ದಾಖಲಾಗಿದೆ.

ಪುರುಷ ಪ್ರಧಾನ ವ್ಯವಸ್ಥೆಯು ಸ್ತ್ರೀ–ಪುರುಷರ ನೈತಿಕತೆಯನ್ನು ಬದುಕಿನ ಮುಖ್ಯ ಮಾನದಂಡವನ್ನಾಗಿ ವ್ಯಾಖ್ಯಾನಿಸಿಕೊಂಡಿದೆ. ಸ್ತ್ರೀ ಪುರುಷರ ಗುಣ–ದುರ್ಗುಣಗಳ ಕಾರಣ ಮತ್ತು ಪರಿಣಾಮವನ್ನು ಕುರಿತು ಧರ್ಮವು ಮಾತಾಡುತ್ತದೆ. ಹೆಣ್ಣಿನ ಗುಣ ಸ್ವಭಾವಗಳು ಗಂಡಿನ ಗುಣ ಸ್ವಭಾವಗಳಿಗಿಂತ ಭಿನ್ನ ಸ್ವರೂಪದವುಗಳೆಂದೂ ನಿರ್ದಿಷ್ಟವಾದ ಪಾತ್ರ, ವಿಶಿಷ್ಟ ಸಂಗತಿಗಳೆಂದೂ ಪಿತೃ ಪ್ರಧಾನ ವ್ಯವಸ್ಥೆ ವ್ಯಾಖ್ಯಾನಿಸುತ್ತದೆ. ಧರ್ಮಗಳು ನೈತಿಕ ಸತ್ಯಗಳನ್ನು ಪ್ರೇಮ, ದಯೆ, ಅಹಿಂಸೆ, ಕರುಣೆ, ತ್ಯಾಗ, ಸಹನೆಗಳ ಪಕ್ಷಪಾತಿಯಾದ ದೈವವು ಪುರುಷನಿಗೆ ಈ ಗುಣಗಳನ್ನು ಆಚರಿಸಲು ಹೇಳುವುದರ ಬದಲು ಇದಕ್ಕೆ ವಿರುದ್ಧವಾದ ಗುಣಗಳ ನಡಾವಳಿಗೆ ಒಪ್ಪಿಗೆಯನ್ನು ಸೂಚಿಸುತ್ತದೆ. ಮನುಸ್ಮೃತಿಯ ವಿವಾಹ ಪದ್ಧತಿಯು ಹೆಣ್ಣನ್ನು ಲೈಂಗಿಕವಾಗಿ ಬಳಸಿಕೊಂಡ ಗಂಡಿಗೆ ಅವಳನ್ನು ಮದುವೆಯಾಗಲು ಅವಕಾಶ ಮಾಡಿಕೊಡುತ್ತದೆ. ಈ ಕ್ರಿಯೆ ತಿರುವು ಮುರುವಾದರೆ ವ್ಯಭಿಚಾರವಾಗುತ್ತದೆ. ಪುರುಷಾನುವರ್ತಿಯಾಗಿ ನಡೆದುಕೊಳ್ಳಲು ಮನು ಸ್ತ್ರೀಯರಿಗೆ ಉಪದೇಶ ಮಾಡುತ್ತಾನೆ. ಪುರುಷನನ್ನೇ ದೈವವೆಂದು ಹೇಳಿ ಆತನನ್ನು ಪತಿದೈವವಾಗಿಸಿ,

ಈ ಪತಿ ದೈವದ ನಿಷ್ಠೆಯ ಆಚರಣೆಯನ್ನು 'ಪತಿವ್ರತಾಧರ್ಮ'ವೆಂದು ವ್ಯಾಖ್ಯಾನಿಸಲಾಗುತ್ತದೆ. ಪತ್ನಿ ಪತಿವ್ರತೆಯಾಗಿದ್ದಾಗ ಮಾತ್ರ ಮಾನ್ಯಳಾಗುತ್ತಳೆ. "ಗಂಡನಿಂದ ನಿರಾಕರಣೆಯಾದ ಸತಿ ಬೇರೊಬ್ಬರ ಗುಲಾಮಳೋ, ದಾಸಿಯೋ ಆಗಿ ಬದುಕು ಮಾಡಬೇಕಾಗುತ್ತದೆ ಇನ್ನೊಂದು ನೆಲೆಯಲ್ಲಿ ಅಸಹಾಯಕಳಾದ ದುಸ್ಥಿತಿಯಲ್ಲಿರುವ ಹೀನ ವೃತ್ತಿಯ ಕೆಳಜಾತಿಯ ಸ್ತ್ರೀ ದೈವಾರಾಧನೆಯನ್ನು ಮಾಡಿಕೊಂಡು ದೇವಸ್ಥಾನದಲ್ಲಿ ಅಂಗ ಭೋಗ, ರಂಗಭೋಗ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾ ದೇವರ ದಾಸಿಯಾಗಿ ಕಾರ್ಯನಿರ್ವಹಿಸಬೇಕಾಗುತ್ತದೆ."[೫] ಒಟ್ಟಾಗಿ ಎರಡೂ ವಲಯಗಳಲ್ಲಿ ಹೆಣ್ಣಿನ ಲೈಂಗಿಕತೆಯನ್ನು ಗಂಡಿನ ಅಧೀನತೆಯಲ್ಲಿ ಹಾಗೂ ಗಂಡಿನ ಇಚ್ಛೆಗನುಗುಣವಾಗಿ ನಡೆಯುವಂತೆ ವ್ಯವಸ್ಥೆಗೊಳಿಸುವಲ್ಲಿ ಧರ್ಮದ ನಿರ್ದೇಶನವೂ ಪುರುಷಧಿಕಾರದ ಅನುಪಾಲನೆಯೂ ಒಟ್ಟೊಟ್ಟಿಗೆ ನಡೆಯುವುದು ಕಾಣುತ್ತೇವೆ.

**ಧಾರ್ಮಿಕ ನಂಬಿಕೆಗಳಲ್ಲಿ ಸ್ತ್ರೀ**

ಹೆಣ್ಣಿನ ಹುಟ್ಟಿನಿಂದ ಸಾವಿನವರೆಗೆ ಚಾಚಿಕೊಂಡಿರುವ ಸ್ತ್ರೀ ನಿಷ್ಠ ನಂಬಿಕೆಗಳು ಭಾರತೀಯ ಸಮಾಜ ಮತ್ತು ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯ ಸ್ಥಾನ-ಮಾನಗಳನ್ನು ಕಾಲಕಾಲಕ್ಕೆ ಪರಿವರ್ತನೆಗೊಂಡು ಮಹಿಳೆಯ ವ್ಯಕ್ತಿತ್ವದ ಪರಿಕಲ್ಪನೆಯನ್ನು ಅರಿಯುವಲ್ಲಿ ಪೂರಕವಾಗುತ್ತವೆ. ಹೆಣ್ಣಿನ ಸಮಸ್ತ ಬದುಕನ್ನು ನಿರ್ದೇಶಿಸಿ, ನಿಯಂತ್ರಿಸಿದ ಪಿತೃ ಕೇಂದ್ರಿತ ಮೌಲ್ಯವ್ಯವಸ್ಥೆಯಲ್ಲಿ ಸ್ತ್ರೀ ಸಂಬಂಧಿ ನಂಬಿಕೆಗಳ ಬಹುಪಾಲು ಸೃಷ್ಟಿಕರ್ತರು ಪುರುಷರೇ ಆಗಿರುವುದರಿಂದ ಹೆಣ್ಣಿನ ವ್ಯಕ್ತಿತ್ವದ ವಿಭಿನ್ನ ಮುಖಗಳನ್ನು ಗಂಡು ಗುರುತಿಸಿದೆ. ಒಟ್ಟಾರೆ ಮಹಿಳೆಯನ್ನು ಸುತ್ತುವರಿದ ಮೂಢನಂಬಿಕೆಗಳು ವ್ಯವಸ್ಥೆಯ ಜೀವ ವಿರೋಧಿ ನೆಲೆಯನ್ನು ಪ್ರತಿಗಾಮಿ ಧೋರಣೆಗಳನ್ನು ನಿಚ್ಚಳವಾಗಿಸುತ್ತವೆ. ನೀತಿ, ಧರ್ಮ, ತ್ಯಾಗ, ಬಲಿದಾನ, ಸತಿತ್ವ, ಮಾತೃತ್ವಗಳನ್ನು ಸ್ತ್ರೀಯರಿಗೆ ಕಡ್ಡಾಯ ಮೌಲ್ಯಗಳಾಗಿಸಿದ ವ್ಯವಸ್ಥೆಯು ಗಂಡಿನ ಸ್ವಾರ್ಥಕ್ಕಾಗಿ ಮಹಿಳೆಯರನ್ನು ಅಮಾನುಷವಾಗಿ ಬಳಸಿಕೊಂಡ ರೀತಿಯನ್ನು ಅನೇಕ ಕ್ರೂರ ನಂಬಿಕೆಗಳು ಪ್ರತಿಬಿಂಬಿಸುತ್ತವೆ. ಕೃಷಿ ಪ್ರಧಾನ ಜಾನಪದ ಶ್ರಮ ಸಂಸ್ಕೃತಿಯಲ್ಲಿ ಹೆಣ್ಣು, ಗಂಡಿನ ಸಹಚಾರಿಯಾಗಿ ಕುಟುಂಬ, ಕುಲಕಸುಬು, ಕೃಷಿಯಲ್ಲಿ ಸರಿ ಸಮವಾಗಿ ಹೊಣೆ ಹೊತ್ತಿದ್ದಾರೆ. ಹೆಣ್ಣನ್ನು ನಿಷೇದಾತ್ಮಕ ನೆಲೆಯಲ್ಲಿಯೇ ಪರಿಭಾವಿಸುವ ರೀತಿ ಶುಭ-ಅಶುಭದ ಹೆಸರಿನಲ್ಲಿ ಹೆಣ್ಣಿನ ವ್ಯಕ್ತಿತ್ವದ ಸಹಜ ಸ್ಪಂದನಗಳನ್ನು ನಿಯಂತ್ರಿಸುವ ಆಶಯಗಳು ನಂಬಿಕೆಗಳಲ್ಲಿ ದಟ್ಟವಾಗಿವೆ. ಸ್ತ್ರೀಬಲಿ, ಬಾಣಂತಿಬಲಿ, ದೇವದಾಸಿ, ವರದಕ್ಷಿಣೆ, ಕೆರೆಗೆ ಹಾರ ಇತ್ಯಾದಿ ಸ್ತ್ರೀ ವಿರೋಧಿ ಸಂಪ್ರದಾಯಗಳಿಗೆ ಹಿನ್ನಲೆಯಾಗಿರುವ ನಂಬಿಕೆಗಳು ಧರ್ಮ, ಶಾಸ್ತ್ರ, ಪುರಾಣ, ಐತಿಹ್ಯ ಮುಂತಾದ ಮೂಲಗಳಿಂದ ಪುಷ್ಠಿ ಪಡೆದುಕೊಂಡು ಇಂದಿಗೂ ತೆರೆಮರೆಯಲ್ಲಿ ಹೆಣ್ಣಿನ ಬದುಕನ್ನು ದುರಂತದ ಅಂಚಿಗೆ ನಿಲ್ಲಿಸುತ್ತಿರುವುದು ನಂಬಿಕೆಗಳ ಪ್ರಶ್ನಾತೀತ ನಿಯಂತ್ರಕ ಶಕ್ತಿಗೆ ನಿದರ್ಶನವಾಗಿದೆ.

ಆಧ್ಯಾತ್ಮ, ಆತ್ಮೋದ್ಧಾರ, ಧರ್ಮಸಾಧನೆ, ಧಾರ್ಮಿಕ ಆಚರಣೆಗಳಿಂದ ಹೆಣ್ಣನ್ನು ದೂರವಿರಿಸಿ, ಲೌಕಿಕ ನೆಲೆಯಲ್ಲಿ ಕೌಟುಂಬಿಕ ಕರ್ತವ್ಯ ಪಾಲನೆಯಲ್ಲಿಯೇ ಆತ್ಮೋದ್ಧಾರವನ್ನು ಅರಸಿಕೊಳ್ಳಬೇಕಾದ ಅನಿವಾರ್ಯತೆಯನ್ನು ಕಲ್ಪಿಸಿದ ಪಿತೃ ಸಂಸ್ಕೃತಿಯಲ್ಲಿ ಹೆಣ್ಣಿಗೆ ಧಾರ್ಮಿಕ ಸ್ಥಾನಮಾನ ನೀಡಿಲ್ಲ. ಹೆಣ್ಣಿನ ದೇಹ ಅಪವಿತ್ರ, ಆತ್ಮ ವಿಕಾಸಕ್ಕೆ ಅಡಚಣೆ ಎನ್ನುವ ನಂಬಿಕಗೆಳಿಂದಾಗಿ ಇಂದಿಗೂ ಅನೇಕ ದೇವಾಲಯಗಳಲ್ಲಿ ಗರ್ಭಗುಡಿಗಳಲ್ಲಿ ಮಹಿಳೆಯರಿಗೆ ಪ್ರವೇಶ ನಿಷೇಧ. ಧಾರ್ಮಿಕ ಕ್ರಿಯಾಚರಣೆಯಲ್ಲಿ ಮಹಿಳೆ ಇಂದಿಗೂ ಬಹಿಷ್ಕೃತೆಯಾಗಿದ್ದಾಳೆ. ಸ್ವರ್ಗ–ನರಕಗಳ ನಂಬಿಕೆಗಳು ಸಹಗಮನ, ದೇವದಾಸಿ, ವರದಕ್ಷಿಣೆ, ಬೆತ್ತಲೆ ಸೇವೆಗಳಂಥ ಅಮಾನುಷ ಸಂಪ್ರದಾಯಗಳಿಗೆ ಪತಿ–ಪತ್ನಿಯರ ಸಹೃದಯ ಸಂಬಂಧವನ್ನು ವಿರೂಪಗೊಳಿಸುವಲ್ಲಿ ಪಿತೃ ಪ್ರಧಾನ ವ್ಯವಸ್ಥೆ ಹುಟ್ಟು ಹಾಕಿದ ನಂಬಿಕೆಗಳ ಪಾಲು ಹಿರಿದಾಗಿದೆ. ವಿಧವೆಯನ್ನು ಅಮಂಗಲೆಯಾಗಿಸಿ, ಬಂಜೆಯ ಬದುಕನ್ನು ನಿರರ್ಥಕಗೊಳಿಸುವಲ್ಲಿ ಈ ನಂಬಿಕೆಗಳು ಸಹಕಾರಿಯಾಗಿವೆ. ಹೆಣ್ಣಿನ ವೈಯಕ್ತಿಕ ಆಸೆ ಆಪೇಕ್ಷೆಗಳನ್ನು ಹತ್ತಿಕ್ಕಿ ಒತ್ತಾಯದ ಒಲ್ಲದ ಬದುಕಿನ ಗಾಣಕ್ಕೆ ತಲೆಯೊಡ್ಡುವಂತೆ ಮಾಡಿವೆ. ಹೆಣ್ಣಿನ ವ್ಯಕ್ತಿತ್ವ ವಿಕಾಸದ ಸಾಧ್ಯತೆಗಳನ್ನು ಮೊಟಕುಗೊಳಿಸಿ ಉದ್ಯೋಗಶೀಲತೆ, ಕಾರ್ಯಕ್ಷಮತೆ, ಬೌದ್ಧಿಕ ಪ್ರಪಂಚದ ಸಾಧನೆಗಳಿಂದ ಹೆಣ್ಣನ್ನು ವಂಚಿಸುವಲ್ಲಿ ಆಕೆಯ ವ್ಯಕ್ತಿತ್ವ, ಸತ್ವ, ಬುದ್ಧಿ, ಪ್ರತಿಭೆ, ದೇಹ ಇವುಗಳನ್ನು ಪಾರಂಪರಿಕವಾಗಿ ಹೆಣೆಯಲಾಗಿರುವ ಅನೇಕ ಅವೈಜ್ಞಾನಿಕ ನಂಬಿಕೆಗಳು ಕಾರಣವಾಗಿವೆ. ಹೆಣ್ಣಿನ ಬುದ್ಧಿ ಮೊಣಕಾಲ ಕೆಳಗೆ, ನಗುವ ಹೆಂಗಸನ್ನು ನಂಬಬಾರದು, ಹೆಣ್ಣು ಅಬಲೆ, ಭಾವನಾಶೀಲೆ ಇತ್ಯಾದಿ ನಿಷೇಧಾತ್ಮಕ ನಂಬಿಕೆಗಳಿಂದ ಹುಟ್ಟಿಕೊಂಡಿರುವ ಅಸಹಾಯಕತೆ ಅವಲಂಬನೆ, ಕೀಳರಿಮೆಗಳು ಮಹಿಳೆಯರ ಬದುಕನ್ನು ಅಧೀನ ನೆಲೆಗೆ ದೂಡಲು ಕಾರಣವಾಗಿವೆ.

ಈ ರೀತಿಯಾಗಿ ಪ್ರಧಾನ ಸಂಸ್ಕೃತಿಯು ಹೇರಿದ ಅನೇಕ ಸ್ತ್ರೀ ವಿಶಿಷ್ಟ ನಂಬಿಕೆಗಳು ಜಾನಪದದ ಸಾಮರಸ್ಯ ಚಿಂತನೆಯ ಜಾಡನ್ನು ಪ್ರಭಾವಿಸಿವೆ ಹಾಗೂ ಪರಿವರ್ತಿಸಿವೆ. ವ್ಯವಸ್ಥೆಯ ಆಶಯಗಳಿಗೆ ಜಾನಪದರನ್ನು ಬದ್ಧವಾಗಿಸುವಲ್ಲಿ ಅನೇಕ ನಂಬಿಕೆಗಳು ಯಶಸ್ವಿಯಾಗಿವೆ. ಧರ್ಮ, ಪುರಾಣ, ಐತಿಹ್ಯ, ಹುಟ್ಟು ಹಾಕಿದ ಅನೇಕ ಅಂಧ ಶ್ರದ್ಧೆಗಳು ಪ್ರಶ್ನಾತೀತ ನಂಬಿಕೆಗಳಾಗಿ ಹೆಣ್ಣನ್ನು ಬಲಿಪಶುವಾಗಿಸಿವೆ. ಉದಾ: ದೇವದಾಸಿ, ಬೆತ್ತಲೆ ಸೇವೆ ಇತ್ಯಾದಿ ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎನ್ನುವ ನಂಬಿಕೆಗಳು ಕುಟುಂಬ, ಸಮಾಜ ವ್ಯವಸ್ಥೆಯಲ್ಲಿ ಹೆಣ್ಣಿನ ಅಸಹಾಯಕತೆ, ಅಧೀನತೆಯನ್ನು ಹೆಚ್ಚಿಸಿವೆ. ಹುಟ್ಟಿನಿಂದ ಸಾವಿನವರೆಗೆ ಅನೇಕ ದೈಹಿಕ, ಮಾನಸಿಕ ಕೌಟುಂಬಿಕ, ಸಾಮಾಜಿಕ ಸ್ಥಿತ್ಯಂತರಗಳಿಗೆ ಒಳಗಾಗಿ–ಒಗ್ಗಿಕೊಳ್ಳಬೇಕಾದ ಅನಿವಾರ್ಯತೆಯಿಂದಾಗಿ ಸಂಕೀರ್ಣ ವಾಗಿರುವ ಮಹಿಳೆಯ ಬದುಕನ್ನು ಧರ್ಮ, ಶಾಸ್ತ್ರ, ಪುರಾಣ, ಘೋಷಿತ ನಂಬಿಕೆಗಳು ಇನ್ನೂ ದುಸ್ತರವಾಗಿಸಿವೆ.

### ೩.೧.೨. ಸಾಮಾಜಿಕ ಸಂಸ್ಥೆಯಲ್ಲಿ ಸ್ತ್ರೀ

ಸಂಸ್ಥೆ ಎನ್ನುವುದು ಸಮಾಜಶಾಸ್ತ್ರದ ಮೂಲಭೂತ ಪರಿಕಲ್ಪನೆಗಳಲ್ಲಿ ಒಂದು. ಯಾವುದೇ ಸಮಾಜದ ಜನಜೀವನವನ್ನು ಅರ್ಥಮಾಡಿಕೊಳ್ಳಬೇಕಾದರೆ ಆ ಸಮಾಜದಲ್ಲಿರುವ ಸಂಸ್ಥೆಗಳ ಸ್ವರೂಪ ಹಾಗೂ ಕಾರ್ಯಗಳನ್ನು ಅರ್ಥಮಾಡಿಕೊಳ್ಳಬೇಕಾದ್ದು ಅವಶ್ಯ. ಸಾಮಾಜಿಕ ಜೀವನ ನಡೆಯುವುದು ಸಾಮಾಜಿಕ ಸಂಸ್ಥೆಗಳ ಮೂಲಕವೇ. ಸಮಾಜದಿಂದ ಅಂಗೀಕೃತವಾದ ಹಾಗೂ ಸಮಾಜ ಸ್ಥಾಪಿತ ಕಾರ್ಯವಿಧಾನವೇ ಸಂಸ್ಥೆ ಎಂದು ಮೆಕೈವರ್ ಮತ್ತು ಪೇಜ್ ಹೇಳುತ್ತಾರೆ. ಸ್ಥಾಪಿತ ನಡವಳಿಕೆಗಳನ್ನೊಳಗೊಂಡಂತೆ ಒಂದು ವ್ಯವಸ್ಥೆಯನ್ನು ಸಂಸ್ಥೆ ಎನ್ನಬಹುದು. ಸಮಾಜ ಶಾಸ್ತ್ರದ ನಿಘಂಟಿನ ಪ್ರಕಾರ ಈ ಪ್ರತಿಯೊಂದು ಸಂಸ್ಥೆಗಳಿಗೆ ತಮ್ಮದೇ ಆದಂಥ ನಿಯಮಗಳಿರುತ್ತವೆ. ಹಾಗೂ ವಿಶಿಷ್ಟವಾದ ಜೀವನ ಕ್ರಮ, ಮೌಲ್ಯಗಳು ಆಚರಣೆಗಳು ಜಾರಿಯಲ್ಲಿದ್ದು, ಸಾಮಾಜೀಕರಣದ ಪ್ರಕ್ರಿಯೆಯ ಮೂಲಕ ಸದಸ್ಯರಿಗೆ ಕಲ್ಪಿಸಿಕೊಡಲಾಗುತ್ತದೆ. ಈ ಸಾಮಾಜಿಕ ಸಂಸ್ಥೆಗಳು ವ್ಯಕ್ತಿ ವಿಕಾಸ ಮತ್ತು ಸಮಾಜದ ಏಳಿಗೆಯನ್ನು ಪೀಳಿಗೆಯಿಂದ ಪೀಳಿಗೆಗಳಿಗೆ ನಿರಂತರವಾಗಿ ಮುಂದುವರೆಸುವ ಉದ್ದೇಶ ಹೊಂದಿರುತ್ತದೆ. ಹಾಗೂ ಇದೇ ಕಾರಣಕ್ಕಾಗಿ ಅವುಗಳ ಸ್ವರೂಪ ಹಾಗೂ ಕಾರ್ಯನಿರ್ವಹಣೆಯನ್ನು ರೂಪಿಸಲಾಗಿದೆ. ಆದರೆ ಸಮಾಜದ ಅಭಿವೃದ್ಧಿಯ ಈ ವ್ಯವಸ್ಥೆಯಲ್ಲಿ ಗಂಡು-ಹೆಣ್ಣುಗಳ ನಡುವೆ ಮಾಡಲಾಗಿರುವ ತಾರತಮ್ಯ, ಪಕ್ಷಪಾತ ಹಾಗೂ ಶೋಷಣೆಯಿಂದಾಗಿ ಸಂಸ್ಥೆಗಳು ತನ್ನ ಉದ್ದೇಶ ಹಾಗೂ ಅರ್ಥವನ್ನು ಕಳೆದುಕೊಂಡು ಅವುಗಳಿಗೆ ಹೊಸ ಸ್ವರೂಪ, ಧ್ಯೇಯೋದ್ದೇಶ ಹಾಗೂ ಪ್ರಕಾರ್ಯಗಳನ್ನು ಅಳವಡಿಸುವ ಕಾರ್ಯವೀಗ ಅನಿವಾರ್ಯವಾಗಿದೆ.

ಶ್ರೇಣಿಕೃತವಾದ ನಮ್ಮ ಸಾಮಾಜಿಕ ಸಂರಚನೆಯಲ್ಲಿ ಜಾತಿ, ವರ್ಗ, ಮತಗಳ ಆಧಾರದ ಮೇಲೆ ಒಡಕು ಉಂಟಾಗಿರುವಂತೆ ಲಿಂಗಾಧಾರಿತವಾಗಿ ಇನ್ನೂ ಹೆಚ್ಚು ತಾರತಮ್ಯ, ವ್ಯತ್ಯಾಸಗಳನ್ನು ಕಾಣಬಹುದು. ಲಿಂಗ ವ್ಯವಸ್ಥೆಯ ನಿರ್ಮಾಪಕನೂ ಆಗಿರುವ ಪುರುಷ ವರ್ಗವು ತನ್ನ ಆಶಯಕ್ಕೆ ತಕ್ಕಂತೆ ಮಹಿಳಾ ವರ್ಗವನ್ನು ನಿರ್ಮಿಸಿಕೊಂಡಿವೆ. ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ, ನಿಯಂತ್ರಣ ಹೊಂದಿರುವ ಪುರುಷ ವರ್ಗ ತಾನು ಸೂಚಿಸಿದ ಮೌಲ್ಯಗಳನ್ನು ಸಾಮಾಜಿಕ-ಸಾಂಸ್ಕೃತಿಕ ಪರಮ ಮೌಲ್ಯಗಳೆಂದು ಅರ್ಥೈಸಿದೆ. ಹಾಗೂ ಹೆಣ್ಣನ್ನು ಅದರಂತೆಯೇ ಒಪ್ಪಿಸಿಕೊಂಡಿದೆ. ಸ್ತ್ರೀ ಪುರುಷರು ಬದುಕಬೇಕಾದ ರೀತಿ-ನೀತಿಗಳನ್ನು ತಿಳಿಯುವ ಹಾಗೂ ನಿರ್ದೇಶಿಸುವ ಆಲೋಚನೆಗಳು ಪುರುಷ ಕೇಂದ್ರಿತವಾಗಿದ್ದು ಅದೇ ಪ್ರಧಾನವಾಹಿನಿಯ ಮೂಲವಾಗಿದೆ. ಆದ್ದರಿಂದ ಹೆಣ್ಣು, ಗಂಡಿನಿಂದ ನಿರ್ಮಿತಳಾದ ವ್ಯಕ್ತಿ ಎನಿಸಿಕೊಂಡಿದ್ದಾಳೆ.

ಸಿಮೋನ್ ದ ಬೊವಾ ಹೀಗೆ ಹೇಳುತ್ತಾರೆ ಸ್ತ್ರೀಯು ಮೂಲತಃ ರೂಪಿಸಲ್ಪಟ್ಟವಳು. ಹೆಣ್ಣು ನಿರ್ದಿಷ್ಟ ಸಾಮಾಜಿಕ ಪ್ರಕ್ರಿಯೆಗಳಿಂದ ಆಗುತ್ತಾಳೆಯೇ ವಿನಹ ಯಾರೂ ಹೆಣ್ಣಾಗಿಯೇ ಹುಟ್ಟುವುದಿಲ್ಲ. ಹೀಗಾಗಿ ಹೆಣ್ಣಿನ ನೈಜ ಸ್ವರೂಪ, ಅನನ್ಯತೆ ಮತ್ತು ಅಂತಃಸತ್ವಗಳು ಸಂಸ್ಕೃತಿಯ ಇತಿಹಾಸದಲ್ಲಿ ನಮೂದಾಗಲೇ ಇಲ್ಲ. ಅಲ್ಲಿ ಇಲ್ಲಿ ನಮೂದುಗಳು ಸಿಕ್ಕರೂ ಅವಾಸ್ತವಿಕವಾದ, ತಿರುಚಲಾದ ಹಾಗೂ ಕೀಳು ತತ್ವದ ಪ್ರತಿಕ್ರಿಯೆಗಳಾಗಿರುತ್ತವೆ ಎಂದರೆ ಎಲ್ಲಿಯೂ ಹೆಣ್ಣಿನ ಮಾತು, ಅಭಿಪ್ರಾಯ, ಅಭಿವ್ಯಕ್ತಿ ಗೋಚರಿಸುವುದಿಲ್ಲ. ಬದಲಾಗಿ ಗಂಡಿನ ವಾಚಾಳಿತನ ಪ್ರತ್ಯಕ್ಷ, ಅಸ್ತಿತ್ವ ಇವು ಎದ್ದು ಕಾಣುತ್ತದೆ."[೬] ಹೆಣ್ಣು ಮೂಕಳಾಗಿ ಮರೆಯಲ್ಲಿ ನಿಂತರೆ, ಗಂಡು ತನ್ನ ಮಾತು ಮತ್ತು ದರ್ಪದಿಂದ ಮೆರೆಯುತ್ತಾನೆ. ಲಿಂಗಾಧಾರಿತ ನೆಲೆಯಿಂದ ಸಾಮಾಜಿಕ ಸಂಸ್ಥೆಗಳಲ್ಲಿ ಹೀಗೆ ನಿರ್ಲಕ್ಷಿತ ಹೆಣ್ಣನ್ನು ಹುಡುಕುವ ಹಾಗೂ ಪುರುಷ ಗ್ರಹಿಕೆಯ ಮಿತಿ ಮತ್ತು ಮಿಥ್ಯೆಗಳನ್ನು ತೆರೆದು ತೋರುವ ಅಗತ್ಯವಿದೆ. ಮಹಿಳೆಯ ದೇಹ, ಮನಸ್ಸು ಮತ್ತು ಲೈಂಗಿಕತೆಯನ್ನು ಪುರುಷ ತನ್ನ ಅಧೀನವಾಗಿಸಿಕೊಂಡಿರುವುದನ್ನು ಸಾಂಸ್ಥಿಕ ರೂಪಗಳಲ್ಲಿ ಗುರುತಿಸಬಹುದು. ಹೆಣ್ಣನ್ನು ತಾಯ್ತನದ ಗರ್ಭಿಣಿ, ಸಂತಾನ ರಕ್ಷಿಸುವ ತಾಯಿಯಾಗಿ ವೈಭವೀಕರಿಸಲಾಗುತ್ತದೆ. ಆಕೆಯ ಆಂತರಿಕ ಹಾಗೂ ಅಂತರಂಗದ ಭಾವನೆಗಳು, ವಿಚಾರ, ಅಭಿಪ್ರಾಯಗಳ ಬಗ್ಗೆ ನಮೂದಿಸುವುದಿಲ್ಲ. ಕೇವಲ ಭ್ರಮಾತ್ಮಕವಾಗಿ ಮೇಲ್ನೋಟಕ್ಕೆ ವಿವಿಧ ಜಾತಿ, ಲಿಂಗ, ಸ್ತರಗಳನ್ನು ತರಲಾಗಿದೆಯೇ ಹೊರತು ಮೂಲಭೂತವಾಗಿ ಪುರುಷನು ಮಹಿಳೆಯ ಮೇಲೆ ಅಧಿಕಾರ ನಿಯಂತ್ರಣ ಹೊಂದಿರುವುದು ಕಂಡುಬರುತ್ತದೆ.

### ೩.೧.೩. ಕೌಟುಂಬಿಕ ನೆಲೆಯಲ್ಲಿ ಸ್ತ್ರೀ

ಕುಟುಂಬ ಸಾಮಾಜಿಕ ವ್ಯವಸ್ಥೆಯ ಒಂದು ಮೂಲ ಘಟಕ. ಇದರಲ್ಲಿ ಪುರುಷರು, ಮಹಿಳೆಯರು, ಮಕ್ಕಳು, ಮುದುಕರು, ಪರಸ್ಪರ ಬಾಂಧವ್ಯ, ಪ್ರೀತಿ, ವಿಶ್ವಾಸ, ನಂಬಿಕೆ ಹಾಗೂ ಕರ್ತವ್ಯಗಳ ಬಂಧನದಲ್ಲಿ ಬದುಕುತ್ತಾರೆ. ಕುಟುಂಬವು ಸಾರ್ವತ್ರಿಕತೆ, ಭಾವನಾತ್ಮಕ ಆಧಾರ, ದಾಂಪತ್ಯ ಪ್ರೇಮ, ಮಕ್ಕಳನ್ನು ಪಡೆಯುವ ಮತ್ತು ಪಾಲನೆ-ಪೋಷಣೆಗೆ ಸಂಬಂಧಿಸಿದ ನಿಯಮಗಳೂ, ಹೊಣೆಗಾರಿಕೆ, ಸಾಧನೆ, ಇವುಗಳನ್ನು ಒಳಗೊಂಡಿರುತ್ತದೆ. ಪುರುಷ ಕುಟುಂಬ ಸಂಸ್ಥೆಯ ರಕ್ಷಣೆಗೆ ಮಹಿಳೆಯನ್ನು ಬಂಧಿಸಿಟ್ಟ ಕಾರಣದಿಂದಾಗಿ ಆಕೆ ಗೃಹಿಣಿಯೆಂಬ ಶಾಶ್ವತ ಸ್ಥಾನದಲ್ಲಿರುವಂತಾಗಿದೆ. ಹೀಗೆ ಮಹಿಳೆಗೆ ಸಂಬಂಧಿಸಿದ ಯಾವುದೇ ಚರ್ಚೆ ಕುಟುಂಬದಿಂದಲೇ ಪ್ರಾರಂಭವಾಗಬೇಕಾಗುತ್ತದೆ. ಆಕೆಯ ಬದುಕು ಕುಟುಂಬದ ಏಳುಬೀಳುಗಳೊಂದಿಗೆ ಸೇರಿ ಹೋಗಿರುತ್ತದೆ. ಅದೇ ಅವಳ ಬದುಕು. ಕುಟುಂಬದಲ್ಲಿ ಆಕೆ ವಿವಿಧ ಪಾತ್ರಗಳನ್ನು ನಿರ್ವಹಿಸುತ್ತಾಳೆ. ತಾಯಿ, ಮಗಳು, ಸೊಸೆ, ಪತ್ನಿ, ಅತ್ತೆ, ನಾದಿನಿ, ಓರಗಿತ್ತಿ ಹೀಗೆ ತನ್ನ ಜವಾಬ್ದಾರಿಯನ್ನು

ಸಮರ್ಥವಾಗಿ ನಿರ್ವಹಿಸಲು ಕಾಯಾ, ವಾಚಾ, ಮನಸಾ ದುಡಿಯುತ್ತಾಳೆ. ಸ್ತ್ರೀ ಪುರುಷರನ್ನು ಕುರಿತ ಸಾಮಾಜಿಕ ದೃಷ್ಟಿಕೋನದಲ್ಲಿ ಗಂಡಿನ ಗುಣ ಸ್ವಭಾವ ಹಾಗೂ ಕೆಲಸಗಳು ಶ್ರೇಷ್ಠ, ಹೆಣ್ಣಿನದು ಕನಿಷ್ಠ ಎಂಬುದಾಗಿ ಆಕೆಯನ್ನು ಕಡೆಗಣಿಸಲಾಗುತ್ತದೆ. ಹೀಗಾಗಿ ಪುರುಷನ ಕಾರ್ಯಗಳು ಆರ್ಥಿಕ ಉತ್ಪಾದನೆಗೆ ಸಂಬಂಧಿಸುತ್ತವೆ. ಹೆಣ್ಣಿನ ಕಾರ್ಯಗಳಾದ ಆಹಾರ ತಯಾರಿಕೆ, ಹೆರುವುದು, ಸಂತಾನ ರಕ್ಷಣೆ ಇವೆಲ್ಲವೂ ಅನುತ್ಪಾದಕವಾಗುತ್ತದೆ. ಸ್ತ್ರೀಯೆಂದರೆ ಕೇವಲ ಗಂಡಿನ ಕಾಮ ತೃಪ್ತಿಗಾಗಿ ಇರುವ, ಸಂತಾನವನ್ನು ಹೆತ್ತು, ಹೊತ್ತು, ಪಾಲಿಸುವವಳು ಎನ್ನುವುದು ಸಂಪ್ರದಾಯಿಕ ನಂಬಿಕೆಯಾಗಿದೆ.

ಸಿಮೋನ್ ದ ಬೊವಾ "ಸ್ತ್ರೀಯೆಂದರೆ ಗರ್ಭಕೋಶ ಎಂಬ ಸಾಮಾಜಿಕ ತಿಳಿವಿನ ಬಗ್ಗೆ ಚರ್ಚೆಯಾಗಬೇಕು"[೭] ಎನ್ನುತ್ತಾರೆ. ಹೀಗಾಗಿ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಂಡ ಹೆಣ್ಣು, ಗಂಡಿಸಿಲ್ಲದೆ ಸಮಾಜದಲ್ಲಿ ತನ್ನ ಸ್ಥಿತಿಯನ್ನು ಬದುಕನ್ನು ಊಹಿಸಿಕೊಳ್ಳುವುದೂ ಕಷ್ಟವಾಗುತ್ತದೆ. ಲಿಂಗ ವ್ಯವಸ್ಥೆಯು ಶೋಷಿತ-ಶೋಷಿತೆಯರು ಕುಟುಂಬದಿಂದಲೇ ಹುಟ್ಟಿ ಬರುವಂತೆ ರೂಪಿತವಾಗಿದೆ. ಗಂಡಸಿನ ಸುಖಾನುಭವಕ್ಕಾಗಿ ತನ್ನನ್ನು ಸಿದ್ಧಗೊಳಿಸಿಕೊಳ್ಳುವ ಹೆಣ್ಣು ಕುಟುಂಬದ ರಹಸ್ಯವನ್ನು ಕಾಪಾಡುತ್ತಾಳೆ. ಸ್ತ್ರೀವಾದ ಕುಟುಂಬದ ರಹಸ್ಯವನ್ನು ಬೇಧಿಸುತ್ತದೆ. ಕುಟುಂಬ ಒಂದು ಸಹಜ ಸಂಸ್ಥೆ, ವ್ಯಕ್ತಿಗಳ ಖಾಸಗಿ ಜಗತ್ತು ಎಂಬ ಭದ್ರ ಪರಿಕಲ್ಪನೆಯನ್ನು ಒಡೆದು ಕುಟುಂಬವೊಂದು ಸಾಮಾಜಿಕ ಘಟಕವೆಂದು ಘೋಷಿಸಿದೆ. ಆದ್ದರಿಂದ ಕುಟುಂಬ ಕೂಡ ಲೈಂಗಿಕ ರಾಜಕಾರಣದ ರೂಪವಾಗಿದೆ ಎನ್ನಬಹುದು.

ಕುಟುಂಬ ಸಂಸ್ಥೆಯು ಹೆಣ್ಣಿನ ಲೈಂಗಿಕತೆಯ ಮೇಲೆ ನಿರ್ಬಂಧ ಹೇರಿ ಗಂಡು ಬದುಕಿರುವಾಗ, ಸತ್ತ ಮೇಲೆ ಕೂಡ ಹೆಣ್ಣಿನ ಶೀಲದ ಪಾವಿತ್ರ್ಯವನ್ನು ನಿರ್ಬಂಧಿಸುತ್ತದೆ. ಪಿತೃ ಪ್ರಧಾನ ಕುಟುಂಬದಲ್ಲಿ ಕುಟುಂಬದ ಯಜಮಾನ ಪುರುಷನಾಗಿದ್ದು ವಂಶಾವಳಿ ಅವನ ಹೆಸರಿನಲ್ಲಿರುತ್ತದೆ. ಸ್ತ್ರೀ ವಿವಾಹ ನಂತರ ತಂದೆ ಮನೆಯನ್ನು ತೊರೆದು ಗಂಡನ ಮನೆಗೆ ಹೋಗಿ ನೆಲೆಸುತ್ತಾಳೆ. ನಂತರ ಸೊಸೆಯ ಸ್ಥಾನ ಅಲಂಕರಿಸಿದ ನಂತರ ಅತ್ತೆಯಿಂದ ಅನುಭವಿಸುವ ಮಾನಸಿಕ, ದೈಹಿಕ ತೊಂದರೆಗಳು ಅತ್ಯಂತ ಅಮಾನವೀಯವಾದವು. ಕುಟುಂಬದಲ್ಲಿ ಮಹಿಳೆ, ಅನಕ್ಷರತೆ, ಅಜ್ಞಾನ, ತಾರತಮ್ಯ, ಆರ್ಥಿಕ ಪರಾವಲಂಬನೆ, ನಿಯಂತ್ರಣ, ನಿರ್ಬಂಧಗಳಿಂದ ದೌರ್ಜನ್ಯಕ್ಕೊಳಗಾಗಿ ದುರ್ಬಲಳಾಗುತ್ತಾಳೆ. ಅತ್ಯಾಚಾರ, ಕಿರುಕುಳ, ಹೊಡೆತ, ಲೈಂಗಿಕ ದುರ್ಬಳಕೆಗಳ ಮೂಲಕ ಪುರುಷ ಆಕೆಯನ್ನು ಹಿಂಸಿಸಿ ತಾನು ಬಲಶಾಲಿ ಎನಿಸಿಕೊಳ್ಳುತ್ತಾನೆ. ಚಿಕ್ಕ ಮಕ್ಕಳ ಲೈಂಗಿಕ ದುರ್ಬಳಕೆ, ಹೆಣ್ಣು ಭ್ರೂಣಹತ್ಯೆಗಳಂಥ ಕ್ರೌರ್ಯದಿಂದ ಮಹಿಳೆಯರನ್ನು ಕುಟುಂಬ ವರ್ತುಲದಲ್ಲಿ ಅಮಾನವೀಯವಾಗಿ ನಡೆಸಿಕೊಳ್ಳಲಾಗುತ್ತದೆ. ಇದರಿಂದ ಹೆಣ್ಣು ತನ್ನ ಅಸ್ತಿತ್ವವನ್ನು

ಕಳೆದುಕೊಳ್ಳುವ ಭೀತಿಯುಂಟಾಗಿದೆ. ಇವೆಲ್ಲವನ್ನೂ ಪುರುಷ ಪ್ರಧಾನ ವ್ಯವಸ್ಥೆಯು ಕುಟುಂಬ ವ್ಯವಸ್ಥೆಯ ಮೂಲಕ ಸಾಧಿಸುತ್ತದೆ. ಕುಟುಂಬದ ಒಳಗಿನ ಪರಿಧಿ ಮಹಿಳೆಯರಿಗೆ ಸೇರಿದ್ದು. ಗಂಡನಿಗೆ ಆಕೆ ಊಟಬಡಿಸುವುದು, ಅತ್ಯಂತ ಸಹಜವಾದ ಕ್ರಿಯೆ. ಆದರೆ ಅದೇ ಅವಳು ದುಡಿದು ಮನೆಗೆ ಬಂದಾಗ ಗಂಡ ಆಕೆಗೆ ಊಟವನ್ನು ಬಡಿಸಿದರೆ ಅಥವಾ ಅಡುಗೆಯನ್ನು ಮಾಡಿ ಇಟ್ಟಿದ್ದರೆ ಸ್ತ್ರೀತನದ ಸಂಕೇತ. ಅವನನ್ನು ಮೆಚ್ಚುವುದಿರಲಿ ಹೀಯಾಳಿಸುವವರೇ ಹೆಚ್ಚು.

**ವಿವಾಹ ಮತ್ತು ಸ್ತ್ರೀ**

"ವಿವಾಹವು ಜಗತ್ತಿನಾದ್ಯಂತ ಅಸ್ತಿತ್ವದಲ್ಲಿರುವಂಥ ಒಂದು ಸಾಮಾಜಿಕ ಸಂಸ್ಥೆ ಮೂಲಭೂತವಾಗಿ ವಿವಾಹವು ಸ್ತ್ರೀ ಮತ್ತು ಪುರುಷ ಈ ಇಬ್ಬರು ವ್ಯಕ್ತಿಗಳ ನಡುವೆ ಏರ್ಪಡುವ ಒಂದು ಸಂಬಂಧವಲ್ಲ. ಈ ಸಂಬಂಧದಲ್ಲಿ ಎರಡು ಅಥವಾ ಹೆಚ್ಚಿನ ಸಂಖ್ಯೆಯ ಕುಟುಂಬಗಳು ಕೂಡ ಬಂಧಿತರಾಗುತ್ತಾರೆ."[೮] ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹ ಎನ್ನುವ ಸಂಬಂಧದೊಳಗೆ ಪ್ರವೇಶಿಸಿದ ಹೆಣ್ಣಿನ ಮೇಲೆ ಅನೇಕ ಜವಾಬ್ದಾರಿಗಳು ಬೀಳುತ್ತವೆ. ಪತಿಯ ಮನೆಗೆ ಹೋದ ಮಹಿಳೆ ಅಲ್ಲಿಯ ವಾತಾವರಣ ಸ್ಥಿತಿಗತಿಗೆ ಹೊಂದಿಕೊಳ್ಳಬೇಕು, ಅತ್ತೆ, ಮಾವ ಹಾಗೂ ಮನೆಯಲ್ಲಿರುವ ಇತರರ ಯೋಗಕ್ಷೇಮವನ್ನು ವಿಚಾರಿಸುವುದು ನವ ವಿವಾಹಿತೆಯ ಮೂಲ ಕರ್ತವ್ಯವಾಗಿರುತ್ತದೆ. ಗಂಡ, ಅತ್ತೆ, ಮಾವ ಇನ್ನಿತರರಿಗೆ ತಗ್ಗಿ ಬಗ್ಗಿ ನಡೆಯಬೇಕು. ಎಲ್ಲರೊಡನೆಯೂ ಹೊಂದಿಕೊಳ್ಳಬೇಕು. ಪತಿಗೆ ಎದುರಾಡದೆ ಅವನ ಅಧಿಕಾರಕ್ಕೆ ತನ್ನನ್ನು ತಾನು ಒಪ್ಪಿಸಿಕೊಳ್ಳಬೇಕು. ಈ ಎಲ್ಲಾ ಅಂಶಗಳು ಸ್ತ್ರೀ ಶೋಷಣೆಗೆ ಕಾರಣೀಭೂತಗಳಾಗಿವೆ. ವಿವಾಹದ ಮೂಲಕ ಮಹಿಳೆಯರ ಪಾತ್ರ ಹಂಚಿಕೆಯಲ್ಲೂ ಬೇರೆ ಬೇರೆ ಪಾತ್ರ ನಿರ್ವಹಣೆ ಮಾಡಬೇಕಾಗುತ್ತದೆ. ಇದರಿಂದ ಹುಟ್ಟಿನಿಂದಲೇ ಬರುವ ಅಸಮಾನತೆ ಇನ್ನಷ್ಟು ಆಳವಾಗಿ ಸೇರುತ್ತದೆ.

ವಿವಾಹಿತ ಮಹಿಳೆಗೆ ಕುಂಕುಮಭಾಗ್ಯ, ತಾಳಿಭಾಗ್ಯ, ಮುತ್ತೈದೆ ಸಾವು, ಗೃಹಲಕ್ಷ್ಮಿ, ಸುಮಂಗಲಿ, ಪತಿವ್ರತೆ ಮುಂತಾದ ವಿಶೇಷಣಗಳನ್ನು ಬಳಸಿ ಅವಳು ಗೃಹಬಂಧನಕ್ಕೆ ಒಗ್ಗುವಂತೆ ಮನವೊಲಿಸಲಾಗಿದೆ. ಇದು ಲಿಂಗ ತಾರತಮ್ಯದ ಪ್ರಬಲ ಆಸ್ತಿಯಾಗಿದೆ. ವಿವಾಹದ ಅನೇಕ ಆಚರಣೆಗಳೂ ಕೂಡ ಸ್ತ್ರೀಯ ಪರಾಧೀನತೆಯನ್ನೂ, ಪುರುಷನ ಪರಮಾಧಿಕಾರವನ್ನು ಎತ್ತಿ ಹಿಡಿಯುವಂಥವು. ಹೆಣ್ಣನ್ನು ಒಪ್ಪಿಸುವುದು, ಕನ್ಯಾದಾನ, ಕನ್ಯಾಸೆರೆಯಿಂದ ಬಿಡಿಸಿಕೊಳ್ಳುವುದು. ಹೆಣ್ಣಿಗೆ ಗಂಡನ ಮನೆಯೇ ಭೂಷಣ ಮುಂತಾದ ಪರಿಕಲ್ಪನೆಗಳು ವಿವಾಹ ಎನ್ನುವ ಸಂಸ್ಥೆಯ ಒಳಗೆ ಅಡಕವಾಗಿರುವ ಪುರುಷ ಪ್ರಾಧಾನ್ಯತೆಗೆ ಸಾಕ್ಷಿಯಾಗಿದೆ. ಹೆಜ್ಜೆ ಹೆಜ್ಜೆಗೂ ಆಕೆಯ ಹಾಗೂ ಪತಿಯ ಕುಟುಂಬದ ನಡೆನುಡಿಗಳು ಪತ್ನಿಯಾದವಳು ಯಾವುದೇ ಸಂದರ್ಭದಲ್ಲಿ ತನ್ನತನವನ್ನು ಉಳಿಸಿಕೊಳ್ಳುವುದು ಸಾಧ್ಯವಿಲ್ಲ ಎಂಬ ಸೂಚನೆಗಳನ್ನೆ ನೀಡುತ್ತಿರುತ್ತವೆ.

## ವಿವಾಹ ಸಂಸ್ಥೆಯಲ್ಲಿ ಕ್ರೌರ್ಯಗಳು

ಪುರುಷ ಪ್ರಧಾನ ವ್ಯವಸ್ಥೆಯಿರುವ ಸಮಾಜದಲ್ಲಿ ವಿವಾಹ, ಸಂಸ್ಥೆ, ಲಿಂಗ ತಾರತಮ್ಯದ ಪ್ರಬಲ ಅಸ್ತ್ರವಾಗಿದೆ. ಭದ್ರತೆ ರಕ್ಷಣೆಯ ಹೆಸರಿನಲ್ಲಿ ಅನೇಕ ಕ್ರೌರ್ಯಗಳು ತಾಂಡವಾಡುತ್ತಿವೆ. ಅದು ವರದಕ್ಷಿಣೆ, ಬಹುಪತ್ನಿತ್ವ, ವಿವಾಹ ವಿಚ್ಛೇದನ, ಅತ್ಯಾಚಾರ, ಮುಂತಾದವುಗಳು ನೂರಾರು ವರ್ಷಗಳಿಂದ ಸಮಾಜದ ವ್ಯವಸ್ಥೆಯಲ್ಲಿ ಬೇರು ಬಿಟ್ಟಿರುವ ವರದಕ್ಷಿಣೆ ಸಂಪ್ರದಾಯ. ಈಗ ಜ್ವಲಂತ ಸಮಸ್ಯೆಯಾಗಿ ಹೆಣ್ಣಿನ ಬಾಳನ್ನು ಕಣ್ಣೀರಿನಲ್ಲಿ ತೊಳೆಯುವ ಹಾಗೆ ಮಾಡಿದೆ. ದೈಹಿಕ ಮಾನಸಿಕ ಹಿಂಸೆಯಾಗಿ ಆಕೆ ತಾನಾಗಿಯೇ ದೂರು ನೀಡಿದಲ್ಲಿ ಇನ್ನಷ್ಟು ಹಿಂಸೆಗೆ ನಿಂದೆಗೆ ಗುರಿಯಾಗುತ್ತಾಳೆ. ತವರಿಗೆ ಹಿಂತಿರುಗಿದರೆ ಅಲ್ಲಿ ಬುದ್ಧಿ ಮಾತು. ಸ್ವತಃ ಹೆಣ್ಣೇ ಆದರೂ ಹೆಣ್ಣು ಮಕ್ಕಳ ತಾಯಿಯಾಗಿದ್ದರೂ ಸೊಸೆಯನ್ನು ದಹಿಸಲು ಅತ್ತೆಯೇ ಮಗನಿಗೆ ಪ್ರೇರಣೆ ನೀಡುತ್ತಾಳೆ. ಆಕೆಯ ದೇಹ ಮತ್ತು ಮನಸ್ಸುಗಳನ್ನು ಘಾಸಿಗೊಳಿಸುವುದು ವರದಕ್ಷಿಣೆ ಸಂಬಂಧಿ ಹಿಂಸೆಗಳೇ ಆಗಿವೆ. ಇದರಿಂದ ಹೆಣ್ಣಿನ ಜೀವನ ಕೊಲೆ ಅಥವಾ ಆತ್ಮಹತ್ಯೆಗಳಂಥ ಅಸಹಜ–ಅಮಾನವೀಯ ಅಂತ್ಯದಲ್ಲಿ ಪರ್ಯಾವಸಾನಗೊಳ್ಳುತ್ತದೆ.

### ಬಹುಪತ್ನಿತ್ವ

ಬಹುಪತ್ನಿತ್ವ ಜಾತಿ–ಧರ್ಮದ ಕಟ್ಟಳೆಗಳನ್ನು ಮೀರಿ ನಿಂತಂಥ ಒಂದು ಪ್ರವೃತ್ತಿ. ಜಗತ್ತಿನಾದ್ಯಂತ ಏಕಸಂಗಾತಿ ವಿವಾಹಕ್ಕೆ ಅತ್ಯಂತ ಹೆಚ್ಚಿನ ಮನ್ನಣೆ ದೊರೆತಿದ್ದರೂ ಅನೇಕ ಕುಟುಂಬಗಳಲ್ಲಿ ದ್ವಿಪತ್ನಿತ್ವ ಅಥವಾ ಹಲವು ಸಂದರ್ಭಗಳಲ್ಲಿ ಇನ್ನೂ ಹೆಚ್ಚಿನ ಸಂಖ್ಯೆ ಮಹಿಳೆಯರೊಡನೆ ವೈವಾಹಿಕ ಸಂಬಂಧವನ್ನು ಪುರುಷರು ಹೊಂದಿರುವಂಥ ಪ್ರಸಂಗಗಳು ಹೆಚ್ಚಾಗುತ್ತಿವೆ. ಪತ್ನಿಯಾದವಳು ಪತಿ ಬದುಕಿರುವಾಗ, ಮತ್ತೊಂದು ಸಂಬಂಧವನ್ನು ಬೆಳೆಸಿದರೆ, ಆ ಸಂಬಂಧವನ್ನು ಅಪರಾಧಕ್ಕೆ ಸಮ ಎಂದು ಪರಿಗಣಿಸುವ ಸಮಾಜ ಪತಿಯಾದವನು ಮೊದಲನೆಯ ಹೆಂಡತಿಯ ಜೀವಿತ ಕಾಲದಲ್ಲೇ ಮತ್ತೋರ್ವ ಮಹಿಳೆಯನ್ನು ಪತ್ನಿಯನ್ನಾಗಿ ಸ್ವೀಕರಿಸುವುದನ್ನು ಅಷ್ಟೇ ಕಠೋರವಾದ ದೃಷ್ಟಿಕೋನದಿಂದ ಏಕೆ ನೋಡುವುದಿಲ್ಲ? ಆಗಿದ್ದು ಅಗಿ ಹೋಯಿತು ಆಕೆಯೂ ಮಹಿಳೆ ತಾನೆ, ನೀನು ಅನುಸರಿಸಿಕೊಂಡು ಹೋಗುವುದೇ ಮೇಲು ಎಂಬ ಸಲಹೆ ಬೇರೆ ಮೊದಲನೆಯ ಹೆಂಡತಿಯಾದವಳಿಗೆ ಈ ತರಹದ ಕಿವಿ ಮಾತುಗಳನ್ನು ಹೇಳುತ್ತಾರೆಯೇ ಹೊರತು ಪುರುಷನಿಗೆ ಎನನ್ನೂ ಹೇಳುವುದಿಲ್ಲ.

### ವಿವಾಹ ವಿಚ್ಛೇದನ

ವಿವಾಹ ಬಂಧನವನ್ನು ಅತ್ಯಂತ ಪವಿತ್ರವೆಂದು ಪರಿಗಣಿಸುವ ಹಿಂದೂಧರ್ಮ ಅನೇಕ ವಿಧಿ ಕರ್ಮಗಳ ಮೂಲಕ ಇದನ್ನು ಗಟ್ಟಿಗೊಳಿಸಿದೆ. ಮರಣಾನಂತರ ಕೂಡ ಸಂಬಂಧ

ಮುಂದುವರಿಯುತ್ತದೆ ಎಂದು ತೋರಿಸಲು ವೈಧವ್ಯ ಪಾಲನೆ ಇತ್ಯಾದಿಗಳನ್ನು ರೂಢಿಯಲ್ಲಿ ತಂದಿದೆ. ಆದರೆ ಈ ನಂಬಿಕೆ ಸ್ತ್ರೀಯರ ಪಾಲಿಗಷ್ಟೇ ಪುರುಷರ ವಿಚಾರದಲ್ಲಿ ಹೆಚ್ಚಿನ ಸ್ವಾತಂತ್ರ್ಯ ನೀಡಿದೆ. ಪತಿ ಬೇಕಾದರೆ ಪತ್ನಿಯನ್ನು ತ್ಯಜಿಸಬಹುದು, ಇಲ್ಲ ದಂಡಿಸಬಹುದು. ಆದರೆ ಪತ್ನಿಯಾದವಳು ಪತಿಯೇ ಪರದೈವ ಎಂಬ ನಂಬಿಕೆಗೆ ಬದ್ಧವಾಗಿರಬೇಕು. ಹೀಗೆ ಅನೇಕ ನಿರ್ಬಂಧನೆಗಳು ಸ್ತ್ರೀಯರನ್ನು ಸುತ್ತುವರೆದಿದ್ದವು. ಆದರೆ "೧೯೫೫ರಲ್ಲಿ ಅಸ್ತಿತ್ವಕ್ಕೆ ಬಂದ ಹಿಂದೂ ವಿವಾಹ ಕಾಯಿದೆ ವಿವಾಹ ವಿಚ್ಛೇಧನವನ್ನು ಕಾನೂನು ಬದ್ಧವೆಂದು ಘೋಷಿಸಿ ವಿವಾಹ ಸಂಬಂಧವನ್ನು ಕಡಿಯುವ ತನ್ಮೂಲಕ ವಿವಾಹವೆಂಬ ಬಂಧನದಿಂದ ಹೊರಬರುವ ಅವಕಾಶ ಪತಿ–ಪತ್ನಿಯರಿಗೆ ಕಲ್ಪಿಸಿತು."[೯]

ವಿವಾಹ ವಿಚ್ಛೇಧನ ಪ್ರಸಂಗಗಳಲ್ಲಿ ಪುರುಷ ತನ್ನ ಪತ್ನಿಗೆ ಜೀವನಾಂಶವನ್ನು ನೀಡದಿರುವುದು, ಮಕ್ಕಳ ಲಾಲನೆ–ಪೋಷಣೆಗೆ ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳದಿರುವುದು, ಕುಟುಂಬ ಹಾಗೂ ವೃತ್ತಿಗಳ ನಡುವೆ ಅನೇಕ ಮಹಿಳೆಯರ ಜೀವನ ಸಂಘರ್ಷಮಯವಾಗಿರುವುದು ಇವೆಲ್ಲಾ ವಿಚ್ಛೇಧನ ಮಹಿಳೆಯರ ಜೀವನದ ಮೇಲೆ ಉಂಟು ಮಾಡಿರುವ ನಕಾರಾತ್ಮಕ ಪರಿಣಾಮಗಳು. ಭದ್ರತಾ ವ್ಯವಸ್ಥೆಯ ಕೊರತೆಯಿರುವುದರಿಂದಲೇ ಅನೇಕ ಮಹಿಳೆಯರು ವಿಚ್ಛೇದನಕ್ಕಿಂತ ಕೌಟುಂಬಿಕ ಹಿಂಸೆಯನ್ನು ಅನುಭವಿಸುವುದೇ ವಾಸಿ ಎನ್ನುವ ನಿರ್ಧಾರಕ್ಕೆ ಬರುವುದು. ವಿಚ್ಛೇಧನದ ಪ್ರಕರಣಗಳು ದೀರ್ಘಕಾಲದವರೆಗೂ ನ್ಯಾಯಾಲಯಗಳಲ್ಲಿ ನಿರ್ಧಾರವಾಗದಿರುವುದು. ಈ ಅವಧಿಯಲ್ಲಿ ಕುಟುಂಬಗಳ ಮೇಲೆ ಆರ್ಥಿಕ, ಸಾಮಾಜಿಕ ಒತ್ತಡಗಳು ಹೇರಲ್ಪಡುವುದು. ಅನಿಶ್ಚಿತತೆಯಲ್ಲಿ ಸಂಬಂಧಿಸಿದ ದಂಪತಿಗಳ ತೊಳಲಾಟ, ಮಕ್ಕಳ ಭವಿಷ್ಯದ ಬಗ್ಗೆ ಚಿಂತೆ, ಪಿತೃಪ್ರಧಾನ ಮೌಲ್ಯಗಳೇ ತಾಂಡವಾಡುತ್ತಿರುವ ಕಾನೂನು ಪಾಲನಾ ವ್ಯವಸ್ಥೆ ಮತ್ತು ಸಮಾಜದ ವಿವಿಧ ಸಂಸ್ಥೆಗಳ ಅಸಹಕಾರ ಮುಂತಾದ ಕಾರಣಗಳಿಂದಾಗಿ ವಿಚ್ಛೇದನ ಅನೇಕ ಮಹಿಳೆಯರ ಪಾಲಿಗೆ ಉರುಳಾಗಿ ಸಂಭವಿಸಿದೆ. ವಿವಾಹ ಎನ್ನುವ ಸಂಸ್ಥೆ ಮಹಿಳಾ ಜೀವನದ ಅಂತಿಮ ಗುರಿ ಎನ್ನುವ ಧೋರಣೆ ಕೊನೆಗೊಂಡು ಸಮಾನತೆ ಹಾಗೂ ಸಹಬಾಳ್ವೆಯ ತತ್ವಗಳನ್ನು ಪ್ರತಿಪಾದಿಸುವಂಥ ಒಂದು ಸಂಬಂಧವಾದರೆ ಮಹಿಳೆಯರು ಎದುರಿಸುತ್ತಿರುವ ಅನೇಕ ವೈವಾಹಿಕ ಹಿಂಸೆಗಳಿಗೆ ಕೊನೆಯಾಗುತ್ತದೆ.

### ೩.೧.೩. ಜಾತಿ ವ್ಯವಸ್ಥೆಯಲ್ಲಿ ಸ್ತ್ರೀ

ಭಾರತೀಯ ಸಮಾಜದಲ್ಲಿ ತೀವ್ರ ಸ್ವರೂಪದ ಅಸಮಾನತೆಗಳನ್ನು ಸೃಷ್ಟಿಸಿರುವ ವ್ಯವಸ್ಥೆಯೆಂದರೆ ಜಾತಿ. "ಜಾತಿ ಎನ್ನುವುದು ಒಂದು ಶ್ರೇಣೀಕೃತ ವ್ಯವಸ್ಥೆ. ಇದು ಮುಚ್ಚಿದ ವ್ಯವಸ್ಥೆಯಾಗಿದ್ದು ಅದರ ಒಳಗೆ ಚಲನೆಗೆ ಅವಕಾಶವಿಲ್ಲ. ಇದೊಂದು ವಿಶಿಷ್ಟವಾದ ಸಾಮಾಜಿಕ ಸಂಸ್ಥೆಯಾಗಿದೆ.

ಜಾತಿ ವ್ಯವಸ್ಥೆಯಲ್ಲಿ ಅಂದಿನಿಂದ ಇಂದಿನವರೆಗೂ ಮಹಿಳೆಯರು ಎಲ್ಲ ಜಾತಿ ಉಪಜಾತಿ ವರ್ಗಗಳಲ್ಲಿ ಯಜಮಾನ ಅಥವಾ ಪುರುಷನಿಗೆ ಸೇವೆಗಳನ್ನು ಒದಗಿಸುವಂಥ ಸೇವಾ ವೃತ್ತಿಯನ್ನು ನಿರ್ವಹಿಸುತ್ತಾ ಬಂದಿದ್ದಾರೆ. ಉನ್ನತ ಜಾತಿಯ ಸ್ತ್ರೀಯರು ಅವರ ಜಾತಿಯ ಪುರುಷರಿಗೆ, ಅಧೀನ ಸೇವೆಗಳ ಸ್ತ್ರೀಯರು ತಮ್ಮ ಜಾತಿಯ ಪುರುಷರಿಗೆ ಹಾಗೂ ಉನ್ನತ ಜಾತಿಗೆ ಸೇರಿದವರಿಗೆ ಸೇವೆಗಳನ್ನು ಒದಗಿಸುತ್ತಿದ್ದರು. ಇದೇ ಮುಂದೆ ಸ್ತ್ರೀ–ಪುರುಷ ಎಂಬ ಸಮಾನವಾದ ಎರಡು ಜಾತಿಯಿಂದ ಮೇಲು ಕೀಳು ವರ್ಗಗಳಿಗೆ ಕಾರಣವಾಯಿತು. ಸ್ತ್ರಿಯನ್ನು ಎಲ್ಲಾ ಜಾತಿಯ ಎಲ್ಲಾ ವರ್ಗದ ಪುರುಷ ಕೇಂದ್ರೀತ ವ್ಯವಸ್ಥೆಯೂ ದ್ವಿತೀಯ ಅಥವಾ ಕೆಳದರ್ಜೆಯಲ್ಲಿಟ್ಟು ತನ್ನ ಅಧಿಕಾರ, ನಿಯಂತ್ರಣವನ್ನು ಹೇರಿತು."[೧೦] ಮಹಿಳೆಯರು ಒಗ್ಗಟ್ಟಾಗಿ ತಮ್ಮ ಅಭಿವೃದ್ಧಿ ಹಾಗೂ ಸಮಾನತೆಗಾಗಿ ಹೋರಾಡಲು ಜಾತಿ ವ್ಯವಸ್ಥೆ ಅನೇಕ ಸಂದರ್ಭಗಳಲ್ಲಿ ಅಡ್ಡಿ ಬಂದಿದೆ. ಇಷ್ಟೇ ಅಲ್ಲ ಮೇಲ್ಜಾತಿಗೆ ಸೇರಿದ ಅನೇಕ ಮಹಿಳೆಯರು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ತಮಗಿಂತ ಕೆಳಸ್ತರಗಳಲ್ಲಿರುವ ಜಾತಿಗಳ ಮಹಿಳೆಯರನ್ನು ತಮ್ಮ ಸಮಾನರಂತೆ ಪರಿಗಣಿಸುವುದಿಲ್ಲ. ತಮ್ಮ ಮನೆಗಳಲ್ಲಿ ಮನೆಗೆಲಸಕ್ಕಾಗಿ ಬರುವ ಮಹಿಳೆಯರನ್ನು ಅವರು ನಡೆಸಿಕೊಳ್ಳುವ ರೀತಿ ಸ್ತ್ರೀ ಸಂಘಟನೆಯ ಬಗ್ಗೆ ತೀವ್ರ ಸ್ವರೂಪದ ಅನುಮಾನಗಳನ್ನು ಸೃಷ್ಟಿಸುತ್ತದೆ. ಜಾತಿಯ ಹೆಸರಿನಲ್ಲಿ ಮಹಿಳಾ ಚಳುವಳಿಯಲ್ಲಿ ಬಿರುಕುಗಳನ್ನು ಸೃಷ್ಟಿಸಲು ಪುರುಷ ಪ್ರಧಾನ ಶಕ್ತಿಗಳು ಯತ್ನಿಸುತ್ತಿವೆ. ಏಕದಿಕ್ಕಿನಲ್ಲಿ ಚಲಿಸಬಹುದಾದ ಮಹಿಳಾ ಹೋರಾಟಕ್ಕೆ ಪರ್ಯಾಯವಾದ ಜಾತಿ ಆಧಾರಿತ ಹೋರಾಟಗಳನ್ನು ಹುರಿದುಂಬಿಸುತ್ತಿರುವ ಈ ಶಕ್ತಿಗಳ ಏಕೈಕ ಗುರಿಯೆಂದರೆ ಸಂಘಟಿತ ಮಹಿಳಾ ಶಕ್ತಿಯನ್ನು ದಿಕ್ಕು ತಪ್ಪಿಸುವುದು. ಇದಕ್ಕೆ ಜ್ವಲಂತ ಉದಾಹರಣೆಯೆಂದರೆ ಮಹಿಳಾ ಮೀಸಲಾತಿ ಮಸೂದೆಗೆ ವ್ಯಕ್ತವಾಗುತ್ತಿರುವ ವಿರೋಧ. ಈ ಮಸೂದೆ ಅಂಗೀಕೃತವಾದರೆ ಅನೇಕ ಪುರುಷರು ತಮ್ಮ ರಾಜಕೀಯ ಅಧಿಕಾರವನ್ನು ಕಳೆದುಕೊಳ್ಳುವುದು ಖಚಿತ. ಹೇಗಾದರೂ ಮಾಡಿ ಮಹಿಳೆಯರ ಹೋರಾಟದಲ್ಲಿ ಒಡಕುಗಳನ್ನು ತಂದರೆ ತಮ್ಮ ಸ್ಥಾನ ಪಲ್ಲಟವಾಗುವುದನ್ನು ತಡೆಯಬಹುದು ಎಂಬ ಸಂಚನ್ನು ನಿಯೋಜಿಸಿ, ಜಾತಿಯ ಹೆಸರಿನಲ್ಲಿ ಮಹಿಳೆಯನ್ನು ಒಡೆದು ಮಸೂದೆಗೆ ತಡೆಯನ್ನೊಡ್ಡಿರುವುದನ್ನು ನೋಡಿದಾಗ ಜಾತಿಯ ಪ್ರಾಬಲ್ಯ ಎಷ್ಟಿದೆ ಎಂಬುದರ ಅರಿವು ನಿಮಗೆ ಆಗುತ್ತದೆ.

## ವಿವಿಧ ಜಾತಿಗಳಿಗೆ ವಿಭಿನ್ನ ಲಿಂಗವ್ಯವಸ್ಥೆಯ ಸ್ವರೂಪ

ಸಮಾಜದಲ್ಲಿ ಪುರುಷ ಪ್ರಧಾನ ಸಂಸ್ಕೃತಿ ಬೇರೂರಿದಂತೆ ಗಂಡು ಸಂತಾನಕ್ಕೆ ಸಾಮಾಜಿಕ ಆರ್ಥಿಕ ಮಹತ್ವ ಹೆಚ್ಚಾಗುತ್ತಾ ಬಂದಿತು. ಸ್ತ್ರೀಯರನ್ನು ಹತ್ತಿಕ್ಕಲು ಮುಖ್ಯವಾಗಿ ಮೇಲ್ಜಾತಿ ಎನಿಸಿದ್ದ ಬ್ರಾಹ್ಮಣ ವರ್ಗದಲ್ಲಿ ಸಾಕಷ್ಟು ದಮನಕಾರಿ ಕ್ರಮಗಳನ್ನು ತೆಗೆದುಕೊಳ್ಳಲಾಯಿತು.

ಮೈಲಿಗೆಯ ಹೆಸರಿನಲ್ಲಿ ಸ್ತ್ರೀಯರನ್ನು ನಿರ್ದಿಷ್ಟ ಅವಧಿಯಲ್ಲಿ ಸ್ಪರ್ಶಿಸದಂತೆ ಅವರಲ್ಲಿ ಕೀಳು ಭಾವನೆಯುಂಟಾಗುವಂತೆ ಮಾಡಲಾಯಿತು. ಮುಖ್ಯವಾಗಿ ಮಹಿಳೆಯ ಯಾವ ಜಾತಿಧರ್ಮ ಅಥವಾ ಸಾಮಾಜಿಕ ಗುಂಪಿಗೆ ಸೇರಿರುತ್ತಾಳೋ ಅದಕ್ಕೆ ತಕ್ಕಂತೆ ಆಕೆಯ ಸ್ಥಾನಮಾನ ಹಾಗೂ ಅಂತಸ್ತು ಬೇರೆ ಬೇರೆಯಾಗುತ್ತದೆ. ಹೀಗಾಗಿ ಉತ್ತಮ ಜಾತಿ ಎಂದು ಕರೆಯಲಾದ ಬ್ರಾಹ್ಮಣ ವರ್ಗದಲ್ಲಿ ಮಹಿಳೆಯರು ಅನೇಕ ಅಸಮಾನತೆ ಶೋಷಣೆಗಳಿಂದ ನರಳುತ್ತಾರೆ. ಒಟ್ಟಿನಲ್ಲಿ ಧರ್ಮಗಳ ವಿಸ್ತಾರವಾದ ತಳಹದಿಯ ಮೇಲೆ ಮಾನವ ಸಮಾಜದ ಚೌಕಟ್ಟು ನಿರ್ಮಿತವಾದದ್ದನ್ನು ಕಾಣುತ್ತೇವೆ. ಆದರೆ ಜಾತಿಗಳ ವ್ಯವಸ್ಥೆಯು ಸಂಸ್ಥೆಯನ್ನು ಹುಟ್ಟು ಹಾಕಿದ ಪರಿಣಾಮವಾಗಿ ಮಹಿಳೆಯರ ಜೀವನ ಇನ್ನಷ್ಟು ಸಂಕಷ್ಟಕ್ಕೀಡಾಗಿ ದಾರುಣವಾಯಿತು. ಇದರ ಜೊತೆಗೆ ಜಾತಿ ಮತ್ತು ಮತ್ತೊಂದು ಜಾತಿಯ ನಡುವೆ ಕೂಡ ಸಂಬಂಧ ಉಂಟಾಗಿ, ಅವುಗಳಲ್ಲಿಯೂ ವಿಭಿನ್ನತೆ ಉಂಟಾಗಿ ಮಹಿಳೆಯನ್ನು ತುಚ್ಛೀಕರಿಸುವಂತಾಯಿತು. ಜಾತಿ ವ್ಯವಸ್ಥೆ, ಸಮಾಜದಲ್ಲಿ ಬಿರುಕುಗಳನ್ನುಂಟು ಮಾಡಿದೆ. ಲಿಂಗಭೇದದಿಂದ ಸ್ತ್ರೀಯರು ಪುರುಷರ ದಬ್ಬಾಳಿಕೆಗೆ ಗುರಿಯಾಗಿದ್ದಾರೆ. ಜಾತಿಯಲ್ಲಿ ಮೇಲ್‌ಜಾತಿ, ಕೆಳಜಾತಿಯರೆಂದು ವರ್ಗೀಕರಿಸಿ, ಕೆಳಜಾತಿಯಲ್ಲಿ ಮಹಿಳೆಗೆ ಯಾವುದೇ ಸ್ವತಂತ್ರ ನೀಡದೆ ಅವಳನ್ನು ಹತ್ತಿಕ್ಕಲಾಗಿದೆ. ಇಂದಿಗೂ ಹಳ್ಳಿಗಳಲ್ಲಿ ದಲಿತ ಕೇರಿಗಳಲ್ಲಿ ದಲಿತ ಸ್ತ್ರೀಯರನ್ನು ಮುಟ್ಟುವಂತಿಲ್ಲ, ಅವರು ಯವುದೇ ಸಭೆ, ಸಮಾರಂಭಗಳಲ್ಲಿ ಎಲ್ಲರಂತೆ ಪಾಲ್ಗೊಳ್ಳುವುದಿಲ್ಲ. ದೂರ ನಿಂತೆ ಅವುಗಳನ್ನು ನೋಡಿ ಆನಂದಿಸುತ್ತಾರೆ.

ಮುಖ್ಯವಾಗಿ ಸ್ತ್ರೀಯರನ್ನು ಬಡತನ, ಅನಕ್ಷರತೆ, ಮೌಢ್ಯ, ಪರಾವಲಂಬಿತನ ಮುಂತಾದವುಗಳಿಂದ ಎಲ್ಲಾ ಜಾತಿಗಳಲ್ಲೂ ಅತ್ಯಂತ ಹೀನಾಯ ಸ್ಥಿತಿಗೆ ಮೂಲೆಗೊತ್ತರಿಸಲಾಗಿದೆ. ಜಾತ್ಯಾಧಾರಿತ ಪ್ರತ್ಯೇಕತೆಗೂ, ಲಿಂಗಾಧಾರಿತ ಪ್ರತ್ಯೇಕತೆಗೂ ಸಾಕಷ್ಟು ಸಂಬಂಧವಿದೆ. ಇತ್ತೀಚಿನ ವರ್ಷಗಳಲ್ಲಿ ಜಾತಿ, ಜಾತಿಗಳ ನಡುವಿನ ಪ್ರತ್ಯೇಕತೆ ಕ್ರಮೇಣ ಕಡಿಮೆಯಾಗುತ್ತಿದೆ. ಆದರೆ ಲಿಂಗಾಧಾರಿತ ಪ್ರತ್ಯೇಕತೆ ಇನ್ನಷ್ಟು ಹೆಚ್ಚಾಗುತ್ತಿದೆ ಎಂಬ ಭಾವನೆ ಬರುವಂತಿದೆ. ಏಕೆಂದರೆ ಇವೆರಡೂ ವ್ಯವಸ್ಥೆಗಳಲ್ಲಿ ಶೋಷಿತಳಾಗುವುದೇ ಹೆಣ್ಣು.

### ೩.೧.೪. ಶಿಕ್ಷಣ ವ್ಯವಸ್ಥೆಯಲ್ಲಿ ಸ್ತ್ರೀ

ಶಿಕ್ಷಣ ಎನ್ನುವ ಸಾಮಾಜಿಕ ಸಂಸ್ಥೆಗೆ ಎಲ್ಲ ಸಮಾಜಗಳಲ್ಲೂ ಎರಡು ಪ್ರಮುಖ ಜವಾಬ್ದಾರಿಗಳಿವೆ. ಒಂದು ಆ ಸಮಾಜದ ಸಾಂಸ್ಕೃತಿಕ ಪರಂಪರೆಯನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುವುದು ಎರಡನೆಯದು. ಆ ಸಮಾಜದಲ್ಲಿ ಬದಲಾವಣೆಯನ್ನು ತರುವುದಕ್ಕೆ ಪೂರಕವಾದ ವಾತಾವರಣವನ್ನು ಸೃಷ್ಟಿಸುವುದು. ಈ ಎರಡೂ ಕಾರ್ಯಗಳು ಮಹಿಳೆಯರ ಬದುಕಿನ ಮೇಲೆ ವಿಶೇಷವಾದ ಪ್ರಭಾವವನ್ನು ಬೀರುವಂಥವು. ಸಂಪ್ರದಾಯವನ್ನು

ಮುಂದುವರೆಸಿಕೊಂಡು ಹೋಗುವುದರ ಮೂಲಕ ಶಿಕ್ಷಣ ಮಹಿಳೆಯರಿಗೆ ಬದಲಾವಣೆಗೆ ಇರಬಹುದಾದ ಅನೇಕ ಅವಕಾಶಗಳನ್ನು ನಿರಾಕರಿಸುತ್ತವೆ.

ಶಿಕ್ಷಣವು ವ್ಯಕ್ತಿ ಅಥವಾ ಸಮಾಜದ ಪ್ರಗತಿಗೆ ಕಾರಣವಾಗಿರುವಂತ ಅತ್ಯಂತ ಪ್ರಮುಖ ಹಾಗೂ ಪ್ರಬಲ ಸಾಧನ ಎಂದರೇ ತಪ್ಪಾಗಲಾರದು. ಆದರೆ ಭಾರತೀಯ ಸಮಾಜದಲ್ಲಿ ಶತಮಾನಗಳಿಂದಲೂ ಮಹಿಳೆಯರಿಗೆ ಲಭ್ಯವಿರುವ ಶಿಕ್ಷಣಾವಕಾಶಗಳು ಪುರುಷನಿಗೆ ಹೋಲಿಸಿದಾಗ ಕಡಿಮೆ. ಹಿಂದೆಂದಿಗಿಂತ ಇಂದು ಸಂಖ್ಯಾತ್ಮಕ ಸೃಷ್ಟಿಯಿಂದ ಮಹಿಳೆಯರಿಗೆ ಶಿಕ್ಷಣದ ಅವಕಾಶಗಳಲ್ಲಿ ಹೆಚ್ಚಳ ಉಂಟಾಗಿರುವುದು ನಿಜವಾದರೂ, ಈ ಹೆಚ್ಚಿರುವ ಅವಕಾಶಗಳ ಹಂಚಿಕೆಯಲ್ಲಿ ಸಮಾನತೆ ಕಂಡುಬರುತ್ತಿಲ್ಲ. ಬದುಕಿನ ಎಲ್ಲಾ ರಂಗಗಳಲ್ಲೂ ಸ್ತ್ರೀ–ಪುರುಷನಿಗೆ ಸಮಾನಳು ಎಂಬ ಯೋಚನೆಗೆ ತಾತ್ವಿಕ ಒಪ್ಪಿಗೆ ಸಿಕ್ಕಿತು. ಆದರೆ ಪ್ರಾಯೋಗಿಕವಾಗಿ ಚರಿತ್ರೆಯಲ್ಲಿ ನಿರ್ಮಿಸಿಕೊಂಡು ಬಂದ ಅಸಮಾನತೆ ಒಂದಲ್ಲ ಒಂದು ಕಾರಣಗಳಿಂದ ಮುಂದುವರಿಯುತ್ತವೆ. ಇದಕ್ಕೆ ಮುಖ್ಯ ಕಾರಣ ಸಮಾಜದಲ್ಲಿ ಬೆಳೆದುಕೊಂಡು ಬಂದ ನಂಬಿಕೆ ಮತ್ತು ಯೋಚನಾ ಕ್ರಮವೇ ಆಗಿದೆ.

ಸ್ತ್ರೀ ಬಾಲ್ಯದಲ್ಲಿ ತಂದೆಯ ಅಧೀನ, ಯೌವ್ವನದಲ್ಲಿ ಗಂಡನ ಅಧೀನ, ಮುಪ್ಪಿನಲ್ಲಿ ಮಕ್ಕಳ ಅಧೀನ ಎಂಬ ಮನುವಿನ ವಿವರಣೆಯನ್ನು ಇಂದು ಜೀವನದಲ್ಲಿ ಅನುಸರಿಸಿಕೊಂಡು ಬರುವುದನ್ನು ಕಾಣಬಹುದಾಗಿದೆ. ಇದರಿಂದ ಸ್ತ್ರೀ ಸ್ವಾತಂತ್ರ್ಯವಾಗಿ ನಿರ್ಧಾರವನ್ನು ತೆಗೆದುಕೊಳ್ಳುವ, ಹಕ್ಕನ್ನು ಪರೋಕ್ಷವಾಗಿ ನಿರಾಕರಿಸಲಾಗಿದೆ. ಆಕೆಯ ಶಿಕ್ಷಣದ ಹಕ್ಕನ್ನು ಕೂಡಾ ನಿರ್ಧರಿಸುವವರು ಪುರುಷರೇ ಆಗಿದ್ದಾರೆ. ಇದರಿಂದ ಸ್ತ್ರೀ ಶಿಕ್ಷಣದ ನಿರ್ಧಾರಾತ್ಮಕ ಶಕ್ತಿ ಪುರುಷನ ಯೋಚನ ಕ್ರಮವೇ ಆಗಿದೆ. ಈ ಕಾರಣಗಳಿಂದಲೇ ಸಹಜವಾಗಿ ಸ್ತ್ರೀ ಶಿಕ್ಷಣಕ್ಕೆ ಬೆಂಬಲ ದೊರೆಯುವುದಿಲ್ಲ. ಮೇಲ್ನೋಟಕ್ಕೆ ಪ್ರಜಾಪ್ರಭುತ್ವದ ಸಮಾನತೆಯಿದ್ದರೂ ಆಳದಲ್ಲಿ ಪುರುಷ ಕೇಂದ್ರಿತ ವ್ಯವಸ್ಥೆಯೇ ಕಾರ್ಯ ನಿರ್ವಹಿಸುವುದನ್ನು ಕಾಣಬಹುದು. ಸಾಮಾಜಿಕವಾಗಿ ಕೆಲಸದ ವಿಭಜನೆಯಲ್ಲಿ ಸ್ತ್ರೀಗೆ ಮನೆಯ ಕೆಲಸಗಳನ್ನು ವಹಿಸಿಕೊಟ್ಟು ಅವಳನ್ನು ಗೃಹಿಣಿಯನ್ನಾಗಿ ಮಾಡಲಾಗಿದೆ. ಆದರೆ ಸೀಮಿತ ವಲಯದ ಅಡುಗೆ ಮನೆಯ ವ್ಯವಹಾರಕ್ಕೆ ಸ್ತ್ರೀಯೇ ಬಾಧ್ಯಗಳಾದುದರಿಂದ, ಅಕೆ ಮುಂದೆ ಅಡುಗೆಮನೆ ಸೇರುವುದರಿಂದ ಈಕೆಗೆ ಶಿಕ್ಷಣವು ಅಗತ್ಯವಿಲ್ಲ ಎಂಬ ಮನೋಭಾವ ವ್ಯಾಪಕವಾಗಿರುವುದನ್ನು ಕಾಣಬಹುದಾಗಿದೆ. ಈ ರೀತಿಯ ಯೋಚನಾ ಕ್ರಮವೇ ಸ್ತ್ರೀ ಶಿಕ್ಷಣದಲ್ಲಿ ಅತ್ಯಂತ ದೊಡ್ಡ ತಡೆಯಾಗಿದೆ.

ಹೆಣ್ಣಿನ ಕೆಲವು ಸಾಮಾಜಿಕ ಜವಾಬ್ದಾರಿಗಳನ್ನು ಸಮಾಜ ನೀಡಿದೆ. ಈ ಕೆಲಸಗಳನ್ನು ಮಾತ್ರ ನಡೆಸಲು ಹೆಣ್ಣು ಅರ್ಹಳು ಎಂಬ ಮನೋಭಾವ ವ್ಯಾಪಕವಾಗಿದೆ. ಪುರಾಣ, ಧರ್ಮಗ್ರಂಥ, ಆಚರಣೆ, ನಂಬಿಕೆ ಇವುಗಳ ಮೂಲಕ ಸಮಾಜವು ಈ ಜವಾಬ್ದಾರಿಯನ್ನು

ಖಾತ್ರಿಗೊಳಿಸಿದೆ. ಗಂಡ, ಪಾತಿವ್ರತ್ಯ, ಮಕ್ಕಳು, ಸ್ವರ್ಗ ಇತ್ಯಾದಿ ಕಲ್ಪನೆಗಳು ಇರುವುದರಿಂದ ಲೌಕಿಕ ಬದುಕಿನಲ್ಲಿ ಆಕೆ ಶಿಕ್ಷಣವನ್ನು ಪಡೆದು ಬೆಳೆಯುವುದಕ್ಕಿಂತ ಹೆಚ್ಚಾಗಿ ಈ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಿದರೆ ಯಶಸ್ಸು ಎಂಬ ಮನೋಭಾವ ಮೂಲಭೂತವಾಗಿ ಸ್ತ್ರೀಯಲ್ಲೇ ಇದೆ. ಇದರಿಂದ ಸ್ತ್ರೀ ಕಲಿತು ಏನಾಗಬೇಕಾಗಿದೆ ಎಂಬ ಮನೋಭಾವ ವ್ಯಾಪಕವಾಗಿ ಬೆಳೆದಿದೆ. ಹೆಣ್ಣಿನ ಶಿಕ್ಷಣದ ಕುರಿತಾದ ಉದಾಸೀನ ಮನೋಭಾವ ವ್ಯಾಪಕವಾಗಿರುವುದನ್ನು ಗಮನಿಸ ಬಹುದಾಗಿದೆ.

ಆರ್ಥಿಕವಾಗಿಯೂ ಹೆಣ್ಣು ಇಂದು ಸ್ವತಂತ್ರಳಲ್ಲದ ಕಾರಣದಿಂದ ತಾನು ನಿರ್ಧಾರ ಮಾಡುವ ಸಾಮರ್ಥ್ಯವನ್ನು ಆಕೆ ಪಡೆದಿಲ್ಲ. ಆರ್ಥಿಕವಾಗಿ ಇಂದು ಕೂಡಾ ಆಕೆ ಪುರುಷನನ್ನು ಅವಲಂಬಿಸಿದ್ದಾಳೆ. ಇದರಿಂದ ಆಕೆಯನ್ನು ಕಲಿಸಬೇಕೇ ಬೇಡವೇ ಎಂಬ ನಿರ್ಧಾರವನ್ನು ಮಾಡುವವನು ಗಂಡೇ ಆಗಿದ್ದಾನೆ. ಸಹಜವಾಗಿಯೇ ಮೇಲಿನ ಎಲ್ಲಾ ಯೋಚನೆ ಮತ್ತು ನಂಬಿಕೆಗಳು ಅವನ ಮನಸ್ಸಿನಲ್ಲಿ ಕೆಲಸ ಮಾಡುವುದರಿಂದ ಶಿಕ್ಷಣದಲ್ಲಿ ತಾರತಮ್ಯ ಮುಂದುವರೆದಿದೆ.

### ಸ್ತ್ರೀ ಶಿಕ್ಷಣ ಸಮಸ್ಯೆಗಳು

ಒಂದು ಸಮಾಜದ ನಿರ್ಮಾಣ ಹಾಗೂ ಅದರ ಸರ್ವತೋಮುಖ ಅಭಿವೃದ್ಧಿಯಲ್ಲಿ ಶಿಕ್ಷಣದ ಪಾತ್ರ ಅತ್ಯಂತ ಮಹತ್ವದ್ದು. ಹಾಗೆಯೇ ದೇಶದ ಅಭಿವೃದ್ಧಿಗೆ ಶಿಕ್ಷಣದ ಮುನ್ನಡೆಯಿಂದಾಗುವ ಆರ್ಥಿಕ ಅಭಿವೃದ್ಧಿ ಅತಿ ಮುಖ್ಯ ಭಾರತದ ಜನಸಂಖ್ಯೆಯಲ್ಲಿ ಅರ್ಧಭಾಗದಷ್ಟು ಮಹಿಳೆಯರಿದ್ದಾರೆ. ಆದರೆ ಇಲ್ಲಿ ಮಹಿಳಾ ಸಾಕ್ಷರತೆ, ಶಿಕ್ಷಣ, ಅತ್ಯಂತ ಕಡಿಮೆ ಮಟ್ಟದಲ್ಲಿದೆ. ಬಹುಮಟ್ಟಿಗೆ ಸ್ತ್ರೀಯರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಇದಕ್ಕೆ ಹಲವಾರು ಕಾರಣಗಳಿವೆ ಅಥವಾ ಪುರುಷ ಪ್ರಧಾನ ವ್ಯವಸ್ಥೆಯೇ ಹುಟ್ಟು ಹಾಕಿದ ಸಮಸ್ಯೆಗಳೆನ್ನಬಹುದು.

೧. ಸಂಪ್ರದಾಯಿಕ ಶಿಕ್ಷಣವನ್ನು ಸಾಮಾಜಿಕ ಸ್ಥಿತ್ಯಂತರದ ಒಂದು ಘಟ್ಟದಲ್ಲಿ ನಿಲ್ಲಿಸಲಾಯಿತು. ಗಂಡು ಮಕ್ಕಳನ್ನು ಪಡೆಯುವ ಹಂಬಲದೊಂದಿಗೆ ಹೆಣ್ಣು ಮಕ್ಕಳನ್ನು ಮೂಲೆಗೊತ್ತರಿಸುವ ಮತ್ತು ಹತ್ತಿಕ್ಕುವ ಕಾರ್ಯ ನಡೆಯಿತು. ಹೀಗಾಗಿ ಶಿಕ್ಷಣದ ಹಕ್ಕನ್ನು ಕಳೆದುಕೊಂಡ ಸ್ತ್ರೀಯರಿಗೆ ಗಂಡಸರ ಶೈಕ್ಷಣಿಕ ಉನ್ನತಿಯಷ್ಟೇ ಮುಖ್ಯವಾಗಿ ತಮ್ಮ ಸೃಜನಶೀಲತೆಯನ್ನು ಕಡೆಗಣಿಸಿಕೊಂಡರು.

೨. ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ಹುಡುಗಿಯರಿಗೆ ಸಾಕಷ್ಟು ಅವಕಾಶಗಳಿವೆ. ಸರ್ಕಾರಗಳು ಸಂವಿಧಾನದಲ್ಲಿ ಸೂಚಿಸಿರುವ ಸಮಾನತೆ ಹಕ್ಕುಗಳನ್ನು ಶಿಕ್ಷಣವನ್ನು ಅಳವಡಿಸಿಕೊಂಡಿವೆ. ಸ್ವಾತಂತ್ರ್ಯ ಬಂದು ಅರವತ್ತೊಂಬತ್ತು ವರ್ಷಗಳಾದರು ಸಂಪೂರ್ಣ ಸಾಕ್ಷರತೆಯನ್ನು

ಸಾಧಿಸಲು ಸಾಧ್ಯವಾಗಿಲ್ಲ. ಇಂದಿಗೂ ಮಹಿಳೆಯರಲ್ಲಿ ಶೇ.೬೦ಕ್ಕಿಂತಲೂ ಹೆಚ್ಚು ಜನರು ಅನಕ್ಷರಸ್ಥೆಯರಿದ್ದಾರೆ. ಆದುದರಿಂದ ಸಾಕ್ಷರತಾ ಸಮಸ್ಯೆಯನ್ನು ವಿಶ್ಲೇಷಿಸಬೇಕಾಗುತ್ತದೆ.

೧. ಮೊದಲನೆಯದಾಗಿ ಶಾಲೆಗೆ ದಾಖಲಾಗುವ ಮಕ್ಕಳ ಪೈಕಿ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳ ಸಂಖ್ಯೆ ಕಡಿಮೆ.

೨. ಹುಡುಗಿಯರನ್ನು ನಿಧಾನವಾಗಿ ಶಾಲೆಗೆ ಸೇರಿಸುವುದು. ಮಧ್ಯದಲ್ಲಿ ಶಾಲೆ ಬಿಡಿಸುವುದು.

೩. ಮನೆಗೆಲಸಕಷ್ಟೇ ಸೀಮಿತ ಮಾಡುವುದು.

೪. (ಗ್ರಾಮೀಣ ಭಾಗದಲ್ಲಿ) ಸೌಧೆ ಆರಿಸಲು ಕಳುಹಿಸುವುದು.

೫. ಹೆಣ್ಣು ಮಕ್ಕಳು ಋತುಮತಿಯಾದರೆ ಶಾಲೆಗೆ ಹೋಗುವುದನ್ನು ಬಿಡಿಸಿ ಮನೆಯಲ್ಲಿ ಇರಿಸಿಕೊಳ್ಳುವುದು.

೬. ಬಹುಬೇಗನೆ ವಿವಾಹ ಮಾಡುವುದು.

೭. ಬಡತನ.

೮. ಪೋಷಿತರ ಅನಕ್ಷರತೆ, ಮೌಢ್ಯ, ಅಜ್ಞಾನ.

೯. ಈಗೀಗ ಶಾಲೆಗಳಲ್ಲಿ ಅಪ್ರಾಪ್ತ ವಯಸ್ಕ ಹುಡುಗಿಯರ ಮೇಲೆ ಶಿಕ್ಷಕರೇ ಲೈಂಗಿಕ ಶೋಷಣೆ ಮಾಡುವ ಬಗ್ಗೆ ವರದಿಗಳು ಬರುತ್ತಿರುವುದು. ಬೇಲಿಯೇ ಹೊಲ ಮೇಯುವ ಇಂಥ ಪ್ರಸಂಗಗಳಿಂದ ಪೋಷಕರು ಬಾಲಕಿಯರನ್ನು ಶಾಲೆಗೆ ಕಳುಹಿಸದಿರುವಂತೆ ಆಗುತ್ತದೆ.

### ೩.೧.೫. ವರ್ತಮಾನದ ಬದುಕಿನಲ್ಲಿ ಸ್ತ್ರೀ

ವರ್ತಮಾನದ ಬದುಕಿನಲ್ಲಿಯೂ ಕೂಡ ಸ್ತ್ರೀ ಶೋಷಣೆಗೊಳಗಾದವಳು. ಅಸಮಾನತೆಯ ವ್ಯವಸ್ಥೆ, ಲಿಂಗಭೇದ ನೀತಿ, ಜಾತಿವ್ಯವಸ್ಥೆ, ಜನಾಂಗ ಹತ್ಯೆ, ಕಿರುಕುಳ, ಅತ್ಯಾಚಾರ, ವರದಕ್ಷಿಣೆ ಹೀಗೆ ಹಲವಾರು ಇವೆ. ಇಂದು ಅವಿದ್ಯಾವಂತ ಮಹಿಳೆಯರಿಗಿಂತ ವಿದ್ಯಾವಂತ ಮಹಿಳೆಯರ ನೋವು, ಸಂಕಟಗಳೇ ಹೆಚ್ಚು. ಹೊಲದಲ್ಲಿ ದುಡಿವ ಮಹಿಳೆಗಿಂತ ಕಛೇರಿಯಲ್ಲಿ ದುಡಿಯುವ ಮಹಿಳೆ ಹೆಚ್ಚು ತೊಂದರೆಗೀಡಾಗುತ್ತಿದ್ದಾಳೆ. ಕೆಳವರ್ಗದ ಮಹಿಳೆಯರಿಗಿಂತ ಮಧ್ಯಮವರ್ಗದ ಮಹಿಳೆಯರು ಮರ್ಯಾದೆಯ ಹೆಸರಿನಲ್ಲಿ ದಿನನಿತ್ಯವೂ ನೋವನ್ನು ಅನುಭವಿಸುತ್ತಿದ್ದಾಳೆ. ಹೆಣ್ತನದ ಬಲೆಯಲ್ಲಿ ಕೆಡವಲಾಗಿ ತನ್ಮೂಲಕ ಎಲ್ಲಾ ನಿರ್ಬಂಧಗಳನ್ನು ಹೇರಲಾಗುತ್ತದೆ. ಹೆಚ್ಚು ಮಾತಾಡದಂತೆ, ಗಟ್ಟಿಯಾಗಿ ನಗದಂತೆ, ನಡೆಯದಂತೆ, ಪರ ಪುರುಷರೊಂದಿಗೆ ತಪ್ಪಿಯೂ ಮಾತಾಡದಂತೆ, ಅವಳ ಬೇಕು ಬೇಡಗಳು ಗೌಣವಾಗಿ ಜೀವಿಸುವ ಪರಿಸ್ಥಿತಿ ಒದಗಿದೆ. ದಿನನಿತ್ಯ

ಪತ್ರಿಕೆಗಳಲ್ಲಿ ಹೆಂಡತಿಯ ಶೀಲ ಶಂಕಿಸಿದ ಗಂಡನಿಂದ ಹೆಂಡತಿಯ ಸಾವು. ಎಳೆಗೂಸಿನ ಮೇಲೆ ಅತ್ಯಾಚಾರ ಇಂತಹ ವಿಕೃತ ಕಾಮಪಾಶದ ಪುರುಷರು ಸ್ತ್ರೀಯನ್ನು ನಡೆಸಿಕೊಳ್ಳುತ್ತಿರುವುದು ಅಮಾನವೀಯ. ಇದು ವರ್ತಮಾನದ ಬದುಕಿನ ಸ್ಥಿತಿ.

ಹೀಗೆ ಸಂಸ್ಕೃತಿ, ಸಮಾಜ, ಸಮುದಾಯ, ಕುಟುಂಬ, ಸಂಸ್ಥೆ, ವರ್ತಮಾನದ ಬದುಕು ಈ ಎಲ್ಲಾ ನೆಲೆಗಳಲ್ಲಿ ಮಹಿಳೆ ಶೋಷಿತಳಾಗಿದ್ದಾಳೆ. ಇಂದಿನ ಸಂದರ್ಭದಲ್ಲಿ ತಕ್ಕದಾದ ಹೊಸ ಅಲೆಯ ಕಲಾತ್ಮಕ ಪ್ರಜ್ಞೆಯನ್ನಿಟ್ಟುಕೊಂಡು ಹೆಣ್ಣಿನ ಬದುಕನ್ನು ವಿಸ್ತರಿಸುವ, ಸ್ತ್ರೀ ದೃಷ್ಟಿಯಿಂದ ಅರ್ಥೈಸುವುದಕ್ಕೆ ಸಾಧ್ಯವಾಗುವ ಹೊಸ ಹೊಸ ಅವಕಾಶ, ಸಂದರ್ಭಗಳನ್ನು ನಾವಿಂದು ಅನುಸರಿಸಿಕೊಂಡು ಅಧ್ಯಯನ ಮಾಡುವ ಅಗತ್ಯವಿದೆ.

## ೩.೨. ಸ್ತ್ರೀ ಕೇಂದ್ರಿತ ನೆಲೆಯಲ್ಲಿ ಸಾಹಿತ್ಯವನ್ನು ಅರ್ಥಮಾಡಿಕೊಳ್ಳುವ ಅಗತ್ಯವೇನಿದೆ ಮತ್ತು ಅದರ ಸ್ವರೂಪ

ಕನ್ನಡ ಸಾಹಿತ್ಯದಲ್ಲಿ ಸ್ತ್ರೀಯರನ್ನು ಕುರಿತು ಮತ್ತು ಸ್ತ್ರೀ ಸಂವೇದನೆಯನ್ನು ಒಳಗೊಂಡ ಅಂಶಗಳು ವೇದಗಳ ಕಾಲದಿಂದಲೂ ಬಳಕೆಯಲ್ಲಿವೆ. ಮುಂದುವರೆದು ಶಾಸನಗಳಲ್ಲಿ, ಹಳಗನ್ನಡದಲ್ಲಿ, ನಡುಗನ್ನಡದಲ್ಲಿ, ವಚನಗಳಲ್ಲಿ, ಆಧುನಿಕ ಸಾಹಿತ್ಯದಲ್ಲಿ ಹೀಗೆ ಎಲ್ಲಾ ಕಾಲ ಮತ್ತು ಸಾಹಿತ್ಯ ಪಂಥದಲ್ಲಿ ಬಳಸಲ್ಪಟ್ಟಿದೆ. ಹಾಗೆ ನೋಡುವುದಾದರೆ ಕಾಲ ಮತ್ತು ಮನುಷ್ಯನ ಸಂಬಂಧ ವಿಶಿಷ್ಟವಾದುದು. ಯಾವುದೇ ಒಂದು ಕಾಲ ಮೇಲ್ನೋಟಕ್ಕೆ ಒಂದು ಸ್ವತಂತ್ರ, ಪ್ರತ್ಯೇಕ ಘಟಕದಂತೆ ಕಂಡರೂ ಪ್ರತ್ಯೇಕವಲ್ಲ. ಪಾರಂಪರಿಕ ಗುಣಲಕ್ಷಣಗಳಿಂದ ಅದು ನಿರಂತರವಾದುದಾಗುತ್ತದೆ. ಅಂದರೆ ವರ್ತಮಾನದಲ್ಲಿ ಭೂತಕಾಲದ ಲಕ್ಷಣಗಳಿದ್ದೇ ಇರುತ್ತದೆ. ಹಾಗೆಯೇ ಭೂತಕಾಲವೂ ಒಂದು ಕಾಲಕ್ಕೆ ವರ್ತಮಾನವಾಗಿರುತ್ತದೆ. ಆ ಗುಣಗಳಿಂದಲೇ ಮುಂದಿನದಕ್ಕೆ ಪೂರಕವೂ ಆಗಿರುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಮನುಷ್ಯ ಎದುರಿಸುವ ಸಮಸ್ಯೆ ಮತ್ತು ಸವಾಲುಗಳು ವಿಭಿನ್ನವಾಗಿವೆ. ಅದಕ್ಕೆ ಸ್ತ್ರೀ ಕೂಡ ಹೊರತಾಗಿಲ್ಲ.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಬದುಕು ಕಂಡುಬರುವುದು ಸಾಮಾನ್ಯವಾಗಿ ಮನುಸ್ಮೃತಿಯಿಂದ ಪ್ರೇರಿತಗೊಂಡ ದೇವತೆ ಇಲ್ಲವೆ ರಕ್ಕಸಿಯಾಗಿ. ಆಕೆಯನ್ನು ಹೆಚ್ಚಾಗಿ ಕಂಡಿರುವುದು ವಿರಳವೆಂದೇ ಹೇಳಬಹುದು. ಒಟ್ಟಾರೆ ನಮ್ಮ ಬಹುತೇಕ ಸಂಸ್ಕೃತಿ ಮತ್ತು ಚರಿತ್ರೆಯಲ್ಲಿ ಹೆಣ್ಣು ವರ್ಣನೆಯ ವಸ್ತುವಾಗಿಯೇ ಕಂಡುಬಂದಿದ್ದಾಳೆ. ಹೆಣ್ಣು ಹೆಂಡತಿಯಾಗಿ, ತಾಯಿಯಾಗಿ, ಅಜ್ಜಿಯಾಗಿ ಮನೆಯ ಒಳಗೆ ಮತ್ತು ಹೊರಗೆ ಪುರುಷನಿಗೆ ಸರಿಸಮಾನವಾಗಿ ದುಡಿದರೂ ಎರಡನೆ ದರ್ಜೆಯ ಸ್ಥಾನವನ್ನೇ ಆಕೆಗೆ ಕಲ್ಪಿಸಿದ್ದು, ವೇದಗಳ ಕಾಲದಲ್ಲಿ ಹೆಣ್ಣಿಗೆ ಸ್ಥಾನ-ಮಾನಗಳು ಲಭಿಸಿದ್ದವು. ಆದರೆ ಪುರಾಣ ಮತ್ತು ಇತಿಹಾಸದಲ್ಲಿ ಆಕೆ ನಿರ್ಲಕ್ಷಿಸಿಲ್ಪಟ್ಟಳು.

ಮಹಾಕಾವ್ಯಗಳ ಸಂದರ್ಭಕ್ಕೆ ಆಕೆಯ ಬದುಕು ಇನ್ನೂ ಶೋಚನೀಯ ಸ್ಥಿತಿ ತಲುಪಿತು. ಕಾರಣ ಹೆಣ್ಣನ್ನು ಭೋಗವಸ್ತುವೆಂದು ಭಾವಿಸಿದ್ದ ರಾಜಪ್ರಭುತ್ವ, ಬೌದ್ಧ ಧರ್ಮದ ಕಾಲಕ್ಕೆ ಅವಳ ಶೋಚನೀಯ ಸ್ಥಿತಿ ಸ್ವಲ್ಪ ಸುಧಾರಿಸಲ್ಪಟ್ಟಿತೆಂದು ಹೇಳಬಹುದಾಗಿದೆ. ಅನಂತರ ಮನುವಿನ ಕಾಲಕ್ಕೆ ತುಂಬಾ ಬಿಗಿ ನಿಲುವನ್ನು ತಳೆದದ್ದು ಕಂಡುಬಂದಿತು. ಮಹಿಳೆಯರು ಪೂಜೆಗೊಳ್ಳುವಲ್ಲಿ ದೇವತೆಗಳಿರುತ್ತಾರೆಂದು ಹೇಳುತ್ತಲೇ ಮತ್ತೊಂದೆಡೆ ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲವೆಂದು ಹೇಳುತ್ತಾನೆ. ಜೈನ ಧರ್ಮದಲ್ಲೂ ಸ್ವಲ್ಪ ಮಟ್ಟಿನ ಹೆಣ್ಣಿನ ಬದುಕಲ್ಲಿ ಬದಲಾವಣೆ ಕಂಡುಬಂದಿತು. ಅನಂತರ ಶೈವಧರ್ಮ ಮತ್ತು ವಚನ ಚಳವಳಿ ಸಂದರ್ಭದಲ್ಲಿ ಹೆಣ್ಣಿನ ಬದುಕಲ್ಲಿ ಸುಧಾರಣೆಯಾದದ್ದನ್ನು ಗಮನಿಸಬಹುದಾಗಿದೆ.

ಧರ್ಮಾಮೃತದಲ್ಲಿ ನಯಸೇನನು ಹೆಣ್ಣು ಮಕ್ಕಳ ಬಗ್ಗೆ ಸಾಕಷ್ಟು ವಿವರಗಳನ್ನು ಕೊಟ್ಟಿದ್ದಾನೆ. ಗಂಡು ಮಗು ಬೇಕೆಂದು ವರ ಕೇಳಿದ್ದರೆ, ಹೆಣ್ಣು ಮಗು ಹುಟ್ಟಿತೆಂದು ಅದನ್ನು ಹಿಂದಿರುಗಿಸುವ ವಿಚಾರ ಕರ್ಣಪಾರ್ಯನ ನೇಮಿನಾಥ ಪುರಾಣದಲ್ಲಿ ಉಕ್ತವಾಗಿದೆ. ಇದು ಹೆಣ್ಣಿನ ಬಗೆಗಿನ ತಾತ್ಸಾರ ಭಾವನೆ ತಿಳಿಸುತ್ತದೆ. ವಡ್ಡಾರಾಧನೆಯಲ್ಲಿ ಸುಕುಮಾರ ಸ್ವಾಮಿ ಕಥೆಯಲ್ಲಿ ಸೋಮಶರ್ಮ ಮತ್ತು ತ್ರಿವೇದಿ ಎಂಬ ದಂಪತಿಗಳು ಮಕ್ಕಳನ್ನು ಬೇಡಿ ನಾಗದೇವತೆಯನ್ನು ಪೂಜಿಸುವರು. ಅವರಿಗೆ ಹೆಣ್ಣು ಮಗು ಹುಟ್ಟುತ್ತದೆ. ಆದಿ ಪುರಾಣದಲ್ಲಿ ತೀರ್ಥಂಕರನ ಜನನಕ್ಕೆ ಮುಂಚಿತವಾಗಿ ಇಂದ್ರನು ತನ್ನ ಪರಿವಾರದವರನ್ನು ಕರೆದು ನಾಬಿರಾಜನ ಪತ್ನಿಯಾದ ಮರುದೇವಿಯ ಗರ್ಭವನ್ನು ಪವಿತ್ರವಾಗಿರಿಸುವನು. ಆದರೆ ಹೆಣ್ಣು ಮಗು ಹುಟ್ಟುವ ಮುನ್ನ ಆ ತಾಯಿಗೆ ಎಲ್ಲೂ ಈ ಬಗೆಯ ಉಪಚಾರ ನಡೆದಿಲ್ಲ. ಪಂಪ ಭಾರತದಲ್ಲಿ ದ್ರೋಣನಿಂದ ಅವಮಾನಿತನಾದ ದ್ರುಪನು, ನಿನ್ನನ್ನು ಕೊಲ್ಲುವ ಮಗನನ್ನು ವಿಕ್ರಮಾರ್ಜುನಿಗೆ ಹೆಂಡತಿಯಾಗುವಂತಹ ಒಬ್ಬಳು ಮಗಳನ್ನು ಪಡೆದಲ್ಲದೆ ಇರುವುದಿಲ್ಲ ಎಂದು ಯಾಗವನ್ನು ಕೈಗೊಂಡು ದ್ರೌಪದಿಯನ್ನು ಪಡೆಯುತ್ತಾನೆ. ಹೆಣ್ಣು ಬೇಕೆಂದು ಆಸೆಪಡುವುದು ಒಂದು ವಿಶೇಷವೇ ಆದರೂ ಕಥಾ ನಾಯಕನಿಗೆ ಉಚಿತ ಕನ್ಯೆಯನ್ನು ಪಡೆಯುವುದೂ ಇಲ್ಲಿ ನಾಯಕನನ್ನು ಏರಿಸುವ ಪಕ್ಷಪಾತವೇ ಆಗಿದೆ. ರಾಮಚಂದ್ರ ಚರಿತ ಪುರಾಣದಲ್ಲಿ ಸೀತೆಯು ಭರತನ ನಾಟ್ಯಶಾಸ್ತ್ರಾದಿ ಕತೆಗಳಲ್ಲಿ ಪರಿಣತಿಯನ್ನು ಪಡೆದಿದ್ದಳು ಎಂದು ಹೇಳಲಾಗಿದೆ. ನೇಮಿಚಂದ್ರದಲ್ಲಿ ಸ್ತ್ರೀಯೊಬ್ಬಳು ಸಾಹಿತ್ಯ ಮತ್ತು ನೃತ್ಯಕಲೆಯಲ್ಲಿ ಸಂಪನ್ನೆಯಾಗಿದ್ದಳೆಂದು ತಿಳಿದುಬರುತ್ತದೆ. ದುರ್ಗಸಿಂಹನ ಪಂಚತಂತ್ರದ ಕಥೆ ಮುನಿಯುಂ ಇಲ್ಲಿಯುಂ ಎಂಬುದರಲ್ಲಿ ಕೆಳವರ್ಗದ ಹುಡುಗಿ ಎಷ್ಟೇ ರೂಪವತಿ ಇದ್ದರೂ ಮೇಲುವರ್ಗದ ಗಂಡುಗಳು ಒಪ್ಪುವುದಿಲ್ಲ ಎಂಬಂತೆ ಚಿತ್ರಿಸಲಾಗಿದೆ. ಹೆಣ್ಣನ್ನು ಅಪಹರಿಸಿಕೊಂಡು ಬಂದು ಮದುವೆ ಮಾಡಿದ ಕ್ರಮವೂ ಕನ್ನಡ ಕಾವ್ಯಗಳಲ್ಲಿ ಕಂಡುಬರುತ್ತದೆ. ಪಂಪಭಾರತದಲ್ಲಿ ಭೀಷ್ಮನು

ಕಾಶಿರಾಜನ ಮಕ್ಕಳಾದ ಅಂಬೆ, ಅಂಬಿಕೆ, ಅಂಬಾಲಿಕೆಯನ್ನು ಅಪಹರಿಸಿಕೊಂಡು ಬಂದು ತನ್ನ ತಮ್ಮನಿಗೆ ಲಗ್ನ ಮಾಡಿಸುತ್ತಾನೆ. ಈ ರೀತಿ ಹಳಗನ್ನಡ ಕಾವ್ಯಗಳ ಸಾಹಿತ್ಯ ಸಂದರ್ಭಕ್ಕೆ ಸ್ತ್ರೀ ವಿದ್ಯಾಭ್ಯಾಸವು ಉಚ್ಚವರ್ಗಕ್ಕೆ ಮಾತ್ರ ಮೀಸಲಾಗಿದ್ದು, ಮಧ್ಯಮ ಹಾಗೂ ಕೆಳವರ್ಗದವರಿಗೆ ಹೆಣ್ಣು ಮಕ್ಕಳನ್ನು ಓದಿಸಬೇಕೆಂದು ಕಲ್ಪನೆಯೇ ಆ ಕಾಲಕ್ಕೆ ಇದ್ದಿರಲಿಲ್ಲ. ಹೀಗೆ ಸ್ತ್ರೀಯರು ವಿದ್ಯಾಭ್ಯಾಸದಿಂದ ವಂಚಿತರಾಗಿದ್ದರೆಂಬುದನ್ನು ತಿಳಿಸುತ್ತದೆ.

ಮಧ್ಯಕಾಲೀನ ಸಾಹಿತ್ಯ ಸಂದರ್ಭದಲ್ಲಿ ಭಕ್ತಿಪಂಥದ ಚಳುವಳಿಯಿಂದಾಗಿ ಸ್ತ್ರೀಗೆ ವಿದ್ಯೆ ಕಲಿಯುವ ಅವಕಾಶ ಲಭಿಸಿತು. ಯಾವುದೇ ಸಂಸ್ಕೃತಿಯ ಏಳು ಬೀಳುಗಳನ್ನು ಅಳೆಯುವ ಸಂದರ್ಭದಲ್ಲಿ ಅದರ ಉನ್ನತಿ ಮತ್ತು ಅವನತಿ ಕುರಿತಂತೆ ಮೌಲ್ಯಮಾಪನ ಮಾಡುವ ಸಂದರ್ಭದಲ್ಲಿ ಸ್ತ್ರೀಯರ ಸ್ಥಾನಮಾನ ಮತ್ತು ಆ ಸಂಸ್ಕೃತಿಯ ವಿಕಾಸಕ್ಕೆ ಅವರ ಕೊಡುಗೆ ಮುಖ್ಯವಾಗುತ್ತದೆ. ಹನ್ನೆರಡನೆ ಶತಮಾನ ಕನ್ನಡ ಸಾಹಿತ್ಯದ ರಚನೆಯಲ್ಲಿ ಒಂದು ಪ್ರಗತಿಪರ ಘಟ್ಟ. ಸಮಾಜ ಸುಧಾರಣೆಯಾಗುತ್ತಿರುವ ಸಂದರ್ಭದಲ್ಲಿ ವಚನ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯು ಕಾಣಿಸಿಕೊಂಡು ಎಲ್ಲಾ ವರ್ಗದ ಸ್ತ್ರೀಯರು, ಸಾಹಿತ್ಯ ಸಂವೇದನೆಯಲ್ಲಿ ತೊಡಗಿಸಿಕೊಂಡದ್ದು ಪ್ರಮುಖವಾದ ಘಟನೆ. ಹೆಣ್ಣು ಗಂಡು ಎನ್ನುವ ಭೇದವನ್ನು ಅಳಿಸಿ ಹಾಕುವ ಪ್ರಯತ್ನ ಇಲ್ಲಿ ನಡೆಯಿತು. ಸ್ತ್ರೀಯರಲ್ಲಿ ಆತ್ಮವಿಶ್ವಾಸವನ್ನು ತುಂಬುವ ಸಮಾನತೆ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಲ್ಪಿಸಲಾಯಿತು. ಶರಣರ ಜೊತೆಗೆ ಸಮಾನತೆ ಪಡೆದ ಸ್ತ್ರೀಯರು ವಚನಕಾರರ ಜೊತೆಗೆ ತಾತ್ವಿಕವಾಗಿ ಚರ್ಚೆ ಮಾಡಿ ವಿಚಾರ ವಿನಿಮಯ ನಡೆಸಿದರು. ವೈಚಾರಿಕ ಚರ್ಚೆಗಳಲ್ಲಿ ಭಾಗವಹಿಸಿ ವಚನಗಳನ್ನು ರಚಿಸಿದರು. ಅಕ್ಕಮಹಾದೇವಿ, ಮುಕ್ತಾಯಕ್ಕ, ಗಂಗಾಬಿಕೆ, ಅಕ್ಕನಾಗಮ್ಮ, ಮೊಳಿಗೆ ಮಹಾದೇವಮ್ಮ ಅಲ್ಲದೇ ತೀರಾ ಕೆಳವರ್ಗದ ಕಾಳವ್ವೆ, ಸುಂಕವ್ವೆ, ಗುಡ್ಡಮ್ಮ, ರೇಕಮ್ಮ, ಮಸಣಮ್ಮ, ಕಾಮಮ್ಮ, ವೀರಮ್ಮ ಮುಂತಾದವರು ಸಾಹಿತ್ಯದಲ್ಲಿ ಸಂವೇದಿಸಿದ್ದು ಮಹತ್ವದ ಘಟನೆಯಾಗಿದೆ. ಉರಿಲಿಂಗಪೆದ್ದಿಯ ಪತ್ನಿ ಕಾಳವ್ವೆಯ ಸಂವೇದನಾ ಸ್ವರೂಪಕ್ಕೂ, ಅಕ್ಕ ಮಹಾದೇವಿಯ ಸಂವೇದನಾ ಸ್ವರೂಪಕ್ಕೂ ವ್ಯತ್ಯಾಸವಿದೆ. ಸಾಮಾನ್ಯವಾಗಿ ಕೆಳವರ್ಗದ ವಚನಕಾರರು ಪುರುಷರನ್ನು ಪುರುಷ ಸಮಾಜವನ್ನು ಕಾಣುವ ಈ ಸಮಾಜಕ್ಕೆ ಸ್ಪಂದಿಸುವ ಪ್ರತಿಕ್ರಿಯೆಗೆ ವ್ಯಕ್ತಪಡಿಸುವ ಸ್ವರೂಪದ ನೆಲೆಗಳಿಗೂ ಅಕ್ಕ ಮಹಾದೇವಿಯ ಸಂವೇದನೆಯ ನೆಲೆಗಳಿಗೂ ತುಂಬಾ ಅಂತರವಿದೆ. ಸಾಮಾನ್ಯವಾಗಿ ಅಕ್ಕ ಮಹಾದೇವಿ ಸಂಸಾರ, ಗಂಡ, ಕುಟುಂಬ, ಕುಟುಂಬದ ಸ್ವರೂಪ ಅಂಗರಚನೆಯ ಬಗ್ಗೆ ವಿಭಿನ್ನ ಸ್ವರೂಪದ ನೆಲೆಗಳಲ್ಲಿ ಮಾತನಾಡುತ್ತಾಳೆ. ಆದರೆ ಕೆಳವರ್ಗದ ಜಾತಿಯ ವಚನಕಾರ್ತಿಯರು ಕೌಟುಂಬಿಕ ವ್ಯವಸ್ಥೆಯಲ್ಲಿದ್ದುಕೊಂಡೇ ಸಮಾನತೆಯನ್ನು ಸಾಧಿಸುವ, ಆ ಮೂಲಕ ನವಸಮಾಜದ ನಿರ್ಮಾಣಕ್ಕಾಗಿ ತುಡಿಯುತ್ತಾರೆ.

ಹರಿಹರನ ರಗಳೆಗಳಲ್ಲಿ ಮತ್ತು ಗಿರಿಜಾ ಕಲ್ಯಾಣದಲ್ಲಿ ಬರುವ ಸ್ತ್ರೀ ಪಾತ್ರಗಳ ಸಂವೇದನೆಗಳು ಭಾರತೀಯರ ಮನಸ್ಸಿನಲ್ಲಿರುವ ಆದರ್ಶ ಸ್ತ್ರೀಯ ಸಂವೇದನೆಗಳೇ ಆಗಿವೆ. ಇವರು ಯಥಾ ಪ್ರಕಾರ ಪುರುಷರನ್ನು ಹಿಂಬಾಲಿಸುವ ಆ ಮೂಲಕ ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವನಿಗೆ ಎಂಬ ಮನೋಭಾವನೆಯಿಂದ ಸಂವೇದಿಸುವ ಸ್ವರೂಪದ ಪಾತ್ರಗಳಿವೆ. ಮುಂದೆ ರಾಘವಾಂಕನ ಹರಿಶ್ಚಂದ್ರಕಾವ್ಯದ ಪಾತ್ರವೂ ಕೂಡಾ ಇದೇ ಬಗೆಯದು. ಯಾವುದನ್ನು ಪ್ರಶ್ನಿಸದ ಪತಿ ಮಾಡಿದ್ದೇ ಸರಿ, ಅವನ ವರ್ತನೆಯೇ ತನ್ನ ವರ್ತನೆ ಎಂದು ಭಾವಿಸುವ ಚಂದ್ರಮತಿಯಲ್ಲಿ ಭಾರತೀಯ ಆದರ್ಶನಾರಿಯ ಕಲ್ಪನೆಯ ಸಂವೇದನೆಗಳಿವೆ ಎಂಬುದನ್ನು ನಾವು ಮನಗಾಣಬಹುದು. ಕುಮಾರವ್ಯಾಸ ಭಾರತದಲ್ಲಿ ಬರುವ ದ್ರೌಪದಿಯು ಎಲ್ಲಕ್ಕಿಂತ ಭಿನ್ನ. ಮಧ್ಯಕಾಲೀನ ಸಮಾಜದಲ್ಲಿ ಉಂಟಾಗುತ್ತಿದ್ದ ಸಾಮಾಜಿಕ ಪರಿವರ್ತನೆ, ರಾಜರ ಆಸ್ಥಾನಗಳಲ್ಲಿ ರಾಣಿಯರೇ ಸಾಹಿತ್ಯವನ್ನು ರಚಿಸುತ್ತಿದ್ದುದು ಹಾಗೂ ಹನ್ನೆರಡನೆಯ ಶತಮಾನದ ಸಾಮಾಜಿಕ ಕ್ರಾಂತಿಯಲ್ಲಿ ವಚನಕಾರ್ತಿಯರು ಸಾಹಿತ್ಯದಲ್ಲಿ ಸಂವೇದಿಸಿದ್ದು ಈ ಮೂಲಕ ಹೊಸ ಸಂಸ್ಕೃತಿಯ ಹುಟ್ಟನ್ನು ಬಯಸಿದ್ದು ಕುಮಾರವ್ಯಾಸನ ಮೇಲೆ ಪ್ರಭಾವ ಬೀರಿರಬೇಕು. ಆದ್ದರಿಂದಲೇ ಅವನು ಆರಿಸಿಕೊಂಡ ಮಹಾಭಾರತದ ವಸ್ತುವಿನ್ಯಾಸದಲ್ಲಿ ದ್ರೌಪದಿಯ ಪಾತ್ರದ ಮೂಲಕ ಸ್ತ್ರೀಯು ಪುರುಷ ವರ್ತನೆಗಳನ್ನು, ಸ್ವಭಾವಗಳನ್ನು ಪುರುಷ ಸಂಸ್ಕೃತಿಯ ಸ್ವರೂಪವನ್ನು ಪ್ರಶ್ನಿಸುವ ಮಟ್ಟಕ್ಕೆ ಹೋಗಿರುವುದನ್ನು ಕಾಣಬಹುದು. ಆದ್ದರಿಂದ ದ್ರೌಪದಿ ಪಾತ್ರದ ಸ್ತ್ರೀ ಸಂವೇದನೆ ದಟ್ಟವಾದದ್ದು.

ಚಾಮರಸನಲ್ಲಿ ಬರುವ ಸ್ತ್ರೀ ಪಾತ್ರಗಳು ಕೇವಲ ಪುರುಷನನ್ನು ಒಲಿಸಿಕೊಳ್ಳುವ ಪಾತ್ರಗಳಾಗಿ ಬರುತ್ತವೆ. ಅದರಲ್ಲೂ ಸ್ತ್ರೀ ಶಕ್ತಿಗಿಂತ ಪುರುಷ ಶಕ್ತಿಯೇ ಅಧಿಕ ಹಾಗೂ ಶ್ರೇಷ್ಠ ಎಂಬುದನ್ನು ಪ್ರಭುಲಿಂಗಲೀಲೆ ಸಾಂಕೇತಿಕವಾಗಿ ಧ್ವನಿಸುತ್ತದೆ. ಹಾಗೆಯೇ ರತ್ನಾಕರವರ್ಣಿಯಲ್ಲಿ ಕೇವಲ ಭೋಗದ ವಸ್ತುವಾಗಿ ಸ್ತ್ರೀ ಬರುತ್ತಾಳೆ.

ನವೋದಯ ಕಾಲದಲ್ಲಿ ಇಂಗ್ಲೀಷ್ ಸಾಹಿತ್ಯದ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಪರವಾದ ವಿಚಾರಗಳ ಬಗ್ಗೆ ಬರೆಯಲಾರಂಭಿಸಿದರು. ಕನ್ನಡದ ಆರಂಭದ ಸಾಮಾಜಿಕ ಕಾದಂಬರಿಗಳೆಲ್ಲವೂ ಸ್ತ್ರೀ ಪರವಾದ ಧೋರಣೆಯಿಂದಲೇ ರಚಿಸಲ್ಪಟ್ಟವು. ಅಲ್ಲಿ ಸುಧಾರಣಾವಾದಿಗಳ ಪ್ರಭಾವ ಎದ್ದು ಕಾಣುತ್ತದೆ. ಕನ್ನಡದ ಮೊದಲ ಸಾಮಾಜಿಕ ಕಾದಂಬರಿ ಇಂದಿರಾಬಾಯಿ, ಇಂದಿರೆ, ವಾಗ್ದೇವಿ, ಮಾಡಿದ್ದುಣ್ಣೋ ಮಹಾರಾಯ, ಕಾನೂರು ಹೆಗ್ಗಡಿತಿ, ಸರಸಮ್ಮನ ಸಮಾಧಿ. ಇಲ್ಲಿ ಸ್ತ್ರೀ ಪಾತ್ರಗಳು ಪ್ರಧಾನವಾಗಿರುವುದಲ್ಲದೆ, ಸ್ತ್ರೀ ಶಿಕ್ಷಣವು ಅತ್ಯಂತ ಚರ್ಚಾಸ್ಪದ ವಿಷಯವಾಗಿ ಚರ್ಚಿತವಾಗಿದೆ. ಪ್ರಾತಿನಿಧಿಕ ಲೇಖಕರೆನಿಸಿಕೊಂಡ ಮಾಸ್ತಿ ಮತ್ತು ಕುವೆಂಪು, ಬೇಂದ್ರೇ,

ಕೆ.ಎಸ್.ನ. ಪು.ತಿ.ನ.ರವರನ್ನು ಮತ್ತು ನವೋದಯದ ಸಂದರ್ಭದಲ್ಲಿಯೇ ದಿಟ್ಟ ಹೆಜ್ಜೆಗಳನ್ನು ಇಟ್ಟು, ಈ ಕಾಲದ ಸಾಹಿತ್ಯ ಪರಂಪರೆಯ ಸಮೃದ್ಧಿಗೆ ಕಾರಣರಾದ ಗೌರಮ್ಮ, ಶ್ಯಾಮಲಾದೇವಿ, ಕಲ್ಯಾಣಮ್ಮ ತಿರುಮಲಾಂಬಾ, ಜಾನಕಮ್ಮನವರ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ ನೋಡಬಹುದು.

ನವ್ಯ ಸಾಹಿತ್ಯದಲ್ಲಿ ಹೆಣ್ಣನ್ನು ಅರಿಯುವುದರಲ್ಲಿ ಹೆಣ್ಣಿನ ಮನೋಭಾವವನ್ನು ಬಿಂಬಿಸುವುದರಲ್ಲಿ ಹೆಣ್ಣು ಕೂಡ ಗಂಡಿನಂತೆ ಸ್ವತಂತ್ರಳು ಎಂಬುದನ್ನು ತಿಳಿಯಲು ವಿಫಲವಾಯ್ತು. ಹೆಣ್ಣಿನ ಬಗ್ಗೆ ನವೋದಯದವರಿಗೆ ಇದ್ದ ಉದಾರವಾದಿ ದೃಷ್ಟಿಕೋನ ಸಹ ಇರದಿದ್ದರೆ ಈ ಹೊಸ ಸಾಹಿತ್ಯ ಚಳುವಳಿ ಇದು ಮುಖ್ಯವಾಗಿ ಗಂಡುಗಳ ಲೋಕ, ಹೆಣ್ಣು ಅವರ ಲೈಂಗಿಕ ಉಪಭೋಗದ ವಸ್ತುವಾಗುತ್ತಾಳೆ. ನವ್ಯದ ಪ್ರಾತಿನಿಧಿಕ ಕೃತಿಗಳಲ್ಲಿ ಒಂದು ಎನ್ನಬಹುದಾದ ಸಂಸ್ಕಾರ ಕಾದಂಬರಿಯು ಶ್ರೀಪತಿ ಹೇಳುವ ಮಾತು. ದುರ್ಗಾಭಟ್ಟರಿಗೆ ಚಂದ್ರಿಯನ್ನು ನೋಡಿದ ತಕ್ಷಣ ಅವರಿಗೆ ವಾತ್ಸಾಯನ ಕಾಮಸೂತ್ರದ ವರ್ಣನೆ ನೆನಪಾಗುತ್ತದೆ. ಇಲ್ಲಿ ಗಂಡಿನ ಅರಿವನ್ನು ವಿಸ್ತರಿಸುವ ಅಥವಾ ಅವನನ್ನು ಪರಿಪೂರ್ಣನನ್ನಾಗಿಸುವ ಸಾಧನವಾಗಿ ಮಾತ್ರ ಹೆಣ್ಣು ಬಳಕೆಯಾಗುತ್ತಾಳೆ. ಶಾಂತಿನಾಥ ದೇಸಾಯಿ ಮತ್ತು ವೀಣಾ ಶಾಂತೇಶ್ವರರ ಕೃತಿಗಳನ್ನು ಹೊರತುಪಡಿಸಿದರೆ ಇಡೀ ನವ್ಯ ಸಾಹಿತ್ಯದಲ್ಲಿ ಸ್ವತಂತ್ರ್ಯ ವ್ಯಕ್ತಿತ್ವವುಳ್ಳ ಗಂಡಿಗೆ ಸರಿಸಾಟಿಯಾಗುವ, ಸಂಘರ್ಷಕ್ಕೆ ನಿಲ್ಲುವ, ನಿಜವಾದ ಹೆಣ್ಣುಗಳು ಕಾಣುವುದು ನವ್ಯ ಚಳುವಳಿಯ ಅವಸಾನ ಕಾಲದಲ್ಲಿಯೇ ಲಂಕೇಶ, ತೇಜಸ್ವಿ, ಚಿತ್ತಾಲ, ದೇವನೂರರಂಥ ಮುಖ್ಯ ಲೇಖಕರು ನವ್ಯದ ದೀಕ್ಷೆಯಿಂದ ದೂರಸರಿದ ಮೇಲೆಯೇ ಅವರಿಗೆ ಹೆಣ್ಣಿನ ನೈಜ ಚಿತ್ರವನ್ನು ಕೊಡಲು ಸಾಧ್ಯವಾದುದು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸ್ತ್ರೀಯರ ಮತ್ತು ಸಮಾಜದ ಕೆಳಸ್ತರದ ಜನರ ಬದುಕನ್ನು ಹತ್ತಿಕ್ಕಲ್ಪಟ್ಟವರ ನೆಲೆಯಲ್ಲಿ ಸಮಾನವಾಗಿ ಗುರುತಿಸಿದ್ದು ಮೊದಲಿಗೆ ಕಾಣುವುದು. ಪ್ರಗತಿ ಶೀಲರಲ್ಲಿ ಇವರು ಕಥೆ, ಕಾದಂಬರಿಗಳಲ್ಲಿ ಪ್ರಧಾನವಾಗಿ ಸ್ತ್ರೀಯನ್ನು ಕೇಂದ್ರವಾಗಿರಿಸಿಕೊಂಡು ಕೃತಿಗಳನ್ನು ರಚಿಸಿರುವರು ಅ.ನ.ಕೃ., ಬಸವರಾಜ ಕಟ್ಟಿಮನಿ, ನಿರಂಜನ, ತ.ರಾ.ಸು., ಚದುರಂಗ ಮುಂತಾದ ಲೇಖಕರು ಸಮಕಾಲೀನ ಸ್ತ್ರೀ ಸಮಸ್ಯೆಗಳನ್ನು ಪರಿಶೀಲಿಸಿ ಪುರುಷ ಪ್ರಧಾನ ವ್ಯವಸ್ಥೆಯ ಹುಟ್ಟಿನಲ್ಲೇ ಸ್ತ್ರೀಯ ಸ್ಥಾನ ಅವನತಿಗೊಂಡಿದ್ದರ ಮೂಲವಿದೆಯೆಂದು ಹೆಣ್ಣು ಭೋಗವಸ್ತುವಾಗಲೂ ಕಾರಣವಾಯಿತೆಂಬ ವೈಚಾರಿಕ ಅರಿವಿಗೆ ತುಂಬ ದೂರವಾಗಿ ಅ.ನ.ಕೃ. ಸ್ವಾತಂತ್ರ್ಯ ಎಂಬುದನ್ನು ಸ್ವಚ್ಛಂದತೆ, ಕೊನೆಗೆ ಲಂಪಟತೆಯ ಜೊತೆಗೆ ಸಮೀಕರಿಸುತ್ತಾರೆ. ನೀತಿ, ಶೀಲಗಳ ಚೌಕಟ್ಟಿನಲ್ಲಿ ಹುಟ್ಟಿರುವ ಸಹಧರ್ಮಿಣಿ, ಪತಿವ್ರತೆ, ಸಾಧ್ವಿ/ಸರ್ವನಾಶಕಿ, ಪತೀತೆ, ಸ್ಥೂಲಗುಂಪುಗಳಲ್ಲಿ ವಿಭಕ್ತವಾಗಿರುವಂಥ ಸ್ತ್ರೀ ಮಾದರಿಗಳನ್ನು ಅ.ನ.ಕೃ ಅವರ ಬರವಣಿಗೆಯುದ್ದಕ್ಕೂ ಕಾಣುತ್ತೇವೆ. ಗೃಹಲಕ್ಷ್ಮಿ, ಅನುಗ್ರಹ, ಯಕ್ಷಿಣಿ, ಹೆಂಗರುಳು, ಮಂಗಳಸೂತ್ರ, ಕಣ್ಣೀರು, ತಾಯಿಮಕ್ಕಳು, ಕಾದಂಬರಿ ಆದರ್ಶ ಗೃಹಿಣಿಯ, ಪಾತಿವ್ರತ್ಯದ ಹೋರಾಟದ ಕಣ್ಣೀರ ಕಥೆಗಳನ್ನು ಒಳಗೊಂಡಿದೆ.

ಕಟ್ಟಿಮನಿಯವರು ಕುಟುಂಬದ ಆಚೆಗೆ ನೆಲೆತಪ್ಪಿದ ಹೆಣ್ಣಿನ ಸ್ಥಿತಿಯ ದಾರುಣಚಿತ್ರಣವನ್ನು ಬೀದಿಯಲ್ಲಿ ಬಿದ್ದವಳು, ಖಾನಾವಳಿಯ ನೀಲಾ, ಪಾತರಗಿತ್ತಿ, ಮೋಹದ ಬಲೆಯಲ್ಲಿ, ಜರತಾರಿ ಜಗದ್ಗುರು, ಈ ಕಾದಂಬರಿಗಳಲ್ಲಿ ಬಡತನ, ಅನಾಥತೆ, ಪರಿಸ್ಥಿತಿಯ ಒತ್ತಡಗಳಿಂದ ಹೆಣ್ಣುಗಳು ಬಲಿಯಾಗುವ ಬಗೆಯನ್ನು ಬೀದಿಯಲ್ಲಿ ಬಿದ್ದವಳು ಚಿತ್ರಿಸಿದರೆ, ಖಾನಾವಳಿಯ ನೀಲಾದಲ್ಲಿ ತಾಯಿ ತನ್ನಂತೆ ಮಗಳನ್ನು ವೇಶಾವೃತ್ತಿಗೆ ಎಳೆಯಲು ಯತ್ನಿಸುವ ಮತ್ತು ಮಗಳು ಅದನ್ನು ಧಿಕ್ಕರಿಸಿ, ಮದುವೆಯಾಗಿ, ಗೌರವದ ಬದುಕನ್ನು ಹಂಬಲಿಸುವುದರ ವಿರುದ್ಧ ತುಯ್ದಾಟಗಳ ಚಿತ್ರಣವಿದೆ. ಹೀಗೆ ಹೆಣ್ಣಿನ ವಿವಿಧ ಮಾದರಿಗಳನ್ನು ಚಿತ್ರಿಸಿದ್ದಾರೆ.

ನಿರಂಜನರ ಸಾಹಿತ್ಯಲೋಕ ಅ.ನ.ಕೃ ಕಟ್ಟಿಮನಿಯವರಿಗಿಂತ ತೀರ ಭಿನ್ನವಾದ ಅನುಭವಕ್ಕೆ ಸೆಳೆಯುತ್ತದೆ. ಇವರು ಸಾಮಾಜಿಕ ಸಮಸ್ಯೆಗಳನ್ನು ಸ್ತ್ರೀಯರದ್ದೇ ಎಂದು ಪ್ರತ್ಯೇಕಿಸದೆ ಇಡೀ ಸಾಮಾಜಿಕ ವ್ಯವಸ್ಥೆಯ ಸ್ವರೂಪವನ್ನು ತಳಹದಿಯಾಗಿಟ್ಟುಕೊಂಡು ಎಲ್ಲಾ ಬಗೆಯ ಅಸಮಾನತೆಗಳಲ್ಲಿ ಒಂದಾಗಿ ಲಿಂಗಾಧಾರಿತ ಅಸಮಾನತೆಯನ್ನು ವಿಶ್ಲೇಷಿಸುತ್ತಾರೆ.

ಕಾದಂಬರಿಗಳಲ್ಲಿ ಸ್ತ್ರೀಕೇಂದ್ರಿತ ವಸ್ತುವಿದ್ದರೂ(ಬನಶಂಕರಿ, ಅಭಯ, ವಿಶಾಲಾಕ್ಷಿ ಹೆಣ್ಣಾಗಿ ಕಾಡಿತ್ತು ಮಾಯೆ, ನಂದಗೋಕುಲ ಇತ್ಯಾದಿ) ಸಮಸ್ಯೆಗಳನ್ನು ವೃತ್ತಿಗಳ ಬದುಕಿನ ಸಂದರ್ಭಕ್ಕೆ ಮಾತ್ರ ಸೀಮಿತಗೊಳಿಸದೆ ಕೌಟುಂಬಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಪರಿಸರದಲ್ಲಿ ಆ ಸಮಸ್ಯೆಯ ಬೇರುಗಳಿರುವುದನ್ನು ನಿರಂಜನರು ಗುರುತಿಸುತ್ತಾರೆ. ಬನಶಂಕರಿ ಕಾದಂಬರಿ ನಾಯಕಿ ಏಕಾಂಗಿಯಾದರೂ ಸ್ತ್ರೀಯೊಬ್ಬಳು ದಿಟ್ಟತನ, ಜೀವನಪರತೆ, ಆತ್ಮವಿಶ್ವಾಸಗಳಿಂದ ಸುತ್ತಲಿನ ಸಂಪ್ರದಾಯನಿಷ್ಠ ಸಮಾಜದ ವಿರುದ್ಧ ಹೋರಾಡುವುದನ್ನು ಸಂಕೇತಿಸುತ್ತಾಳೆ. ಸೌಭಾಗ್ಯ ಕಾದಂಬರಿಯಲ್ಲಿ ಹೆಂಗಸಿನ ಆರ್ಥಿಕ ಸ್ವಾವಲಂಬನೆಗೆ ಮನೆಯ ಹೊರಗಿನ ದುಡಿಮೆಯನ್ನು ಸಮರ್ಥಿಸುವ ಯತ್ನವಿದೆ.

ತರಾಸು ಅವರು ಸಹ ಕಾದಂಬರಿಯಲ್ಲಿ ಸ್ತ್ರೀಯನ್ನು ಕೇಂದ್ರೀಕರಿಸಿ ಸಾಹಿತ್ಯ ರಚಿಸಿದ್ದಾರೆ. ಮಸಣದ ಹೂ, ಹಂಸಗೀತೆ, ಬಿಡುಗಡೆಯ ಬೇಡಿ, ಚಂದವಳ್ಳಿಯ ತೋಟ, ಚಂದನದ ಗೊಂಬೆ ಮುಂತಾದವು. ಹೆಣ್ಣಿನ ವಿರುದ್ಧವಾಗಿ ಸಮಾಜದ ಆಕ್ರೋಶ ಅನ್ಯಾಯಗಳನ್ನು ದಾಖಲಿಸುವ ಚಂದನದಗೊಂಬೆ, ಕೌಟುಂಬಿಕ ನೆಲೆಯೇ ನಿಜವಾದ ಹೆಣ್ಣಿನ ಸುಭದ್ರ ನೆಲೆ ಎಂದು ನಂಬಿರುವ ಸಮಾಜದಲ್ಲಿ ತಾನು ನಂಬಿದ ತತ್ವಕ್ಕಾಗಿ ಕೌಟುಂಬಿಕ ನೆಲೆಯಿಂದ ದೂರ ಉಳಿಯಲು ಬಯಸುವಂಥ ಮಹಿಳೆಯನ್ನು ಕಲ್ಪಿಸಿರುವುದೂ ಒಂದು ವಿಶೇಷ ಸಂಗತಿ. ಹೀಗೆ ಪ್ರಗತಿಶೀಲರು ಸಹ ಮಹಿಳೆಯನ್ನು ವಸ್ತುವಾಗಿ ಕಾದಂಬರಿಯಲ್ಲಿ ತಂದಿದ್ದಾರೆ.

ಬಂಡಾಯ ಸಾಹಿತ್ಯದ ಅಂಚಿನಲ್ಲಿ ಗುರುತಿಸಿಕೊಂಡವರು ಅನೇಕ ಲೇಖಕ–ಲೇಖಕಿಯರಲ್ಲಿ ಗೀತಾ ನಾಗಭೂಷಣ್, ಅನುಪಮಾ ನಿರಂಜನ, ದೇವನೂರು ಮಹಾದೇವ, ಸಿದ್ದಲಿಂಗಯ್ಯ, ಮ.ನ.ಜವರಯ್ಯ, ಸಾ.ರಾ.ಅಬೂಬಕರ್, ಬಿ.ಟಿ.ಲಲಿತನಾಯಕ್, ಚೆನ್ನಣ್ಣ ವಾಲೀಕಾರ ಹೀಗೆ ಅನೇಕ ಲೇಖಕರು, ಸ್ತ್ರೀಯರನ್ನು ಕೇಂದ್ರೀಕರಿಸಿ ಸಾಹಿತ್ಯ ರಚಿಸಿದ್ದಾರೆ.

ಅನುಪಮಾ ಅವರ ಮಾಧವಿ ಕಾದಂಬರಿಯಲ್ಲಿ, ಮಾಧವಿಯ ಮೂಲಕ ಸ್ತ್ರೀ ತನ್ನ ದೇಹ ಮನಸ್ಸಿನ ಮೇಲೆ ತಾನು ಕಳೆದುಕೊಂಡಿರುವ ಸ್ವಾತಂತ್ರ್ಯದ ಬಗ್ಗೆ ಈ ರೀತಿಯಾಗಿ ವ್ಯಕ್ತಪಡಿಸುತ್ತಾಳೆ. "ಹೌದು ನನ್ನ ತಂದೆ ಯಜ್ಞಗಳನ್ನು ಮಾಡಿದ್ದಾರೆ. ನಾನು ಅದನ್ನು ಮಾಡಲಿಲ್ಲ. ಆದರೆ ನಾನು ಯಜ್ಞಪಶುವೆಂದಷ್ಟೇ ಗೊತ್ತು ನನಗೆ"[೧೧] ಗಂಡು ತನ್ನ ಮಹತ್ವಕಾಂಕ್ಷೆಯನ್ನು ಈಡೇರಿಸಿಕೊಳ್ಳುವ ಸಂದರ್ಭದಲ್ಲೆಲ್ಲಾ ಹೆಣ್ಣನ್ನು ಪಶುವಿನಂತೆ ಮಾರಾಟ ಮಾಡಿರುವುದು ಕಂಡುಬರುತ್ತದೆ. ಸಾ.ರಾ.ಅಬೂಬಕರ್ ಅವರ 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿ ಆರ್ಥಿಕ ಪರಾಧೀನತೆಯಲ್ಲಿರುವ ಹೆಣ್ಣನ್ನು ಧರ್ಮದ ಹೆಸರಿನಲ್ಲಿ ಬಿಚ್ಚಿ ತೋರಿಸುತ್ತದೆ. ಹೀಗೆ ಶೋಷಣೆಗೆ ಒಳಪಟ್ಟ ಹೆಣ್ಣುಗಳು ಮೌನವಾಗಿರುವುದರ ಬಗ್ಗೆ ಮಾತನಾಡಿದ್ದಾರೆ. ಚಂದ್ರಗಿರಿಯ ತೀರದಲ್ಲಿಯ ನಾಯಕಿ, ನಾದಿರಾ, ಗಂಡ ಮತ್ತು ತಂದೆಯ ಪ್ರತಿಷ್ಠೆಗೆ ಬಲಿಪಶುವಾಗುತ್ತಾಳೆ. ಗೀತಾ ನಾಗಭೂಷಣರ ಹಸಿ ಮಾಂಸ ಹದ್ದುಗಳು, ಮಾಪುರತಾಯಿ ಮಕ್ಕಳು, ಕಾದಂಬರಿಯಲ್ಲಿ ಶೋಷಣೆಯ ಪ್ರಜ್ಞೆಯಿಲ್ಲದೆ ತಲೆಹಿಡುಕ ಗಂಡುಸರು ತಮ್ಮ ಹೆಣ್ಣುಗಳನ್ನೇ ಬಲಿಕೊಡುವುದನ್ನು ಎತ್ತಿ ತೋರಿಸುತ್ತಾ, ಈ ಸಾಮಾಜಿಕ ಬೆತ್ತಲೇ ಸತ್ಯಗಳನ್ನು ತಲಸ್ಪರ್ಶಿಯಾಗಿ ವರ್ಣ, ಜಾತಿ, ಸಂಘರ್ಷದ ಕಡೆಗೆ ಹೆಚ್ಚು ವಾಲುವುದು ಹೆಣ್ಣು ಬದುಕಿನುದ್ದಕ್ಕೂ ಪ್ರತಿಭಟಿಸುತ್ತಲೇ ಇರುವುದು ಕಾಣುತ್ತದೆ. ಬಿ.ಟಿ.ಲಲಿತಾ ನಾಯಕ್‌ರ 'ಗತಿ' ಕಾದಂಬರಿಯಲ್ಲಿ ತೀವ್ರಗತಿಯ ಪ್ರತಿಭಟನೆಯಿದೆ. ಈ ಕಾದಂಬರಿಯ ಹೆಣ್ಣುಗಳಲ್ಲಿ ವ್ಯವಸ್ಥೆಯ ಜೊತೆಗೆ ಮುಖಾಮುಖಿಯಾಗಿ ನಿಲ್ಲುತ್ತಾರೆ.

ಜನಪದ ಸಾಹಿತ್ಯದಲ್ಲಿಯೂ ಸ್ತ್ರೀಯರನ್ನು ಕುರಿತು ಕಥೆ, ಕಾವ್ಯ, ರಚಿಸಿರುವುದು ಕಾಣುತ್ತೇವೆ. ಗಾದೆಗಳಲ್ಲಿ ಸ್ತ್ರೀಯರನ್ನು ಕುರಿತು ರಚಿಸಿರುವುದು ಹೆಚ್ಚು ಗೋಚರಿಸುತ್ತವೆ. ಜನಪದ ಸಾಹಿತ್ಯದಲ್ಲಿ ದಾಖಲೆಗೊಂಡಂತೆ ಸ್ತ್ರೀಗೆ ಸಂಬಂಧಿಸಿದ ಎರಡು ಕುಟುಂಬಗಳೆಂದರೆ ಅಪ್ಪನ ಮನೆ ಹಾಗೂ ಗಂಡನ ಮನೆ. ಈ ಎರಡು ಕುಟುಂಬಗಳಲ್ಲಿಯೂ ಅವಿಭಕ್ತ ಕುಟುಂಬ ವ್ಯವಸ್ಥೆಯಿದ್ದು, ಸಾಮಾನ್ಯವಾಗಿ ಗಂಡು ಮನೆಯ ಹಿರಿತನದಲ್ಲಿರುತ್ತಾನೆ. ಸ್ತ್ರೀ ತವರಲ್ಲಿ, ಮಗಳಾಗಿ, ತಂಗಿಯಾಗಿ, ಅಕ್ಕನಾಗಿ, ಅತ್ತಿಗೆಯಾಗಿ, ನಾದಿನಿಯಾಗಿ, ಗಂಡನ ಮನೆಯಲ್ಲಿ ಹೆಂಡತಿಯಾಗಿ, ಸೊಸೆಯಾಗಿ, ಅತ್ತಿಗೆ, ಮೈದಿನಿ, ನಾದಿನಿಯಾಗಿ, ತಾಯಿಯಾಗಿ, ತನ್ನ ಜೀವನಾವರ್ತನದ ಒಂದು ಚಕ್ರವನ್ನು ಎರಡೂ ಕುಟುಂಬಗಳಲ್ಲಿ ಮುಗಿಸುತ್ತಾಳೆ. ಹೆಣ್ಣಿಗೆ ಬುದ್ಧಿವಾದವನ್ನು ಹೇಳಿ ಎದುರು

ಮಾತನಾಡದಂತೆ ವ್ಯವಸ್ಥೆ ವಿರುದ್ಧ ತಿರುಗಾಡದೇ ರಾಜಿ ಮಾಡಿಕೊಂಡು ಜೀವನ ನಡೆಸಲು ತಾಯಿ, ಮಗಳಿಗೆ ಹೇಳುತ್ತಾಳೆ.

"ಅತ್ತೆ ಮಾವಗಂಜಿ ಸುತ್ತೇಳು ನೆರೆಗಂಜಿ
ಮತ್ತೆ ವಲ್ಲಭನ ನುಡಿಗಂಜೀ ನಡೆದರೆ
ಎಂಥ ಉತ್ತಮರ ಮಗಳೆಂಬೊ"[೧೨]

ಎನ್ನುವಂಥ ನುಡಿಗಳು ಸ್ತ್ರೀ ಬಂಧನದ ಚಿತ್ರಣಗಳಾಗುತ್ತವೆ. ಅಷ್ಟೇ ಅಲ್ಲದೆ

"ಅತ್ತೆಯ ಮನೆಯಲ್ಲಿ ಮುತ್ತಾಗಿ ಇರಬೇಕು
ಹೊತ್ತಾಗಿ ನೀಡಿದರೂ ಉಣಬೇಕು, ತವರವರ
ಉತ್ತಮರ ಹೆಸರು ತರಬೇಕು."[೧೩]

ಮಗಳಿಗೆ ಹೇಳುವ ಈ ಬುದ್ಧಿವಾದವು ತಾಯಿಯ ಪೂರ್ವಾಶ್ರಮದ ಅನುಭವದಿಂದ ಹಾಗೂ ಸುತ್ತಮುತ್ತ ಸಮಾಜದಲ್ಲಿ ಕಂಡ ಅತ್ತೆಯಂದಿರ ನಡವಳಿಕೆಯನ್ನು ಕಂಡು ಹುಟ್ಟಿದ ಅಭಿವ್ಯಕ್ತಿಗಳಾಗಿವೆ.

ಹೀಗೆ ಸ್ತ್ರೀ ಕೇಂದ್ರಿತ ನೆಲೆಯಲ್ಲಿ ಸಾಹಿತ್ಯವು ರಚನೆಯಾಗಿರುವುದು ಕಾಣುತ್ತೇವೆ. ಹಾಗಾಗಿ ಅರ್ಥ ಮಾಡಿಕೊಳ್ಳುವ ಅಗತ್ಯವಿದೆ.

## ೩.೩. ನಿರ್ದಿಷ್ಟವಾಗಿ ಕಾದಂಬರಿಗಳನ್ನು ಸ್ತ್ರೀ ದೃಷ್ಟಿಕೋನ ನೋಡುವ ಅಗತ್ಯವಿದೆಯೇ? ಇದ್ದರೆ ಯಾಕೆ ಇದೆ ಮತ್ತು ಅದರ ಸ್ವರೂಪ

ನಿರ್ದಿಷ್ಟವಾಗಿ ಕಾದಂಬರಿಗಳನ್ನು ಸ್ತ್ರೀದೃಷ್ಟಿಕೋನದಿಂದ ನೋಡುವ ಅಗತ್ಯವಿದೆ. ಏಕೆಂದರೆ ಕಾದಂಬರಿಯು ಸುದೀರ್ಘವಾಗಿ ಕಥಾ ಹಂದರದಿಂದ ಪ್ರತಿಯೊಂದು ವಿಷಯವನ್ನು ಎಳೆ ಎಳೆಯಾಗಿ ಬಿಚ್ಚಿ ಹೇಳಲು ಸಾಧ್ಯವಾಗುತ್ತದೆ. ಅದರಲ್ಲೂ ಸ್ತ್ರೀಯ ಜೀವನದ ಎಲ್ಲಾ ಮಗ್ಗಲುಗಳಲ್ಲಿಯೂ ಅವಳ ಬದುಕು, ಬವಣೆ, ಹೋರಾಟ, ಅನುಭವ, ಬಡತನದ ಏಳುಬೀಳುಗಳು, ಸಮಕಾಲೀನ ಪ್ರಜ್ಞೆ, ಸಾಮಾಜಿಕ ಕಳಕಳಿ ಸಮಾಜದ ಜ್ವಲಂತ ಸಮಸ್ಯೆಗಳಾದ ಬಾಲ್ಯವಿವಾಹ, ವಿಧವಾ ವಿವಾಹ, ಮಠಾಧಿಪತಿಗಳ ಅನೈತಿಕತೆ ಮತ್ತು ನಿರಂಕುಶತೆ, ಅಧಿಕಾರಿ ವರ್ಗದ ದರ್ಪ ಹಾಗೂ ಸ್ವಾರ್ಥ ಮಂತಾದ ಸಮಸ್ಯೆಗಳಿಗೆ ಕಾದಂಬರಿಗಳು ಸ್ಪಂದಿಸುತ್ತವೆ. ಈ ಸ್ಪಂದನದ ಹಿಂದೆ ಪತಿತ ಸಮಾಜವನ್ನು ಎತ್ತುವ, ಚೊಕ್ಕಗೊಳಿಸುವ ಕಾಳಜಿ ಇರುತ್ತವೆ. ಹಾಗಾಗಿ ಹೆಚ್ಚಾಗಿ ಕನ್ನಡ ಸಾಹಿತ್ಯದಲ್ಲಿ ಆರಂಭದ ಕಾದಂಬರಿಕಾರರಿಂದ ಇತ್ತೀಚಿನ ಕಾದಂಬರಿಕಾರರು ಹೆಣ್ಣನ್ನು ಕೇಂದ್ರೀಕರಿಸಿ ಕಾದಂಬರಿಯನ್ನು ರಚಿಸಿರುವುದನ್ನು ನೋಡಬಹುದು ಮತ್ತು ಅವಳ ಸಮಸ್ಯೆಯನ್ನು

ಬಗೆಹರಿಸುವ ನಿಟ್ಟಿನಲ್ಲಿ ಕಥೆ ಸಾಗುವಂತಹದ್ದು ನೋಡುತ್ತೇವೆ. ಕೆಲವೊಂದು ಬಾರಿ ವ್ಯವಸ್ಥೆಯ ವಿರುದ್ಧ ಹೋರಾಟದ ಧ್ವನಿಯನ್ನು ಕಾಣುತ್ತೇವೆ. ಹಾಗಾಗಿ ನಿರ್ದಿಷ್ಟವಾಗಿ ಕಾದಂಬರಿಗಳ ಅಧ್ಯಯನವನ್ನು ಅದು ಸ್ತ್ರೀ ದೃಷ್ಟಿಕೋನದಿಂದ ನೋಡುವುದು ಉಚಿತವೆನಿಸುತ್ತದೆ. ಉದಾಹರಣೆಗಳ ಮೂಲಕ ಹೇಳುವುದಾದರೆ ಕಾದಂಬರಿಗಳ ಸ್ವರೂಪ ಈ ರೀತಿ ಇದೆ.

ಗುಲ್ವಾಡಿ ವೆಂಕಟರಾಯರ ಇಂದಿರಾಬಾಯಿ ಕಾದಂಬರಿಯ ಇಂದಿರಾಬಾಯಿ ಪಾತ್ರ ಸಂಪೂರ್ಣವಾಗಿ ಸಮಾಜದ ಕಟ್ಟುಪಾಡುಗಳಿಂದ ಬಿಡಿಸಿಕೊಂಡು ಆಧುನಿಕ ವಿದ್ಯೆ ಕಲಿತು ವಿಧವೆಯಾಗಿದ್ದರೂ ಕೂಡ ಹಿರಿಯರು ಮರುಮದುವೆಗೆ ಇಷ್ಟವಿದೆಯೇ ಎಂದು ಕೇಳಿದಾಗ, ಮರು ಮಾತನಾಡದೆ ಒಪ್ಪುತ್ತಾಳೆ. ಧಾರ್ಮಿಕ ವಿಧಿವಿಧಾನಗಳ ಮಠದ ವ್ಯವಸ್ಥೆ, ಕ್ರಾಂತಿಕಾರರ ಬದಲಾವಣೆ, ಅಂಬಾಬಾಯಿಯ ಪಾತ್ರ, ಜಲಜಾಕ್ಷಿಯ ಪಾತ್ರ ಪ್ರಮುಖ ಪಾತ್ರ ವಹಿಸುತ್ತದೆ.

ಬೋಳಾರ ಬಾಬುರಾಯರ ವಾಗ್ದೇವಿ, ಅಣ್ಣಾಜಿರಾವ್ ಅವರ ರೋಹಿಣಿ, ಕೆರೂರು ವಾಸುದೇವಾಚಾರ್ಯರ ಇಂದಿರಾ, ಎಂ.ಎಸ್.ಪುಟ್ಟಣ್ಣನವರ ಮಾಡಿದುಣ್ಣೊ ಮಹಾರಾಯ, ತಿರುಮಲಾಂಬಾರ ವಿರಾಗಿಣಿ, ನಭಾ, ಪೂರ್ಣಕಲಾ, ವಿರಾಗಿಣಿ, ಮಾತೃನಂದಿನಿ, ಗಿರಿಜಾಬಾಯಿ, ದೇವಡು ಅವರ ಅಂತರಂಗ, ಮಿರ್ಜಿ ಅಣ್ಣಾರಾಯರ ನಿಸರ್ಗ, ಶಿವರಾಮಕಾರಂತರ ಸರಸಮ್ಮನ ಸಮಾಧಿ, ಮರಳಿ ಮಣ್ಣಿಗೆ, ಬೆಟ್ಟದ ಜೀವ, ಕಲ್ಯಾಣಮ್ಮನವರ ಪ್ರಿಯಂವದ, ಸುಖಲತಾ, ಅನಕೃ ಅವರ ಸಂಧ್ಯಾರಾಗ, ಉದಯರಾಗ, ಮಂಗಳಸೂತ್ರ, ಹೊಸಲು ದಾಟಿದ ಹೆಣ್ಣು, ಕುವೆಂಪುರವರ ಕಾನೂನು ಸುಬ್ಬಮ್ಮ ಹೆಗ್ಗಡಿತಿ, ಮಲೆಗಳಲ್ಲಿ ಮದುಮಗಳು, ತ.ರಾ.ಸು. ಅವರ ಹಂಸಗೀತೆ, ಬೆಂಕಿಯ ಬಲೆ, ಬಿಡುಗಡೆಯ ಬೇಡಿ, ಶಂಕರಮೊಕಶಿಯವರ ಗಂಗವ್ವ-ಗಂಗಾಮಾಯಿ, ಯು.ಆರ್.ಅನಂತಮೂರ್ತಿಯವರ ಸಂಸ್ಕಾರ, ಯಶವಂತ ಚಿತ್ತಾಲರ ಶಿಕಾರಿ, ಕಂಬಾರರ ಸಿಂಗಾರೆವ್ವ ಮತ್ತು ಅರಮನೆ, ದೇವನೂರ ಮಹಾದೇವ ಅವರ ಕುಸುಮಬಾಲೆ, ಲಂಕೇಶರ ಮುಸ್ಸಂಜೆಯ ಕಥಾಪ್ರಸಂಗ, ಶಾಂತಿನಾಥ ದೇಸಾಯಿ ಅವರ ಮುಕ್ತಿ, ಗೀತಾ ನಾಗಭೂಷಣರ ಬದುಕು, ಹಸಿಮಾಂಸ ಹದ್ದುಗಳು, ಮಾಪುರತಾಯಿ ಮಕ್ಕಳು, ಮ.ನ.ಜ. ಅವರ ಮಾಗಿ, ಬರಗೂರ ರಾಮಚಂದ್ರಪ್ಪನವರ ಶಬರಿ, ಸೂರ್ಯ, ಉಕ್ಕಿನಕೋಟೆ ಮುಂತಾದವು.

ಮಹಿಳಾ ಲೇಖಕಿಯರಲ್ಲಿ ಸಾಮಾಜಿಕ ಸಮಸ್ಯೆಗಳನ್ನೊಳಗೊಂಡಂತೆ ಕಾದಂಬರಿ ಬರೆದವ ರೆಂದರೆ ಎಚ್.ವಿ.ಸಾವಿತ್ರಮ್ಮ, ತ್ರಿವೇಣಿ, ಅನುಪಮ ನಿರಂಜನ ಮುಂತಾದವರು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀ ಅನುಭವಿಸುವ ಸಂಕಟಗಳನ್ನು ತ್ರಿವೇಣಿಯವರು ತಮ್ಮ ಬರಹಗಳಲ್ಲಿ ಹೆಣ್ಣಿನ ಸ್ವತಂತ್ರ ವ್ಯಕ್ತಿತ್ವದ ಆಸೆ, ಆಕಾಂಕ್ಷೆಗಳನ್ನು ಹತ್ತಿಕ್ಕುವ ಪುರುಷ ಸಮಾಜವನ್ನು ಚಿತ್ರಿಸಿದ್ದಾರೆ.

ಹಲವಾರು ಸಾಮಾಜಿಕ ಸಮಸ್ಯೆಗಳನ್ನು ಆಕರ್ಷಕವಾಗಿ ಚಿತ್ರಿಸಿರುವ ಕಾದಂಬರಿಕಾರರು ಸ್ತ್ರೀ ಪಾತ್ರಗಳ ದಿಟ್ಟತನವನ್ನು ಮನ ಸೆಳೆಯುವಂತೆ ಚಿತ್ರಿಸಿದ್ದಾರೆ. ಬಹುಮಟ್ಟಿಗೆ ತ್ರಿವೇಣಿಯವರ ಕಾದಂಬರಿಗಳಲ್ಲಿ ಸ್ತ್ರೀ ಸಮಸ್ಯೆಗಳು ಮಾನಸಿಕವಾದ ಸಹಾನುಭೂತಿ ಗಿಟ್ಟಿಸುವಂತಹವು. ಕೀಲು ಗೊಂಬೆ ಕಾದಂಬರಿಯ ಅಜ್ಜ, ತಾಯಿ, ಮಗಳು ಇಂತಹ ಪಾತ್ರಗಳು ಸ್ತ್ರೀ ಶಿಕ್ಷಣದ ಅವಶ್ಯಕತೆಯನ್ನು ಕುರಿತಂತೆ ಹಲವು ಕಾದಂಬರಿಗಳಲ್ಲಿ ತ್ರಿವೇಣಿಯವರು ಚಿತ್ರಿಸಿದ್ದಾರೆ.

ಸ್ತ್ರೀಯರ ವಿವಾಹ ಪೂರ್ವ ಮತ್ತು ವಿವಾಹನಂತರದ ಸಮಸ್ಯೆಗಳನ್ನು 'ಮೊದಲ ಹೆಜ್ಜೆ' ಸೋತು ಗೆದ್ದವಳು, ತಾವರೆಯ ಕೊಳ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಅನುಪಮಾ ನಿರಂಜನ ಅವರ 'ಅನಂತಗೀತೆ' ಇದರ ವಸ್ತು ಪ್ರೇಮಕಥೆ, ಅನಂತರದ್ದು 'ಸಂಕೋಲೆಯೊಳಗಿಂದ' ಇಲ್ಲಿ ಗಂಡನ ಪ್ರೀತಿಯಿಂದ ವಂಚಿತಳಾದ ಹೆಣ್ಣೊಬ್ಬಳ ಚಿತ್ರಣವಿದೆ. 'ಚಿತ್ರಮೋಹನ' ಕಾದಂಬರಿಯಲ್ಲಿ ವಿಧವೆಯೊಬ್ಬಳ ದಾರುಣಕತೆ ಇದೆ. ಹೀಗೆ ಕಾದಂಬರಿಗಳಲ್ಲಿ ಎಲ್ಲಾ ಲೇಖಕರು ಸ್ತ್ರೀಯನ್ನು ಕೇಂದ್ರಬಿಂದುವಾಗಿರಿಸಿಕೊಂಡು ಸ್ತ್ರೀ ಪರಚಿಂತನೆ, ಸ್ತ್ರೀಯರಲ್ಲಿ ಆತ್ಮ ವಿಶ್ವಾಸ ಮೂಡಿಸುವುದು, ಅನ್ಯಾಯದ ವಿರುದ್ಧ ಹೋರಾಡುವುದಕ್ಕೆ ಚಾಲನೆ ಕೊಡುವುದು. ಮೊದಲಾದ ಅಂಶಗಳು ಇಡೀ ಕಾದಂಬರಿಗಳಲ್ಲಿ ಕಾಣುತ್ತವೆ. ಹಾಗಾಗಿ ಕಥೆ, ಕಾವ್ಯಕ್ಕಿಂತ ಕಾದಂಬರಿಗಳನ್ನು ಸ್ತ್ರೀದೃಷ್ಟಿಕೋನದಿಂದ ನಿರ್ದಿಷ್ಟವಾಗಿ ನೋಡುವ ಅಗತ್ಯವಿದೆ.

ಕಾದಂಬರಿಗಳಲ್ಲಿ ಸುಧಾರಣಾವಾದಿ ಚಳವಳಿಯ ಸ್ತ್ರೀಯ ಪಾರಂಪರಿಕ ಪಾತ್ರಕಲ್ಪನೆಯನ್ನು ತಿಳಿಸಿಕೊಂಡೇ ಸುಧಾರಿತ ಸ್ತ್ರೀಯ ಪಾತ್ರದ ಮಾದರಿಯನ್ನು ಹೊಸತಾಗಿ ರೂಪಿಸಿತು. ಶಿಕ್ಷಣವನ್ನು ಪಡೆದು ಮಹಿಳೆ ತನ್ನ ಕೌಟುಂಬಿಕ ಕರ್ತವ್ಯಗಳನ್ನು ಮತ್ತು ಚೆನ್ನಾಗಿ ನಿರ್ವಹಿಸಲು ಶಕ್ತಳೆಂಬ ಅಭಿಪ್ರಾಯವು ಹೆಚ್ಚು ಜನರಿಂದ ಸ್ವೀಕೃತವಾಯಿತು. ಹಿಂದೂ ಸಂಸ್ಕೃತಿ ಪರಂಪರೆಯ ಬಗ್ಗೆ ಹೆಮ್ಮೆ ಗೌರವಾದರಗಳನ್ನುಂಟು ಮಾಡಲು ಬ್ರಹ್ಮ ಸಮಾಜ, ಆರ್ಯ ಸಮಾಜ, ಪ್ರಾರ್ಥನಾ ಸಮಾಜಗಳು ಶ್ರಮಿಸಿದವು. ಸಾಂಸ್ಕೃತಿಕ ರಾಷ್ಟ್ರೀಯತೆಯ ಭಾವನೆಯನ್ನು ಕಟ್ಟುವ ಯತ್ನದಲ್ಲಿ ಸತಿಪದ್ಧತಿ, ಬಾಲ್ಯವಿವಾಹ, ವೈಧವ್ಯ ಪದ್ಧತಿಗಳನ್ನು, ಹಿಂದೂ ಸ್ತ್ರೀಯ ಆದರ್ಶದ ಪ್ರತಿಬಿಂಬಗಳನ್ನು ವೈದಿಕ ಸಾಹಿತ್ಯ ಇತಿಹಾಸ ಪುರಾಣಗಳಿಂದ ಹುಡುಕಿ ತಂದು ಕಟ್ಟಿಕೊಂಡರು. ಮಹಿಳೆಯರ ಪಾರಂಪರಿಕ ಪಾತ್ರವನ್ನು ಬದಲಾಯಿಸುವುದಕ್ಕಿಂತ ಅದನ್ನು ಮತ್ತೊಂದು ರೀತಿಯಲ್ಲಿ ಗಟ್ಟಿಗೊಳಿಸಲಾಯಿತು. ಹೀಗೆ ಸುಧಾರಣಾವಾದಿ ಚಳವಳಿಯು ಕಾದಂಬರಿಗಳಲ್ಲಿ ಬ್ರಿಟಿಷ್ ಆಡಳಿತದಿಂದ ಹಾಗೂ ಸುಧಾರಣಾವಾದದ ಪ್ರಭಾವದಿಂದ ಮಹಿಳೆಯರ ಸಮಸ್ಯೆಗಳನ್ನು ಪ್ರಧಾನವಾಗಿ ಚಿತ್ರಿಸಿದ್ದನ್ನು ಕಾಣುತ್ತೇವೆ. ಇದಿಷ್ಟೇ ಅಲ್ಲದೆ ಕೆಳವರ್ಗದ ಮಹಿಳೆಯರ ಬದುಕನ್ನು ತಮ್ಮ ಬರಹದಲ್ಲಿ ದಾಖಲಾಗಿಸಿದ್ದಾರೆ.

## ೩.೪. ಸ್ವಾತಂತ್ರ್ಯಪೂರ್ವ ಕನ್ನಡ ಕಾದಂಬರಿಗಳನ್ನು ಸ್ತ್ರೀ ಕೇಂದ್ರಿತ ನೆಲೆಯಲ್ಲಿ ಅಧ್ಯಯನ ಮಾಡುವ ಅಗತ್ಯವಿದೆ. ಹಾಗೂ ಅದರ ಸ್ವರೂಪ

ಸ್ವಾತಂತ್ರ್ಯಪೂರ್ವ ಕನ್ನಡ ಕಾದಂಬರಿಗಳ ಮೊದಲ ಹಂತದ ಬೆಳವಣಿಗೆಯನ್ನು ನೋಡಿದರೆ ಸ್ತ್ರೀ ಜೀವನವನ್ನು ಕುರಿತ ಕಾದಂಬರಿಗಳೇ ಹೆಚ್ಚಾಗಿ ಬಂದಿವೆ ಮತ್ತು ಇಂಗ್ಲಿಷ್ ಸಾಹಿತ್ಯದ ಪ್ರಭಾವ, ವಾಸ್ತವತಾವಾದ, ಸುಧಾರಣಾವಾದದ ಪ್ರಭಾವ, ಮೂಢನಂಬಿಕೆಗಳ ಖಂಡನೆ, ಭ್ರಷ್ಟಾಚಾರದ ಟೀಕೆ, ಮಾನವೀಯ ಮೌಲ್ಯಗಳು, ಆದರ್ಶವಾದ ಮುಂತಾದವು ಎದ್ದು ಕಾಣುತ್ತವೆ. ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಬೋಳಾರ ಬಾಬುರಾಯರ 'ವಾಗ್ದೇವಿ', ಕೆರೂರು ವಾಸುದೇವಾಚಾರ್ಯರ 'ಇಂದಿರೆ', ಎಂ.ಎಸ್.ಪುಟ್ಟಣ್ಣನವರ ಮಾಡಿದುಣ್ಣೋ ಮಹಾರಾಯ. ತಿರುಮಲಾಂಬಾ ಅವರ 'ಸುಶೀಲೆ', ನಭಾ, ವಿರಾಗಿಣಿ, ಮಾತೃ ನಂದಿನಿ, ಕಲ್ಯಾಣಮ್ಮನವರ 'ಪ್ರಿಯಂವದೆ', 'ನಿರ್ಭಾಗ್ಯವನಿತೆ', ಸಂತೂಬಾಯಿ ನೀಲಗಾರರ ಸದ್ಗುಣಿ ಕೃಷ್ಣಾಬಾಯಿ, ಶಿವರಾಮ ಕಾರಂತರ 'ಕನ್ಯಾಬಲಿ', ಸರಸಮ್ಮನ ಸಮಾಧಿ, ಕುವೆಂಪು ಅವರ ಕಾನೂನು ಹೆಗ್ಗಡಿತಿ, ಮಿರ್ಜಿ ಅಣ್ಣಾರಾವ್ ಅವರ 'ನಿಸರ್ಗ' ಹೀಗೆ ಸ್ತ್ರೀ ಜೀವನವನ್ನೆ ಮುಖ್ಯ ವಸ್ತುವಾಗಿರಿಸಿಕೊಂಡು ರಚನೆಯಾಗಿವೆ. ಇಲ್ಲಿಯ ವಿಶೇಷತೆ ಎಂದರೆ ಮೇಲೆ ಉದಾಹರಿಸಲಾದ ಎಲ್ಲಾ ಕಾದಂಬರಿಗಳು ಸ್ತ್ರೀ ಕೇಂದ್ರಿತವಾಗಿವೆ. ಆ ಕಾಲದ ಕನ್ನಡ ಕಾದಂಬರಿಕಾರರಿಗೆ ಸ್ತ್ರೀ ಜೀವನದ ಮೇಲೆ ಹೆಚ್ಚಿನ ಆಸಕ್ತಿ ಪ್ರಕಟವಾಗಿರುವುದು ಕುತೂಹಲದ ಸಂಗತಿಯಾಗಿದೆ. ಆರಂಭದ ಕಾದಂಬರಿಕಾರರು ಈ ರೀತಿ ಸ್ತ್ರೀಯರ ಸ್ಥಿತಿಗಳನ್ನು ಆಪ್ತವಾಗಿ ಚಿತ್ರಿಸಿದ್ದಾರೆ. ಮುಂದೆ ಬಂದ ಎಲ್ಲಾ ಲೇಖಕರಿಗೆ ಸ್ತ್ರಿಯನ್ನು ಹೆಚ್ಚು ಮಾನವೀಯವಾಗಿ ಮತ್ತು ಗಂಭೀರವಾಗಿ ನೋಡುವಂತೆ ಒಂದು ಭೂಮಿಕೆಯನ್ನು ಸಿದ್ಧಪಡಿಸುತ್ತಾರೆ.

ಕನ್ನಡದ ಮೊದಲ ಸಾಮಾಜಿಕ ಕಾದಂಬರಿ ಇಂದಿರಾಬಾಯಿ ಮತ್ತು ವಾಗ್ದೇವಿಯಲ್ಲಿ ವಿಡಂಬನೆ ಮತ್ತು ವಿಮರ್ಶೆಗಳ ಮೂಲಕ ಮಠಾಧಿಪತಿಗಳನ್ನು ಟೀಕಿಸಿರುವುದು ವಿಶೇಷ ಗಮನಾರ್ಹ. ಕರ್ನಾಟಕದಲ್ಲಿ ಮೊದಲು ಆಧುನಿಕ ಶಿಕ್ಷಣ ಪಡೆದು ಬ್ರಹ್ಮಸಮಾಜದ ಪ್ರಭಾವಕ್ಕೆ ಒಳಗಾಗಿ ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ಕೇಶಮುಂಡನೆ, ಸಮುದ್ರಯಾನ, ಬಹುಪತ್ನಿತ್ವ ಮತ್ತು ಅಸ್ಪೃಶ್ಯತೆ ಮೊದಲಾದವುಗಳನ್ನು ಬೋಳಾರ ಬಾಬುರಾಯ, ಗುಲ್ವಾಡಿ ವೆಂಕಟರಾವ್, ವಾಸುದೇವಚಾರ್ಯ, ಎಂ.ಎಸ್.ಪುಟ್ಟಣ್ಣ ತೀಕ್ಷ್ಣವಾಗಿ ಟೀಕಿಸಿದರು.

ಕೆರೂರು ವಾಸುದೇವಾಚಾರ್ಯರ 'ಇಂದಿರೆ' ಕಾದಂಬರಿಯಲ್ಲಿ ಪುನರ್ವಿವಾಹದ ಪ್ರಶ್ನೆ ಮುಖ್ಯವಾಗುತ್ತದೆ. ಮಾಡಿದುಣ್ಣೋ ಮಹಾರಾಯ ಕಾದಂಬರಿಯಲ್ಲಿ ಸಂಪ್ರದಾಯ, ಹಳೆಯ ಮೌಢ್ಯಗಳು ಹಿಂದೆ ಸರಿಯುತ್ತವೆ. ಅರಾಜಕತೆ, ಭ್ರಷ್ಟಚಾರ, ಮೋಸ, ವಂಚನೆಗಳನ್ನು

ಟೀಕಿಸಿರುವುದಲ್ಲದೆ ಸ್ತ್ರೀಯರ ಬದುಕಿನ ಹಳೆಯ ಮೌಲ್ಯಗಳಾದ ಪಾತಿವ್ರತ್ಯ, ವಿಧೇಯತೆ, ತ್ಯಾಗ, ಸಹನೆ, ಅಲ್ಲದೆ ಸೇವಾ ಮನೋಭಾವಗಳನ್ನು ಎಂ.ಎಸ್.ಪುಟ್ಟಣ್ಣ ಚಿತ್ರಿಸಿದ್ದಾರೆ.

ಆರಂಭದ ಕನ್ನಡ ಕಾದಂಬರಿಯ ಸಂದರ್ಭದಲ್ಲಿ ಸ್ತ್ರೀಯರಿಂದ ಸಾಹಿತ್ಯ ರಚನೆಯಾದುದು ಬಹಳ ಕಡಿಮೆ. ಸಂತೂಬಾಯಿ ನೀಲಗಾರ ಅವರ 'ಸದ್ಗುಣಿ ಕೃಷ್ಣಾಬಾಯಿ ಅಥವಾ ಉತ್ತಮ ಗೃಹಿಣಿ' ಮತ್ತು ಸಮಾಜದಿಂದ ಸಿಡಿದು ನಿಂತು ಕಾದಂಬರಿ ರಚನೆಗೆ ಕೈ ಹಾಕಿದ ನಂಜನಗೂಡು ತಿರುಮಲಾಂಬಾ ಅಪರೂಪದ ಲೇಖಕಿಯಷ್ಟೇ ಅಲ್ಲ, ಕನ್ನಡ ಸಾಹಿತ್ಯದ ಮೊದಲ ಸ್ತ್ರೀ ವಾದಿಯಾಗಿ ನಿಲ್ಲುತ್ತಾಳೆ. ನಭಾ, ವಿರಾಗಿಣಿ, ಮಾತೃನಂದಿನಿ, ಮುಂತಾದ ಕಾದಂಬರಿಗಳು ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ಪ್ರೇಮವಿವಾಹ, ವರದಕ್ಷಿಣೆ ಹಾಗೂ ವಿಧವಾ ಸಮಸ್ಯೆಗಳನ್ನು ಬಿಚ್ಚಿಡುತ್ತವೆ. ವಿವಾಹಿತ ಸ್ತ್ರೀಯೊಬ್ಬಳು ಪ್ರತಿಕೂಲ ಸಂದರ್ಭದಲ್ಲೂ ಸತೀತ್ವ ರಕ್ಷಣೆ ಮಾಡಿಕೊಂಡ ಆದರ್ಶ 'ಸುಶೀಲೆ' ಕಾದಂಬರಿಯಲ್ಲಿದೆ. ಗಂಡ ಎಷ್ಟೇ ದುಷ್ಟನಾಗಿದ್ದರೂ ಎಲ್ಲಾ ನೋವನ್ನು ಅನುಭವಿಸಿ ಅವನ ಚರಣದಾಸಿಯಾಗಿ ಮುಕ್ತಿ ಪಡೆಯಲಿಚ್ಚಿಸುವುದು ಈ ಕಾದಂಬರಿಯ ಮುಖ್ಯ ಉದ್ದೇಶ. ಇದೇ ಧೋರಣೆಯುಳ್ಳ ನಭಾ ಕಾದಂಬರಿಯ ಬಾಲವಿಧವೆ ನಭಾ ವೈಧವ್ಯವನ್ನು ಪೂರ್ವಜನ್ಮದ ಫಲವೆಂದು ನೆಚ್ಚಿಕೊಂಡು ಬದುಕುವಳು. ವಿಧವೆಯಾಗಿಯೂ ತನ್ನ ಇಡೀ ಜೀವನವನ್ನು ಅನಾಥ ಸ್ತ್ರೀಯರ ಸುಧಾರಣೆಗಾಗಿ ಮುಡುಪಿಟ್ಟು, ಸತೀತ್ವವನ್ನು ಮೆರೆಯುವ ಸಂಪ್ರದಾಯವಾದಿ ಸ್ಥಾಪಿತ ನಿಲುವು ಇಲ್ಲಿದೆ. ಇವರ ಎಲ್ಲಾ ಕಾದಂಬರಿಗಳಿಗಿಂತ ಒಂದು ಹೆಜ್ಜೆ ಮುಂದಿಡುವ 'ಮಾತೃ ನಂದಿನಿ' ಬಾಲ್ಯವಿವಾಹ, ವರದಕ್ಷಿಣೆಗಳಂತಹ ದುಷ್ಟ ಪದ್ಧತಿಗಳನ್ನು ವಿರೋಧಿಸುತ್ತದೆ.

ಆರ್.ಕಲ್ಯಾಣಮ್ಮ ಇವರ 'ಪ್ರಿಯಂವದ' ಮತ್ತು 'ನಿರ್ಭಾಗ್ಯವನಿತೆ' ಕಾದಂಬರಿಯಲ್ಲಿ ಸಮಾಜದ ಜ್ವಲಂತ ಚಿತ್ರಣಗಳಿವೆ. ಅತ್ತೆ-ಸೊಸೆಯರ ಮಧ್ಯದ ಜಗಳ, ಬಾಲ್ಯವಿವಾಹ ಹಾಗೂ ವರದಕ್ಷಿಣೆಯಂತಹ ಪಿಡುಗುಗಳನ್ನು ಪ್ರಿಯಂವಧ ಕಾದಂಬರಿ ಬಿಚ್ಚಿಟ್ಟರೆ ಬಾಲ್ಯವಿವಾಹ ಹಾಗೂ ವೈಧವ್ಯದ ದುಷ್ಪರಿಣಾಮಗಳುಳ್ಳ 'ನಿರ್ಭಾಗ್ಯ ವನಿತೆ' ಕಾದಂಬರಿ ಜಡ ಸಮಾಜದ ವಿರೋಧಗಳ ನಡುವೆಯೂ ವಿಧವಾ ವಿವಾಹವನ್ನು ಯಶಸ್ವಿಯಾಗಿಸಿದೆ.

ಕುವೆಂಪು ಅವರ ಕಾನೂರು ಹೆಗ್ಗಡಿತಿ, ಹೆಸರೇ ಸೂಚಿಸುವಂತೆ ಕಾನೂರಿನ ಗೌಡರಾದ ಚಂದ್ರಯ್ಯ ಗೌಡರ ಕುಟುಂಬವನ್ನು ಕುರಿತಾದದ್ದು. ಈ ಕುಟುಂಬದ ಮುಖ್ಯ ಪಾತ್ರವಾದ ಸುಬ್ಬಮ್ಮನ ಸಂಕೀರ್ಣ ವ್ಯಕ್ತಿತ್ವವನ್ನು ಕಲಾತ್ಮಕವಾಗಿ ಚಿತ್ರಿಸಿದ್ದಾರೆ. ಬಡ ಕುಟುಂಬದಲ್ಲಿ ಬೆಳೆದ ಸುಬ್ಬಮ್ಮ ವಯಸ್ಸಾದ ಮತ್ತು ವಿಧುರನಾದ ವರನಿಗೆ ಮೂರನೆಯ ವಿವಾಹದ ವಧುವಾಗುತ್ತಾಳೆ. ಸುಬ್ಬಮ್ಮನಿಗೆ ಇದು ಇಷ್ಟವಾಗದಿದ್ದರೂ ಒಂದು ದೊಡ್ಡ ಮನೆಗೆ ಯಜಮಾನಿಯಾಗಬಹುದೆಂಬ

ಸಂತೋಷದಿಂದ ಒಪ್ಪುತ್ತಾಳೆ. ದಾರಿದ್ರ್ಯದಲ್ಲೇ ಹುಟ್ಟಿ ಬೆಳೆದ ಸುಬ್ಬಮ್ಮ ಅಸಂಸ್ಕೃತ ನಡೆ ನುಡಿಯಿಂದ ಬೆಳೆದಂತವಳು. ಅವಳಲ್ಲಿ ಸಂಸ್ಕೃತವಾದ ಸ್ತ್ರೀ ಸಹಜವಾದ ಔದಾರ್ಯ, ಗಾಂಭೀರ್ಯ, ನಯ ವಿನಯ, ಸಂಯಮ, ಸಂಚಲನಗಳು ಒಂದಿನಿತು ಇರಲಿಲ್ಲ ಎಂಬುದು ಕಾದಂಬರಿಕಾರರಿಗೆ ಮುಖ್ಯವಾದ ಸಂಗತಿಯಾಗುತ್ತದೆ. ಅನಂತರ ಸೀತೆಯ ಪಾತ್ರವು ಅತ್ಯಂತ ಕುತೂಹಲಕಾರಿಯಾದುದು. ತಾನು ಬಯಸಿದ್ದನ್ನು ಸಾಧಿಸಿಕೊಳ್ಳುವ ಪಾತ್ರ ಹೂವಯ್ಯನಂತಹ ವಿದ್ಯಾವಂತ, ಸುಸಂಸ್ಕೃತ ಪಾತ್ರದ ಪ್ರಭಾವಕ್ಕೆ ಸಿಲುಕಿ ಸೀತೆ ಸೂಕ್ಷ್ಮ ಹೃದಯದ ಭಾವ ಜೀವಿಯಾದ ವ್ಯಕ್ತಿಯಾಗಿ ಪರಿವರ್ತಿತಳಾಗುತ್ತಾಳೆ.

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಮಲೆನಾಡಿನ ವಿವಿಧ ಸ್ತರಗಳಿಗೆ ಸೇರಿದ ಮದುಮಕ್ಕಳ ಪ್ರೇಮದ ಬದುಕು, ಇಲ್ಲಿನ ಪಾತ್ರಗಳು ವೈಯಕ್ತಿಕ ಬದುಕಿನ ಮಿತಿಗಳನ್ನು ಮೀರುತ್ತಲೇ ಆಗಾಧವಾದ ಹೊಸ ಹುಟ್ಟು ಪಡೆಯುತ್ತದೆ. ಕ್ರೈಸ್ತಧರ್ಮದ ಪ್ರಭಾವದಿಂದ ಮಲೆನಾಡಿನ ಹೆಣ್ಣುಗಳು ಅನುಭವಿಸುವ ಯಾತನೆಗಳು ಕಾದಂಬರಿಯಲ್ಲಿ ನಿರ್ದಿಷ್ಟವಾಗಿ ಮೂಡಿಬಂದಿವೆ.

ಕನ್ನಡ ಕಾದಂಬರಿ ಪರಂಪರೆಯಲ್ಲಿ ಮೊದಲಿಗರಾದ ಕಾರಂತರು ವೈಚಾರಿಕ ನೆಲೆಯಿಂದ ಹೆಣ್ಣು ಗಂಡಿನ ಸಂಬಂಧವನ್ನು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಕಾರಂತರ ಕಾದಂಬರಿಗಳಲ್ಲಿ ಗ್ರಾಮೀಣ ಸಂಸ್ಕೃತಿಯನ್ನು, ಗ್ರಾಮೀಣ ಮಹಿಳೆಯರ ಕಷ್ಟ-ಸುಖಗಳನ್ನು ಹಾಗೂ ಗ್ರಾಮೀಣ ಮಹಿಳೆಯರ ಬದುಕಿನ ಮೌಲ್ಯಗಳನ್ನು ಕಾಣುತ್ತೇವೆ. ಮುಂದುವರೆದು ವಿವಾಹದ ಸ್ವರೂಪಗಳು ಆ ಚೌಕಟ್ಟಿನಲ್ಲಿ ಬರುವ ಗರತಿಯರು ಮತ್ತು ಆ ಚೌಕಟ್ಟಿನಾಚೆ ಬರುವ ವೇಶ್ಯೆಯರು ಇವರ ಬದುಕಿನ ಅವ್ಯವಸ್ಥೆಯ ಬಗ್ಗೆ ಹೆಚ್ಚಿನ ಗಮನಹರಿಸಿದೆ.

'ಮರಳಿ ಮಣ್ಣಿಗೆ' ಕಾದಂಬರಿ ಮದುವೆಯ ವರ್ಣನೆಯಿಂದ ಆರಂಭವಾಗುತ್ತದೆ. ಹೆಣ್ಣಿನ ಬದುಕನ್ನು ಭವಿಷ್ಯವನ್ನು ನಿರ್ಧಾರ ಮಾಡುವ ಮದುವೆ ಕಾದಂಬರಿಯಲ್ಲಿ ಸಂಕೇತವಾಗಿ ಬಳಕೆಯಾಗಿದೆ. ಪಾರ್ವತಿಯರ ಮದುವೆಯಿಂದ ಆರಂಭವಾಗುವ ಈ ಕಾದಂಬರಿಯಲ್ಲಿ ಪಾರ್ವತಿಯ ಜೀವನ ಹೋರಾಟದಲ್ಲಿ ಕಹಿಯೇ ಕಂಡುಬರುತ್ತದೆ. ಹೀಗೆ ಸರಸ್ವತಿ, ಪಾರ್ವತಿ, ಸತ್ಯಭಾಮ, ನಾಗವೇಣಿಯರ ಬದುಕಿನ ಹಲವು ಮಗ್ಗಲುಗಳನ್ನು ನೋವಿನ ಪದರುಗಳನ್ನು ತೀರ ಆಪ್ತವಾಗಿ ಕಾರಂತರು ಚಿತ್ರಿಸಿದ್ದಾರೆ. ಸರಸಮ್ಮನ ಸಮಾಧಿ, ವಿವಾಹ ಜೀವನದ ಸಮಸ್ಯೆಯ ಮಗ್ಗಲನ್ನು ತಿಳಿಸುವಂತದ್ದು. ಮಿರ್ಜಿ ಅಣ್ಣಾರಾಯರ 'ನಿಸರ್ಗ' ಕಾದಂಬರಿಯಲ್ಲಿ ಆದರ್ಶಪ್ರೇಮದ ನಂಬಿಕೆಗೂ, ವಿವಾಹ ಸಂಸ್ಥೆಗೂ ಉಂಟಾಗುವ ಸಂಘರ್ಷದ ನಯವಾದ ಚಿತ್ರಣವಿದೆ. ಕೃತಿಯ ಉದ್ದಕ್ಕೂ ಲಿಂಗಭೇದದಿಂದ ಉದ್ಭವಿಸುವ ದ್ವಿಸ್ತರ ನ್ಯಾಯದ ಅಂಶಗಳ ಪ್ರಸ್ತಾಪವಿದೆ.

ಹೀಗೆ ಸ್ವಾತಂತ್ರ್ಯ ಪೂರ್ವದಲ್ಲಿ ಲೇಖಕರ ದೃಷ್ಟಿಕೋನ ವಿಭಿನ್ನತೆಯಿದ್ದರೂ ಅವರು ಆಯ್ಕೆ ಮಾಡಿಕೊಂಡ ವಸ್ತು ಹೆಚ್ಚು ಕಡಿಮೆ ಸ್ತ್ರೀಯರೇ ಆಗಿದ್ದಾರೆ ಮತ್ತು ಕಾದಂಬರಿಕಾರರ ಅಭಿವ್ಯಕ್ತಿಯಲ್ಲಿ ಪಾತ್ರ ಚಿತ್ರಣದಲ್ಲಿ ಸಾಂಸ್ಕೃತಿಕ ಒಳನೋಟಗಳೊಂದಿಗೆ ವೈಚಾರಿಕ ಹೊಳಹು ಇರುವುದನ್ನು ಕಾಣುತ್ತೇವೆ. ಹೆಚ್ಚು ಕಡಿಮೆ ಸ್ವಾತಂತ್ರ್ಯ ಪೂರ್ವ ಸ್ತ್ರೀ ಕೇಂದ್ರೀತ ಕಾದಂಬರಿಗಳು ಸ್ತ್ರೀ ಜೀವನ ಸ್ವರೂಪವನ್ನು ಕೌಟುಂಬಿಕ, ಸಾಮಾಜಿಕ, ಆರ್ಥಿಕ ಅಂಶಗಳು ಒಳಗೊಂಡಿವೆ ಮತ್ತು ಸ್ತ್ರೀಯರ ಮೇಲೆ ಮುಗಿಬಿದ್ದಿರುವ ಕಟ್ಟುಪಾಡುಗಳು ಸ್ತ್ರೀಯರನ್ನು ಸುತ್ತುವರೆದಿರುವ ಸಮಸ್ಯೆಗಳ ಕುರಿತಾಗಿ ಇಲ್ಲಿ ಚಿಂತನೆಗಳು ಕಂಡುಬರುತ್ತವೆ. ಈ ಹಿನ್ನಲೆಯಲ್ಲಿ ಸ್ವಾತಂತ್ರ್ಯಪೂರ್ವ ಕಾದಂಬರಿಗಳನ್ನು ಸ್ತ್ರೀ ಕೇಂದ್ರಿತ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ.

* ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಸಮಾಜವನ್ನು ತಿದ್ದುವ ಮತ್ತು ಮುನ್ನಡೆಸುವ ಬಗ್ಗೆ ಚಿಂತನೆಗಳು ಪ್ರಕಟವಾಗಿವೆ.



* ಕನ್ನಡ ಕಾದಂಬರಿಕಾರು ಮಹಿಳೆಯ ಬದುಕಿನ ಬಗೆಗೆ ಮತ್ತು ಆಕೆಯ ಸಮಸ್ಯೆಗಳ ಬಗೆಗೆ ಅವರು ಯಾವ ಬಗೆಯ ಕಾಳಜಿಗಳನ್ನು ಇರಿಸಿಕೊಂಡಿದ್ದಾರೆ.
* ಸುಧಾರಣಾ ಮಾರ್ಗವನ್ನು ಅನುಸರಿಸಬೇಕೆಂಬ ಕಾಳಜಿ ಪ್ರಮುಖವಾಗಿ ಕಾಣುತ್ತೇವೆ.
* ಮಹಿಳೆಯರಿಂದ ರಚಿತವಾದ ಕಾದಂಬರಿಗಳಲ್ಲಿ ಸಂಪ್ರದಾಯಿಕ ಬದುಕಿನ ಬಗೆಗೆ ಹೆಚ್ಚಿನ ಶ್ರದ್ಧೆ ಇದೆ. ಆದರೂ ಕೆಲವು ಅಂಶಗಳಲ್ಲಿ ಸಂಪ್ರದಾಯಿಕ ಮತ್ತು ಆಧುನಿಕತೆಯ ಮುಖಾಮುಖಿ ಯಾಗುವ ಪ್ರಶ್ನೆ ಕಾಣುತ್ತೇವೆ.
* ಶಿಕ್ಷಣದ ಸೌಲಭ್ಯಗಳಿಂದ ವಂಚಿತರಾದ ಸ್ತ್ರೀಯರಿಗೆ ಶಿಕ್ಷಣ ದೊರಕಬೇಕೆಂಬುದು ಇಲ್ಲಿ ವ್ಯಕ್ತವಾಗುತ್ತದೆ.
* ಮಹಿಳೆಯರನ್ನು ಪುರುಷನ ನಂತರದ ಸ್ಥಾನದಲ್ಲಿರಿಸುವುದಕ್ಕಿಂತ ಸಮಾಜದಲ್ಲಿ ಸಮಾನ ಸ್ಥಾನಮಾನ ದೊರಕಿಸಿದರೆ ಸಾಮಾಜಿಕ ಪ್ರಗತಿ ಸಾಧ್ಯವೆಂಬ ಅಂಶವು ಇಲ್ಲಿ ಸೂಚಿತವಾಗಿದೆ.

## ೩.೫. ಸ್ವಾತಂತ್ರ್ಯಪೂರ್ವ ಕಾಲಾವಧಿ ತೆಗೆದುಕೊಳ್ಳಲು ಕಾರಣ ಹಾಗೂ ಅದರ ಸ್ವರೂಪ

ಸ್ವಾತಂತ್ರ್ಯಪೂರ್ವ ಕಾಲಘಟ್ಟವು ಈ ದೇಶದ ಸಾಂಸ್ಕೃತಿಕ ಸಂಚಲನದ ಅವಧಿಯಾಗಿದೆ ಮತ್ತು ೧೯೪೭ರ ಕಾಲವಿಭಜನೆ ಕೃತಕ ಅನಿಸಿದರೂ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯವಾಗಿ ಇದು ನಿರ್ಣಾಯಕ ಘಟ್ಟ.

ಹದಿನೆಂಟನೇ ಶತಮಾನದ ಅವಧಿಯಲ್ಲಿ ನಮ್ಮ ದೇಶದಲ್ಲಿ ಶಿಥಿಲಗೊಂಡ ರಾಜಕೀಯ ವ್ಯವಸ್ಥೆ, ಮೊಗಲ್ ಸಾಮ್ರಾಜ್ಯದ ನಾಶ, ಯುರೋಪಿಯನ್ ಅಧಿಪತ್ಯದ ಆಗಮನದಿಂದ

ಅವ್ಯವಸ್ಥೆಯುಂಟಾಗಿತ್ತು. ಬೌದ್ಧಿಕ ಸ್ಥಗಿತತೆಯಿಂದಾಗಿ ಸಮಾಜ ಅವನತಿಗೊಂಡು ಹಳೆಯ ಕಂದಾಚಾರ, ಸಂಪ್ರದಾಯ, ಅಜ್ಞಾನ, ಮೂಢನಂಬಿಕೆಗಳು ಜನರಲ್ಲಿ ಮನೆ ಮಾಡಿತ್ತು. ನಮ್ಮ ಸಮಾಜ ರಚನೆಯಲ್ಲಿ ಅಧಿಕಾರದ ಸ್ಥಾನಮಾನ ಹಂಚಿಕೆಯ ತಾರತಮ್ಯದಿಂದಾಗಿ ಬಡವರು, ಅಸ್ಪೃಶ್ಯರು ಮತ್ತು ಮಹಿಳೆಯರು ಸಾಮಾಜಿಕ ಶೋಷಣೆಗೆ ಒಳಗಾಗಿದ್ದರು. ಓದು ಬರಹ ಕಲಿತರೆ ಹೆಚ್ಚು ವಿಧವೆಯಾಗುವಳೆಂಬ ನಂಬಿಕೆಯು ದೇಶದಲ್ಲೆಲ್ಲಾ ಹರಡಿತ್ತು. ಹೆಣ್ಣನ್ನು ವಿದ್ಯೆಯಿಂದ ವಂಚಿತಗೊಳಿಸಲು ಹುಟ್ಟು ಹಾಕಿದ ಈ ನಂಬಿಕೆಯಿಂದಾಗಿ ಆಕೆ ತನ್ನ ಜೀವಮಾನವನ್ನೆಲ್ಲಾ ಅಜ್ಞಾನದಲ್ಲೇ ಕಳೆಯುವಂತಾಯಿತು. ಇಷ್ಟೇ ಅಲ್ಲದೆ ಹೆಣ್ಣಿನ ದೈಹಿಕ ಮತ್ತು ಬೌದ್ಧಿಕ ಬೆಳವಣಿಗೆಯನ್ನು ಕುಂಠಿತಗೊಳಿಸುವಂತಹ ಬಾಲ್ಯವಿವಾಹ ಪದ್ಧತಿ, ಹೆಣ್ಣಿನ ವ್ಯಕ್ತಿತ್ವವನ್ನು ಕೀಳಾಗಿ ಕಾಣುವ ಭ್ರೂಣಹತ್ಯೆ, ಬಹುಪತ್ನಿತ್ವ ಮುಂತಾದ ಅನಿಷ್ಟ ಪದ್ಧತಿಗಳು ತುಂಬಿಕೊಂಡಿದ್ದವು.

"ಯುದ್ಧದ ಸಮಯದಲ್ಲಿ ಹೆಂಗಸರನ್ನು ರಕ್ಷಿಸುವ ತೊಂದರೆ ಮತ್ತು ಬುಡಕಟ್ಟು ಜನಾಂಗದವರಲ್ಲಿ ಸತ್ತವನ ಸ್ವತ್ತನ್ನೆಲ್ಲ ಒಟ್ಟಿಗೆ ಸುಡಬೇಕೆಂಬ ನಂಬಿಕೆ ಮುಂತಾದ ಕಾರಣಗಳಿಂದ ಸತಿಪದ್ಧತಿ ಹದಿನೆಂಟನೇ ಶತಮಾನದಲ್ಲಿ ಮತ್ತಷ್ಟು ವೈಭವೀಕರಣಗೊಂಡಿತು. ಜೀವಂತ ದಹಿಸಿಕೊಳ್ಳದ ವಿಧವೆಯರು ಸಾಮಾಜಿಕ ಕ್ರೋಧವನ್ನು ಸಹಿಸಿ, ಕಟ್ಟುನಿಟ್ಟಿನ ನಿಯಮಕ್ಕೆ ಒಳಗಾಗಿ ಬದುಕಬೇಕಿತ್ತು. ಹೀಗೆ ಸಾಮಾಜಿಕ ಅನ್ಯಾಯತೆಯಿಂದಾಗಿ ಬಾಲ್ಯವಿವಾಹ ಅದರ ಪರಿಣಾಮವಾಗಿ ಬಾಲ ವಿಧವೆಯರು, ವಿಧವಾ ವಿವಾಹದ ಮೇಲಿನ ನಿಷೇಧ, ವಿಷಮ ವಿವಾಹ ಮುಂತಾದ ಸಮಸ್ಯೆಗಳ ಜೊತೆಯಲ್ಲಿ ವೇಶ್ಯಾ ಸಮಸ್ಯೆಯೂ ಪ್ರಧಾನವಾಗಿ ಕಾಣಿಸಿಕೊಂಡಿತು."[೧೩] ದೇವದಾಸಿ ಪದ್ಧತಿ ಚಾಲ್ತಿಯಲ್ಲಿದ್ದು, ಅವರು ಪುರೋಹಿತರನ್ನು ತಣಿಸಲು ಮತ್ತೆ ಕೆಲವರು ಶ್ರೀಮಂತ ಜನರಿಗೆ ವೃತ್ತಿ ನೃತ್ಯಗಾರ್ತಿಯರಾಗಿ, ಮನೊರಂಜನೆಯ ಸಾಧನವಾಗಿ ಉಳಿಯುತ್ತಿದ್ದರು. ಈ ಹದಿನೆಂಟನೇ ಶತಮಾನವನ್ನು 'ಮಹಿಳೆಯ ಕತ್ತಲಯುಗ' ಎನ್ನಬಹುದು. ಮಹಿಳೆಯ ಸ್ಥಾನ ಕೆಳಮಟ್ಟದಲ್ಲಿದ್ದು ಆಸ್ತಿಯ ಒಡತನವಿಲ್ಲದೆ ಕುಟುಂಬದ ಚೌಕಟ್ಟಿನೊಳಗೆ ಮದುವೆಯೊಂದಕ್ಕೆ ಮಾತ್ರ ಸೀಮಿತಳಾಗಿದ್ದಳು. ವೈಜ್ಞಾನಿಕ ಚಿಂತನೆಯ ಕೊರತೆಯಿಂದ ಆಕೆ ತನ್ನ ಸ್ಥಿತಿಗೆ ಕರ್ಮಫಲವೇ ಕಾರಣವೆಂದು ತಿಳಿದಿದ್ದಳು. ಭಾರತ ಇಂತಹ ಸಾಮಾಜಿಕ ಪರಿಸ್ಥಿತಿಯಲ್ಲಿದ್ದಾಗ ಬ್ರಿಟಿಷರ ಆಗಮನವಾಯಿತು.

ಬ್ರಿಟಿಷರು ಭಾರತದಲ್ಲಿ ತಮ್ಮ ಸ್ವಾಮ್ಯವನ್ನು ಸ್ಥಾಪಿಸಿಕೊಳ್ಳುವ ಹಂತದಲ್ಲಿ ಜನರು ಜಾಗೃತಗೊಳ್ಳಲು ಪ್ರಾರಂಭಿಸಿದರು. ಅವರ ಸಾಮ್ರಾಜ್ಯಶಾಹಿ ಗುಣ ಮತ್ತು ಕ್ರಿಶ್ಚಿಯನ್ ಮಿಷನರಿಗಳು ಕೈಗೊಂಡ ಮತಾಂತರ ಕಾರ್ಯವೂ ಸೇರಿ ಭಾರತದಲ್ಲಿ ಬೇರು ಬಿಟ್ಟ ಸಾಮಾಜಿಕ ನಂಬಿಕೆ ಮತ್ತು ಧಾರ್ಮಿಕ ಭಾವನೆಗಳ ಉಳಿವಿಗೆ ಸವಾಲೆಸಗಿದಂತಾಯಿತು. ಒಂದೆಡೆ ಹಳೆಯ ದೇಸಿಯ ಸಂಸ್ಕೃತಿ ತನ್ನ ಸತ್ವವನ್ನೆಲ್ಲಾ ಕಳೆದುಕೊಂಡು ಹೊಸ ಸಂಸ್ಕೃತಿಯ ಕಡೆಗೆ ಹೆಜ್ಜೆ ಹಾಕಿತು.

ವಿದೇಶಿಯ ಸಂಸ್ಕೃತಿ, ವೈಜ್ಞಾನಿಕ ಜ್ಞಾನವನ್ನು ಒಳಗೊಂಡು ನವೀನವಾಗಿತ್ತು. ಜಾತಿ, ವರ್ಣ, ವರ್ಗ, ಲಿಂಗಾಧಾರಿತ ಶ್ರೇಣೀಕೃತ ಸಮಾಜವಾದ ಭಾರತವು ಹೊಸ ಆಡಳಿತಕ್ಕೆ ಒಳಪಟ್ಟಾಗ ಅದು ತನ್ನ ಜಡತ್ವವನ್ನು ಕೊಡವಿಕೊಂಡು ಮೇಲೆರುವುದು ಅನಿವಾರ್ಯವಾಯಿತು. ಇಂತಹ ಸಂಘಟನೆಯ ಪರಿಣಾಮವಾಗಿ ಜನಜೀವನ ನಾನಾ ಕ್ಷೇತ್ರಗಳಲ್ಲಿ ಹೊಸ ಹೊಸ ಚಿಂತನೆಗಳು ಮೊಳೆಯಲು ಪ್ರಾರಂಭವಾದವು. ವಿವೇಚನೆ, ಮಾನವೀಯತೆ ಮತ್ತು ವಿಮರ್ಶೆಯ ದೃಷ್ಟಿಯಿಂದ ಅವರು ತಮ್ಮ ಸಮಾಜ, ಅರ್ಥವ್ಯವಸ್ಥೆ, ಸರಕಾರಗಳನ್ನು ನೋಡಲು ತೊಡಗಿದರು. ಇದರಿಂದಾಗಿ ನಮ್ಮ ಧರ್ಮ, ಸಾಮಾಜಿಕ ರೀತಿ–ನೀತಿ, ಶಿಕ್ಷಣ, ಪದ್ಧತಿ, ಸಾಹಿತ್ಯ, ರಾಜಕೀಯ ಮತ್ತು ಆರ್ಥಿಕ ವಿಚಾರ ಬದಲಾಗಲು ಪ್ರಾರಂಭಗೊಂಡವು. ಅನೇಕ ಚಿಂತಕರು ಈ ಸಮಾಜದ ಸಾಮಾಜಿಕ ಮತ್ತು ಧಾರ್ಮಿಕ ಹುಳುಕುಗಳ ಕಡೆಗೆ ಗಮನಹರಿಸಿ ತಮ್ಮ ವಿಚಾರಗಳನ್ನು ಚಳವಳಿಯ ಮಟ್ಟದಲ್ಲಿ ಪ್ರತಿಪಾದಿಸಲು ತೊಡಗಿದರು.

ಈ ಅವಧಿಯಲ್ಲೇ ಬ್ರಿಟಿಷರು ಅನೇಕ ಸಾಮಾಜಿಕ ಸುಧಾರಣೆಯ ಕಡೆಗೆ ಗಮನಹರಿಸಿ, ಭಾರತೀಯ ಸಮಾಜವನ್ನು ಆಧುನೀಕರಿಸುವ ಪ್ರಯತ್ನಗಳನ್ನು ನಡೆಸಿದರು. ಆಂಗ್ಲ ಅಧಿಕಾರಿಗಳು ಭಾರತೀಯ ಜಾತಿ ವ್ಯವಸ್ಥೆಯಲ್ಲಿದ್ದ ಸಾಮಾಜಿಕ ಅನ್ಯಾಯವನ್ನು ಗ್ರಹಿಸಿ, ಸಮಾಜದಲ್ಲಿ ಮಹಿಳೆಯರಿಗಿದ್ದ ಕೀಳು ಸ್ಥಾನದ ಬಗ್ಗೆ ಗಮನ ಹರಿಸಿ ಮಾನವೀಯತೆಯನ್ನು ತೋರಿದರು. ನೀತಿ ನಿಯಮಗಳನ್ನು ಅನುಸರಿಸುವ ಆಡಳಿತ, ಇದರಲ್ಲಿ ಯಾರಿಗೂ ಅನ್ಯಾಯವಾಗದಂತೆ ನೋಡಿಕೊಳ್ಳುವುದು, ಯಾರ ಹಿತರಕ್ಷಣೆಗೂ ಧಕ್ಕೆ ಬಾರದಂತೆ ಆಡಳಿತ ನಡೆಸುವುದು ಮುಂತಾದ ಭರವಸೆ ಘೋಷಣೆಗಳಿಂದ ಅವರು ಆಡಳಿತ ಸೂತ್ರವನ್ನು ವಶಪಡಿಸಿಕೊಂಡರು. ವ್ಯಕ್ತಿಯನ್ನು ಸಮಾಜದ ಒಂದು ಘಟಕವೆಂದು ಅಂಗೀಕರಿಸಿ ಜಾತಿಭೇದ ಅಳಿದು, ಅಪರಾಧಕ್ಕೆ ತಕ್ಕ ಶಿಕ್ಷೆ 'ಕಾನೂನಿನ ಪ್ರಕಾರ ಎಲ್ಲರೂ ಸಮಾನರು' ಎಂಬ ಹೊಸ ನಿಯಮವನ್ನು ವಿಧಿಸಿದರು. ಇದರಿಂದ ದೇಸಿಯರಿಗೆ ಒಂದು ಹೊಸ ಅನುಭವವುಂಟಾಗಿ ತಮ್ಮ ಹಕ್ಕು, ಬಾಧ್ಯತೆಗಳ ಅರಿವುಂಟಾಯಿತು.

ಹತ್ತೊಂಬತ್ತನೇ ಶತಮಾನದ ಪ್ರಾರಂಭದಲ್ಲೇ ಕೆಲವು ಗಣ್ಯರು ಶಿಕ್ಷಣಕ್ಕೆ ಮಹತ್ವ ನೀಡಿ, ಹಲವಾರು ಶಾಲೆ, ಅನಾಥಶ್ರಮ, ಬೋರ್ಡಿಂಗ್ ಶಾಲೆಗಳನ್ನು ಸ್ಥಾಪಿಸಿ, ಪಾಶ್ಚಾತ್ಯ ರೀತಿಯ ಶಿಕ್ಷಣವನ್ನು ಪರಿಚಯಿಸಿದರು. ೧೮೧೭ರಲ್ಲಿ ಪ್ರಾರಂಭವಾದ ಕಲ್ಕತ್ತಾದ ಹಿಂದೂ ಕಾಲೇಜು ಪಾಶ್ಚಿಮಾತ್ಯ ವಿದ್ಯೆ ಹಾಗೂ ಕ್ರಾಂತಿಕಾರಕ ವಿಚಾರಗಳ ಘೋಷಿತ ಸಂಸ್ಥೆಯಾಗಿ ಕಾರ್ಯ ನಿರ್ವಹಿಸಿತು. ಇಂಗ್ಲಿಷರ ಆಳ್ವಿಕೆಯಿಂದಾಗಿ ೧೮೧೩ರಲ್ಲೇ ಈಸ್ಟ್ ಇಂಡಿಯಾ ಕಂಪೆನಿಯು ಭಾರತದ ಆಡಳಿತದ ಆಯವ್ಯಯದ ಉಳಿದ ಹಣದಲ್ಲಿ ಕೊನೆಪಕ್ಷ ಒಂದು ಲಕ್ಷ ರೂಪಾಯಿಗಳನ್ನು ದೇಶದ ಪ್ರಾಚೀನ ಸಾಹಿತ್ಯ ರಕ್ಷಣೆ, ಪಂಡಿತರಿಗೆ ಪ್ರೋತ್ಸಾಹದನ ಮತ್ತು ಶಿಕ್ಷಣಕ್ಕೆ ವಿನಿಯೋಗಿಸ

ಬೇಕೆಂದು ಹೇಳಲಾಗಿತ್ತು. "ಬ್ರಿಟಿಷ್ ಆಳ್ವಿಕೆಯಿಂದ ಭಾರತೀಯ ಸಮಾಜ ವ್ಯವಸ್ಥೆ ಹಾಗೂ ಆಡಳಿತ ಪದ್ಧತಿಯಲ್ಲಿ ಇಂಗ್ಲಿಷರ ಚಿಂತನೆ ಹಾಗೂ ಪಾಶ್ಚಾತ್ಯ ಸಂಸ್ಕೃತಿಗಳ ಪ್ರಭಾವ ನೇರವಾಗಿ ಬಿದ್ದುದರಿಂದ ಸರ್ಕಾರಿ ಶಿಕ್ಷಣ ನೀತಿಯಲ್ಲಿ ಬದಲಾವಣೆ ಅನಿವಾರ್ಯವಾಯಿತು. ಕ್ರೈಸ್ತ ಮಿಷನರಿಗಳು ತಮ್ಮ ಕಾರ್ಯವನ್ನು ಎರಡು ರೀತಿಯಲ್ಲಿ ಮುಂದುವರಿಸಿದರು. ಇತ್ತ ಭಾರತೀಯರಲ್ಲಿ ಒಂದೆಡೆ ದೇಶಿಯ ಶಿಕ್ಷಣವೇ ಸಾಕೆಂದು ಮತ್ತೊಂದೆಡೆ ಪಾಶ್ಚಾತ್ಯ ಶಿಕ್ಷಣ ಬೇಕೆಂದು ಎರಡು ಪಂಗಡಗಳಾದವು. ಈ ವಿವಾದ ೧೮೨೨ ರಿಂದ ೧೯೩೫ರವರೆಗೆ ನಡೆಯಿತು. ಈ ವಿವಾದಕ್ಕೆ ತಡೆ ಹಾಕಿದ ಮೆಕಾಲೆ ಇಂಗ್ಲಿಷ್ ಮೂಲಕ ಪಾಶ್ಚಾತ್ಯ ಶಿಕ್ಷಣದ ಅಗತ್ಯವನ್ನು ಮನಗಾಣಿಸಿತು. ಮಹಿಳೆಯರಿಗೆ ಪ್ರತ್ಯೇಕವಾಗಿ ಶಾಲೆಗಳನ್ನು ತೆರೆದುದಲ್ಲದೆ ಅನಾಥಾಶ್ರಮದಲ್ಲೂ ಶಿಕ್ಷಣವನ್ನು ಕೊಡಲಾಯಿತು. ಸ್ತ್ರೀ ಶಿಕ್ಷಣದ ಅಭಿವೃದ್ಧಿಗಾಗಿ ಭದ್ರ ತಳಹದಿ ಹಾಕಿದವರು ಜಾನ್ ಡ್ರಿಂಕ್ ವಾಟರ್ ಬೊಥೊನೆಯವರು. ೧೮೪೯ರಲ್ಲೇ ಬಂಗಾಳದಲ್ಲಿ ಬಾಲಕಿಯರ ಪಾಠಶಾಲೆಯನ್ನು ತೆರೆದರು."[೧೪]

೧೮೫೪ರಲ್ಲಿ ಪ್ರಕಟವಾದ 'ಸರ್ ಚಾರ್ಲ್ಸ್ ಉಡ್' ಅವರ 'ಎಜ್ಯುಕೇಶನ್ ಡಿಸ್‌ಪ್ಯಾಚ್' ಎಂಬ ವರದಿ ಸ್ತ್ರಿ ಶಿಕ್ಷಣಕ್ಕೆ ಮತ್ತಷ್ಟು ಬೆಂಬಲ ನೀಡಿತ್ತು. ಇದರಿಂದ ಸುಧಾರಣೆಯ ಬಗೆಗೆ ಒಂದು ಹೊಸ ಆಸೆ ಮೂಡಿಸಿದಂತಾಯಿತು. ೧೯ನೇ ಶತಮಾನದ ಪೂರ್ವಭಾಗದಲ್ಲಿ ಮಹಿಳಾ ಶಿಕ್ಷಣಕ್ಕೆ ಸಿಕ್ಕ ಪ್ರೋತ್ಸಾಹಕ್ಕಿಂತಲೂ ಸಂಪ್ರದಾಯವಾದಿಗಳ ವಿರೋಧವೇ ಹೆಚ್ಚಾಗಿತ್ತು. ಅಲ್ಲದೆ ಶತಮಾನಗಳಿಂದ ಮಹಿಳೆಯರಿಗೆ ಶಿಕ್ಷಣ ನಿಷಿದ್ಧವೆಂದು ಸಾರಲಾದುದರಿಂದ ಅವರಿಗೆ ತಮ್ಮನ್ನು ಶಿಕ್ಷಣ ಕ್ಷೇತ್ರಕ್ಕೆ ತೆರೆದುಕೊಳ್ಳುವ ಮಾನಸಿಕ ಸಿದ್ಧತೆ ಇರಲಿಲ್ಲ. ಉಚ್ಚವರ್ಗದ ಹಿಂದೂಗಳಲ್ಲಿ ಗಂಡು ಮಕ್ಕಳಿಗೆ ಎಂಟು ವರ್ಷವಾದಾಗ ಶಿಕ್ಷಣ ಮತ್ತು ಹೆಣ್ಣು ಮಕ್ಕಳಿಗೆ ಮದುವೆ ಎಂಬ ಸೂತ್ರವನ್ನು ರೂಢಿಗೊಳಿಸಿಕೊಂಡಿದ್ದರಿಂದ ಹೆಣ್ಣು ಮಕ್ಕಳು ಶಿಕ್ಷಣದಿಂದ ವಂಚಿತರಾಗಿದ್ದರು. ಇಂತಹ ಸಮಾಜದಲ್ಲಿ ಸುಧಾರಣಾವಾದಿಗಳ ಪ್ರಯತ್ನದ ಫಲವಾಗಿ ಮಹಿಳೆಯರಿಗೂ ಶಿಕ್ಷಣ ದೊರಕುವಂತಾಯಿತು. ಇದರಿಂದ ಸಂಪ್ರದಾಯಬದ್ಧ ಸಮಾಜದ ವಿನಾಶಕಾರಕ ಸಾಮಾಜಿಕ ಪಿಡುಗುಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಯಿತು. ಒಟ್ಟಾರೆ ಇಂತಹ ಶಿಕ್ಷಣ ದೊರೆತಿದ್ದುದರ ಫಲವಾಗಿ ಭಾರತೀಯರು ತಮ್ಮ ಸಂಸ್ಕೃತಿಯತ್ತ ನೋಡುವ ದೃಷ್ಟಿಕೋನವನ್ನು ಬದಲಾಯಿಸುವಂತಾಯಿತು.

**೩.೫.೧. ಸಾಮಾಜಿಕ ಜೀವನದ ಮೇಲೆ ಬದಲಾವಣೆ**

ಆಧುನಿಕತೆಯಿಂದಾಗಿ ದೇಶದಲ್ಲಿ ಅನೇಕ ಬದಲಾವಣೆಗಳಾಗತೊಡಗಿದವು. ರೈಲು ಮಾರ್ಗ, ತಂತಿಮಾರ್ಗ, ಆಧುನಿಕ ಕೈಗಾರಿಕೆ, ವೈದ್ಯಕೀಯ ಸೇವೆ, ಸಾರ್ವಜನಿಕ ಕಾರ್ಯಕ್ರಮ, ಹೊಸ

ಹೊಸ ಸಾರಿಗೆ ವಿಧಾನಗಳು ಬೆಳೆಯುತ್ತಿದ್ದ ನಗರೀಕರಣ, ಕಾರ್ಖಾನೆ, ಕಛೇರಿ, ಆಸ್ಪತ್ರೆಗಳು ಬೆಳೆದು ಕೆಲಸಗಾರರಿಗೂ ಬೇಡಿಕೆ ಬಂದು ಉದ್ಯೋಗಿಗಳಾಗಲು ಅವಕಾಶ ಸಿಕ್ಕಿತು. ಉದ್ಯೋಗಾವಕಾಶಗಳಿಂದಾಗಿ ಮಹಿಳೆಯರು ಆರ್ಥಿಕ ಚಟುವಟಿಕೆಯಲ್ಲಿ ಭಾಗವಹಿಸುವಂತಾದರು. ಜೊತೆಗೆ ಪುರುಷ ಸಮಾನ ಉದ್ಯೋಗಿಗಳಾಗಿ ಲೈಂಗಿಕ ಶೋಷಣೆಗೆ ಒಳಗಾಗುವಂತಾದರು. ಸ್ವಾತಂತ್ರ್ಯಪೂರ್ವದಲ್ಲಿದ್ದ ಸಾಮಾಜಿಕ ನಿರ್ಬಂಧಗಳು ಆಧುನಿಕ ಕಾಲದಲ್ಲಿ ಉಳಿದಿಲ್ಲವಾದರೂ ಪುರುಷ ಪರ ಸಾಮಾಜಿಕ ಮೌಲ್ಯಗಳು ಸ್ವಾತಂತ್ರ್ಯ ಪೂರ್ವದ ನಿರ್ಬಂಧಗಳಷ್ಟೇ ಪ್ರಬಲವಾಗಿವೆ. ಅಲ್ಲದೆ ಹೆಣ್ಣಿನ ಬಗ್ಗೆ ತಳೆದಿರುವ ಲಿಂಗಭೇದ ನಿಲುವಿನಿಂದಾಗಿ ಲೈಂಗಿಕ ನೆಲೆಯಲ್ಲಿ ಕೂಡ ಆಕೆ ಶೋಷಣೆಗೆ ಒಳಗಾಗಿದ್ದಾಳೆ. ಆಧುನಿಕ ಭಾರತದಲ್ಲಿ ಮಹಿಳೆಯರು ಶೋಷಿತ ನೆಲೆಯಲ್ಲಿಯೇ ಉಳಿಯಲು ಸ್ವಾತಂತ್ರ್ಯಪೂರ್ವದಲ್ಲಿ ನಡೆದ ಸುಧಾರಣಾವಾದಿ ಚಳುವಳಿಗಳ ನೇತಾರರು ಹೆಣ್ಣಿನ ಬಗ್ಗೆ ಮುಕ್ತವಾಗಿ ಚಿಂತನೆ ನಡೆಸದಿರುವುದೇ ಕಾರಣವಾಗಿರುವಂತೆ ತೋರುತ್ತದೆ.

ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದಲ್ಲಿ ನಡೆದ ಸಮಾಜ ಸುಧಾರಣೆಯ ಸ್ವರೂಪವನ್ನು ಎರಡು ಬಗೆಯಾಗಿ ಕಾಣಬಹುದು.

೧. ಮೇಲ್ವರ್ಗಕ್ಕೆ ಸೇರಿದ ಸಮಾಜ ಸುಧಾರಕರು.

೨. ಮೇಲ್ವರ್ಗಕ್ಕೆ ಸೇರದ ಸಮಾಜ ಸುಧಾರಕರು.

ಈ ಎರಡು ಬಗೆಯ ಸಮಾಜ ಸುಧಾರಕರಲ್ಲಿ ಬಹುಪಾಲು ಪುರುಷರೇ ಆಗಿದ್ದಾರೆ. ಈ ಎರಡು ಗುಂಪುಗಳು ಕೇವಲ ಜಾತಿ ಆಧಾರಿತ ವರ್ಗೀಕರಣವಾಗಿರದೆ ಅವುಗಳ ಧೋರಣೆ ಮತ್ತು ಉದ್ದೇಶಗಳಲ್ಲಿಯೂ ವಿಭಿನ್ನ ಬಗೆಯಾಗಿರುವುದು ಕಂಡುಬರುತ್ತದೆ. ಆದರೆ ಇವು ಪರಸ್ಪರ ಪೂರಕ ಆಶಯ ಹೊಂದಿರದೆ ವೈರುಧ್ಯದ ನೆಲೆಯನ್ನು ಹೊಂದಿದ್ದವು. ಹೀಗಿದ್ದಾಗ ಎರಡು ಗುಂಪುಗಳು ಮಹಿಳೆಯರ ಏಳಿಗೆಗಾಗಿಯೇ ದುಡಿದವು ಎಂಬುದು ವಾಸ್ತವ ಸಂಗತಿ.

ಮೊದಲನೆ ಗುಂಪಿನಲ್ಲಿ ರಾಜರಾಮ ಮೋಹನರಾಯ, ವಿದ್ಯಾಸಾಗರ, ದಯಾನಂದ ಸರಸ್ವತಿ, ಸ್ವಾಮಿ ವಿವೇಕಾನಂದ ಮುಂತಾದವರನ್ನು ಕಾಣಬಹುದು. ಇವರು ಸತಿಪದ್ಧತಿ, ಮಹಿಳಾ ಶಿಕ್ಷಣ, ವಿಧವಾವಿವಾಹ, ಬಾಲ್ಯವಿವಾಹ ನಿಷೇಧ ಮುಂತಾದವುಗಳು ಸ್ತ್ರೀಯರ ಸಮಸ್ಯೆಗಳಿಗೆ ಕಾನೂನಿನ ಮೂಲಕ ಪರಿಹಾರ ಸೂಚಿಸಲು ಪ್ರಯತ್ನಿಸಿದರೇ ಹೊರತು, ಲಿಂಗಸಂಬಂಧಿ ಶೋಷಣೆಯಿಂದ ಪರಿಣಾಮಕಾರಿಯಾಗಿ ಮುಕ್ತಗೊಳಿಸಲು ಸಾಧ್ಯವಾಗಲಿಲ್ಲ. ಆದ್ದರಿಂದಲೇ ತನ್ನ ಗಂಡನನ್ನು ಕಳೆದುಕೊಂಡ ಹೆಣ್ಣು ಸತಿಪದ್ಧತಿಯ ಮೂಲಕ ತನ್ನ ಜೀವನವನ್ನು ಕಳೆದುಕೊಳ್ಳಬೇಕಾದಂತಹ ದಾರುಣಮಯ ಸಾಮಾಜಿಕ ಆಚರಣೆಗೆ ಪರಿಹಾರವನ್ನು

ರಾಜಾರಾಮ್ ಮೋಹನ್‌ರಾಯ್ ಸಾಮಾಜಿಕ ಪುರುಷ ಮೌಲ್ಯಗಳಲ್ಲಿ ಕಂಡುಕೊಳ್ಳದೇ ಬ್ರಿಟೀಷರು ಪೂರ್ಣನಂಬಿಕೆ ಹೊಂದಿದ್ದ ಕಾನೂನುಶಾಸ್ತ್ರದಲ್ಲಿ ಪಡೆಯಲು ತೊಡಗಿದ್ದು ಕಂಡುಬರುತ್ತದೆ. ಇದು ಅವರ ಸಮಾಜ ಸುಧಾರಣೆಯ ಮೂಲ ಮತ್ತು ಪ್ರಮುಖ ಉದ್ದೇಶಗಳ ಮೇಲೆ ಬೆಳಕು ಚೆಲ್ಲುತ್ತದೆ. ಮಹಿಳೆಯರ ಮೇಲೆ ಪಿತೃಪ್ರಧಾನ ಸಮಾಜ ವಿಧಿಸಿರುವ ಕಟ್ಟುಪಾಡುಗಳನ್ನು ನಾಶ ಮಾಡುವುದು ಹಾಗೂ ಅವುಗಳಿಂದ ಬಿಡುಗಡೆಗೊಳಿಸುವುದು ಮುಂತಾದ ಸ್ತ್ರೀಪರ ಧೋರಣೆಗಳನ್ನು ನೆಲೆಗೊಳಿಸುವುದಾಗಿರಲಿಲ್ಲ ಎಂಬುದು ಇದು ಸೂಚಿಸುತ್ತದೆ.

ಆಧುನಿಕತೆಯಿಂದಾಗಿ ಸಮಾಜ ಸುಧಾರಣೆಯು ಮಹಿಳೆಯರನ್ನು ಕೇಂದ್ರೀಕರಿಸಿ ನಡೆದಿರಲಿ, ಇಲ್ಲವೇ ಕೆಳವರ್ಗದವರನ್ನು ಕೇಂದ್ರೀಕರಿಸಿ ನಡೆದಿರಲಿ, ಅದು ಕ್ರಮೇಣ ಎರಡೂ ವಲಯಗಳನ್ನು ಒಳಗೊಂಡಿದೆ. ಏಕೆಂದರೆ ಈ ಎರಡೂ ವಲಯಗಳು ಶೋಷಿತ ವರ್ಗಗಳ ಗುರಿ ಪಿತೃಪ್ರಧಾನ ಸಮಾಜವೇ ಆಗಿದೆ. ಹಾಗಾಗಿಯೇ ಜ್ಯೋತಿಬಾಫುಲೆ ಅವರು ಮಹಿಳೆಯರಿಗೆ ಶಿಕ್ಷಣ ನೀಡುವ ಕಾರ್ಯದ ಮೂಲಕ ಸಮಾಜ ಸುಧಾರಣೆ ಕಾರ್ಯ ಕೈಗೊಂಡರು. ಈ ಎರಡನೇ ಗುಂಪಿಗೆ ಸೇರಿದ ಫುಲೆ, ಪೆರಿಯಾರ್ ರಾಮಸ್ವಾಮಿ ನಾಯ್ಕರ್, ಅಂಬೇಡ್ಕರ್ ಮುಂತಾದ ಸಮಾಜ ಸುಧಾರಕರು ಸವಾಜದ ಮೇಲುವರ್ಗದವರೊಂದಿಗೆ ಸಂಘರ್ಷಾತ್ಮಕ ನಿಲುವು ಹೊಂದಿದವರಾಗಿದ್ದಾರೆ. ಈ ಎರಡನೆಯ ಗುಂಪಿನ ಸಮಾಜ ಸುಧಾರಕರಿಗೆ ಶೋಷಿತ ವರ್ಗವನ್ನು ಅವರ ಹೀನಸ್ಥಿತಿಯಿಂದ ಮೇಲೆತ್ತುವುದೇ ಮಹತ್ತರವಾದ ಮತ್ತು ಅಮೂಲಾಗ್ರವಾದ ಉದ್ದೇಶವಾಗಿತ್ತು.

"ಹತ್ತೊಂಬತ್ತನೆಯ ಶತಮಾನದಲ್ಲಿ ಆರಂಭಗೊಂಡ ಸಮಾಜ ಸುಧಾರಣೆ ಮಹಿಳೆಯರನ್ನು ಕೇಂದ್ರೀಕರಿಸಿತ್ತು. ಸಮಾಜ ಸುಧಾರಣೆಯ ಪರಿಕಲ್ಪನೆಯನ್ನು ಹುಟ್ಟು ಹಾಕಿದ ವಸಾಹತು ರಾಜತಾಂತ್ರಿಕ ದೃಷ್ಟಿಕೋನ ಸ್ವಹಿತಾಸಕ್ತಿಯನ್ನು ಹೊಂದಿದುದಾಗಿತ್ತು. ಇದರಿಂದ ಪುರುಷರ ಸಮಾಜ ಸುಧಾರಣೆ ಚಿಂತನೆಯಲ್ಲಿ ಎರಡು ಗುಂಪುಗಳಾದವು. ಒಂದು ಸ್ವಹಿತಾಸಕ್ತಿಯನ್ನು ಆಧರಿಸಿದ್ದು. ಮತ್ತೊಂದು ಮಹಿಳೆಯರನ್ನು ಒಳಗೊಂಡಂತೆ ಎಲ್ಲಾ ಶೋಷಿತರ ಹಿತಾಸಕ್ತಿಯನ್ನು ಸಾಧಿಸಲು ಚಿಂತಿಸಿದರು. ಇದರಿಂದಾಗಿ ಮಹಿಳಾ ಸುಧಾರಣೆಯ ಕಾರ್ಯವು ಅಪರಿಪೂರ್ಣ ಮಾತ್ರವಲ್ಲ, ಪರಿಣಾಮರಹಿತವೂ ಹಾಗೂ ಮಂದಗತಿಯಾಗಲು ಆಗಲು ಕಾರಣವಾಯಿತು ಎಂಬುದನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಸಮಾಜ ಸುಧಾರಣೆಯು ಮಹಿಳೆಯರನ್ನು ವಸಾಹತುಪೂರ್ವದ ಸ್ಥಿತಿಗಳಿಂದ ಆಧುನಿಕತೆಯ ಹೊಸ್ತಿಲಲ್ಲಿ ಇರಿಸಿತು. ಅಲ್ಲದೆ ಕಾನೂನುಗಳ ಮೂಲಕ ಸ್ತ್ರೀಯರಿಗೆ ಹಕ್ಕುಗಳನ್ನು ನೀಡಿತ್ತು. ಆದರೆ ಆಕೆಯ ಅಧೀನತೆಯನ್ನು ಮಾತ್ರ

ತೊಡೆದು ಹಾಕಲಿಲ್ಲ. ಲಿಂಗಸಂಬಂಧಿತ, ಲಿಂಗಪ್ರೇರಿತ, ಲಿಂಗಕೇಂದ್ರಿತ, ಆಚರಣೆಗಳು, ಮೌಲ್ಯಗಳು, ಕಟ್ಟುಪಾಡುಗಳು, ಸ್ತ್ರೀಯರಿಗೆ ತಾರತಮ್ಯಕ್ಕೆ ಒಳಪಡಿಸುವುದನ್ನು ನಾಶಪಡಿಸಲು ಸಾಧ್ಯವಾಗಲಿಲ್ಲ. ಬಾಲ್ಯ ವಿವಾಹವನ್ನು ತೊಡೆದು ಹಾಕುವ ನಿಟ್ಟಿನಲ್ಲಿ ಹೆಣ್ಣಿನ ವಿವಾಹದ ವಯಸ್ಸನ್ನೇನೋ ಹೆಚ್ಚಿಸಿತು. ಆದರೆ ಆಕೆಗೆ ವೈವಾಹಿಕ ಸಂಬಂಧದಲ್ಲಿ ತನ್ನ ಆಯ್ಕೆಯ ಹಕ್ಕು ಮತ್ತು ಅಧಿಕಾರವನ್ನು ನೀಡಲಿಲ್ಲ. ಅಷ್ಟೆ ಅಲ್ಲ ತನಗಿಷ್ಟವಿದ್ದಲ್ಲಿ ಮಾತ್ರ ವಿವಾಹವಾಗುವ ಇಲ್ಲದಿದ್ದಲ್ಲಿ ವಿವಾಹವಾಗದೇ ಉಳಿಯುವ ಸ್ವಾತಂತ್ರ್ಯವನ್ನೂ ನೀಡಲಿಲ್ಲ. ಅಕ್ಷರ ವಿದ್ಯೆಯನ್ನು ಸ್ತ್ರೀಯರಿಗೆ ನೀಡಲಾಯಿತಾದರೂ ಆಕೆಗೆ ಸ್ವಂತಿಕೆಯ ಅರಿವನ್ನು ಮೂಡಿಸಲಿಲ್ಲ. ವಿಧವಾ ವಿವಾಹಕ್ಕೆ ಅವಕಾಶ ಕಲ್ಪಿಸಿತು. ಅದನ್ನು ಮಾನ್ಯ ಮಾಡುವ ಉದಾರ ಮನೋಭಾವ ತಳೆಯಲಿಲ್ಲ. ಮಹಿಳೆಯನ್ನು ಕೀಳಾಗಿ ಕಾಣುವ ಮನಸ್ಥಿತಿಯನ್ನು ಹಾಗೆಯೇ ಉಳಿಸಿತು. ಸುಧಾರಣಾವಾದಿ ಚಳುವಳಿಯ ಸ್ತ್ರೀಯ ಪಾರಂಪರಿಕ ಪಾತ್ರ ಕಲ್ಪನೆಯನ್ನು ಉಳಿಸಿಕೊಂಡೇ ಸುಧಾರಿತ ಸ್ತ್ರೀಯ ಪಾತ್ರದ ಮಾದರಿಯನ್ನು ಹೊಸತಾಗಿ ರೂಪಿಸಿತು"[೧೫] ಎಂಬ ಮಾತು ಸತ್ಯ. ಇದನ್ನು ರೂಪಕದ ಭಾಷೆಯಲ್ಲಿ ಹೀಗೆ ಹೇಳಬಹುದು. ಸಮಾಜ ಸುಧಾರಣಾ ಚಳವಳಿಯು ಮಹಿಳೆಯನ್ನು ಕಡುಕತ್ತಲಿನಿಂದ ಕತ್ತಲಿಗೆ ತಂದಿರಿಸಿತು. ಆದರೆ ಅದು ಕತ್ತಲನ್ನು ನಿವಾರಣೆ ಮಾಡಲಿಲ್ಲ. ಅಂದರೆ ಮಹಿಳೆಯರಿಗೆ ತನ್ನತನವನ್ನು ಸ್ಥಾಪಿಸುವ ದಿಕ್ಕಿನಲ್ಲಿ ದೊರೆತ ಅವಕಾಶಗಳ ಪರಿಮಿತಿಗಳ, ಪರಿಮಿತಿಯ ಪ್ರಮಾಣ ತೀರಾ ಕಡಿಮೆಯಾಗಿತ್ತು. ಹೀಗೆ ಸಮಾಜ ಸುಧಾರಕರು ಕೈಗೊಂಡ ಪ್ರಯತ್ನ ಸಾಹಿತಿಗಳನ್ನು ಸಾಕಷ್ಟು ಪ್ರಭಾವಿಸಿದ್ದವು.

ಈ ಹಿನ್ನೆಲೆಯಲ್ಲಿ ಭಾರತ ಇತರ ಭಾಷೆಗಳಂತೆ ಕನ್ನಡ ಸಾಹಿತ್ಯವೂ ಒಂದು ಕ್ರಾಂತಿಕಾರಕ ಬದಲಾವಣೆಯನ್ನು ಪಡೆಯಿತು. ಹತ್ತೊಂಬತ್ತನೆಯ ಶತಮಾನದ ಅಂತ್ಯದವರೆಗೂ ಧಾರ್ಮಿಕ ಹಾಗೂ ಆಧ್ಯಾತ್ಮಿಕ ನೆಲೆಯಲ್ಲಿ, ಬಹುತೇಕ ಕಾವ್ಯ ಪ್ರಕಾರದಲ್ಲಿಯೇ ರಚಿತವಾಗುತ್ತಿದ್ದ ಕನ್ನಡ ಸಾಹಿತ್ಯ ಕಾಲಕ್ರಮೇಣ ಈ ಹೊಸಬಗೆಯ ಚಿಂತನೆ ಆದರ್ಶಗಳನ್ನು ಮೈಗೂಡಿಸಿಕೊಂಡು ಅರಳ ತೊಡಗಿತು. ಅಂದಿನ ಸಾಹಿತಿಗಳಿಗೆ ದೇಶಪ್ರೇಮ, ದೇಶಭಕ್ತಿ, ಬ್ರಿಟೀಷರನ್ನು ದೇಶದಿಂದ ತೊಲಗಿಸುವತ್ತ ತುಡಿತ, ಸ್ವಾತಂತ್ರ್ಯಾಕಾಂಕ್ಷೆ, ಕುಲ-ಮತ ಭೇದಗಳ ನಿರ್ಮೂಲನೆ ಇವುಗಳ ಜೊತೆಗೆ ಸ್ತ್ರೀಪರ ಕಾಳಜಿ ಇವೆಲ್ಲವೂ ಅವರ ಸಾಹಿತ್ಯ ರಚನೆಗೆ ಪ್ರಮುಖ ವಸ್ತುಗಳಾದವು. ಬಾಲ್ಯವಿವಾಹ, ವಿಷಮವಿವಾಹಗಳನ್ನು ಖಂಡಿಸುವುದು, ವಿಧವಾ ವಿವಾಹಕ್ಕೆ ಪ್ರೋತ್ಸಾಹ ನೀಡುವುದು, ಸ್ತ್ರೀಯರಿಗಾಗುತ್ತಿದ್ದ ಅನ್ಯಾಯಗಳ ಖಂಡನೆ, ಇವು ಈ ಕಾಲದ ಸಾಹಿತ್ಯ ಸೃಷ್ಟಿಗೆ ಒಂದು ಆಯಾಮವನ್ನೊದಗಿಸಿದವು.

ಹೀಗಾಗಿ ಅಂದಿನ ಸಮಾಜ ಸುಧಾರಣೆಯ ಕ್ರಾಂತಿಯಲ್ಲಿ ಸಾಹಿತ್ಯವು ತನ್ನ ಪಾತ್ರವನ್ನು ನಿರ್ವಹಿಸಿತು.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹೊಸದಾಗಿ ರೂಪುಗೊಂಡ ಭಾವಗೀತೆ, ಕಥೆ, ಕಾದಂಬರಿಯಂತಹ ಪ್ರಕಾರಗಳು ನೇರವಾಗಿ ಇಂಗ್ಲಿಷ್ ಸಾಹಿತ್ಯದಿಂದಲೇ ಬಂದವುಗಳಾಗಿವೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಇದು ಸಂಕ್ರಮಣ ಕಾಲ. ಇಂಗ್ಲಿಷ್‌ನಂತಹ ಹೊರಗಿನ ಭಾಷೆ ಮತ್ತು ಸಂಸ್ಕೃತಿಗಳು ಸಂಪರ್ಕದಿಂದಾಗಿ ಇಲ್ಲಿ ಹೊಸಗಾಳಿ ಬೀಸಲಾರಂಭಿಸಿತು. ಸಾಹಿತ್ಯದಲ್ಲಿ ಸಾಮಾನ್ಯರ ಅನುಭವಗಳು ದಾಖಲಾದದ್ದು ಈ ಕಾಲದಲ್ಲಿಯೇ. ಗದ್ಯ ಸಾಹಿತ್ಯದ ಬೆಳವಣಿಗೆಯಂತೂ ಸಾಮಾಜಿಕ ಜಾಗೃತಿಯನ್ನು ಮುಖ್ಯ ಉದ್ದೇಶವಾಗಿರಿಸಿಕೊಂಡು ರೂಪುಗೊಂಡದ್ದಾಗಿದೆ. ಈ ಕಾರಣದಿಂದಾಗಿಯೇ ಭಾರತೀಯ ಸಮಾಜದಲ್ಲಿ ಪಾರಂಪರಿಕವಾಗಿ ಉಳಿದುಕೊಂಡು ಬಂದಿದ್ದ ನಂಬಿಕೆ, ಸಂಪ್ರದಾಯಗಳನ್ನು ಪರಿಶೀಲಿಸುವ ಪ್ರಯತ್ನ ನಡೆಯಿತು. ಇಂತಹ ಪ್ರಯತ್ನಗಳ ಹಿಂದೆ, ಎರಡು ಉದ್ದೇಶಗಳಿದ್ದುದು ಸ್ಪಷ್ಟವಾಗಿದೆ. ಒಂದು ಇಂಗ್ಲಿಷ ಭಾಷೆ ಮತ್ತು ಸಾಹಿತ್ಯದಿಂದ ಸಂಪರ್ಕಕ್ಕೆ ಬಂದ ಆಧುನಿಕ ವಿಚಾರ ಮತ್ತು ಅನುಭವಗಳ ಎದುರಿನಲ್ಲಿ ಗತಕಾಲದ ನಮ್ಮ ಪರಂಪರೆ ಕೊಚ್ಚಿ ಹೋಗಬಾರದೆಂಬ ಆತಂಕದಿಂದ ಅದನ್ನು ಉಳಿಸಿಕೊಳ್ಳುವ ಶ್ರದ್ಧೆ ಪ್ರಕಟವಾಗಿದೆ. ಇನ್ನೊಂದೆಡೆಯಲ್ಲಿ ಸಂಸ್ಕೃತಿ ಹೆಸರಿನಲ್ಲಿ ಉಳಿದುಕೊಂಡು ಬಂದಿರುವ ಮೂಢನಂಬಿಕೆ, ಅಂಧಶ್ರದ್ಧೆ ಮತ್ತು ಕಂದಾಚಾರಗಳನ್ನು ನಿರಾಕರಿಸಿ ಹೊಸ ಮೌಲ್ಯಗಳನ್ನು ಆವಿಷ್ಕಾರ ಮಾಡಿಕೊಳ್ಳುವ ಹಂಬಲ ಕಾಣಿಸಿಕೊಂಡಿದೆ. ಈ ಕಾರಣವಾಗಿ ಕನ್ನಡ ಕಾದಂಬರಿ ಸಾಹಿತ್ಯದ ಆರಂಭದ ಕೃತಿಗಳು ಸಾಮಾಜಿಕ ಸಮಸ್ಯೆಗಳನ್ನು ಆಧರಿಸಿ ರಚಿತವಾಗಿವೆ. ವಿಶೇಷವಾಗಿ ಸ್ತ್ರೀ ಜೀವನವನ್ನು ಕುರಿತಂತೆ ಹೆಚ್ಚು ಕಾದಂಬರಿಗಳು ಈ ಕಾಲಘಟ್ಟದಲ್ಲಿ ರಚನೆಯಾಗಿವೆ. ಹಾಗಾಗಿ ಸ್ವಾತಂತ್ರ್ಯ ಪೂರ್ವ ಕಾಲದ ೧೮೯೯ ರಿಂದ ೧೯೪೭ರ ವರೆಗಿನ ಕಾಲವನ್ನು ವ್ಯಾಪ್ತಿಗೆ ಆಯ್ಕೆ ಮಾಡಿ ಕೊಂಡಿದ್ದೇನೆ.

**ಕೊನೆಟಿಪ್ಪಣಿಗಳು**

೧. ಅರವಿಂದ ಮಾಲಗತ್ತಿ, **ಕನ್ನಡ ವಿಷಯ ವಿಶ್ವಕೋಶ: ಜಾನಪದ,** ಪು.೬೮೮

೨. ಅದೇ, ಪು.೭೭೩

೩. ಅದೇ, ಪು.೮೯೦

೪. ಹೇಮಲತಾ ಎಚ್.ಎಂ., **ಮಹಿಳಾ ಅಧ್ಯಯನ,** ಪು.೩೪

೫. ಇಂದಿರಾ ಆರ್., **ಮಹಿಳೆ ಸಮಾಜ ಮತ್ತು ಸಂಸ್ಕೃತಿ,** ಪು.೨೯

೬. ಶ್ರೀಮತಿ ಎಚ್.ಎಸ್.(ಅನು) **ಸಿಮೋನ ದ ಬೋವಾ–ದ ಸೆಕೆಂಡ್‌ಸೆಕ್ಸ್, ಒಂದು ಕನ್ನಡ ಓದು,** ಪು.೭೮

೭. ಅದೇ, ಪು.೬೩

೮. ಮಂಗಳಾ ಚಿ.ನಾ., **ಎಚ್ಚೆತ್ತ ಹಾದಿಯಲ್ಲಿ ಮಹಿಳೆ,** ಪು.೬೩

೯. ಇಂದಿರಾ ಆರ್., **ಪೂರ್ವೋಕ್ತ,** ಪು.೪೦

೧೦. ವಿಜಯಾ ದಬ್ಬೆ, **ಮಹಿಳೆ ಸಾಹಿತ್ಯ ಮತ್ತು ಸಮಾಜ,** ಪು.೬೩

೧೧. ಅನುಪಮಾ ನಿರಂಜನ, **ಮಾಧವಿ,** ಪು.೧೯

೧೨. ಬರಗೂರು ರಾಮಚಂದ್ರಪ್ಪ(ಸಂ), **ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ,** ಪು.೪೪

೧೩. ಅದೇ, ಪು.೪೬

೧೪. ಮೈಥಿಲಿ ಶಿವರಾಮನ್ ರಾಹು(ಅನು) **ವಿಮೋಚನೆಯೆಡೆಗೆ,** ಪು.೧೯

೧೫. ಅದೇ, ಪು.೫೬

## ಅಧ್ಯಾಯ ನಾಲ್ಕು

# ಕಾದಂಬರಿಗಳ ಚಾರಿತ್ರಿಕ ಸಂದರ್ಭ ಮತ್ತು ಬೆಳವಣಿಗೆ

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಾದಂಬರಿಯುಗ ಅವತರಿಸಿದ ಸಂದರ್ಭ ಬಹಳ ವಿಶಿಷ್ಟವಾದುದು. ಆಂಗ್ಲ ವಿದ್ಯಾಭ್ಯಾಸದ ಪರಿಣಾಮವಾಗಿ ನವೀನ ವಿಚಾರಗಳು ತಲೆಯೆತ್ತ ತೊಡಗಿದ್ದು, ದೇಶಿಯ ಮತ್ತು ಪರಕೀಯ ಸಂಸ್ಕೃತಿಗಳ ಆಯ್ಕೆಯಲ್ಲಿ ದ್ವಂದ್ವ ಎದುರಾದದ್ದು ಸ್ವಾತಂತ್ರ್ಯಪೂರ್ವಯುಗದ ಮುಖ್ಯ ಚಹರೆಯಾಗಿದೆ. ನಾನಾ ಸಮಸ್ಯೆಗಳ ಸುಳಿಗಳಲ್ಲಿ ಸಿಲುಕಿದ ಸ್ತ್ರೀಯರ ಸ್ಥಿತಿಗತಿಗಳಿಗೆ ಸಂಬಂಧಿಸಿದಂತೆ ಸುಧಾರಣೆಗಳ ತೀವ್ರ ಅಗತ್ಯವನ್ನು ಮನಗಂಡ ಈ ಯುಗದಲ್ಲಿ ಚಿಂತಕರು ಸಮಾಜ ಸುಧಾರಕರು ಈ ದಿಸೆಯಲ್ಲಿ ವಿಶೇಷವಾಗಿ ಶ್ರಮಿಸಿದ್ದಾರೆ. ಸ್ತ್ರೀ ಈ ಯುಗದ ಗಮನಸೆಳೆವ ಕೇಂದ್ರವಾದಳು. ಹೀಗೆ ಸ್ತ್ರೀ ಕೇಂದ್ರಿತ ಕಾದಂಬರಿಗಳ ರಚನೆಯ ಸಂದರ್ಭದಲ್ಲಿ ಆ ಕಾಲಘಟ್ಟದ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಆರ್ಥಿಕ ಸಂಗತಿಗಳು ಅರಿಯುವುದು ಮುಖ್ಯವಾಗುತ್ತದೆ.

ಬ್ರಿಟಿಷರು ಭಾರತಕ್ಕೆ ಬಂದ ನಂತರವೇ ಬದುಕಿನ ಸಮರ್ಥ ಮಾಧ್ಯಮವಾಗಿ ಗದ್ಯವನ್ನು ದುಡಿಸಿಕೊಳ್ಳಲಾಯಿತು. ಕನ್ನಡ ಕಾದಂಬರಿ ಪರಂಪರೆಯಲ್ಲಿಯೂ ಪ್ರಾದೇಶಿಕ ವೈಶಿಷ್ಟ್ಯತೆ ಎದ್ದು ಕಾಣುತ್ತದೆ. ಭಾರತ ವೈವಿಧ್ಯಮಯವಾದ ಸಂಸ್ಕೃತಿಯನ್ನು ಹೊಂದಿದೆ. ಕರ್ನಾಟಕವೂ ಇದಕ್ಕೆ ಹೊರತಲ್ಲ. ದಕ್ಷಿಣ ಕರ್ನಾಟಕ, ಉತ್ತರ ಕರ್ನಾಟಕ, ಹೈದ್ರಬಾದ್ ಕರ್ನಾಟಕ ಎಂಬ ಪ್ರಾದೇಶಿಕ ವಿಂಗಡಣೆಯೂ ಸಾಂಸ್ಕೃತಿಕ ವೈಶಿಷ್ಟ್ಯತೆಯನ್ನು ಒಳಗೊಂಡಿದೆ. ಈ ಪ್ರದೇಶದ ಲೇಖಕರು ಕಾದಂಬರಿಗಳನ್ನು ಸೃಷ್ಟಿಸಿರುವರು. ಬ್ರಿಟೀಷರಾಗಮನದ ಮೂಲಕ ಕಾಣಿಸಿಕೊಂಡ ಆಧುನಿಕ ಸವಲತ್ತಿನ ಸಾರಿಗೆ ಸಂಪರ್ಕದ ಮೂಲಕ ಪ್ರಾದೇಶಿಕ ಸಾಂಸ್ಕೃತಿಕ ಕೊಡುಕೊಳ್ಳುವಿಕೆ ಪ್ರಾರಂಭವಾಯಿತು. ಇದರಿಂದ ಬ್ರಿಟೀಷರ ಹೊಸ ಮೌಲ್ಯಗಳ ಜೊತೆ ಹೊಂದಾಣಿಕೆ, ಸಂಘರ್ಷ ಪ್ರಾರಂಭವಾಯಿತು. ಹೀಗಾಗಿ ಕನ್ನಡದಲ್ಲಿ ಕಾದಂಬರಿ ರಚನೆಯಾಗುವ ಸಂದರ್ಭ ಗುರುತಿಸಬಹುದು.

"ಯುರೋಪಿನಲ್ಲಾದ ಕೈಗಾರಿಕಾ ಕ್ರಾಂತಿಯು ಜಗತ್ತಿನ ಮೇಲೆ ತೀವ್ರವಾದ ಪರಿಣಾಮವನ್ನುಂಟು ಮಾಡಿತು. ಬದುಕಿನಲ್ಲಿ ಹೊಸ ಬದಲಾವಣೆಯನ್ನು ತಂದಿತು. ಹಾಗೆಯೇ ಹೊಸ ಸಮಸ್ಯೆಗಳನ್ನು ಸೃಷ್ಟಿಸಿತು. ಸಾಮೂಹಿಕ ಜೀವನ ವಿಘಟನೆಗೊಂಡಿತು. ಜಮೀನ್ದಾರಿ ವ್ಯವಸ್ಥೆಯ ಬಂಡವಾಳಶಾಹಿ ವ್ಯವಸ್ಥೆಯೆಡೆಗೆ ಚಲಿಸಲಾರಂಭಿಸಿತು. ಇದರಿಂದ ಪ್ರತಿಯೊಂದು ಸಂಗತಿಯನ್ನು ವಾಸ್ತವಿಕ ದೃಷ್ಟಿಕೋನದಿಂದ ಪರೀಕ್ಷಿಸುವ ಕ್ರಿಯೆ ಬೆಳೆಯಲಾರಂಭಿಸಿತು. ಕೈಗಾರಿಕೆಯ ಉಗಮದ ಹಿಂದೆ ವಿಜ್ಞಾನವಿತ್ತು. ವಿಜ್ಞಾನದ ಹಲವು ಸಂಶೋಧನೆ, ಪ್ರಯೋಗಗಳಿಂದ ತಂತ್ರಜ್ಞಾನ ವಿಕಾಸವಾಯಿತು."[೧] ಈ ರೀತಿಯ ಬೆಳವಣಿಗೆಯು ಸಾಮಾಜಿಕ ಸಂರಚನೆಯಲ್ಲಿ ಚಲನೆ ಮೂಡಿಸಿತು. ಮುದ್ರಣಯಂತ್ರಗಳ ಪ್ರವೇಶ, ಕ್ರೈಸ್ತ ಮಿಶನರಿಗಳ ಕನ್ನಡದ ಕೆಲಸ ಮಧ್ಯಮವರ್ಗದ ಕಲಿಕೆಯ ಪ್ರಮಾಣದಲ್ಲಾದ ತೀವ್ರ ಹೆಚ್ಚಳ ಪತ್ರಿಕೆಗಳ ಉಗಮ ತನ್ಮೂಲಕ ಓದುಗವರ್ಗದ ಕಾರಣವಾಗಿ ಗದ್ಯರೂಪ ಪತ್ರಿಕಾ ಮಾಧ್ಯಮದ ಬೆಳವಣಿಗೆಗಳಿಗೂ ಕಾರಣೀಭೂತವಾಯಿತು. ರಾಜಸತ್ತೆಯ ಆಶ್ರಯದಲ್ಲಿದ್ದ ಸಾಹಿತ್ಯ ಜನಸತ್ತೆಯನ್ನು ಹುಡುಕಿಕೊಂಡು ಬರುವುದರ ಹಿಂದೆ ಇಂಗ್ಲಿಷ್ ಸಾಹಿತ್ಯದ ಪ್ರೇರಣೆಯಿತ್ತು. ಸಾಹಿತ್ಯ ಹೊಸ ಬದಲಾವಣೆಗೆ ಸಂವೇದಿಸುವ ಕ್ರಿಯೆಯಾಯಿತು. ಪ್ರಭುತ್ವ ಶಕ್ತಿಯಿಂದ ಬಿಡಿಸಿಕೊಂಡು ಸಾಮಾನ್ಯರಿಗೆ ಹತ್ತಿರವಾಯಿತು. ಸಾಮಾನ್ಯನೂ ಸಾಹಿತ್ಯ ರಚನೆಯಲ್ಲಿ ತೊಡಗುವಂತಾಯಿತು.

ಕಾದಂಬರಿಯ ವಿಶಿಷ್ಟತೆಯನ್ನು ಟಿ.ಪಿ.ಅಶೋಕ ಅವರು ಚಾರಿತ್ರಿಕ ಹಿನ್ನೆಲೆಯಲ್ಲಿ ಸರಿಯಾಗಿ ಗುರುತಿಸಿದ್ದಾರೆ. "೧೯ನೇಯ ಶತಮಾನದ ಉತ್ತರಾರ್ಧದಲ್ಲಿ ನಮ್ಮ ಗದ್ಯ ಬರವಣಿಗೆ ಹಲವು ಪ್ರಯೋಗಗಳಿಗೆ ತೆರೆದುಕೊಂಡಿತು. ಆದರೆ ಇಂದು ನಾವು ಕಾದಂಬರಿ ಎಂದು ಯಾವುದನ್ನು ಗುರುತಿಸುತ್ತೇವೊ ಅದು ಖಚಿತ ರೂಪವನ್ನು ಪಡೆಯಲು ನಮ್ಮ ಲೇಖಕರು ಹಲವು ಬಗೆಯ ಸೃಜನಾತ್ಮಕ ಬಿಕ್ಕಟ್ಟುಗಳಿಗೆ ಮುಖಾಮುಖಿಯಾಗಬೇಕಾಯಿತು. ತೃತೀಯ ಜಗತ್ತಿನಲ್ಲಿ ಆಧುನಿಕತೆಯ ಪ್ರವೇಶವಾದದ್ದು ವಸಾಹತೀಕರಣದ ಸಂದರ್ಭದಲ್ಲಷ್ಟೇ. ಹೀಗೆ ಆಧುನಿಕತೆ ಹೊರಗಿನಿಂದ ಬಂದದ್ದರಿಂದ ಉಂಟಾದ ಪರಿಣಾಮಗಳು ತುಂಬಾ ಸಂಕೀರ್ಣವಾದದ್ದು. ಈ ಆಧುನಿಕತೆ ನಮಗೆ ಒಂದು ವರವೋ ಶಾಪವೋ ಅಥವಾ ಎರಡೂ ಹೌದೋ ಎಂಬ ದ್ವಂದ್ವದಿಂದ ನಾವಿನ್ನೂ ತಪ್ಪಿಸಿಕೊಂಡಿಲ್ಲ. ಇಂಥದೊಂದು ಸಾಂಸ್ಕೃತಿಕ ದ್ವಂದ್ವವೇ ತೃತೀಯ ಜಗತ್ತಿನ ಕಾದಂಬರಿಯ ವಿನ್ಯಾಸವನ್ನು ಕಟ್ಟಿದೆ. ಈ ದ್ವಂದ್ವ ವಿನ್ಯಾಸ ಹಲವು ಬಗೆಯಲ್ಲಿ ವ್ಯಕ್ತವಾಗುತ್ತದೆ. ಒಂದು ಸಮಾಜ ತನಗೆ ತಾನು ಮುಖಾಮುಖಿಯಾಗುವ, ತನ್ನನ್ನು ತೀವ್ರ ಸ್ವವಿಮರ್ಶೆಗೆ ಒಪ್ಪಿಕೊಳ್ಳುವ ವಿನ್ಯಾಸದ ಜತೆ ಜತೆಯಲ್ಲೇ ತನ್ನನ್ನು ವಸಾಹತುವಾಗಿ ಮಾಡಿಕೊಂಡ ಪರಕೀಯ ಆಡಳಿತಕ್ಕೆ ತನ್ನೆಲ್ಲ ವೈರುಧ್ಯಗಳೊಂದಿಗೆ ಮುಖಾಮುಖಿಯಾಗುವ ವಿನ್ಯಾಸ ಸಾವಯವವಾಗಿ ಕಟ್ಟಿಕೊಂಡು ಕಾದಂಬರಿ ವಿಶಿಷ್ಟವಾಗುತ್ತದೆ."[೨] ಆದ್ದರಿಂದ ಬ್ರಿಟಿಷರು ತಂದ ಆಧುನಿಕತೆಯ

ಕಾರಣದಿಂದ ಕಾದಂಬರಿಯು ಕನ್ನಡಕ್ಕೆ ಬಂದುದಾಗಿದೆ. ಕನ್ನಡ ಕಾದಂಬರಿಯ ಉಗಮವನ್ನು ೧೯ನೆಯ ಶತಮಾನದ ಭಾರತೀಯ ಸಮಾಜವು ಪಡೆದ ಚಾರಿತ್ರಿಕ ಅವಸ್ಥಾಂತರಗಳು ಮತ್ತು ಇದೇ ಹೊತ್ತಿನ ಭಾರತೀಯ ಇಂಗ್ಲೀಷ್ ವಿದ್ಯಾವಂತ ವರ್ಗದ ಜೀವನ ದರ್ಶನಗಳೊಂದಿಗೆ ಚರ್ಚಿಸಬೇಕು.

೧೮೫೭ರ ಸ್ವಾತಂತ್ರ್ಯ ಸಂಗ್ರಾಮ ವಿಫಲವಾದ ಆನಂತರ ಬ್ರಿಟಿಷರು ಭಾರತದ ಆಡಳಿತವನ್ನು ನೇರವಾಗಿ ಅಥವಾ ಪರೋಕ್ಷವಾಗಿ ವಹಿಸಿಕೊಂಡ ಮೇಲೆ ಇಂಗ್ಲೀಷ್ ಯಶಸ್ಸಿನ ಮಾದರಿ ಜನರ ಮುಂದೆ ಇತ್ತು. ಆಗಿನ ಬೆಳವಣಿಗೆಯನ್ನು ಗಮನಿಸುತ್ತಿದ್ದವರಲ್ಲಿ ಕಾರ್ಲ್‌ಮಾರ್ಕ್ಸ್ ಕೂಡ ಒಬ್ಬ. ಪೌರ್ವಾತ್ಯ ಸಮಾಜವನ್ನು ನಿರ್ನಾಮ ಮಾಡುವ ಮತ್ತು ಏಷಿಯಾದಲ್ಲಿ ಪಾಶ್ಚಾತ್ಯ ಸಮಾಜದ ನಿರ್ಮಾಣಕ್ಕೆ ಅಡಿಗಲ್ಲು ಹಾಕುವ ಮಹತ್ತರ ಕಾರ್ಯಗಳನ್ನು ಇಂಗ್ಲೆಂಡ್ ನೆರವೇರಿಸುತ್ತದೆಯೆಂದು ಅವನು ಸ್ಪಷ್ಟವಾಗಿ ಹೇಳಿದ. ಆದರೆ ಮಾರ್ಕ್ಸ್‌ನ ಹೇಳಿಕೆಯಂತೆ ಈವರೆಗೆ ಏಷಿಯಾಟಿಕ್ ಸೊಸೈಟಿ ನಿರ್ನಾಮವಾಗಿಲ್ಲ. ಆದರೆ ಹೊಸ ಶಿಕ್ಷಣ ಮತ್ತು ಔದ್ಯಮೀಕರಣದ ಮೂಲಕ ಭಾರತೀಯ ಬದುಕು ತಿರುವು ಕಂಡಿರುವುದಂತೂ ಸತ್ಯ. ಇದಕ್ಕೆ ಕಾರಣ ಇಂಗ್ಲೀಷ್ ಶಿಕ್ಷಣ ಪದ್ಧತಿ. ಈ ದೃಷ್ಟಿಯಿಂದಲೂ ೧೮೫೭ ಮಹತ್ವದ ವರ್ಷ. ಕಾರಣ ಆ ವರ್ಷ ಕಲ್ಕತ್ತಾ, ಮುಂಬೈ, ಮದ್ರಾಸ್ ವಿಶ್ವವಿದ್ಯಾಲಯಗಳು ಅಸ್ತಿತ್ವಕ್ಕೆ ಬಂದು ದೇಶಿಯ ಶಿಕ್ಷಣ ಸೋಲನ್ನೊಪ್ಪಬೇಕಾಯಿತು. ಪಾಶ್ಚಾತ್ಯ ಶಿಕ್ಷಣದ ಫಲವಾಗಿ ಐತಿಹಾಸಿಕ ಮತ್ತು ವೈಯಕ್ತಿಕ ವಿಚಾರ ಸರಣಿ ಶಿಕ್ಷಿತ ಮಧ್ಯಮ ವರ್ಗ ಇವು ಪಾಶ್ಚಾತ್ಯ ಶಿಕ್ಷಣದ ಫಲವಾಗಿ ಬಂದವು. ಒಂದೆಡೆ ಮಿಷನರಿಗಳ ಮತಾಂತರ ಮತ್ತೊಂದೆಡೆ ಅವು ಮಾಡಿದ ಹಿಂದೂ ಧರ್ಮದ ಟೀಕೆ ಭಾರತೀಯರಲ್ಲಿ ಸ್ವವಿಮರ್ಶಾಭಾವವನ್ನು ಬೆಳೆಸಿದವು. ಹಿಂದೂ ಸಂಸ್ಕೃತಿಯ ಪುನರ್ ವಿಮರ್ಶೆಯ ಅಗತ್ಯವನ್ನು ಬ್ರಹ್ಮಸಮಾಜ ಮತ್ತು ಆರ್ಯಸಮಾಜ ಒಪ್ಪಿಕೊಂಡವು. ಇಂಥ ಚಾರಿತ್ರಿಕ ಸಂದರ್ಭದಲ್ಲಿ ಕಾದಂಬರಿಯ ಸೃಷ್ಟಿಗೆ ಅಗತ್ಯವಾದ ಮಾನವತಾ ದೃಷ್ಟಿಕೋನ, ವಿಮರ್ಶೆಗೆ ತನ್ನನ್ನು ತೆರೆದುಕೊಳ್ಳುವ ಮುಕ್ತಧೋರಣೆ ಇಂತಹ ಮನಸ್ಥಿತಿ ಹೀಗೆ ಕಳೆದ ಶತಮಾನದ ಬ್ರಿಟಿಷರ ಯಶಸ್ಸಿನ ಕತೆಗೆ ಭಾರತೀಯರು ಪ್ರತಿಸ್ಪಂದಿಸಿದ ಕ್ರಿಯೆಯು ಗತವಿನ್ಯಾಸದಲ್ಲಿ ಪ್ರಥಮವಾಗಿ ಬಂಗಾಳದಲ್ಲಿ ಮೂಡಿಬಂತು.

ಬ್ರಿಟಿಷರು ಕೈಗೊಂಡ ಕಾರ್ಯಗಳು ಪರೋಕ್ಷವಾಗಿ ಜನಜೀವನದ ಮೇಲೆ ಪ್ರಭಾವ ಬೀರಿದವು. ಹಾಗೆ ಜನತೆ ಪಾಶ್ಚಾತ್ಯ ಮಾದರಿಯನ್ನು ಅನುಸರಿಸದೆ ಸ್ವತಂತ್ರವಾಗಿ ಆಲೋಚನೆ ಮಾಡುವ ದೃಷ್ಟಿಕೋನವನ್ನು ಬೆಳೆಸಿಕೊಂಡರು. ಇಂಗ್ಲೀಷ್ ಶಿಕ್ಷಣದಿಂದಾಗಿ ವಿದ್ಯಾವಂತ ಹಾಗೂ ಬುದ್ಧಿವಂತ ಆಲೋಚನೆಗಳು ಬದಲಾದವು. ಅಂತಹ ರಚನಾತ್ಮಕ ಬೆಳವಣಿಗೆಯ ಪ್ರತಿಸ್ಪಂದನಕ್ಕೆ ಆ ಸಂದರ್ಭದಲ್ಲಿದ್ದ ಸಾಂಸ್ಕೃತಿಕ ಹಿನ್ನಲೆಯೂ ಪ್ರಮುಖವಾದ ಕಾರಣವೆಂದು ಹೇಳಬಹುದು.

## ಸಾಂಸ್ಕೃತಿಕ ಅಂಶಗಳು

ಕನ್ನಡ ಕಾದಂಬರಿಗೆ ಸಂಬಂಧಿಸಿದಂತೆ ನಾವು ಪರಿಶೀಲಿಸಬೇಕಾಗಿರುವ ೧೯ನೇಯ ಶತಮಾನದ ಕರ್ನಾಟಕದ ಸಾಂಸ್ಕೃತಿಕ ಸ್ಥಿತಿಯನ್ನು ಈಗಾಗಲೇ ಐದು ಜನ ವಿದ್ವಾಂಸರು ಚರ್ಚಿಸಿದ್ದಾರೆ. "೧೯ನೆಯ ಶತಮಾನದ ಕರ್ನಾಟಕದ ಸ್ಥಿತಿ, ಕನ್ನಡ ಭಾಷೆಯ ಪರಿಸ್ಥಿತಿ, ಸಾಹಿತ್ಯ, ಗ್ರಂಥೋದ್ಯಮ, ಪತ್ರಿಕೆಗಳ ಬೆಳವಣಿಗೆ, ವಿದ್ಯಾಭ್ಯಾಸದ ಮುನ್ನಡೆ ಕ್ರಿಶ್ಚಿಯನ್ ಮಿಶನರಿಗಳ ಕನ್ನಡ ಸೇವೆ, ಕನ್ನಡದ ವಿವಿಧ ಸಂಘ ಸಂಸ್ಥೆಗಳು ಹಾಗೂ ಸಾಹಿತಿಗಳ ವಿವರಣಾತ್ಮಕ ಅಧ್ಯಯನವನ್ನು ಶ್ರೀನಿವಾಸ ಹಾವನೂರು, ರಾ.ಯ.ಧಾರವಾಡಕರ, ಕೃಷ್ಣಮೂರ್ತಿ, ಎಚ್.ಎಸ್. ಸುಜಾತ ಅವರು ನಡೆಸಿದ್ದಾರೆ. ಅಲ್ಲದೆ ಹರಿಕೃಷ್ಣ ಭರಣ್ಯ ಅವರ ಪಿ.ಹೆಚ್.ಡಿ. ಪ್ರಬಂಧದಲ್ಲಿಯೂ ಈ ಬಗ್ಗೆ ವಿವರಗಳು ಮಂಡಿತವಾಗಿವೆ."[೩] ಆದ್ದರಿಂದ ಮೊದಲ ಕಾದಂಬರಿಗಳಲ್ಲಿ ಎದ್ದು ಕಾಣುವ ವೈವಿಧ್ಯಗಳಿಗೆ ಕರ್ನಾಟಕದ ಸಾಂಸ್ಕೃತಿಕ ಅಂಶಗಳ ವಿವೇಚನೆ ಮಾಡಲಾಗಿದೆ.

ಟಿಪ್ಪುವಿನ ಪತನಾನಂತರ(೧೭೯೯) ಕರ್ನಾಟಕದಲ್ಲೇ ಪ್ರಥಮವಾಗಿ ಬ್ರಿಟೀಷರ ನೇರ ಆಡಳಿತಕ್ಕೆ ಒಳಗಾದ ಪ್ರದೇಶವೆಂದರೆ ದಕ್ಷಿಣಕನ್ನಡ. ಅಲ್ಲದೆ ೧೯ನೆಯ ಶತಮಾನದ ಮೊದಲಾರ್ಧದಲ್ಲಿಯೇ ಕ್ರಿಶ್ಚಿಯನ್ ಮಿಶನರಿಗಳು ತಮ್ಮ ಚಟುವಟಿಕೆಗಳನ್ನು ಈ ಜಿಲ್ಲೆಯಲ್ಲಿ ವಿಸ್ತರಿಸಲಾರಂಭಿಸಿದ್ದರು. ಔದ್ಯಮೀಕರಣ ಮತ್ತು ಸಾಹಿತ್ಯಿಕ ಕೆಲಸಗಳಲ್ಲಿ ದೇಶದಲ್ಲಿಯೇ ಮುಂಚೂಣಿಯಲ್ಲಿದ್ದ ಸಂಸ್ಥೆಯಾದ ಬಾಸೆಲ್ ಮಿಶನ್‌ನ ಕೇಂದ್ರವಿದ್ದುದು ಮಂಗಳೂರಿನಲ್ಲಿಯೇ. ಕ್ರೈಸ್ತಧರ್ಮ ಪ್ರಚಾರದ ಉದ್ದೇಶದಿಂದ ಜರ್ಮನ್ ಮಾತನಾಡುವ ಪ್ರೊಟೆಸ್ಟೆಂಟ್ ಕ್ರೈಸ್ತರಿಂದ ೧೮೧೫ರಲ್ಲಿ ಈ ಸಂಸ್ಥೆಯು ಪ್ರಾರಂಭವಾಯಿತು. ದಕ್ಷಿಣಕನ್ನಡ ಜಿಲ್ಲೆಯ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ರಂಗದಲ್ಲಿ ಇವರು ಕ್ರಿಯಾಶೀಲ ಪಾತ್ರವನ್ನು ವಹಿಸಿದರು. ಈ ಸಂಸ್ಥೆಯ ಮಿಶನರಿಗಳು ತಮ್ಮ ಶಾಲೆಗಳು ಮತ್ತು ಉದ್ಯಮಗಳ ಮೂಲಕ ಬಂಡವಾಳಶಾಹಿ ನೈತಿಕತೆಯಾದ ಉದ್ಯಮಶೀಲತೆ ಮತ್ತು ದಕ್ಷತೆಗಳನ್ನು ಬೆಳೆಸಲು ಯತ್ನಿಸಿದರು. ಇವು ಮಿಶನರಿಗಳ ಕ್ರೈಸ್ತ ದೃಷ್ಟಿಕೋನದ 'ಆಧುನಿಕ ನಾಗರಿಕತೆಯ' ಪರಿಕಲ್ಪನೆಗೆ ಹತ್ತಿರವೇ ಆಗಿದ್ದವು.

ಶಾಲೆಗಳಲ್ಲಿ ಎಲ್ಲರಿಗೂ ಮುಕ್ತ ಪ್ರವೇಶವಿದ್ದರೂ ಅವುಗಳು ಹೆಚ್ಚಾಗಿ ಮೇಲ್ಜಾತಿ ಜನರಿಂದಲೇ ತುಂಬಿದ್ದವು. ಸರಕಾರಿ ಉದ್ಯೋಗಕ್ಕೆ ರಹದಾರಿಯಾಗಿ ಅವರು ಇಂಗ್ಲಿಷ್ ವಿದ್ಯಾಭ್ಯಾಸವನ್ನು ತಂದರು. ಸಾರಸ್ವತರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಇಂಗ್ಲಿಷ್ ಶಿಕ್ಷಣದ ಪ್ರಯೋಜನವನ್ನು ಪಡೆದರು. "ಸಾರಸ್ವತರದ್ದು ಪ್ರಗತಿಗಾಮಿ ಮತ್ತು ಕ್ರಿಯಾಶೀಲ ವರ್ಗ. ಅವರು ತಮ್ಮ ಬುದ್ಧಿವಂತಿಕೆ ಮತ್ತು ಕಾಲಸ್ಥಿತಿಗೆ ಹೊಂದಿಕೊಳ್ಳುವ ವ್ಯವಹಾರ, ವಿವೇಕದಿಂದಾಗಿ ಸರಕಾರಿ ಸೇವೆಯಲ್ಲಿ ಪ್ರಭಾವಶಾಲಿ ಹುದ್ದೆಗಳನ್ನು ಪಡೆದಿರುತ್ತಾರೆ."[೪] ಹೀಗಾಗಿ ಸಾರಸ್ವತರು ಶಿಕ್ಷಣ ಕ್ಷೇತ್ರದಲ್ಲಿ

ಮುನ್ನಡೆಯಲ್ಲಿದ್ದುದನ್ನು ಇವರಲ್ಲಿ ಹೆಚ್ಚಿನವರು ಡಾಕ್ಟರುಗಳು, ವಕೀಲರು ಮತ್ತು ಸರಕಾರಿ ನೌಕರರಾಗಿ ಉನ್ನತ ಹುದ್ದೆಯಲ್ಲಿದ್ದುದನ್ನು ಮದರಾಸು ಜಿಲ್ಲಾ ಗೆಝೆಟಿಯರ್‌ನಲ್ಲಿಯೂ ಪ್ರಸ್ತಾಪಿಸಲಾಗಿದೆ.

ಆಧುನಿಕ ವಿದ್ಯಾವಂತರು ತಮ್ಮ ದೈನಿಕದ ಆಚರಣೆಗಳಲ್ಲಿ ಸಾರಸ್ವತ ಧಾರ್ಮಿಕತೆಯನ್ನು ಕೈಬಿಡಲಾರಂಭಿಸಿದ್ದರಿಂದ ಪಾಂಡುರಂಗಾಶ್ರಮ ಸ್ವಾಮಿಗಳು ಸುಧಾರಣಾವಾದಿಗಳಿಗೆ ವಿರುದ್ಧ ದಿಕ್ಕಿನಲ್ಲಿ ಧಾರ್ಮಿಕ ಸುಧಾರಣೆಯನ್ನು ಕೈಗೊಂಡರು. ಸಂಪ್ರದಾಯಿಕ ಕರ್ತವ್ಯ ಮತ್ತು ಹೊಣೆಗಾರಿಕೆಯನ್ನು ಹೇರಲು ಯತ್ನಿಸಿದರು. ಆದರೆ ಸುಧಾರಣಾವಾದಿ ವಿದ್ಯಾವಂತರು ವ್ಯಕ್ತಿವಾದಿ ಸಿದ್ಧಾಂತಗಳನ್ನು ನಂಬಿದವರಾಗಿದ್ದರು. ಇವೆರಡೂ ಬೆಳವಣಿಗೆಗಳು ಹೊಸ ವಿದ್ಯಾಭ್ಯಾಸ ಮತ್ತು ಹೊಸ ಪರಿಸ್ಥಿತಿಯ ಕಾರಣದಿಂದಲೇ ಉದ್ಭವಿಸಿದವು ಎನ್ನುವುದು ನೆನಪಿಡಬೇಕು. ಈ ಬೆಳವಣಿಗೆಗಳಿಂದ ಸಾರಸ್ವತ ಸಮಾಜದಲ್ಲಿ ತೀವ್ರವಾದ ಧಾರ್ಮಿಕ–ವೈಚಾರಿಕ ಸಂಘರ್ಷವೊದಗಿತು. ಸಾರಸ್ವತರು ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ತೆರೆದುಕೊಂಡದ್ದೇ ಇದಕ್ಕೆ ಪ್ರಧಾನ ಕಾರಣವಾಯಿತು. ಬದಲಾಗುತ್ತಿರುವ ಜಗತ್ತಿನಲ್ಲಿ ಸಾರಸ್ವತ ಸಮಾಜದ ಸ್ಥಿತಿಯನ್ನು ವಿವರಿಸಿದ ಫ್ರಾಂಕ್ ಕೊಲೊನ್ ಅವರ ಅಧ್ಯಯನದಲ್ಲಿ ಈ ಸ್ಥಿತಿಯನ್ನು ಹೀಗೆ ತಿಳಿಸಲಾಗಿದೆ.

"ಸ್ವಾಮಿಯೂ ಸೇರಿದಂತೆ ಎಲ್ಲಾ ಸಾರಸ್ವತರು ಬದಲಾದ ಪರಿಸ್ಥಿತಿಯನ್ನು ಅನುಭವಿಸುತ್ತಿದ್ದರು. ಹೊಸಕಾಲದ ಅಗತ್ಯಗಳು ಮತ್ತು ಅವಕಾಶಗಳೊಂದಿಗೆ ಹೊಂದಿಕೊಳ್ಳಲು ಅವರು ಯತ್ನಿಸುತ್ತಿದ್ದರು. ಸ್ವತಃ ಸ್ವಾಮಿಯೇ ತಂದ ಧರ್ಮಸುಧಾರಣೆಗಳು ಹಿಂದಿನ ಶತಮಾನದ ಸಾರಸ್ವತ ಸಂಪ್ರದಾಯಗಳಿಗಿಂತ ಭಿನ್ನವಾಗಿದ್ದವು. ಈ ಧಾರ್ಮಿಕ ಸುಧಾರಣೆಗಳಿಗೂ ಸಮಾಜ ಸುಧಾರಕರಿಗೂ ಇದ್ದ ವ್ಯತ್ಯಾಸ ಮೌಲ್ಯಗಳಿಗೆ ಮತ್ತು ಆದ್ಯತೆಗಳಿಗೆ ಸಂಬಂಧಪಟ್ಟವು. ಸ್ವಾಮಿಯ ಧಾರ್ಮಿಕ ಮೌಲ್ಯವನ್ನು ಆಧರಿಸಿದರೆ ಸಮಾಜ ಸುಧಾರಕರು ಪಶ್ಚಿಮದ ಅನುಭವದಿಂದ ಒದಗಿದ ಅಮೂರ್ತ ಮಾದರಿಯನ್ನು ಆಶ್ರಯಿಸಿದ್ದರು."[೫]

ಕ್ರಿ.ಶ.೧೭೦೦ರಿಂದ ಗೋವಾದಿಂದ ತನ್ನ ವಲಸೆಯನ್ನು ಪ್ರಾರಂಭಿಸಿದ ಈ ಸಮಾಜ ಅನೇಕ ಬದಲಾವಣೆಗಳಿಗೆ ಒಳಗಾಗುತ್ತಲೇ ಬಂದಿತು. ಕೊಂಕಣಸ್ಥರಿಂದ ಬೇರೆಯಾಗಿ ಸಾರಸ್ವತ ಸಮಾಜ ಹುಟ್ಟಿದ್ದು ಪರಿಸ್ಥಿತಿಗೆ ಹೊಂದಿಕೊಳ್ಳುವ ಪ್ರಯತ್ನವೇ ಆಗಿತ್ತು. ಬ್ರಿಟಿಷ್ ಆಡಳಿತದ ಸಮಯದಲ್ಲಿ ಸಾರಸ್ವತ ಸಮಾಜ ಮಗದೊಮ್ಮೆ ತನ್ನ ಗುರುತನ್ನು ಉಳಿಸಿಕೊಳ್ಳಲು ತೀವ್ರ ಸಾಮಾಜಿಕ ಚಿಂತನೆ ಮತ್ತು ಸುಧಾರಣಾವಾದಿ ಆಶಯಗಳಿಗೆ ಕಾರಣವಾಗಿದೆ. ಈ ಒಂದು ಬೌದ್ಧಿಕ ಚರಿತ್ರೆಗೆ ಸಂಬಂಧಿಸಿದ ಸಂಘರ್ಷಗಳಿಗೆ ಒಳಗಾದುದರಿಂದ ಸಹಜವಾಗಿಯೇ ಸಾಹಿತ್ಯ ಕ್ಷೇತ್ರದಲ್ಲಿಯೂ ಸಾರಸ್ವತರೂ ಇತರರಿಗಿಂತ ಮುಂದಿದ್ದರು. ೧೯ನೆಯ ಶತಮಾನದ ಉತ್ತರಾರ್ಧ

ಮತ್ತು ಇಪ್ಪತ್ತನೆಯ ಶತಮಾನದ ಮೊದಲ ದಶಕಗಳಲ್ಲಿ ದಕ್ಷಿಣ ಕನ್ನಡದ ಸಾಹಿತ್ಯ ಕ್ಷೇತ್ರದಲ್ಲಿ ಸಾರಸ್ವತರು ಪ್ರಧಾನ ಪಾತ್ರವನ್ನು ವಹಿಸಿರುವುದನ್ನು ಗಮನಿಸಬಹುದು. ವಸಾಹತುಶಾಹಿ ಆಡಳಿತದ ಪರಿಣಾಮಗಳನ್ನು ಕರ್ನಾಟಕದಲ್ಲಿಯೇ ಮೊದಲು ಅನುಭವಕ್ಕೆ ತಂದುಕೊಂಡ ಸಾರಸ್ವತರಿಂದ ಕನ್ನಡದ ಮೊದಲ ಕಾದಂಬರಿಗಳು ರಚಿತವಾದವು. ಗುಲ್ವಾಡಿ ವೆಂಕಟರಾಯರು ಸುಧಾರಣಾ ವಾದದ ಪರವಾಗಿದ್ದರು. ಜಾತಿ ಪದ್ಧತಿಯ ವಿರೋಧ, ಸ್ತ್ರೀ ಶಿಕ್ಷಣ ಮತ್ತು ಸಮಾನತೆ, ವಿಧವಾ ವಿವಾಹಗಳ ಪರವಾಗಿ ಗುಲ್ವಾಡಿಯವರು ಪಾಂಡುರಂಗಾಶ್ರಮ ಸ್ವಾಮಿಗಳೊಂದಿಗೆ ಮತ್ತು ತಮ್ಮ ಸಮಾಜದ ಸದಸ್ಯರೊಂದಿಗೆ ವಾಗ್ವಾದಗಳನ್ನು ನಡೆಸಿದ್ದರು. ಈ ಎಲ್ಲ ಅಂಶಗಳು ಸಾರಸ್ವತ ವಿದ್ಯಾವಂತರ ಮನಃಸ್ಥಿತಿಯನ್ನು ಬಿಂಬಿಸುತ್ತವೆ. ಸಹಜವಾಗಿಯೇ ದಕ್ಷಿಣ ಕನ್ನಡದ ಸಾರಸ್ವತರು ರಚಿಸಿದ ಕಾದಂಬರಿಗಳಲ್ಲಿ ಅವರ ತೀವ್ರವಾದ ಸಾಮಾಜಿಕ ಚಿಂತನೆಗಳು ಮಂಡಿತವಾಗಿವೆ. ಉಳಿದ ವಿದ್ಯಾವಂತರಿಗಿಂತ ಮೊದಲು ಸಾಮಾಜಿಕ ಬದಲಾವಣೆಗೆ ಸಾರಸ್ವತರು ಸ್ಪಂದಿಸಿರುವುದನ್ನು ಅವರ ಸಾಮಾಜಿಕ ಕಾದಂಬರಿಗಳು ಸೂಚಿಸುತ್ತವೆ.

ಮೈಸೂರಿನಲ್ಲಿ ವಸಾಹತುಶಾಹಿ ಅನುಭವ, ದಕ್ಷಿಣ ಕನ್ನಡದಂತೆ ನೇರವಾದುದಾಗಿರಲಿಲ್ಲ. ಮಹಾರಾಜರ ಆಡಳಿತದ ಮೂಲಕ ಹರಿದು ಬಂದುದಾಗಿತ್ತು. ವಿಜಯನಗರದ ಪತನಾನಂತರ ದೇಶಿಯ ಕಲೆ ಮತ್ತು ಸಾಹಿತ್ಯಗಳಿಗೆ ಮುಮ್ಮಡಿ ಕೃಷ್ಣರಾಜರೇ ಏಕೈಕ ಆಶ್ರಯಸ್ಥಾನವಾಗಿದ್ದರು. ದೇಶಿಯ ಕಲೆ ಮತ್ತು ಸಂಸ್ಕೃತಿಗಳಿಗೆ ಮಹಾರಾಜರು ವಿಶೇಷ ಪ್ರೋತ್ಸಾಹವನ್ನು ನೀಡಿದರು. ಮುಮ್ಮಡಿಯವರ ಹೆಸರಿನಲ್ಲಿ ಪ್ರಕಟವಾದ ಅವರ ಸ್ವಂತ ಮತ್ತು ಆಸ್ಥಾನ ವಿದ್ವಾಂಸರ ಕೃತಿಗಳನ್ನು ಪರಿಶೀಲಿಸಿದರೆ ಸಂಪ್ರದಾಯಿಕ ಕಥನ ಪರಂಪರೆ ಮೈಸೂರಿನಲ್ಲಿ ಪ್ರಭಾವಶಾಲಿಯಾಗಿದ್ದುದು ಕಂಡುಬರುತ್ತದೆ. ೧೯ನೆಯ ಶತಮಾನದ ಕೊನೆಯ ದಶಕಗಳಲ್ಲಿ ಈ ಭಾಗದಿಂದ ಮಹಾರಾಜರ ಉದಾರ ನೆರವಿನಿಂದ ಪ್ರಕಟವಾಗುತ್ತಿದ್ದ ಕರ್ನಾಟಕ ಗ್ರಂಥಮಾಲೆಯಲ್ಲಿ ಶ್ರೀಕಂಠೇಗೌಡ, ಬಸವಪ್ಪ ಶಾಸ್ತ್ರಿ ರೂಪಾಂತರಿಸಿದ ಶೇಕ್ಸ್‌ಪಿಯರನ ನಾಟಕಗಳು ಸಂಸ್ಕೃತದ ರಮ್ಯ ಕಥನಗಳಿಗೆ ಹತ್ತಿರದ ಶೈಲಿಯಾಗಿದ್ದವು ಎನ್ನುವುದು ಗಮನಿಸತಕ್ಕ ಅಂಶವಾಗಿದೆ.

ಈ ಹಿನ್ನಲೆಯಲ್ಲಿ ಮೈಸೂರು ಭಾಗದಿಂದ ಕಾದಂಬರಿಗಳನ್ನು ಅವಿರತವಾಗಿ ರಚಿಸಿದ ಬಿ.ವೆಂಕಟಾಚಾರ್ಯರು ಬಂಗಾಲಿ ಕಾದಂಬರಿಗಳ ಅನುವಾದಗಳನ್ನು ಕೈಗೊಂಡಿದ್ದು ಸಹಜವಾಗಿದೆ. ಸಮಕಾಲೀನ ವಾಸ್ತವದ ವಿವರಗಳನ್ನು ಒಳಗೊಂಡ ಮತ್ತು ಸಾಮಾಜಿಕ ಕಾದಂಬರಿಗಳಿಗೆ ಭಿನ್ನವಾದ ಮತ್ತು ರಮ್ಯ ಕಥನಗಳಿಗೆ ಹತ್ತಿರವಾದ ಶೈಲಿಯ ಬಂಗಾಲಿ ಕಾದಂಬರಿಗಳನ್ನು ಅವರು ಅನುವಾದಿಸಿದರು. ೧೮೩೧ ರಿಂದ ೧೮೮೧ರ ತನಕ ಮಹಾರಾಜರ ದೇಶಿಯ ಆಡಳಿತ ನೆಪಮಾತ್ರದ್ದಾಗಿತ್ತು. ಮಹಾರಾಜರ ಪ್ರಭಾವವನ್ನು ಒಳಗೊಂಡ ಪಾಶ್ಚಾತ್ಯ ರೀತಿಯಲ್ಲಿ ದೇಶದಲ್ಲಿ

ಆಗುತ್ತಿದ್ದ ಬದಲಾವಣೆಗಳಿಗೆ ಮೈಸೂರು ಕೂಡಾ ಸ್ಪಂದಿಸಿತು. ಮಹಾರಾಜರ ಆಡಳಿತದ ಪ್ರಭಾವದಿಂದ ದೇಶಿಯ ಕೃತಿಗಳು ರಚನೆಯಾಗುತ್ತಿದ್ದ ಸಂದರ್ಭದಲ್ಲಿಯೇ ಮೈಸೂರಿನ ಸಾಮಾಜಿಕ ಆರ್ಥಿಕ ತಳಹದಿಯಲ್ಲಿ ಬದಲಾವಣೆಯು ನಡೆಯುತ್ತಿದ್ದವು. ಹೊಸ ವಿದ್ಯಾವಂತರು ಇಲ್ಲಿ ಕಾಣಿಸಿಕೊಂಡರು. ಬದಲಾವಣೆಯ ಸ್ಥಿತಿಯನ್ನು ತಕ್ಷಣ ಅರಿತು ಅದಕ್ಕೆ ಸಾಹಿತ್ಯಕವಾಗಿ ಸ್ಪಂದಿಸಿದವರು ಉಳಿದೆಡೆಯಂತೆ ಇಲ್ಲಿಯೂ ಬ್ರಾಹ್ಮಣ ಸಮುದಾಯದವರೇ ಆಗಿದ್ದರು. ಇಂಗ್ಲೀಷ್ ವಿದ್ಯಾಭ್ಯಾಸದ ಲಾಭಗಳನ್ನು ಇವರು ಪಡೆದರು. "ಈ ಅಲ್ಪಸಂಖ್ಯಾತ ಪ್ರಭುತ್ವ ಹೊಂದಿದ ವರ್ಗವೆ ತನ್ನ ಸಮುದಾಯಕ್ಕೆ ಹೊಂದಿಕೊಳ್ಳುವ ಹಾಗೂ ಮುನ್ನುಗ್ಗುವ ಪ್ರವೃತ್ತಿಯಿಂದಾಗಿ ಬೌದ್ಧಿಕ ಉತ್ಪಾದನಾ ಅಂಗಗಳನ್ನು(nears of intellectual production) ನಿಯಂತ್ರಿಸುತ್ತಿತ್ತು ಎಂದು ಚಂದ್ರಶೇಖರ್ ಗುರುತಿಸಿದ್ದಾರೆ."[೬] ಈ ಎಲ್ಲಾ ಅಂಶಗಳಿಂದ ಸ್ವತಂತ್ರ ಕಾದಂಬರಿಯ ರಚನೆಯು ಮೈಸೂರಿನಲ್ಲಿ ತಡವಾಗಿ(೧೯೧೫) ಆಗಿರುವುದು ಕಂಡುಬರುತ್ತದೆ.

ಉತ್ತರ ಕರ್ನಾಟಕದ ಪರಿಸ್ಥಿತಿ ಭಿನ್ನವಾದುದು. ವಿಜಯನಗರ ಪತನಾನಂತರ ಆರಂಭವಾದ ಕರ್ನಾಟಕ ವಿಭಜನೆಯ ಪ್ರಕ್ರಿಯೆ ವಸಾಹತುಶಾಹಿ ಆಡಳಿತದಲ್ಲಿ ಪೂರ್ಣಗೊಂಡಿತು. ಮೈಸೂರು ಅರಸರು, ನಿಜಾಮರು, ಮುಂಬೈ, ಕೊಡಗು ಮತ್ತು ಮದರಾಸು ಪ್ರಾಂತ್ಯಗಳಲ್ಲಿ ಕರ್ನಾಟಕವು ಹರಿದುಹಂಚಿ ಹೋಯಿತು. ಪೇಶ್ವೆಯವರ ಆಡಳಿತದ ಸಂದರ್ಭದಲ್ಲಿ ಮತ್ತು ಉತ್ತರ ಕರ್ನಾಟಕದಲ್ಲೇ ಎರಡು ರಾಜ್ಯಗಳಿದ್ದವು. ಮೈಸೂರು ಅರಸರ ಆಡಳಿತದಲ್ಲೇ ತನ್ನ ಉನ್ನತಿಯನ್ನು ಕಂಡ ಮೈಸೂರು ಪ್ರದೇಶ ಮತ್ತು ಭೌಗೋಳಿಕ ಕಾರಣಗಳಿಂದ ತನ್ನದೇ ಪ್ರತ್ಯೇಕತೆಯಲ್ಲಿ ಬಾಳಿದ ದಕ್ಷಿಣ ಕನ್ನಡಗಳಿಗಿಂತ ಹೆಚ್ಚು ಮೂರ್ತವಾಗಿ ನಾಡಿನ ಮತ್ತು ಭಾಷೆಯ ಛಿದ್ರೀಕರಣ ಅನುಭವವನ್ನು ಉತ್ತರ ಕರ್ನಾಟಕವು ಪಡೆದಿತ್ತು. ಮುಂದೆ ಏಕೀಕರಣದ ಆಕಾಂಕ್ಷೆಯೂ ಈ ಭಾಗದಿಂದ ಬಲವಾದ ಚಳುವಳಿಯಾಗಿ ರೂಪುಗೊಳ್ಳಲು ಈ ಸ್ಥಿತಿಯೇ ಕಾರಣವಾಗಿದೆ. ತಮ್ಮ ವಿಶಿಷ್ಟ ಕನ್ನಡತನವನ್ನು ಉಳಿಸಿಕೊಳ್ಳಲು ಈ ಭಾಗದ ಕನ್ನಡಿಗರು ಹೋರಾಡಿದರು. ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡದ ಟ್ರೇನಿಂಗ್ ಕಾಲೇಜು, ಮಠಗಳು, ಈ ಚಟುವಟಿಕೆಗಳ ಹಿನ್ನೆಲೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿದವು.

ಮರಾಠಿ ಪ್ರಭಾವ ಅದರಲ್ಲೂ ತಿಲಕರ 'ಕೇಸರಿ' ಪತ್ರಿಕೆಯ ವ್ಯಾಪಕ ಪ್ರಸಾರದಿಂದಾಗಿ ಪುನರುತ್ಥಾನವಾದಿ ಆದರ್ಶಗಳು ಈ ಭಾಗದ ವಿದ್ಯಾವಂತರನ್ನು ಆಕರ್ಷಿಸಿದವು. ಇಂಥ ವಾತಾವರಣದ ಜೊತೆ ಜೊತೆಗೆ ಆಧುನಿಕ ಇಂಗ್ಲೀಷ್, ವಿದ್ಯಾಭ್ಯಾಸ, ಮರಾಠ ಸುಧಾರಣಾವಾದಿಗಳ ಪ್ರಭಾವ, ವಸಾಹತುಶಾಹಿ ಪ್ರಭಾವ ಎಲ್ಲವೂ ಅಂದಿನ ಸಾಹಿತ್ಯ, ಸಂಸ್ಕೃತಿ ಸಮಾಜದ ಜೀವನ ಕ್ರಮವನ್ನು ಪಲ್ಲಟಿಸಿದವು. ಪಾಶ್ಚಾತ್ಯ ಸಂಸ್ಕೃತಿ ಸದ್ದಿಲ್ಲದೆ ಆಗಮಿಸಿ ದೇಶಿ ಸಂಸ್ಕೃತಿಯೊಂದಿಗೆ

ವೈರುಧ್ಯದ ಸಂಬಂಧವನ್ನು ಸ್ಥಾಪಿಸಿಕೊಳ್ಳತೊಡಗಿತ್ತು. ಪರಸಂಸ್ಕೃತಿ–ಸ್ವಸಂಸ್ಕೃತಿ ಯಜಮಾನ್ಯ–ಅಧೀನ, ಆಧುನಿಕತೆ–ಸಂಪ್ರದಾಯಿಕತೆ, ಸ್ತ್ರೀ ಕೇಂದ್ರಿತ ಮುಂತಾದ ವೈರುಧ್ಯದ ನೆಲೆಗಳು ಕನ್ನಡ ಕಾದಂಬರಿಗಳ ಪ್ರಾರಂಭಿಕ ಘಟ್ಟದಲ್ಲಿ ರೂಪುಗೊಳ್ಳತೊಡಗಿದ್ದವು. ಈ ಸಂದರ್ಭದಲ್ಲಿ ಸಹಜವಾಗಿಯೇ ಜೀವನ ಕ್ರಮವೂ ಬದಲಾಗುತ್ತಿದ್ದು, ಅದನ್ನು ಆ ಸಂದರ್ಭದ ಕಾದಂಬರಿಗಳು ಬಿಂಬಿಸಿದವು.

* ಹೀಗೆ ಕನ್ನಡ ಕಾದಂಬರಿ ಹಾಗೂ ಚಾರಿತ್ರಿಕ ಸಂದರ್ಭವನ್ನು ಗಮನಿಸಿದಾಗ ಮೊದಲನೆಯದಾಗಿ ಕರ್ನಾಟಕತ್ವದ ಕಲ್ಪನೆ. ಇಲ್ಲಿ ಕರ್ನಾಟಕತ್ವವೆಂದರೆ ಎಲ್ಲ ಕನ್ನಡಿಗರಿಗೂ ಸೇರಿದ ಸಾರಸತ್ವರು ಆದುದರಿಂದಲೇ ಮುದ್ರಣವು ಮುಂದಡಿಯಿಟ್ಟಂತೆ ಕರ್ನಾಟಕ ಏಕೀಕರಣದ ಪ್ರಯತ್ನ ಆರಂಭವಾಯಿತು. ಕನ್ನಡ ಮಾತೆ, ಕನ್ನಡ ಭುವನೇಶ್ವರಿಯ ಪ್ರತಿಮೆಗಳು ಭಾಷೆಯಲ್ಲಿ ಕಡೆಯಲ್ಪಟ್ಟವು. ವಿಜಯನಗರ ಸಾಮ್ರಾಜ್ಯ ಕರ್ನಾಟಕದ ಸಾಂಸ್ಕೃತಿಕ ಪ್ರತೀಕವೆಂಬ ಹಾಗೆ ಮೂಡಿಬಂತು.

* ಯುರೋಪಿನಲ್ಲಿನ ಕೈಗಾರಿಕಾ ಕ್ರಾಂತಿ

* ಬಂಗಾಲದ ಸುಧಾರಣಾವಾದಿ ಚಳುವಳಿಗಳಿಂದ ಮತ್ತು ಮಹಾರಾಷ್ಟ್ರದ ಜನಪರ–ಸ್ತ್ರೀಪರ ಚಿಂತಕರ ಪ್ರಗತಿಪರ ಕಾರ್ಯಚಟುವಟಿಕೆಗಳಿಂದ ಎನ್ನುವುದು ಚಾರಿತ್ರಿಕ ಸಂಗತಿ.

* ರಾಜಾರಾಮ್ ಮೋಹನರಾಯ್, ದಯಾನಂದ ಸರಸ್ವತಿ ಮುಂತಾದ ಸಮಾಜ ಸುಧಾರಕರು ಬೆಂಬಲಿಸಿದ ಸ್ತ್ರೀ ಶಿಕ್ಷಣ ಪ್ರಸಾರ, ಬಾಲ್ಯವಿವಾಹ ವಿರೋಧ, ವಿಧವೆಯರ ಸ್ಥಿತಿಗತಿ ಸುಧಾರಣೆ, ವಿಧವಾ ಮರುವಿವಾಹ ಮುಂತಾದ ಸ್ತ್ರೀ ಪರ ವಿಚಾರಗಳು ಮತ್ತು ನೆರೆಯ ಮಹಾರಾಷ್ಟ್ರದಲ್ಲಿ ಮಹರ್ಷಿಕರ್ವೆ, ಪಂಡಿತ ರಮಾಬಾಯಿಯವರು ಸ್ತ್ರೀಶಿಕ್ಷಣ, ವಿಧವೆಯರ ಕಲ್ಯಾಣಕ್ಕಾಗಿ ನಡೆಸಿದ್ದ ಪ್ರಯತ್ನಗಳನ್ನು ಕಾಣಬಹುದು.

* ತಮಿಳುನಾಡಿನಲ್ಲಿ ಪೆರಿಯಾರ್, ಸುಬ್ರಹ್ಮಣ್ಯ ಭಾರತೀಯರು, ಆಂಧ್ರ ಪ್ರದೇಶದಲ್ಲಿ ವೀರೇಶಲಿಂಗಂ ಅವರು ನಡೆಸಿದ್ದ ಶೋಷಿತಪರ ಹೋರಾಟಗಳು ಮತ್ತು ಸ್ತ್ರೀ ವಿಮೋಚನೆಯ ಚಿಂತನೆಗಳು ಕರ್ನಾಟಕ ಸಾಮಾಜಿಕ ಪರಿಸರದಲ್ಲಿ ಸ್ತ್ರೀ ಸಮಾಜ ಸುಧಾರಣೆಯ ಅಗತ್ಯವನ್ನು ಕುರಿತು ಚಿಂತಿಸಿದರು.

* ಹೀಗೆ ವಸಹಾತೀಕರಣ, ನಗರೀಕರಣ ಇವುಗಳ ಪ್ರಭಾವ ೧೯ನೆಯ ಶತಮಾನದ ಕೊನೆಯ ದಶಕಗಳಲ್ಲಿ ನಮ್ಮಲ್ಲಿ ಬೆಳೆಯುತ್ತಿದ್ದ ಹೊಸ ಸಾಂಸ್ಕೃತಿಕ ಬೆಳವಣಿಗೆ, ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆಗೆ ಬಂದು ಪ್ರಜ್ಞಾಪೂರ್ವವಾದ ಕಣ್ಣಾಗಿಯೇ ಕಾದಂಬರಿ ಅನಿವಾರ್ಯದ ರೀತಿಯಲ್ಲಿಯೇ ಬಂತು ಎಂದು ಹೇಳಿದರೆ ತಪ್ಪಾಗಲಾರದು. ಕನ್ನಡ ಕಾದಂಬರಿಯು ಸಾಂಸ್ಕೃತಿಕ ಬದುಕಿನ

ಸ್ಥಿತ್ಯಂತರಗಳನ್ನು, ಸಂಘರ್ಷಗಳನ್ನು ಲೇಖಕನ ಆದರ್ಶಗಳನ್ನು, ತಾತ್ವಿಕತೆಯನ್ನು ಬಿಂಬಿಸುವ ಸಾಮಾಜಿಕ ಕನ್ನಡಿಯೆನ್ನಬಹುದು. ಸಾಮಾಜಿಕ ಬದಲಾವಣೆಗೆ ತಕ್ಕಂತೆ ಹೊಸ ಪ್ರಯೋಗ ಸಾಹಿತ್ಯದಲ್ಲಿ ಕಾಣಬಹುದು. ಹೀಗಾಗಿ ಕನ್ನಡ ಕಾದಂಬರಿಯ ಚಾರಿತ್ರಿಕ ಸಂದರ್ಭ ಅತ್ಯಂತ ಮಹತ್ವವಾದುದು.

**ಕಾದಂಬರಿಗಳ 'ಚಾರಿತ್ರಿಕ ಬೆಳವಣಿಗೆ'**

ಕನ್ನಡ ಕಾದಂಬರಿಗೆ ಸಂಬಂಧಿಸಿದಂತೆ ನೋಡುವಾಗ ಕಾದಂಬರಿ ಪ್ರಕಾರ ಸಿದ್ದರೂಪವನ್ನು ಪಡೆದು ಪ್ರಬುದ್ಧವಾಗಿ ಬೆಳೆದು ಬಂದಿತೆಂದು ಹೇಳುವಂತಿಲ್ಲ. ಈ ದೃಷ್ಟಿಯಿಂದ ವಿಚಾರ ಮಾಡಿದಾಗ ೧೯ನೆಯ ಶತಮಾನದ ಸಂಕ್ರಮಣ ಕಾಲ ಮತ್ತು ೨೦ನೆಯ ಶತಮಾನದ ಆರಂಭದ ಲೇಖಕರು ಸಂಪ್ರದಾಯಿಕ ಮೌಲ್ಯಗಳಿಂದ ಬಂಧಿಸಲ್ಪಟ್ಟವರು. ವೈದಿಕ ಸಂಸ್ಕೃತಿಯನ್ನು ನೆಚ್ಚಿ ಬದುಕಿದವರು. ಹೀಗಿದ್ದು ಪಾಶ್ಚಾತ್ಯ ಸಾಹಿತ್ಯದಿಂದ ಪ್ರಭಾವಿತರಾಗಿದ್ದರು. ಪರಕೀಯ ವಿಚಾರಗಳನ್ನೆಲ್ಲ ಸ್ವೀಕರಿಸದಿದ್ದರೂ ಕಾದಂಬರಿ ಸ್ವರೂಪದ ಬದಲಾವಣೆಯಲ್ಲಿ ಹೊಸ ವಿಚಾರಗಳನ್ನು ಸ್ವೀಕರಿಸಿದಂತೆ ಕಂಡುಬರುತ್ತಾರೆ. ೧೮೯೬ರಲ್ಲಿ ಪ್ರಕಟವಾದ ಗುಬ್ಬಿ ಸೋಮನಾಥ ಮುರುಗಾರಾಧ್ಯರ 'ಶೃಂಗಾರ ಚಾತುರ್ಯೋಲ್ಲಾಸಿನಿ'ಯಲ್ಲಿ ಆ ಕಾಲದ ಲೇಖಕರು ಎದುರಿಸಬೇಕಾಗಿ ಬಂದ ಸಮಸ್ಯೆಯ ಚಿತ್ರಣವಿದೆ. ಶ್ರೀನಿವಾಸ ಹಾವನೂರ ಅವರು ಗುರುತಿಸುವಂತೆ "ಹಳೆಯದನ್ನು ಬಿಟ್ಟು ಹೊಸದಾದ 'ನಾವೆಲ್'ನ್ನು ಕೊಡಬೇಕೆನ್ನುವ ಅವರ ಅಭಿಲಾಷೆಯೂ ಇಂಗ್ಲೀಷ್‌ನಿಂದ ಪರಿವರ್ತನೆ ಮಾಡುವಾಗ ಹಿಂದೂ ಮರ್ಯಾದೆಗೆ ಕೆಲವು ಅಂಶಗಳು ಹೊಂದುವುದಿಲ್ಲವೆನ್ನುವ ಅವರ ಪ್ರಜ್ಞೆಯು ಮೆಚ್ಚ ತಕ್ಕುದ್ದಾಗಿದೆ. ಅವರು ಕಲ್ಪಿಸಿದ ಶೃಂಗಾರದ್ಭುತವಾದ ಕಥೆಗೆ ಇತಿಹಾಸದ ಹೊದಿಕೆ ಮಾತ್ರ ಇದೆ."[೭] ಈ ಸಂದರ್ಭದಲ್ಲಿ ಲೇಖಕರು ಹಿಂದೂ ಮರ್ಯಾದೆ ಮತ್ತು ಇಂಗ್ಲಿಷ್ ನಾವೆಲ್ ಪದ್ಧತಿ ಇವೆರಡರ ಸಮನ್ವಯವನ್ನು ಸಾಧಿಸಬೇಕಿತ್ತು. ಅಂತೆಯೇ ತಮ್ಮ ಸಂಸ್ಕೃತಿಯ ಪ್ರಭಾವವನ್ನು ಮೀರುವ ಹಾಗಿರಲಿಲ್ಲ. ಬಹುಶಃ ಈ ಕಾರಣವಾಗಿಯೇ ಏನೋ ಗುಬ್ಬೀ ಸೋಮನಾಥ ಮುರುಗಾರಾಧ್ಯರ ಶೃಂಗಾರ ಚಾತುರ್ಯೋಲ್ಲಾಸಿನಿ ಪ್ರಥಮ ಸ್ವತಂತ್ರ ಕಾದಂಬರಿ ಎನ್ನಿಸಿ ಕೊಂಡಿದ್ದರೂ ಲ.ಭಿ.ಗದಗಕರ್ ಅವರ 'ಸೂರ್ಯಕಾಂತ'(೧೮೯೨)ವನ್ನು ಹೊಸಗನ್ನಡ ಸಾಹಿತ್ಯದ ಸ್ವತಂತ್ರ ಕಾದಂಬರಿ ಎಂದು ಕರೆಯಲಾಗಿದೆ. ಈ ದೃಷ್ಟಿಯಿಂದ ನೋಡಿದಾಗ ಗಳಗನಾಥರ 'ಪ್ರಬುದ್ಧ ಪದ್ಮನಯನೆ'(೧೮೯೮)ಯು ಸಹ ಸ್ವತಂತ್ರ ಕಾದಂಬರಿಯಾಗುತ್ತದೆ. ಆದರೆ ಇವೆಲ್ಲವುಗಳನ್ನೂ ಮೀರಿ ನಿಂತ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ'(೧೮೯೯) ಅಥವಾ 'ಸದ್ಧರ್ಮ ವಿಜಯ' ಹೊಸಗನ್ನಡ ಸಾಹಿತ್ಯದ ಆದ್ಯ ಕೃತಿ.

ಇದನ್ನು ಎಲ್ಲಾ ದೃಷ್ಟಿಯಿಂದ ಪರಿಶೀಲಿಸಿದಾಗಲೂ ಸ್ವತಂತ್ರ ಸಾಮಾಜಿಕ ಕಾದಂಬರಿ ಎಂದು ಕರೆಸಿಕೊಳ್ಳಲು ಯೋಗ್ಯವಾಗಿದೆ.

ಆಧುನಿಕ ಶಿಕ್ಷಣವನ್ನು ಪಡೆದ ಮೊದಲ ತಲೆಮಾರಿನಲ್ಲಿ ಬ್ರಾಹ್ಮಣರೆ ಅಧಿಕವಾಗಿದ್ದರು. ಹೊಸ ಅರಿವು ಮೂಡಿದಂತೆಲ್ಲ ಭಾರತೀಯತೆಯ ಬಗ್ಗೆ ಆಳವಾಗಿ ಯೋಚಿಸಲಾರಂಭಿಸಿದರು. ಬ್ರಾಹ್ಮಣ ವರ್ಗದ ಸಮಸ್ಯೆಗಳಾದ ಸತಿಪದ್ಧತಿ, ವಿಧವಾಸಮಸ್ಯೆ, ಸ್ತ್ರೀ ಶಿಕ್ಷಣ, ಬಾಲ್ಯ ವಿವಾಹದಂತವುಗಳು ತೀವ್ರವಾಗಿ ಕಾಡಿದವು. ಏಕೆಂದರೆ ಬ್ರಾಹ್ಮಣ ಸಮುದಾಯ ಜಮೀನ್ದಾರಿಕೆಯನ್ನು ಧರ್ಮದ ಮೂಲಕ ನಿಯಂತ್ರಿಸುವ ಸಾಮಾಜಿಕ ಮನ್ನಣೆಯನ್ನು ಪಡೆದಿತ್ತು. ಇದೇ ಸಂದರ್ಭದಲ್ಲಿ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ನೆಲೆಯಲ್ಲಿ ಸುಧಾರಣೆ ಬಯಸಿ ಆರ್ಯ ಸಮಾಜ, ಬ್ರಹ್ಮ ಸಮಾಜದಂತಹ ರಾಷ್ಟ್ರೀಯ ಸಂಘಟನೆಗಳು ಹುಟ್ಟಿಕೊಂಡವು. ಹಿಂದೂ ಧರ್ಮದ ಸುಧಾರಣೆ ಮತ್ತು ಪುನರುತ್ಥಾನಗೊಳಿಸುವುದಾಗಿತ್ತು. ಈ ಪರಿಸ್ಥಿತಿಗೆ ಪೂರಕವಾಗಿಯೇ ಬಿ.ವೆಂಕಟಚಾರ್ಯರು ಬಂಗಾಳಿ, ಮರಾಠಿ ಕಾದಂಬರಿಗಳನ್ನು ಕನ್ನಡಕ್ಕೆ ತಂದರು. ಮೊದಲು ಕನ್ನಡದಲ್ಲಿ ಬೇರೆ ಭಾಷೆಯ ಕಾದಂಬರಿಗಳ ಅನುವಾದ ಕಾರ್ಯ ನಡೆಯಿತು. ಬೇರೆ ಭಾಷೆಗಳಿಂದ ಕಾದಂಬರಿ ಅನುವಾದವಾಗುವುದಕ್ಕಿಂತ ಮುಂಚೆ ಕಾದಂಬರಿಯ ಬರವಣಿಗೆಯ ಲಕ್ಷಣವನ್ನು ಸಾಹಿತ್ಯ ಚರಿತ್ರೆಯಲ್ಲಿ ಗುರುತಿಸಬಹುದು.

ಕೆಂಪು ನಾರಾಯಣನ 'ಮುದ್ರಮಂಜೂಷ'ದಲ್ಲಿಯ ಕಥನ ರೀತಿ ಕಾದಂಬರಿಗೆ ಹೆಚ್ಚು ಸಮೀಪವಾಗಿದೆ ಎನ್ನಬಹುದು. "ಕಾದಂಬರಿಯನ್ನು ಬರೆಯದಿದ್ದರೂ ಅದರ ಬರವಣಿಗೆಗೆ ಕನ್ನಡ ಗದ್ಯವನ್ನು ಹದಗೊಳಿಸಿದ ಶ್ರೇಯಸ್ಸು ಕೆಂಪು ನಾರಾಯಣನಿಗೆ ಸಲ್ಲುತ್ತದೆ. ಹಳಗನ್ನಡದಲ್ಲಿ ಭಾಷೆಯ ಬಿಗಿ ಕ್ರಮೇಣ ಸಡಿಲವಾಗುತ್ತಾ ಸರಳತೆ ಹಾಗೂ ಹೃದಯಂಗಮತೆಯ ಕಡೆಗೆ ತಿರುಗುವುದನ್ನು ಮೊಟ್ಟ ಮೊದಲಿಗೆ 'ಮುದ್ರಾಮಂಜೂಷ'ದಲ್ಲಿ ಕಾಣುತ್ತೇವೆ. ಯಾದವನ 'ಕಲಾವತೀ ಪರಿಣಯ', ಮುಮ್ಮಡಿ ಕೃಷ್ಣರಾಜರ 'ಸೌಗಂದಿಕಾ ಪರಿಣಯ'[೮] ಕೃತಿಗಳು ಇಂಗ್ಲಿಷ್ ಸಾಹಿತ್ಯದ ಪ್ರಭಾವಕ್ಕಿಂತ ಮುಂಚೆಯೇ ಕಾದಂಬರಿಯ ಅಂಶಗಳನ್ನು ಇಂತಹ ಕೃತಿಗಳಲ್ಲಿ ಕಾಣಬಹುದು. ಆದರೂ ಕಾದಂಬರಿಗೆ ಈಗಿನ ಸ್ಪಷ್ಟ ರೂಪವಿರಲು ಅನುವಾದ ಕೆಲಸ ಕಾರಣವಾಯಿತು.

ಇಂಗ್ಲಿಷಿನಿಂದ ಡೇನಿಯಲ್ ಡೀ ಪೋನ್, ರಾಬಿನ್ ಕ್ರೂಸೋ, ಎಜ್‌ವರ್ಥಳ ನಿರ್ಭಾಗ್ಯ ಮುರಾದ, ಎಚ್.ಟೇಲರ್‌ರವರ 'ಕನ್ಯಾವಿತಂತು' ಕನ್ನಡಕ್ಕೆ ಅನುವಾದವಾದವು. ಹಾಗೆಯೆ ಮರಾಠಿಯಿಂದ ಬಾಬಾ ಪದ ಮುಂಜಿಯ 'ಯಮುನಾ ಪರ್ಯಾಟನ' ಬಂದಿತು. ಗಂಗಾಧರ ಮಡಿವಾಳೇಶ್ವರ ತುರಿಮರಿಯವರು 'ಬಾಣ ಕಾದಂಬರಿ', ಬಿ.ವೆಂಕಟಾಚಾರ್ಯರು ಬಂಕಿಮಚಂದ್ರರ 'ದುರ್ಗೇಶ ನಂದಿನಿ', ಆನಂದಮಠ, ದೇವಿ ಚೌಧರಣಿ' ರಜನಿ, ವಿಷವೃಕ್ಷ, ಸಾಮಾಜಿಕ

ಕಾದಂಬರಿಗಳನ್ನು ಅನುವಾದ ಮಾಡಿದರು. ಗಳಗನಾಥರು ಮರಾಠಿಯಿಂದ ಕುಮುದಿನಿ, ಮರಾಠರ ಅಭ್ಯುದಯ, 'ಕನ್ನಡಿಗರ ಕರ್ಮಕತೆ, ಕಮಲಕುಮಾರಿ, ಕಾದಂಬರಿಗಳನ್ನು ಅನುವಾದಿಸಿದರು. ಈ ಅನುವಾದಗಳು ಕಾದಂಬರಿ ಬರೆಯಲು ಪ್ರೇರಣೆಯಾದಂತೆ ಓದುವ ವರ್ಗವನ್ನು ಬೆಳೆಸಿದವು. ಅದೇ ಉದಯಿಸುತ್ತಿದ್ದ ವಿದ್ಯಾವಂತವರ್ಗವು ಅನುವಾದಿತ ಕಾದಂಬರಿಗೆ ಮಾರು ಹೋದರು.

ವಿದ್ಯಾವಂತ ವರ್ಗವೂ ಓದುವ ವರ್ಗವಾಗಿ ಬೆಳೆದು ಬಂದಿದ್ದು ಬಹಳ ಮುಖ್ಯವಾದ ಸಂಗತಿ. ಅನುವಾದಿತ ಕಾದಂಬರಿಗಳಿಗೆ ಐತಿಹಾಸಿಕ ಮಹತ್ವವಿದೆ. ಕುರ್ತಕೋಟಿಯವರು ಈ ಕೃತಿಗಳ ಮಹತ್ವವನ್ನು ಗುರುತಿಸಿದ್ದಾರೆ. "ಈ ಕಾದಂಬರಿಗಳು ನಮ್ಮ ಜೀವನದ ಮೇಲೆ ಯಾವ ಪರಿಣಾಮವನ್ನು ಮಾಡಲಿಲ್ಲ. ಹೊಸ ಕಾಲಕ್ಕೆ ತಕ್ಕಂತೆ ಜನರ ಮನೋಧರ್ಮವನ್ನು ಸಂಸ್ಕಾರ ಗೊಳಿಸಬಲ್ಲ ಸಾಮರ್ಥ್ಯ ಈ ಕಾದಂಬರಿಗಳಿಗಿಲ್ಲ. ಅದನ್ನು ಇಂಥ ಕಾದಂಬರಿಗಳಿಂದ ಅಪೇಕ್ಷಿಸುವುದು ತಪ್ಪಾದೀತು. ಯಾಕೆಂದರೆ ಇವು ಹೇಳಿ ಕೇಳಿ ಅನುವಾದಗಳ ಜನಜೀವನದ ಸತ್ವವನ್ನು ರೂಪಿಸಿ ಬರೆದಂಥವುಗಳಲ್ಲ. ಆದರೆ ಸಾಹಿತ್ಯವನ್ನು ಮರೆತಂತಿದ್ದ ಜನರು ಮತ್ತೆ ಎಚ್ಚರಾಗುವಷ್ಟು ಪ್ರೇರಣೆಯನ್ನು ನೀಡಿದವು. ಈ ಕಾದಂಬರಿಗಳ ಮುಖ್ಯ ಪ್ರಯೋಜನವೇ ಜಾಗೃತಿಯಾಗಿದೆ. 'ಆನಂದಮಠ ವಿಷವೃಕ್ಷ, ದೇವಿ ಚೌಧರಾಣಿ, ಕುಮುದಿನಿ, ಕನ್ನಡಿಗರ ಕರ್ಮ ಕಥೆ ಇಂಥ ಕೃತಿಗಳು ಈ ಜಾಗೃತಿಯನ್ನು ಎರಡು ರೀತಿಯಲ್ಲಿ ಸಾಧಿಸಿದವು. ಮೊದಲನೆಯದಾಗಿ ಕಾದಂಬರಿಯಂಥ ಹೊಸದಾದ ಸಾಹಿತ್ಯ ಪ್ರಕಾರವೊಂದನ್ನು ಓದುಗರು ಆತ್ಮೀಯವನ್ನಾಗಿ ಬರಮಾಡಿಕೊಂಡರು. ವಿಜ್ಞಾನದ ಅನೇಕ ಹೊಸ ಸಂಶೋಧನೆಗಳಂತೆ ಕಾದಂಬರಿ ಹೊಸಯುಗದ ಕುರುಹಾಗಿ ಪರಿಣಮಿಸಿತು. ಎರಡನೆಯದಾಗಿ ಇತಿಹಾಸದ ಹೊಸ ಕ್ಷಿತಿಜ ಕಣ್ಣೆದುರು ಗೋಚರವಾದ್ದರಿಂದ ನಾಡುನುಡಿಗಳ ಅಭಿಮಾನದಿಂದ ಪ್ರೇರಿತರಾದ ಜನಕ್ಕೆ ತಮ್ಮಲ್ಲಿ ಮೂಡಿದ ಅಭಿಮಾನಕ್ಕೆ ಗಟ್ಟಿಯಾದ ಸಮರ್ಥನೆಯೊಂದು ದೊರೆಕಿತು."[೯] ಬಿ.ವೆಂಕಟಾಚಾರ್ಯರು, ಬಂಗಾಲದ ಬಂಕಿಮಚಂದ್ರರ ಐತಿಹಾಸಿಕ ಕಾದಂಬರಿಗಳನ್ನು ಗಳಗನಾಥರು ಮಹಾರಾಷ್ಟ್ರದ ಹರಿನಾರಾಯಣ ಅಪ್ಟೆಯವರ ಐತಿಹಾಸಿಕ ಕಾದಂಬರಿಗಳನ್ನು ಅನುವಾದಿಸಿದ್ದು ಓದುಗರ ಮನಸ್ಸನ್ನು ಬಡಿದೆಬ್ಬಿಸಿತು. ಮುಂದೆ ಕಾದಂಬರಿ ಪ್ರಕಾರ ಹುಲುಸಾಗಿ ಬೆಳೆಯಲು ಅನುವಾದಗಳು ಸಹಾಯಕವಾದವು.

ಇದರಿಂದಾಗಿ ಸ್ವತಂತ್ರ ಸಾಮಾಜಿಕ ಕಾದಂಬರಿಗಳನ್ನು ಬರೆಯುವ ಪ್ರಯತ್ನಗಳು ನಡೆದವು. ಗುಲ್ವಾಡಿ ವೆಂಕಟರಾಯರು 'ಇಂದಿರಾಬಾಯಿ' ಎಂಬ ಸ್ವತಂತ್ರ ಸಾಮಾಜಿಕ ಕಾದಂಬರಿ ಬರೆದರು. ಬೋಳಾರ ಬಾಬುರಾಯರು ವಾಗ್ದೇವಿ, ಎಂ.ಎಸ್.ಪುಟ್ಟಣ್ಣನವರು 'ಮಾಡಿದುಣ್ಣೊ ಮಹಾರಾಯ', ಕೆರೂರು ವಾಸುದೇವಾಚಾರ್ಯರು 'ಇಂದಿರೆ' ಈ ಕಾಲದ ಮಹತ್ವದ

ಕಾದಂಬರಿಗಳಾಗಿವೆ. ಇವು ಮುಖ್ಯವಾಗಿ ಸಾಮಾಜಿಕ ಕಳಕಳಿ ಸುಧಾರಣೆಯನ್ನು ಬಿಂಬಿಸುತ್ತವೆ. ಆರಂಭದ ಕಾದಂಬರಿಕಾರರು ಸಾಮಾಜಿಕ ಸಮಸ್ಯೆಯನ್ನು ಗುರಿಯಾಗಿಸಿಕೊಂಡಂತೆ ಸ್ತ್ರೀ ಸಮಸ್ಯೆಯನ್ನು ಸಹ ಅಷ್ಟೇ ಗಂಭೀರವಾಗಿ ಪರಿಗಣಿಸಿದ್ದರು. ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ವೈಧವ್ಯ, ಕೇಶಮುಂಡನೆ, ವಿಧವಾ ವಿವಾಹದಂತಹ ಹಲವು ಸಮಸ್ಯೆಗಳು ಅವರ ಕಾದಂಬರಿಯ ಮುಖ್ಯ ವಸ್ತುಗಳಾದವು. ಈ ದೃಷ್ಟಿಯಿಂದ ಗುಲ್ವಾಡಿ ವೆಂಕಟರಾಯರ ಇಂದಿರಾಬಾಯಿ ಪ್ರಾತಿನಿಧಿಕ ಕೃತಿ. ಇದು ೧೯ನೆಯ ಶತಮಾನದ ಸಂಕ್ರಮಣ ಹಾಗೂ ೨೦ನೆಯ ಶತಮಾನದ ಆರಂಭ ಕಾಲದ ಸ್ತ್ರೀ ಜೀವನದ ಮೇಲೆ ಬೆಳಕು ಚೆಲ್ಲಿದೆ. ಅಂದು ಸಾರಸ್ವತ ಬ್ರಾಹ್ಮಣ ಸಮಾಜ ಸ್ತ್ರೀಯನ್ನು ಕಂಡ ರೀತಿಯೇ ಬೇರೆ. ಸಂಪ್ರದಾಯಿಕ, ಧಾರ್ಮಿಕ ಮೌಲ್ಯಗಳು ಗಟ್ಟಿಗೊಂಡಿದ್ದ ದಿನಗಳಲ್ಲಿ ಬ್ರಹ್ಮ ಸಮಾಜದಿಂದ ಪ್ರೇರಿತನಾದ ಕೆಲವು ವ್ಯಕ್ತಿಗಳಾದರೂ ಒಳ್ಳೆಯದನ್ನು ಆಲೋಚಿಸುವ ನಿಟ್ಟಿನಲ್ಲಿ ಸ್ತ್ರೀ ಸುಧಾರಣೆಯನ್ನು ಬಯುಸಿ ದನಿ ಎತ್ತಿರುವುದನ್ನು ಕಾಧಂಬರಿ ಕಾಳಜಿಯಾಗಿಸಿಕೊಂಡಿದೆ.

ಬೋಳಾರ ಬಾಬುರಾಯರ 'ವಾಗ್ದೇವಿ'(೧೯೦೮) ಕಾದಂಬರಿ ಭ್ರಷ್ಟ ಸಮಾಜದ ವಾಸ್ತವ ಚಿತ್ರಣ ಮತ್ತು ಸಾಮಾಜಿಕ ಕಾಳಜಿಯುಳ್ಳ ವಿಶಿಷ್ಟ ಕೃತಿ. ಕುಮುದಾಪುರ ಮಠದ ಚಂಚಲನೇತ್ರ ಶ್ರೀಪಾದಂಗಳು ಸುಂದರಳಾದ ಗೃಹಿಣಿ ವಾಗ್ದೇವಿಗೆ ಮನಸೋತರು. ಮಠವನ್ನೇ ಭೋಗಸುಖದ ಕೇಂದ್ರವನ್ನಾಗಿ ಮಾಡಿಕೊಂಡವರು. ಆದರೆ ಇಲ್ಲಿಯ ವಾಗ್ದೇವಿ ಗಂಡನಿಂದ ದೊರೆಯದ ಸುಖವನ್ನು ಸಂತನಿಂದ ಪಡೆಯುವುದು ಒಂದೆಡೆಯಾದರೆ, ಶ್ರಮವಿಲ್ಲದೆ ಬರುವ ಸಿರಿತನವನ್ನು ಅಪ್ಪಿಕೊಂಡು, ಅನಿವಾರ್ಯ ಸಂದರ್ಭಗಳಲ್ಲಿ ತನ್ನ ಮೈಯನ್ನು ಬಂಡವಾಳವನ್ನಾಗಿಸಿಕೊಂಡು ಬದುಕುವ ದುರಂತಜೀವಿ. ಯು.ಮಹೇಶ್ವರಿಯವರು ಗ್ರಹಿಸಿರುವಂತೆ 'ವಾಗ್ದೇವಿ' ಕಾದಂಬರಿಯ ನಾಯಕಿಯ ಪಾತ್ರ ಕೆಡುಕಿನ ಪ್ರತೀಕವಾಗಿ ಚಿತ್ರಿತವಾಗಿದ್ದರೂ ಅದರಲ್ಲಿ ಪುರುಷ ಸಮೂಹ ದೌರ್ಬಲ್ಯಗಳನ್ನು ಬಯಲಿಗೆಳೆಯಲಾಗಿದೆ. ಇಲ್ಲಿ ಲೇಖಕರ ಕಾಳಜಿಯು ಸ್ತ್ರೀ ಪರವಾಗಿರದೆ, ಒಟ್ಟು ಸಮಾಜದ ಪರವಾಗಿರುವ ಹಿನ್ನಲೆಯನ್ನು ಗಮನಿಸಬೇಕಾಗುತ್ತದೆ.[೧೦] ಅಂದು ಸಮಾಜವನ್ನು ಸುಖ-ಶಾಂತಿ, ಸಮೃದ್ಧಿಯೆಡೆಗೆ ಕೊಂಡೊಯ್ಯುವ ಮಠಗಳಲ್ಲಿಯ ಭ್ರಷ್ಟತನವನ್ನು ಬಿಚ್ಚಿಡುವ ಈ ಕೃತಿ ಇಂದಿಗೂ ಮುಖ್ಯವಾಗುತ್ತದೆ.

ಕೆರೂರು ವಾಸುದೇವಾಚಾರ್ಯರ ಇಂದಿರೆ(೧೯೦೮), ರಮ್ಯ ಪ್ರಣಯ ಕಥೆಯುಳ್ಳ ಕೃತಿ. ಸ್ತ್ರೀ ಶಿಕ್ಷಣ, ಸ್ತ್ರೀ ಸ್ವಾತಂತ್ರ್ಯ ಹಾಗೂ ವಿಧವಾ ವಿವಾಹದಂತಹ ಸಮಸ್ಯೆಗಳನ್ನು ಚರ್ಚೆಗೆ ಎತ್ತಿಕೊಂಡಿದ್ದರೂ ಅವು ಕಾದಂಬರಿಯಲ್ಲಿ ಅಪಹಾಸ್ಯಕ್ಕೀಡಾಗಿವೆ. ಇಲ್ಲಿ ಇಂದಿರೆ ಮತ್ತು ರಮಾಕಾಂತನ ಆದರ್ಶ ಪ್ರೇಮವನ್ನು ಚಿತ್ರಿಸುವುದು ಕಾದಂಬರಿಕಾರನ ಮುಖ್ಯ ಉದ್ದೇಶವಾಗಿರುವು

ದರಿಂದ ಇದು ಸಾಧ್ಯವಾಗಲಿಲ್ಲ ಎನ್ನಬಹುದು. ಈ ಕಾದಂಬರಿ ಹೊಸ ಕಾಲದ ಹೊಸ ಮೌಲ್ಯಗಳನ್ನು ಅಳವಡಿಸಿಕೊಳ್ಳುವ ಸಂಘರ್ಷದ ಮಟ್ಟದಲ್ಲಿಯೇ ನಿಲ್ಲುತ್ತದೆ. ಸುಧಾರಣವಾದದ ಪ್ರಬಲ ಸಮರ್ಥನೆ ಮಾಡಿ ಸಾಮಾಜಿಕ ಬದಲಾವಣೆಯನ್ನು ಸ್ತ್ರೀ ಸಮಾನತೆಯನ್ನು ಸಾಧಿಸಲು ಪ್ರಯತ್ನಿಸುವ ಪಂಡಿತೆ ರಾಧಾಬಾಯಿಯ ವೈವಾಹಿಕ ಜೀವನವು ಇಲ್ಲಿ ಯಶಸ್ವಿಯಾಗಿದೆ.

ಮೊದಲ ಹಂತದ ಕಾದಂಬರಿಕಾರರಲ್ಲಿ ಎಂ.ಎಸ್.ಪುಟ್ಟಣ್ಣನವರು ಬಹುಮಹತ್ವದ ಲೇಖಕರು. ೧೯೧೫ರಲ್ಲಿ ಹೊರಬಂದ ಅವರ 'ಮಾಡಿದುಣ್ಣೋ ಮಹಾರಾಯ' ಕಾದಂಬರಿಯಲ್ಲಿ ಧರ್ಮಕ್ಕೆ, ಸತ್ಯಕ್ಕೆ ಅಂತಿಮ ಜಯವೆಂಬುದೇ ಕೃತಿಯ ಆಶಯ. ಅಂದಿನ ವಿದ್ಯಾಭ್ಯಾಸದ ಕ್ರೂರ ಪದ್ಧತಿ, ಮಾಟ ಮಂತ್ರವನ್ನು ಮಾಡುವ ಮಂತ್ರವಾದಿ, ಸೊಸೆಯನ್ನು ಹಿಂಸಿಸುವ ಅತ್ತೆ, ವಿದ್ಯಾರ್ಥಿಗಳಿಗೆ ಶಿಕ್ಷೆ ಕೊಡುವ ಉಪಾಧ್ಯಾಯರ ಚಿತ್ರಣ ಬರುತ್ತದೆ. ವಾಸ್ತವಿಕತೆಯನ್ನು ಪ್ರಯೋಗಿಸಿದ್ದಾರೆ. "ಈ ಕಾದಂಬರಿಯ ಮುಖ್ಯ ಪಾತ್ರದ ಹೆಸರು ಕೂಡ ಸೀತೆಯೇ ಆಗಿರುವುದು ಕಾಕತಾಳೀಯ ವೆನಿಸುವುದಿಲ್ಲ. ಆಕೆ ಪ್ರಾಚೀನ ಸ್ತ್ರೀ ಮೌಲ್ಯಗಳ ಸಾಕಾರಮೂರ್ತಿ. ಕೂತರೆ ತಪ್ಪು, ನಿಂತರೆ ತಪ್ಪು ಎಂಬಂತೆ ಕಾಡುವ, ಹೊಡೆಯುವ, ಬಡಿಯುವ ಅತ್ತೆಯ ಕಾಟವನ್ನು ಅನುಭವಿಸುವ ಆಕೆಯ ತ್ಯಾಗ, ಸಹನೆ, ಪಾತಿವ್ರತ್ಯ, ವಿಧೇಯತೆಗಳ ಮೊತ್ತ."[೧೧] ಇಂತಹ ಸಹನಶೀಲತೆಯುಳ್ಳವ ಳಾಗಿರುವುದರಿಂದಲೇ "ಇಲ್ಲಿಯ ಸೀತಮ್ಮ ರಾಮಾಯಣದ ಸೀತೆಯಂತೆ ಕಾಣುತ್ತಾಳೆ. ಇಲ್ಲಿ ಪರಂಪರಾಗತವಾಗಿ ಬಂದ ಸ್ತ್ರೀ ಮೌಲ್ಯಗಳಾದ ಪಾತಿವ್ರತ್ಯ, ವಿಧೇಯತೆ, ತ್ಯಾಗ, ಸಹನೆ ಹಾಗೂ ಸೇವಾ ಮನೋಧರ್ಮಗಳ ಪ್ರತಿಮೂರ್ತಿಯಾಗಿದ್ದಾಳೆ."[೧೨] ಇಲ್ಲಿ ಒಂದು ವಿಶೇಷತೆ ಎಂದರೆ ರಾಮಾಯಣದ ಸೀತೆಯಂತೆ ಅನ್ವರ್ಥಕ ನಾಮವುಳ್ಳ ಕಾದಂಬರಿಯ ಸೀತೆ, ಆದರ್ಶ ಸ್ತ್ರೀ ರತ್ನವಾಗಿ ಅಗ್ನಿಯಿಂದ ಹೊರಬರುವುದು. ಆಕೆಯ ಹೆಸರೇ ಸೂಚಿಸುವಂತೆ ಪ್ರಾಚೀನ ಸ್ತ್ರೀಯ ಆದರ್ಶ ಮೌಲ್ಯಗಳನ್ನು ಹೊತ್ತುಕೊಂಡು ಸಾಕಾರಮೂರ್ತಿಯಾಗಿ ಕಾಣಿಸುತ್ತಾಳೆ.

ಮೊದಲ ಹಂತದ ಕಾದಂಬರಿಯ ಸಂದರ್ಭದಲ್ಲಿ ಸ್ತ್ರೀಯರಿಂದ ಸಾಹಿತ್ಯ ರಚನೆಯಾದುದು ಬಹಳ ಕಡಿಮೆ. ಸಂತೂಬಾಯಿ ನೀಲಗಾರ ಅವರ ಸದ್ಗುಣಿ ಕೃಷ್ಣಾಬಾಯಿ ಅಥವಾ ಉತ್ತಮ ಗೃಹಿಣಿ(೧೯೦೫) ಕನ್ನಡದ ಮೊದಲ ಮಹಿಳಾ ಕಾದಂಬರಿ. ಇದರಲ್ಲಿ ಸ್ತ್ರೀ ಪರವಾದ ಅನೇಕ ಅಂಶಗಳನ್ನು ಮಂಡಿಸಿರುವುದಕ್ಕೆ ಈ ಕೃತಿ ಮುಖ್ಯವಾಗುತ್ತದೆ. ಸ್ತ್ರೀ ಶಿಕ್ಷಣಕ್ಕಾಗಿ ಹೋರಾಟ, ಸ್ತ್ರೀ ಪುರುಷರು ಸಮಾನರೆಂಬ ಭಾವನೆ ಪ್ರತಿಪಾದಿತವಾಗಿದೆ..

ಓದಿದ ಹೆಣ್ಣು ಮಕ್ಕಳ ಸಂಖ್ಯೆಯೇ ಬೆರಳೆಣಿಕೆಯಷ್ಟು ಎಂದಾಗ ಅವರಲ್ಲೇ ಬರೆಯುವವರು ಇರುವುದು ವಿರಳವೇ ಆದ್ದರಿಂದ ಹೆಣ್ಣಿನ ಕುರಿತಾದ ಸಮಸ್ಯೆಗಳ ಬಗ್ಗೆ ಸಂವೇದನೆ ಇರುವ ಪುರುಷ ಸಾಹಿತಿಗಳೇ ಆಲೋಚಿಸಬೇಕಾಗಿತ್ತು. "ಸುಧಾರಣೆ ತರಬಯಸುವ ಸ್ತ್ರೀ ಪರ ಕಾಳಜಿಯು

ಗಂಡು ಹೃದಯಗಳೇ ಬರೆಯಬೇಕಿತ್ತು. ಇಂಥ ಸಂದರ್ಭದಲ್ಲಿ ಅಲ್ಪಸಂಖ್ಯಾತ ಶಿಕ್ಷಿತ ಸ್ತ್ರೀಯರಲ್ಲಿ ಬರೆಯುವ ಉತ್ಸಾಹವನ್ನು ತುಂಬಲು, ಕೆಲವು ಸಂಘ ಸಂಸ್ಥೆಗಳು ಮತ್ತು ಪತ್ರಿಕೆಗಳು, ಮಹಿಳೆಯರಿಂದ ಲೇಖನ, ಕಥೆ, ಕಾದಂಬರಿಗಳ ರಚನಾ ಸ್ಪರ್ಧೆಯನ್ನು ಇಡ ತೊಡಗಿದ್ದವು."[೧೩] ಇಂಥ ಸ್ಪರ್ಧೆಗೆ ಇಳಿಯುವ ಮೂಲಕ ಬರವಣಿಗೆ ಆರಂಭಿಸಿದವರು ಸಂತೂಬಾಯಿ ನೀಲಗಾರ ಅವರು ಶಿಕ್ಷಿತ ಹೆಣ್ಣು ಕುಟುಂಬದ ನೆಮ್ಮದಿಯನ್ನು ಹಾಳುಗೆಡವುತ್ತಾಳೆ ಎಂಬ ಭಾವನೆ ಆಕಾಲದಲ್ಲಿ ಬಹಳವಾಗಿ ಇದ್ದುದರಿಂದ ಸ್ತ್ರೀಯರಿಗೆ ವಿದ್ಯೆ ನೀಡುವಂತೆ ಜನರನ್ನು ಒಲಿಸಲು ಇಂಥ ಕೃತಿಗಳು ಆಗ ಅತ್ಯಗತ್ಯವೂ ಆಗಿತ್ತು. ಉನ್ನತ ವಿದ್ಯಾಭ್ಯಾಸದ ಅವಶ್ಯಕತೆಯನ್ನು ಲೇಖಕಿ ಪ್ರತಿಪಾದನೆ ಮಾಡಿದ್ದಾಳೆ.

ಅದೇ ರೀತಿಯಾಗಿ ಸಂಪ್ರದಾಯ, ಅಜ್ಞಾನ, ಅಂಧಕಾರಗಳಲ್ಲಿ ತೋಳಲಾಡುತ್ತಿರುವ ಸಮಾಜದಲ್ಲಿ ಸಿಡಿದು ನಿಂತು, ಕಾದಂಬರಿ ರಚನೆಗೆ ಕೈ ಹಾಕಿದ ನಂಜನಗೂಡು ತಿರುಮಲಾಂಬಾ ಅಪರೂಪದ ಲೇಖಕಿಯಷ್ಟೇ ಅಲ್ಲ, ಕನ್ನಡ ಸಾಹಿತ್ಯದ ಮೊದಲ ಸ್ತ್ರೀವಾದಿಯಾಗಿ ನಿಲ್ಲುತ್ತಾಳೆ. ಸುಶೀಲೆ(೧೯೧೩), ನಭಾ(೧೯೧೪), ವಿರಾಗಿಣಿ(೧೯೧೫), ಮಾತ್ರ ನಂದಿನಿ(೧೯೧೬) ಮುಂತಾದ ಕಾದಂಬರಿಗಳು ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ವಿಷಮವಿವಾಹ, ಪ್ರೇಮವಿವಾಹ, ವರದಕ್ಷಿಣೆ ಹಾಗೂ ವಿಧವಾ ಸಮಸ್ಯೆಗಳನ್ನು ಬಿಚ್ಚಿಡುತ್ತವೆ.

ವಿವಾಹಿತ ಸ್ತ್ರೀಯೊಬ್ಬಳು ಪ್ರತಿಕೂಲ ಸಂದರ್ಭದಲ್ಲೂ ಸತೀತ್ವ ರಕ್ಷಣೆ ಮಾಡಿಕೊಂಡ ಆದರ್ಶ. ಸುಶೀಲೆ ಕಾದಂಬರಿಯಲ್ಲಿ ಗಂಡ ಎಷ್ಟೇ ದುಷ್ಟನಾಗಿದ್ದರೂ ಎಲ್ಲಾ ನೋವನ್ನು ಅನುಭವಿಸಿ ಅವನ ಚರಣದಾಸಿಯಾಗಿ ಮುಕ್ತಿ ಪಡೆಯಲಿಚ್ಚಿಸುವುದು ಈ ಕಾದಂಬರಿಯ ಉದ್ದೇಶ. ಬಾಲವಿಧವೆ ನಭಾ ವೈಧವ್ಯವನ್ನು ಪೂರ್ವಜನ್ಮದ ಫಲವೆಂದು ನೆಚ್ಚಿಕೊಂಡು ಬದುಕಿದವಳು. ವಿಧವೆಯಾಗಿಯೂ ತನ್ನ ಇಡೀ ಜೀವನವನ್ನು ಅನಾಥ ಸ್ತ್ರೀಯರ ಸುಧಾರಣೆಗಾಗಿ ಮುಡುಪಿಟ್ಟು ಸತೀತ್ವವನ್ನು ಮೆರೆಯುವ ಸಂಪ್ರದಾಯವಾದಿ ಸ್ಥಾಪಿತ ನಿಲುವು ಇಲ್ಲಿದೆ. ಮಾತೃ ನಂದಿನಿ ಕಾದಂಬರಿ ಸ್ತ್ರೀ ಶಿಕ್ಷಣ, ಬಾಲ್ಯ ವಿವಾಹ, ವರದಕ್ಷಿಣೆಗಳಂತಹ ದುಷ್ಟ ಪದ್ಧತಿಗಳನ್ನು ವಿರೋಧಿಸುತ್ತದೆ.

ತಿರುಮಲಾಂಬಾ ಅವರ ಜೊತೆಜೊತೆಗೆ ಸಾಹಿತ್ಯ ಕೃಷಿ ಮಾಡಿದವರಲ್ಲಿ ಆರ್.ಕಲ್ಯಾಣಮ್ಮ ಒಬ್ಬರು. ಇವರ ಪ್ರಿಯಂವದೆ(೧೯೧೭) ಮತ್ತು ನಿರ್ಭಾಗ್ಯವನಿತೆ(೧೯೨೧) ಕಾದಂಬರಿಯಲ್ಲಿ ಸಮಾಜದ ಜ್ವಲಂತ ಚಿತ್ರಣಗಳಿವೆ. ವಿಧವಾಸಮಸ್ಯೆ ವಿಧವಾವಿವಾಹ ಪ್ರತಿಪಾದನೆಯ ಧೋರಣೆಯುಳ್ಳ ನಿರ್ಭಾಗ್ಯ ವನಿತೆ(೧೯೨೧) ಮತ್ತು ವರದಕ್ಷಿಣೆ ಸಮಸ್ಯೆಯನ್ನೊಳಗೊಂಡ ಪ್ರಿಯಂವದೆ(೧೯೧೭) ವಿಷಮ ವಿವಾಹದಿಂದ ಹೆಣ್ಣು ಮಕ್ಕಳು ಎದುರಿಸಬೇಕಾದ ಸಮಸ್ಯೆಗಳನ್ನು ಅನಾವರಣಗೊಳಿಸುವ

ಸುಖಲತಾ(೧೯೨೭), ದೈವಭಕ್ತಿ, ಸತೀತ್ವಗಳನ್ನು ಪ್ರತಿಪಾಧಿಸುವ ಭಕ್ತೆ ಮೀರಾ(೧೯೫೦). ಹೀಗೆ ಆರಂಭ ಕಾಲದ ಕಾದಂಬರಿಕಾರರಲ್ಲಿ ಒಬ್ಬರಾದ ಮಾಸ್ತಿಯವರು ಸುಬ್ಬಣ್ಣ, ಮೆರವಣಿಗೆ, ಹೇಮಾವತಿ, ಚನ್ನಬಸವನಾಯಕ, ಚಿಕ್ಕವೀರ ರಾಜೇಂದ್ರ ಮುಂತಾದವುಗಳು ಮಹತ್ವದ ಕಾದಂಬರಿಗಳಾಗಿವೆ.

'ಸುಬ್ಬಣ್ಣ' ಕಾದಂಬರಿ(೧೯೨೮) ಜೀವನದ ಕಥೆ ಹೇಳುವಂತೆ ಕಂಡುಬಂದರೂ ಬದಲಾಗುತ್ತಿದ್ದ ಸಾಮಾಜಿಕ ಸಂಪ್ರದಾಯ ಕಾಲದ ಗೊಂದಲದ ಜೊತೆಗೆ ಪರಂಪರಾನುಗತವಾಗಿ ನಡೆದುಬಂದ ಮೌಲ್ಯಗಳು ಅನಿವಾರ್ಯ ಪಲ್ಲಟಗಳಂತಹ ವಿಷಯಗಳನ್ನು ವಸ್ತುವಾಗಿರಿಸಿಕೊಂಡಿದೆ. ನಂತರ ಕಾರಂತರು ಅನೇಕ ಕಾದಂಬರಿಗಳನ್ನು ಬರೆದಿದ್ದರೂ ಚೋಮನದುಡಿ, ಮರಳಿ ಮಣ್ಣಿಗೆ, ಬೆಟ್ಟದಜೀವ, ಅಳಿದಮೇಲೆ, ಸರಸಮ್ಮನ ಸಮಾಧಿ, ಮೈಮನಗಳ ಸುಳಿಯಲ್ಲಿ ಪ್ರಮುಖ ಕಾದಂಬರಿಗಳು. ಸಮಾಜವಾದಿ ಆದರ್ಶ ಅವರದು. ಬದುಕಿನ ಪ್ರತಿಯೊಂದು ಕ್ಷೇತ್ರವನ್ನು ಸೂಕ್ಷ್ಮವಾಗಿ ಅವಲೋಕಿಸುವ ಸಾಮಾಜಿಕ ಮನಸ್ಸಾದ್ದರಿಂದ ಸಾಮಾಜಿಕ ಸಮಸ್ಯೆಗಳನ್ನಿಟ್ಟುಕೊಂಡು ಕಾದಂಬರಿ ಬರೆದರು. ಕಾಲದ ಚಲನೆಯನ್ನು ಸೂಕ್ಷ್ಮವಾಗಿ ಗ್ರಹಿಸಿ ಮಂಡಿಸಿದರು. ಹೀಗಾಗಿ ಕಾರಂತರನ್ನು ಒಂದು ಕಾಲಘಟ್ಟಕ್ಕೆ ಸೀಮಿತಗೊಳಿಸಲು ಸಾಧ್ಯವಿಲ್ಲ. ಕಾಲದ ಸ್ಥಿತ್ಯಂತರಗಳಿಗೆ ತಕ್ಕಂತೆ ಅವರ ಕಾದಂಬರಿಗಳಿವೆ. 'ಚೋಮನದುಡಿ'ಯಂತಹ ಜೀತದಾಳುವಿನ ಬದುಕನ್ನು ಅನಾವರಣ ಮಾಡುವ ಮೊದಲ ಕಾದಂಬರಿಯನ್ನು ಯಾವ ಉದ್ವಿಗ್ನತೆ ಇಲ್ಲದೇ ಸಹಜವಾಗಿ ಚಿತ್ರಿಸಿದರು. ಜೊತೆಗೆ ಬೆಳ್ಳಿ ಪಾತ್ರದ ಮೂಲಕ ಸ್ತ್ರೀ ಸಂವೇದನೆ ಗುರುತಿಸಬಹುದು. ಮರಳಿ ಮಣ್ಣಿಗೆ ಕಾದಂಬರಿಯಲ್ಲಿ ಮೂರು ತಲೆಮಾರುಗಳು ಒಂದೊಂದು ರೀತಿಯ ಸಂಘರ್ಷದಲ್ಲಿ ತೊಡಗಿವೆ. ಸಂಪ್ರದಾಯ ಮತ್ತು ಆಧುನಿಕತೆಗಳ ಮುಖಾಮುಖಿಯನ್ನು ರಾಮೈತಾಳ, ಲಚ್ಚ, ರಾಮನಲ್ಲಿ ಕಾಣುತ್ತೇವೆ. 'ಬೆಟ್ಟದ ಜೀವ' ಕನ್ನಡ ಕಾದಂಬರಿ ತಲುಪಿದ ಸಿದ್ದಿಯನ್ನು ಸೂಚಿಸುತ್ತದೆ. ಭಾಷೆ, ಜೀವನ, ಪ್ರಕೃತಿಗಳು ಕಾವ್ಯಾತ್ಮಕತೆಯನ್ನು ಪಡೆದುಕೊಳ್ಳುತ್ತಲೇ ದಾರ್ಶನಿಕತೆಯನ್ನು ಬಿಂಬಿಸುತ್ತವೆ. ಗೋಪಾಲಯ್ಯರು ಪ್ರಕೃತಿಯೊಂದಿಗೆ ತಾದಾತ್ಮ್ಯ ಹೊಂದಿದ್ದಾರೆ. ಇಡೀ ಜೀವನವನ್ನು ಪ್ರಕೃತಿಯು ಆವರಿಸಿಕೊಂಡಿದೆ. 'ಸರಸಮ್ಮನ ಸಮಾಧಿ'ಯಲ್ಲಿ ಭಾರತೀಯ ಸ್ತ್ರೀಯರ ವಿಷಮ ದಾಂಪತ್ಯ ಜೀವನದ ವಿವಿಧ ನೆಲೆಗಳನ್ನು ಪರಿಚಯಿಸಿದ್ದಾರೆ. ಕಾರಂತರು ತಮ್ಮ ಆದರ್ಶವನ್ನು ಒತ್ತಾಯ ಪೂರ್ವಕವಾಗಿ ಎಲ್ಲಿಯೂ ತುರುಕಲು ಪ್ರಯತ್ನಿಸಲಿಲ್ಲ. ವೈವಿಧ್ಯತೆ ಅವರ ಕಾದಂಬರಿಗಳ ಜೀವಾಳವಾಗಿದೆ. ಒಂದೊಂದು ಕಾದಂಬರಿಯಲ್ಲಿ ಭಿನ್ನವಾದ ವಸ್ತುವನ್ನು ನಿರ್ವಹಿಸಿದ್ದಾರೆ. ಬದುಕನ್ನು ಒಂದೇ ಮಗ್ಗುಲಿನಿಂದ ನೋಡದೇ ಹಲವು ಮಗ್ಗುಲಿನಿಂದ ನೋಡಿ ಬದುಕಿನ ಪೂರ್ಣತೆಯನ್ನು ಸಾಧಿಸಿದ್ದಾರೆ. ದಾಂಪತ್ಯ, ಕಾಮ, ರಾಷ್ಟ್ರೀಯತೆ, ಜೀತದಾಳು, ಆಧುನಿಕತೆ,

ಚರಿತ್ರೆ, ಸ್ವಾತಂತ್ರ್ಯ ಹೋರಾಟ, ಪ್ರಕೃತಿಯ ಅನನ್ಯತೆ ಹೀಗೆ ಹಲವು ವಿಷಯಗಳು ಕಾದಂಬರಿಯ ಬೆಳವಣಿಗೆಯಲ್ಲಿ ಪ್ರಮುಖವಾಗಿ ನಿಲ್ಲುತ್ತವೆ.

ಕುವೆಂಪು ಅವರು ಎರಡೇ ಕಾದಂಬರಿಗಳನ್ನು ಬರೆದರೂ ಮನುಷ್ಯನ ಬದುಕಿನ ಎಲ್ಲಾ ಚಟುವಟಿಕೆಗಳನ್ನು ಅಸಮಾನ ಸಮಾಜದ ಸಂಘರ್ಷಗಳನ್ನು, ಸಂಬಂಧಗಳ ಸಂಕೀರ್ಣತೆಯನ್ನು ಕಲಾತ್ಮಕವಾಗಿ ಕಟ್ಟಿಕೊಟ್ಟಿರುವವರು. ಮಲೆನಾಡಿನ ಬದುಕಿನ ಎಲ್ಲಾ ಆಯಾಮಗಳನ್ನು ಜೀವಂತವಾಗಿ ಕಾದಂಬರಿಯಲ್ಲಿ ತಂದರು. ಸಮಾಜದಿಂದ ರಾಜಕೀಯ, ಆರ್ಥಿಕ, ಶೈಕ್ಷಣಿಕ ಕ್ಷೇತ್ರದಿಂದ ವಂಚಿತರಾಗುತ್ತ ಶೋಷಣೆಗೊಳಗಾಗುತ್ತಾ ಬಂದ ಸಾಮಾನ್ಯ ಜನರ ಬದುಕನ್ನು ಸಜೀವಗೊಳಿಸಿದರು. ವಸಾಹತುಶಾಹಿಯ ಆಗಮನದಿಂದ ಮಲೆನಾಡಿನ ಬದುಕಿನಲ್ಲಾದ ಬದಲಾವಣೆಯ ಸ್ಥಿತಿಯನ್ನು ಆದರ್ಶ ಮತ್ತು ವಾಸ್ತವಗಳ ಮೂಲಕ ನೋಡಿದರು. ಬದುಕಿನ ಸೂಕ್ಷ್ಮಗಳನ್ನು ಸಂಬಂಧಗಳ ಪ್ರಕೃತಿಯ ನೆಲೆಯಲ್ಲಿ ಶೋಧಿಸಿ ದಾರ್ಶನಿಕತೆಯನ್ನು ನೀಡಿದರು.

ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಚಂದ್ರೇಗೌಡ, ವೆಂಕಟಪ್ಪಯ್ಯ, ಜೋಯಿಸ ಇವರು ಕೂಲಿಕಾರರು, ಮಹಿಳೆಯರು, ಮಲೆನಾಡಿನ ಜೀವನವನ್ನು ಹೊತ್ತುಕೊಂಡಿರುವರು. ಇಡೀ ಮಲೆನಾಡಿನ ಬದುಕನ್ನು ವೆಂಕಪ್ಪಯ್ಯ ಜೋಯಿಸ್ ನಿಯಂತ್ರಿಸುತ್ತಾನೆ. ಆತನ ನಿರ್ದೇಶನದಂತೆ ಒಕ್ಕಲಿಗರು ನಡೆದುಕೊಳ್ಳುತ್ತಾರೆ. ಮಲೆನಾಡಿನ ಸಾಂಸ್ಕೃತಿಕ ಬದುಕನ್ನು ಅದ್ಭುತವಾಗಿ ದಾಖಲಿಸುತ್ತಾರೆ. ಈ ರೀತಿಯ ಪ್ರಾದೇಶಿಕ ಸಂಕೀರ್ಣ ಜೀವನ ಮೊದಲಬಾರಿಗೆ ಕಾದಂಬರಿಯಲ್ಲಿ ಅನಾವರಣ ಗೊಂಡಿದ್ದು ಕುವೆಂಪುರವರಿಂದ. ಕುರ್ತುಕೋಟಿಯವರು ಈ ಕಾದಂಬರಿ ಕುರಿತು ಬರೆದ ಮಾತುಗಳು ಉಲ್ಲೇಖರ್ಹವಾಗಿವೆ. "ಕೃತಿಯು ಕನ್ನಡದಲ್ಲಿ ಅನನ್ಯವಾದ ಕೃತಿಯಾಗಿದೆ ಮುಖ್ಯವಾಗಿ ಒಂದು ಪ್ರಾದೇಶಿಕ ಹಿನ್ನಲೆಯಲ್ಲಿ ಮನುಷ್ಯನ ಕ್ರಿಯೆಗಳನ್ನು ಅವುಗಳ ಸಹಜ ಗತಿಯಲ್ಲೇ ವರ್ಣಿಸುವ ಕೃತಿಯಾಗಿದೆ. ಈ ಕಾದಂಬರಿಯಲ್ಲಿ ಉಕ್ಕುವ ಚೈತನ್ಯ, ಪ್ರವಾಹ ಬೇರೆ ಯಾವ ಕನ್ನಡ ಕಾದಂಬರಿಯಲ್ಲಿಯೂ ಇಲ್ಲ. ಇಲ್ಲಿಯ ವ್ಯಕ್ತಿಗಳ ಕ್ಷೇಮ ಸಮಾಚಾರವನ್ನು ಕೇಳಬೇಕೆಂದು ಮನಸ್ಸಾಗುತ್ತದೆ. ಅಲ್ಲದೆ ಈ ಕೃತಿಯ ಭಾವ ಪ್ರಪಂಚ ಓದುಗರ ರಸಿಕ ಪ್ರಜ್ಞೆಯನ್ನು ಹೆಚ್ಚು ವಿಸ್ತಾರಗೊಳಿಸುವಂಥದ್ದು. ಶೈಲಿಯ ಕ್ಷೇತ್ರವೂ ಹಾಗೆಯೇ ವಿಸ್ತಾರವಾಗಿದೆ. ಗ್ರಾಮ್ಯ ಭಾಷೆಯಿಂದ ಹಿಡಿದು ಸಂಸ್ಕೃತ ಭೂಯಿಷ್ಟವಾದ ಭಾಷೆಯವರೆಗೆ ಶೈಲಿ ವ್ಯಾಪ್ತಿಯನ್ನು ಪಡೆದಿದ್ದರೂ ವಸ್ತುವಿಗೆ ತೀರ ಸಹಜವಾಗಿ ಬಂದಿದೆ. ಇದನ್ನೊಮ್ಮೆ ಓದಿಬಿಟ್ಟರೆ ಸಾಕು, ಒಂದು ಜನಾಂಗದ ಆಚಾರ, ವಿಚಾರಗಳ ನಡವಳಿಕೆಯ ರಾಗ, ಉದ್ದೇಶಗಳ ಆಳವಾದ, ಆತ್ಮೀಯ ಪರಿಚಯ, ಓದುಗನಿಗಾಗು ತ್ತದೆ."[೧೪] ಹೀಗಾಗಿ ಸಾಂಸ್ಕೃತಿಕ ಬದಲಾವಣೆಯ ಬದುಕಿನ ಸಾಮಾನ್ಯರ ದಾಖಲೆಯಾಗಿ

ಕಾದಂಬರಿ ಕ್ಷೇತ್ರದಲ್ಲಿ ಮುಂದಿನ ಕಾದಂಬರಿಕಾರರಿಗೆ ಮಾದರಿಯಾಗಿ ಪರಿಣಮಿಸಿದವು. ಮಲೆಗಳಲ್ಲಿ ಮದುಮಗಳು, ಹೆಚ್ಚು ವಾಸ್ತವಾಂಶಗಳನ್ನು ಕಾಣುತ್ತೇವೆ. ವಸಾಹತುಶಾಹಿ ಗ್ರಾಮೀಣ ಪ್ರದೇಶದಲ್ಲಿ ತಂದ ಬದಲಾವಣೆ, ಸಂಘರ್ಷವನ್ನು ಪ್ರಾದೇಶಿಕ ಸಂಸ್ಕೃತಿಯ ಹಿನ್ನೆಲೆಯಲ್ಲಿ ನೋಡಲಾಗಿದೆ. ಸಮಾಜದಲ್ಲಿ ಸತತವಾಗಿ ನಡೆದ ಶೋಷಣೆ, ಅನ್ಯಾಯ, ದಬ್ಬಾಳಿಕೆ, ಧರ್ಮದ ವಿನ್ಯಾಸವನ್ನು ಪ್ರಶ್ನಿಸುವ ಪ್ರಕ್ರಿಯೆಯು ಪ್ರಾರಂಭವಾಯಿತು. ಇವರ ಜೊತೆಗೆ ಗಾಂಧೀಜಿಯ ಸಾಮಾಜಿಕ ಸುಧಾರಣೆಗಳು ರಾಜಕೀಯ ಹೋರಾಟಗಳು ಅಂಬೇಡ್ಕರ್ ಅವರ ದಲಿತ ವಿಮೋಚನೆಯ ಸಂಘರ್ಷದ ಹೊಸ ಸಾಧ್ಯತೆಗಳನ್ನು ಜನರಿಗೆ ಕಾಣಿಸಿದವು. ದೇಶದಾದ್ಯಂತ ವೈದಿಕೇತರ ಚಳವಳಿಗಳು ನಡೆಯುತ್ತಿದ್ದವು. ಸ್ತ್ರೀ ಸ್ವಾತಂತ್ರ್ಯದ ಬಗ್ಗೆ ಮತ್ತು ಶಿಕ್ಷಣದ ಬಗ್ಗೆ ಸಾರ್ವಜನಿಕ ಕ್ಷೇತ್ರಗಳಲ್ಲಿ ಅವಕಾಶಗಳ ಬಗ್ಗೆ ಧ್ವನಿ ಕೇಳಿಬಂತು. ಈ ಸಂಗತಿಗಳು ಕುವೆಂಪು, ಕಾರಂತರ ಕಾದಂಬರಿಗಳನ್ನು ಪ್ರೇರೇಪಿಸಿವೆ. ಈ ಕಾರಣಕ್ಕೆ ಕಾದಂಬರಿಯ ಚಾರಿತ್ರಿಕ ಬೆಳವಣಿಗೆಯಲ್ಲಿ ಪ್ರಮುಖ ಸ್ಥಾನವನ್ನು ಇವು ಪಡೆದುಕೊಂಡವು. ಮತ್ತು ಕಾದಂಬರಿ ಪ್ರಕಾರವು ಕಾಲದ ಬದಲಾವಣೆಯ ವಾಸ್ತವ ಸ್ಥಿತಿಗತಿಗೆ ಮುಖಾಮುಖಿಯಾಗುತ್ತಾ ಬಂದಿವೆ.

ಈ ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರೀತ ಕಾದಂಬರಿಗಳಲ್ಲಿ ಪ್ರಮುಖವಾಗಿ ಎದ್ದು ಕಾಣುವ ಅಂಶಗಳೆಂದರೆ–

* ಈ ಶತಮಾನದ ಭಾರತೀಯ ಸಮಾಜದ ಜ್ವಲಂತ ಸಮಸ್ಯೆಗಳಾಗಿ ತಲೆಯೆತ್ತಿ ನಿಂತಿರುವ ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ವಿಧವಾವಿವಾಹ, ವರದಕ್ಷಿಣೆ, ವೈಧವ್ಯ, ಕೇಶಮುಂಡನೆ, ವಿಷಮದಾಂಪತ್ಯ, ಮಠ ಮತ್ತು ಅಧಿಕಾರ ವರ್ಗದ ಭ್ರಷ್ಟತನ ಮೊದಲಾದ ಕಾದಂಬರಿಕಾರರು ಸ್ಪಂದಿಸಿದ್ದಾರೆ.
* ಪುರುಷ ಹಾಗೂ ಸ್ತ್ರೀಯರಿಂದ ರಚನೆಯಾದ ಸ್ತ್ರೀ ಪ್ರಧಾನ ವಸ್ತುವುಳ್ಳ ಕಾದಂಬರಿಗಳ ದೃಷ್ಟಿಕೋನ ಮುಖ್ಯವಾಗಿ ಸ್ತ್ರೀ ಸುಧಾರಣೆಯನ್ನು ಉದ್ದೇಶವಾಗಿರಿಸಿಕೊಂಡಿದೆ. ಈ ಕಾಲದಲ್ಲಿ ಕಾದಂಬರಿ ರಚನೆಯಲ್ಲಿ ಪಾಲ್ಗೊಂಡಿದ್ದವರು ಸಾಮಾನ್ಯವಾಗಿ ಮೇಲ್ವರ್ಗದ ಲೇಖಕರಾಗಿದ್ದುದರಿಂದ ಮೇಲ್ವರ್ಗ ಅಥವಾ ಮಧ್ಯಮ ವರ್ಗದ ಸ್ತ್ರೀಯರ ಸಮಸ್ಯೆಗಳತ್ತ ಗಮನಹರಿಸಿರುವುದು ಗಮನಾರ್ಹವಾಗಿದೆ.
* ಹೀಗೆ ಸ್ವಾತಂತ್ರ್ಯಪೂರ್ವ ಕಾದಂಬರಿಗಳ ಚಾರಿತ್ರಿಕ ಸಂದರ್ಭ ಹಾಗೂ ಬೆಳವಣಿಗೆಯನ್ನು ಗುರುತಿಸಬಹುದು.

**ಕೊನೆಟಿಪ್ಪಣಿಗಳು**

೧. ರಾಜಶೇಖರ ಹಳೆಮನೆ, **ತಲೆಮಾರುಗಳ ಸಂಕಥನ,** ೨೦೧೧, ಪು.೫

೨. ಅಶೋಕ ಟಿ.ಪಿ., **ಸಾಹಿತ್ಯ ಸಂದರ್ಭ**, ೧೯೯೧, ಪು.೩

೩. ಶಿವರಾಮ ಪಡಿಕ್ಕಲ್, **ನಾಡು–ನುಡಿಯ ರೂಪಕ,** ಪು.೫೦

೪. ಅದೇ, ಪು.೫೨

೫. ಚಂದ್ರಶೇಖರ ಎಸ್., **ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ,** ೧೯೮೩, ಪು.೪

೬. ವಿವೇಕ ರೈ ಬಿ.ಎ., **ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು,** ೧೯೮೯, ಪು.

೭. ಶ್ರೀನಿವಾಸ ಹಾವನೂರು, **ಹೊಸಗನ್ನಡದ ಅರುಣೋದಯ,** ೨೦೦೦, ಪು.೪೯

೮. ಕೀರ್ತಿನಾಥ ಕುರ್ತುಕೋಟಿ, **ಯುಗಧರ್ಮ ಹಾಗೂ ಸಾಹಿತ್ಯದರ್ಶನ,** ೧೯೮೩, ಪು.೨೭೫–೨೭೯

೯. ಅದೇ, ಪು.೨೫೦

೧೦. ಮಹೇಶ್ವರಿ ಯು., **ಇದು ಮಾನಷಿಯ ಓದು,** ೨೦೦೧, ಪು.೪೫

೧೧. ಶಿವಲಿಂಗಪ್ಪ ಆಯ್ ಭಂಡಾರಿ, **ಕನ್ನಡ ಕಾದಂಬರಿಗಳಲ್ಲಿ ಸ್ತ್ರೀ,** ೨೦೧೦, ಪು.೧೯

೧೨. ಅದೇ, ಪು.೨೦

೧೩. ವಿಜಯಲಕ್ಷ್ಮಿ ಕೆ.ಎಂ., **ಹೊಸಗನ್ನಡದ ೭೫ ಲೇಖಕಿಯರು,** ೨೦೦೮, ಪು.೨೨

೧೪. ಕೀರ್ತಿನಾಥ ಕುರ್ತುಕೋಟಿ, **ಯುಗಧರ್ಮ ಹಾಗೂ ಸಾಹಿತ್ಯ ದರ್ಶನ,** ೧೯೮೩, ಪು.೨೨೭

ಅಧ್ಯಾಯ ಐದು

# ಕಾದಂಬರಿಗಳ ಸ್ವರೂಪ ಹಾಗೂ ತಾತ್ವಿಕತೆ

ಸಾಹಿತ್ಯವೆಂಬುದು ಆಯಾ ಲೇಖಕನ ಬದುಕಿನ ಅನುಭವಗಳ ಕಲಾತ್ಮಕ ಅಭಿವ್ಯಕ್ತಿ. ಆಧುನಿಕ ಜೀವನದ ಕೊಡುಗೆಯಾಗಿ ಪಾಶ್ಚಾತ್ಯ ಸಾಹಿತ್ಯದ ಮೂಲಕ ಭಾರತವನ್ನು ಪ್ರವೇಶಿಸಿದ ಕಾದಂಬರಿ ಪ್ರಕಾರ ಬಹುಬೇಗನೇ ಜನಪ್ರಿಯ ಮಾಧ್ಯಮವಾಗಿ ಬೆಳೆದು ಬಂದಿದೆ. ಕಾದಂಬರಿ ಪ್ರಕಾರದಲ್ಲಿ ಮೊದಲನೆಯದಾಗಿ ವಸ್ತು ಅಥವಾ ಸ್ವರೂಪಕ್ಕೆ ಮೊದಲ ಆದ್ಯತೆ ಸಲ್ಲುತ್ತದೆ. ಎರಡನೆಯದಾಗಿ ಘಟನಾವಳಿಗಳು ಮತ್ತು ಸಂದರ್ಭಗಳು ಮುಖಾಮುಖಿಯಾಗಿ ನಿಲ್ಲುವ ಪಾತ್ರಗಳು ಬರುತ್ತವೆ. ಪಾತ್ರಗಳು ಆಡುವ ಸಂಭಾಷಣೆ ಮೂರನೆಯ ಅಂಶವಾಗಿವೆ. ಕಾಲ ಮತ್ತು ಸ್ಥಳಗಳು ನಾಲ್ಕನೆಯ ಅಂಶವಾಗಿದ್ದು, ಇಡೀ ಕಾದಂಬರಿಯ ತಾತ್ವಿಕತೆಯ ಪ್ರಮುಖ ಅಂಶಗಳಾಗುತ್ತವೆ.

ಕಾದಂಬರಿ ಪ್ರಕಾರದಲ್ಲಿ ಸಮಾವೇಶಗೊಳ್ಳುವ ಅಂಶಗಳನ್ನು ಪಟ್ಟಿ ಮಾಡುವುದಾದರೆ ಸ್ವರೂಪ, ಪಾತ್ರ, ಸಂಭಾಷಣೆ, ಶೈಲಿ, ಲೇಖಕನ ಜೀವನದರ್ಶನ, ತಾತ್ವಿಕತೆ ಇವು ಮುಖ್ಯವಾಗುತ್ತವೆ. ವಸ್ತು ಸ್ವರೂಪ ಯಾವುದೇ ಆಗಿರಲಿ ಅದನ್ನು ಹದವರಿತು ಬಳಸಿಕೊಂಡಾಗ ಮಾತ್ರ ಕಾದಂಬರಿ ಸತ್ವಪೂರ್ಣವಾಗುತ್ತದೆ. ಈ ನಿಟ್ಟಿನಲ್ಲಿ ವಿಚಾರ ಮಾಡಿದಾಗ ಸ್ವರೂಪದ ಜೊತೆಗೆ ಭಾಷೆ, ಘಟನೆ, ಪಾತ್ರ ಹಾಗೂ ತಂತ್ರವೂ ಕೂಡಾ ಪ್ರಮುಖ ಪಾತ್ರ ವಹಿಸುತ್ತವೆ. ಇವೆಲ್ಲವುಗಳಲ್ಲಿ ಕಾದಂಬರಿಯ ಮುಖ್ಯ ಭಾಗವೇ ಸ್ವರೂಪ ಹಾಗೂ ತಾತ್ವಿಕತೆ. ಈ ಹಿನ್ನೆಲೆಯಲ್ಲಿ ಕಾದಂಬರಿಯ ಸ್ವರೂಪ ಹಾಗೂ ತಾತ್ವಿಕತೆಯನ್ನು ಅರಿಯುವುದು ಅಗತ್ಯವಾಗಿದೆ.

ಕಾದಂಬರಿಯ ರಚನೆಗೆ ಇಂತದ್ದೆ ಸ್ವರೂಪ ಹಾಗೂ ತಾತ್ವಿಕತೆ ಆಯ್ಕೆ ಮಾಡಿಕೊಳ್ಳಬೇಕೆಂಬ ನಿಯಮವೇನಿಲ್ಲ. ಅದು ಮೇಲ್ವರ್ಗದ ಜೀವನವಾಗಿರಬಹುದು. ಮಧ್ಯಮವರ್ಗ ಹಾಗೂ ಕೆಳವರ್ಗದ ಜೀವನವೂ ಆಗಿರಬಹುದು. ಇದು ಒಟ್ಟಾರೆ ಮಾನವ ಸಮಾಜದ ಬದುಕನ್ನು ಆವರಿಸಿಸುತ್ತದೆ.

ಇಂತಹ ಸ್ವರೂಪವನ್ನು ಬೇರೆ ಕಡೆಯಿಂದ ಅನಾಮತ್ತಾಗಿ ಎತ್ತಿಕೊಂಡು ತನ್ನ ದೃಷ್ಟಿ ಧೋರಣೆಯ ಹಿನ್ನೆಲೆಯಲ್ಲಿ ಸಮಕಾಲಿನ ಪರಿಸ್ಥಿತಿಗೆ ತಕ್ಕಂತೆ ಮಾರ್ಪಡು ಮಾಡಿಕೊಳ್ಳುವ ಅಧಿಕಾರ ಕಾದಂಬರಿಕಾರನಿಗಿದೆ. ಆಯಾ ಸಂದರ್ಭ, ಸನ್ನಿವೇಶಗಳಲ್ಲಿ ಘಟನೆ, ಪಾತ್ರ, ತಂತ್ರಗಳೊಂದಿಗೆ ಸ್ವರೂಪವನ್ನು ಹೇಗೆ ಜೋಡಿಸಿಕೊಳ್ಳುತ್ತಾನೆ ಎಂಬುದು ಮುಖ್ಯವಾಗುತ್ತದೆ. ಕಾದಂಬರಿಕಾರನ ಪ್ರತಿಭೆ ಮತ್ತು ಸಾಮರ್ಥ್ಯಗಳಿಂದಾಗಿ ಸ್ವರೂಪ ಹಾಗೂ ತಾತ್ವಿಕತೆಯು ಹೊಸದಾದ ಜೀವ ಪಡೆಯುತ್ತದೆ.

ಕಾದಂಬರಿ ರಚನೆಯಲ್ಲಿ ಕಾದಂಬರಿಕಾರ ಸ್ವರೂಪವನ್ನು ಆಯ್ದುಕೊಳ್ಳುವ ಬಗೆ ಮತ್ತು ಅದನ್ನು ನಿರ್ವಹಿಸುವುದಕ್ಕೆ ಸಂಬಂಧಿಸಿದಂತೆ ಕಾದಂಬರಿಕಾರರಾದ ಎಸ್.ಎಲ್.ಭೈರಪ್ಪನವರ ಅಭಿಪ್ರಾಯವನ್ನು ಇಲ್ಲಿನ ಗಮನಿಸಬಹುದು. "ಜೀವನವೇ ಸಾಹಿತ್ಯದ ವಸ್ತು ಎಂಬುದು ನಿಜವಾದರೂ ತುಂಬ ಅಸ್ಪಷ್ಟವಾದ ಮಾತು. ಜೀವನವನ್ನು ಸಂದರ್ಶಿಸುವ ಮಟ್ಟಿಗೆ ಅನುಭವವು ಸಾಹಿತಿಗೆ ಅವಶ್ಯಕ. ಆದರೆ ಬರೀ ಸ್ವಾನುಭವವೇ ಸ್ವರೂಪ ಹಾಗೂ ತಾತ್ವಿಕತೆ ಆಗುವುದಿಲ್ಲ. ಏಕೆಂದರೆ ವೈಯಕ್ತಿಕವಾದ ಸ್ವಾಮ್ಯವು ಜೀವನದ ವಸ್ತು ನಿಷ್ಠತೆಯನ್ನು ಪಡೆದಿರುವುದಿಲ್ಲ. ಒಬ್ಬನ ಅನುಭವವು ಅವನ ಮಟ್ಟಿಗೆ ಎಷ್ಟು ಮಹತ್ವವಾದರು, ಸಾಮಾನ್ಯ ಅರ್ಥಪೂರ್ಣತೆಯನ್ನು ಪಡೆದಿರುವಂತೆ ಮಾರ್ಪಡುವ ತನಕ ಅದಕ್ಕೆ ಜೀವನವೆಂಬ ವಿಶೇಷ ಮೌಲ್ಯವು ಬರುವುದಿಲ್ಲ. ಜೀವನದ ನಿಯಮ ಶಕ್ತಿ, ಪ್ರವೃತ್ತಿ, ಅರ್ಥ, ಸಂಕೇತ ಮೊದಲಾದವುಗಳೊಡನೆ ತನ್ನ ಸಂಬಂಧವನ್ನು ಕಂಡುಕೊಳ್ಳುವ ತನಕ ಅನುಭವವು ವೈಯಕ್ತಿಕವಾಗಿಯೇ ಉಳಿಯುತ್ತದೆ. ಅದುವರೆಗೂ ಅದು ಸಾಹಿತ್ಯದ ವಸ್ತುವಾಗುವುದಿಲ್ಲ. ಒಮ್ಮೆ ಜೀವನದೊಡನೆ ತನ್ನ ಅರ್ಥವನ್ನು ಕಂಡುಕೊಂಡಿತೆಂದರೆ ಅದು ಶುದ್ಧ ವೈಯಕ್ತಿಕವಾಗಿ ಉಳಿಯುವುದಿಲ್ಲ"[೧] ಇಲ್ಲಿ ಭೈರಪ್ಪನವರ ಮಾತಿನ ಅರ್ಥ ವ್ಯಕ್ತಿಯ ಸ್ವಾನುಭವ ಸಮಷ್ಟಿಯ ಅನುಭವವಾಗಿ ಇಲ್ಲವೆ ಸಾರ್ವತ್ರಿಕ ಅನುಭವವಾಗಿ ಮಾರ್ಪಡುಗೊಳ್ಳಬೇಕು. ಅಂದರೆ ವ್ಯಕ್ತಿಯ ಸ್ವಾನುಭವ ವ್ಯಕ್ತಿಯ ಮಟ್ಟದಲ್ಲಿ ನಿಲ್ಲುವುದರಿಂದ ಅದು ಸ್ವರೂಪವಾಗುವಂತಿಲ್ಲ. ಅಂತಹ ಸ್ವಾನುಭವಗಳು ಬುದ್ಧಿ ಭಾವಗಳೊಡನೆ ಹರಳುಗೊಂಡು ಸಾರ್ವತ್ರಿಕ ಅನುಭವವಾಗಿ ಒಂದು ಆಕಾರ ಇಲ್ಲವೆ ಸ್ವರೂಪ ಪಡೆದಾಗ ಮಾತ್ರ ಅದನ್ನು ತಾತ್ವಿಕತೆ ಎಂದು ಪರಿಗಣಿಸ ಬಹುದಾಗಿದೆ.

ಕಾದಂಬರಿಯ ಸ್ವರೂಪ ಹಾಗೂ ತಾತ್ವಿಕತೆ ಕುರಿತು ಅಧ್ಯಯನ ಮಾಡುವಾಗ 'ತಂತ್ರ' ಬಳಕೆಯಾಗುವುದನ್ನು ಗಮನಿಸುತ್ತೇವೆ. ಪಾಶ್ಚಾತ್ಯ ವಿದ್ವಾಂಸರು 'ತಂತ್ರ'ದ ಪ್ರಯೋಗದಲ್ಲಿಯೇ ಸ್ವರೂಪವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ತಂತ್ರದ ಕುರಿತು ವಿವರಣೆ ನೀಡುವ ಸುಪ್ರಸಿದ್ಧ ವಿಮರ್ಶಕ ಮಾರ್ಕಶೋರ್ ತಂತ್ರವೆಂದರೆ "ಲೇಖಕನ ಸಾಮಗ್ರಿಯಾದ ಅನುಭವ ತನ್ನ ಬಗ್ಗೆ

ಸರಿಯಾಗಿ ಗಮನ ಕೊಡಲು ಅವನನ್ನು ಒತ್ತಾಯಿಸುವ ಸಾಧನ ತಂತ್ರವೆಂದರೆ ಲೇಖಕನಿಗೆ ತನ್ನ ವಸ್ತುವನ್ನು ಅನಾವರಣಗೊಳಿಸಲು, ಶೋಧಿಸಲು ವಿಕಾಸಗೊಳಿಸಲು ಅದರ ಅರ್ಥವನ್ನು ಸೂಚಿಸಲು ಹಾಗೂ ಕೊನೆಯದಾಗಿ ವಸ್ತುವನ್ನು ಬೆಲೆ ಕಟ್ಟಲು ಇರುವ ಏಕ ಮಾತ್ರ ಸಾಧನ"[೨] ಎನ್ನುತ್ತನಾದರೂ ಮುಂದೆ ಹೋಗಿ ವಸ್ತು ಮತ್ತು ತಂತ್ರ ಎರಡೂ ಒಂದೇ ಅಭಿಪ್ರಾಯ ತಾಳುತ್ತಾನೆ. ಇದಕ್ಕೂ ಒಂದೆರಡು ಹೆಜ್ಜೆ ಮುಂದಿಟ್ಟು ತಂತ್ರವೆಂದರೆ ಹೆಚ್ಚು ಕಡಿಮೆ ಎಲ್ಲವೂ ಆಗಿದೆ ಎನ್ನುವ ಮಹತ್ವವನ್ನು ಸೂಚಿಸುತ್ತವೆ ಎಂಬ ನಿರ್ಣಯಕ್ಕೆ ಬರುತ್ತಾನೆ. ಒಂದು ಕೃತಿ ಇಲ್ಲವೆ ಕಾದಂಬರಿ ಯಶಸ್ಸು ಸ್ವರೂಪ ಹಾಗೂ ತಾತ್ವಿಕತೆ ಮೇಲೆ ನಿಂತಿರುವುದರಿಂದ ಒಂದು ಅರ್ಥದಲ್ಲಿ ಶೋರರ್‌ನ ಹೇಳಿಕೆ ನಿಜವೆನಿಸುತ್ತವೆ.

ವಿಲಿಯಂ ಹೆನ್ರಿ ಹಪ್ಸೆನ್ ಅವರು ಕಾದಂಬರಿಯ ಸ್ವರೂಪ ಕುರಿತು ಹೀಗೆ ಹೇಳಿದ್ದಾರೆ, "ಘಟನೆಗಳು ಮತ್ತು ಕ್ರಿಯೆಗಳೊಡನೆ ಅನುಭವಿಸಿದ ಮತ್ತು ಮಾಡಿದ ಸಂಗತಿಗಳೊಡನೆ ಕಾದಂಬರಿ ವ್ಯವಹರಿಸುತ್ತದೆ. ಅವು ಸಾಮಾನ್ಯವಾಗಿ ನಾವು 'ಸಂವಿಧಾನ' ಎಂದು ಕರೆಯತಕ್ಕದ್ದನ್ನು ರೂಢಿಸುತ್ತವೆ"[೩] ಇಂಥ ಸನ್ನಿವೇಶಗಳಲ್ಲಿ ಕಾದಂಬರಿಕಾರ ಇಲ್ಲವೆ ಲೇಖಕ ವಸ್ತು ವಿಷಯಗಳನ್ನು ಕಟ್ಟಿಕೊಡಬೇಕಾದಾಗ ತನ್ನ ಅನುಭವಗಳಿಗೆ ಪ್ರಾಮಾಣಿಕನಾಗಿರಬೇಕು. ತನ್ನ ಜೀವನಾನುಭವಗಳನ್ನು ವಾಸ್ತವಿಕ ನೆಲೆಯಲ್ಲಿ ನಿಂತು ಗ್ರಹಿಸಿದಾಗ ಮಾತ್ರ ಸತ್ವಪೂರ್ಣವಾದ್ದುದನ್ನು ಹೊರ ಹಾಕಬಹುದು. ಇಂತಹ ಸಂದರ್ಭಗಳಲ್ಲಿ ಲೇಖಕನ ಜೀವನಾನುಭವಗಳು ಕಲಾತ್ಮಕ ಅಭಿವ್ಯಕ್ತಿಯಿಂದ ಕತೆ ಮತ್ತು ಸ್ವರೂಪ ಒಂದು ರೂಪ ಪಡೆದು ಸತ್ವಪೂರ್ಣವಾದ ಕಾದಂಬರಿ ಎನಿಸಿಕೊಳ್ಳಲು ಸಾಧ್ಯವಿದೆ. ಇದನ್ನು ಕಾದಂಬರಿ ಅಪೇಕ್ಷಿಸುತ್ತದೆ. "ಬರವಣಿಗೆಗೆ ಕಾದಂಬರಿ ಬದುಕಿನ ಯಾವ ಮುಖಗಳನ್ನು ಆರಿಸಿಕೊಳ್ಳಲು ತನ್ನ ವಸ್ತುವಿನ ನಿಕಟ ಪರಿಚಯದಿಂದ ಮಾತ್ರ ಲಭ್ಯವಾಗುವ ಪ್ರಭುತ್ವ ಪರಿಪೂರ್ಣತೆಗಳ ಮೂಲಕ ಅವುಗಳನ್ನು ಕುರಿತು ಬರೆಯಬೇಕು"[೪] ಎಂಬುದು ಕಾದಂಬರಿ ರಚನೆಯ ದೃಷ್ಟಿಯಿಂದ ಸರಿಯಾದುದು. ಕಾದಂಬರಿ ರಚನೆ ಹಿನ್ನೆಲೆಯಾಗಿ ಸೂಕ್ಷ್ಮ ರೀತಿಯಿಂದ ಪರಿಶೀಲಿಸಿದಾಗ ಸ್ವರೂಪ ಹಾಗೂ ತಾತ್ವಿಕತೆಗೆ ಮೊದಲ ಆದ್ಯತೆ ಇದೆ. ಇದು ಲೇಖಕನ ಜೀವನಾನುಭವಕ್ಕೂ ಅವನ ಅವಶ್ಯಕ ಜೀವನಕ್ಕೂ ನಿದರ್ಶನವಾಗುತ್ತದೆ. ಕಾದಂಬರಿಯು ಸೃಷ್ಟಿಯಾಗುವುದೇ ಅದು ಒಳಗೊಂಡಿರುವ ಸ್ವರೂಪ ಹಾಗೂ ತಾತ್ವಿಕತೆಯಿಂದ ಎಂದು ತಿಳಿಯಬಹುದು.

ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕಾದಂಬರಿಗಳನ್ನು ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಂಡು ಅವುಗಳ ಸ್ವರೂಪ ಹಾಗೂ ತಾತ್ವಿಕತೆಯನ್ನು ಇಲ್ಲಿ ಪರಿಚಯಿಸಲಾಗಿದೆ.

## ೧. ಇಂದಿರಾಬಾಯಿ(೧೮೯೯)

ಭಾರತೀಯ ಸಮಾಜ ಸ್ತ್ರೀ ಮೇಲೆ ವಿಧಿಸಿರುವ ಧಾರ್ಮಿಕ, ಸಂಪ್ರದಾಯಿಕ ಕಟ್ಟುಪಾಡುಗಳು ಬಲಿಷ್ಠವಾಗಿದ್ದ ದಿನಗಳಲ್ಲಿ ಪಾಶ್ಚಾತ್ಯ, ಶಿಕ್ಷಣದ ಫಲವಾಗಿ ಸುಧಾರಣೆಯತ್ತ ಸಾಗುವುದು ಇಲ್ಲಿಯ ವಸ್ತು.

ಸಾರಸ್ವತ ಬ್ರಾಹ್ಮಣ ಸಮಾಜದ ಭೀಮರಾಯ ಕಮಲಾಪುರದ ಗೃಹಸ್ಥ. ವರ್ತಕ ನರಸಿಂಹ ಶಾಸ್ತ್ರಿಗಳಲ್ಲಿ ಶಾನುಭೋಗ ವೃತ್ತಿಯಲ್ಲಿ ತೊಡಗಿಕೊಂಡಿದ್ದವನು. ಕಾಲಾಂತರದಲ್ಲಿ ಗಜಕೇಸರಿ ಜಾತಕದವಳಾದ ಅಂಬಾಬಾಯಿ ಎಂಬ ಕನ್ಯೆಯನ್ನು ವಿವಾಹವಾದನು. ಹೀಗೆ ದಾಂಪತ್ಯ ಜೀವನ ಸಾಗಿಸುತ್ತಿರುವಾಗ ಕೆಲದಿನಗಳಲ್ಲಿಯೇ ಶ್ರೀಮಂತನಾದನು. ಆದರೆ ಪುತ್ರ ಸಂತಾನವಿಲ್ಲದೆ ಕೊರಗುತ್ತಿದ್ದರು. ಹಾಗೆಯೇ ದಂಪತಿಗಳು ಧಾರ್ಮಿಕ ಆಚರಣೆಗಳಲ್ಲಿ ಶ್ರದ್ಧೆಯುಳ್ಳವರಾಗಿದ್ದರು.

ಸಾರಸ್ವತ ಬ್ರಾಹ್ಮಣ ಸಮಾಜದವನೇ ಆದ ಸುಂದರರಾಯ ಬಡತನವನ್ನು ಬೆನ್ನಿಗಂಟಿಕೊಂಡು ಬಂದವನು. ಸುಶೀಲೆ ಎಂಬ ಹೆಂಡತಿ, ಭಾಸ್ಕರನೆಂಬ ಮಗನನ್ನು ಒಳಗೊಂಡು ಒಂದು ಚಿಕ್ಕ ಕುಟುಂಬ. ಈ ಭೀಮರಾಯ ಮತ್ತು ಸುಂದರರಾಯನಿಗೂ ಸ್ನೇಹದ ನಂಟು. ಹೀಗಾಗಿ ಭೀಮರಾಯ ಉದ್ಯೋಗ ಕೊಡಿಸುವ ಹವಣಿಕೆಯಲ್ಲಿದ್ದ. ಆದರೆ ಹೆಂಡತಿ ಅಂಬಾಬಾಯಿಯನ್ನು ಕೇಳದೆ ಯಾವ ಕೆಲಸಕ್ಕೂ ಕೈ ಹಾಕಿದವನಲ್ಲ. ಈ ವಿಚಾರ ಪತ್ನಿಯ ಮುಂದಿಡುತ್ತಲೇ ಕೆಂಡದಂತಾದಳು. ಅಷ್ಟೇ ಅಲ್ಲ, ಸುಂದರರಾಯನ ಪ್ರಾಣಕ್ಕೂ ಕಂಟಕವಾದಳು. ಕಾರಣ ತನಗೂ ನರಸಿಂಹಶಾಸ್ತ್ರಿಗೂ ಸಂಬಂಧ ಕಲ್ಪಿಸಿದ್ದಾನೆಂಬ ಕಾರಣವನ್ನು ಮುಂದೆ ಮಾಡಿ ಅಂಬಾಬಾಯಿ ತನ್ನ ಶೀಲಕ್ಕೆ ಕಳಂಕ ಹಚ್ಚಿದನೆಂಬ ಕಾರಣದಿಂದ ಸುಂದರರಾಯನಿಗೆ ವಿಷ ಬೆರೆಸಿ ಕೊಂದಳು. ಪತಿಯ ಮರಣದಿಂದ ದುಃಖಿತಳಾದ ಸುಶೀಲೆ ಜಡೆಕಟ್ಟಿದ ತನ್ನ ಕೂದಲುಗಳನ್ನು ಬಿಡಿಸಿ ತಲೆಯಲ್ಲಿದ್ದ ಹೂವನ್ನು, ಕೊರಳಲ್ಲಿದ್ದ ಮಂಗಳ ಸೂತ್ರವನ್ನು ಕಿತ್ತೊಗೆದು, ಹಣೆಯಲ್ಲಿದ್ದ ಕುಂಕುಮದ ತಿಲಕವನ್ನು ಅಳಿಸಿ, ಆ ಕುಂಕುಮವನ್ನು ತಾಳಿಗೂ, ಹೂವಿಗೂ ಮುಟ್ಟಿಸಿ, ಅವುಗಳನ್ನೆಲ್ಲಾ ಪತಿಯ ಪಾದಗಳ ಮೇಲಿಟ್ಟು, ಪತಿಯನ್ನು ಏಕಾಗ್ರ ದೃಷ್ಟಿಯಿಂದ ನೋಡಿ, ಪಕ್ಕನೆ ಮೂರ್ಛಿತಳಾಗಿ ಕಾಲಡಿಯಲ್ಲಿ ಬಿದ್ದಳು."[೨] ಈ ದೃಶ್ಯ ನೋಡುಗರ ಹೃದಯವನ್ನು ಕರುಗಿಸುವಂತಿತ್ತು. ಅಂಬಾಬಾಯಿ–ಭೀಮರಾಯ ಇಬ್ಬರು ಅಪರಾಧಿಗಳ ಸ್ಥಾನದಲ್ಲಿದ್ದರೂ ಹಣದ ಪ್ರಾಬಲ್ಯದಿಂದ ನಿರಪರಾಧಿಗಳಾದರು. ಹೀಗಿರುವಾಗ ಅಂಬಾಬಾಯಿ ಶ್ರೀಗಳವರ ಕೃಪೆಯಿಂದಾಗಿ ಇಂದಿರಾಬಾಯಿ ಎಂಬ ಹೆಣ್ಣು ಮಗುವಿಗೆ ಜನ್ಮ ನೀಡಿದಳು. ಬಂಜೆ ಎಂಬ ಕೊರಗಿನಿಂದ ಮುಕ್ತವಾದಳು. ಸುಂದರರಾಯ, ಸುಶೀಲೆಯರ ಮಗ ಭಾಸ್ಕರ ಇವನು ವಕೀಲನಾದ

ಅಮೃತರಾಯರಲ್ಲಿ ಕೆಲಸಕ್ಕಾಗಿ ನಿಂತನು. ಅವರ ಪ್ರೀತಿಗೆ ಪಾತ್ರನಾದ ಭಾಸ್ಕರ ಚೆನ್ನಾಗಿ ಓದಿದನು. ಬಿ.ಎ. ಪದವಿಗಾಗಿ ಮದ್ರಾಸಿನ ಸಂಸ್ಥಾನ ಶಾಲೆಯೊಂದರಲ್ಲಿ ಹೆಚ್ಚಿನ ವಿದ್ಯೆಯನ್ನು ಪಡೆದು ಊರಿಗೆ ಮರಳಿದನು. ಆಶ್ರಯದಾತನಾದ ಅಮೃತರಾಯ ಜಲಜಾಕ್ಷಿ ಹಾಗೂ ತನ್ನ ತಾಯಿ ಸುಶೀಲೆಗೂ ಸಂತಸಗೊಳಿಸಿದನು.

ಇಂದಿರಾಬಾಯಿ ಗೃಹಿಣಿಯಾಗಿ ಬಾಳಲು ಅಗತ್ಯವಾದ ಅನುಭವ ಮತ್ತು ಅಲ್ಪಸ್ವಲ್ಪ ಅಕ್ಷರ ಜ್ಞಾನವನ್ನು ಕಲಿತಿದ್ದಳು. ಏಳು ವರ್ಷ ತುಂಬಿದ ಬಾಲೆ ಇಂದಿರಾಬಾಯಿಗೆ ಮದುವೆ ನಿಶ್ಚಿತವಾಗಿ ನೆಲ್ಲೂರಿನ ತ್ರ್ಯಯಂಬಕರಾಯ-ಚಂದ್ರಬಾಗಿಯರ ಮಗ ವಿಠಲರಾಯನೊಂದಿಗೆ ವಿವಾಹವಾಗುತ್ತದೆ. ಪ್ರೌಢ ವಯಸ್ಕನಾದ ವಿಠಲರಾಯ ವ್ಯಾಪಾರದ ಜವಾಬ್ದಾರಿ ಹೊತ್ತುಕೊಳ್ಳುವುದರ ಜೊತೆಗೆ ಲೈಂಗಿಕತೆಯಲ್ಲೂ ಹೆಚ್ಚಿನ ಆಸಕ್ತಿ ತಳೆದನು. ಗುಲಾಬಿ ಮತ್ತು ಗೋಕುಳಿಯನ್ನು ಉಪ ಪತ್ನಿಯರನ್ನಾಗಿ ಇಟ್ಟುಕೊಂಡನು. ತನ್ನ ಶಾರೀರಿಕ ಸುಖಕ್ಕಾಗಿ ಧನ, ಧಾನ್ಯ, ಆಸ್ತಿಯನ್ನು ವ್ಯಯ ಮಾಡಿದನು.

ಹತ್ತು ವರ್ಷ ತುಂಬಿದ ಇಂದಿರಾಬಾಯಿ ಋತುಮತಿಯಾದರೂ ಹನ್ನೆರಡು ವರ್ಷ ಪೂರ್ಣಗೊಳ್ಳದೆ ಶೋಭಾನಪ್ರಸ್ತ ನಿಂತು ಹೋಗುತ್ತದೆ. ಗಂಡ ವಿಠಲರಾಯನ ಅನೈತಿಕ ಸಂಬಂಧದ ವ್ಯಂಗ್ಯ ನುಡಿಗಳು ಇಂದಿರಾಬಾಯಿಗೆ ಬೇಸರವನ್ನುಂಟು ಮಾಡುತ್ತವೆ. ಸ್ನೇಹಿತೆ ಶಾರದಾಳಿಂದ ಸ್ತ್ರೀ ಧರ್ಮನೀತಿ, ಪಂಚತಂತ್ರ, ಸತ್ಯವತಿ ಚರಿತ್ರೆ ಹಾಗೂ ಇಸೊಪನ ನೀತಿ ಕಥೆಗಳನ್ನು ಓದುತ್ತಾ ಸಮಯ ಕಳೆಯುತ್ತಾಳೆ. ಕ್ರೈಸ್ತರು ಮುದ್ರಿಸಿದ ಪುಸ್ತಕಗಳನ್ನು ಓದುವುದರಿಂದ ಜಾತಿ ಕೆಡುವುದೆಂದು ತಾಯಿಯಿಂದ ವಿರೋಧವಾಗುತ್ತದೆ. ವಿಠಲರಾಯನಾದರೋ ವ್ಯಭಿಚಾರದ ಫಲವೆಂಬಂತೆ ರೋಗಕ್ಕೆ ಬಲಿಯಾಗಿ ಸ್ವರ್ಗಸ್ಥನಾಗುತ್ತಾನೆ. ಇಂದಿರಾಬಾಯಿಯ ತಾಯಿ ಅಂಬಾಬಾಯಿ ಧೈರ್ಯಗೆಡದೆ ಸಮಾಧಾನ ಚಿತ್ತಳಾಗಿಯೆ ಇರುವಳು. ಶವ ಸಂಸ್ಕಾರಕ್ಕಾಗಿ ಹೋಗುವಾಗ ಇಂದಿರಾಬಾಯಿಯ ಮುಖವನ್ನು ಯಾರಿಗೂ ತೋರಿಸದಂತೆ ನಿರ್ಬಂಧಿಸಲಾಯಿತು. ತಾಯಿ ತನ್ನ ಕುಂಕುಮವನ್ನು ಗೊತ್ತಾಗದಂತೆ ಅಳಿಸಿದಾಗ "ಓ ಹೋ! ಇಷ್ಟಿದದ್ದು ಸಾಲದೇ ಇನ್ನೂ ಬೇರೆ ಬೇರೆ ಬಗೆಯ ಕಷ್ಟಗಳು ಇವೆಯೇ?"[೬] ಎಂದು ಪ್ರತಿಕ್ರಿಯೆ ತೋರುತ್ತಾಳೆ.

ಬಾಲ ವಿಧವೆ ಇಂದಿರಾಬಾಯಿಯ ಜೀವನ ಕತ್ತಲೆ ಕೋಣೆಯಲ್ಲಿ ಬಂಧಿಯಾಗುತ್ತದೆ. ಸಂಪ್ರದಾಯಸ್ಥರಾದ ಸ್ವಂತ ತಂದೆ-ತಾಯಿಯಿಂದಲೇ ಸಂಕಷ್ಟಗಳಲ್ಲಿ ಸಿಲುಕುತ್ತಾಳೆ. ಎಣ್ಣೆ ಎರೆದುಕೊಳ್ಳದಂತೆಯೂ, ಒಳ್ಳೆಯ ಸೀರೆ-ಕುಪ್ಪಸ ಉಡಬಾರದೆಂತಲೂ, ಕುಂಕುಮ ಇಟ್ಟುಕೊಳ್ಳದಂತೆಯೂ ನಿರ್ಬಂಧಿಸಲಾಗುತ್ತದೆ. ಮಗಳ ಮನಸ್ಸನ್ನು ವೈರಾಗ್ಯದೆಡೆಗೆ ತಿರುಗಿಸಬೇಕೆಂದು ಪುರಾಣ, ಪ್ರವಚನ, ಆರಾಧನೆಗಳು ನಡೆಯುತ್ತವೆ. ಆದರೆ ಇಂದಿರಾಬಾಯಿ ಕೋಣೆ ಬಿಟ್ಟು

ಕದಲಿಲ್ಲ. ಅವಳಲ್ಲಿ ಯಾವ ಬದಲಾವಣೆಗಳು ಆಗಲಿಲ್ಲ. ಸಂತರಿಂದ ತನಗೆ ದುರ್ಗತಿ ತಪ್ಪಿದ್ದಲ್ಲವೆಂದು ಫಲಾಯನದ ಯೋಚನೆಯಲ್ಲಿರುವಾಗಲೇ ರಾತ್ರಿ ಸಂತರ ಅಧ್ಯಕ್ಷ ರಂಗಪ್ಪ ಇಂದಿರಾಬಾಯಿಯನ್ನು ಕೂಡಲು ಬರುತ್ತಾನೆ. ದೇಹಬಾದೆ ತೀರಿಸುವ ನೆಪದಿಂದ ಹೊರಬಂದ ಇಂದಿರಾಬಾಯಿ ಅದೇ ರಾತ್ರಿ ಮನೆಯನ್ನು ತೊರೆದು ಅಮೃತರಾಯನ ಕೊಟ್ಟಿಗೆಯಲ್ಲಿ ಆಶ್ರಯ ಪಡೆಯುತ್ತಾಳೆ. ಇದನ್ನು ಕಂಡ ಸುಬ್ಬಿಯ ಕರುಳು ಮಿಡಿಯುತ್ತದೆ. ಜಲಜಾಕ್ಷಿಯಂತೂ ಅಯ್ಯೋ! ಹೆಣ್ಣು ಜನ್ಮವೇ? ಎಂದು ಮರುಗುತ್ತಾಳೆ.

ನಂತರ ಜಲಜಾಕ್ಷಿ–ಅಮೃತರಾಯರ ಸಾಕು ಮಗಳಾಗಿ ಸಾತಾರದಲ್ಲಿದ್ದು ಮೆಟ್ರಿಕ್ ಪಾಸು ಮಾಡಿ, ಇಂದಿರಾಬಾಯಿ ಅವರನ್ನು ಸಂತಸಪಡಿಸುತ್ತಾಳೆ. ಇವರ ಆಶ್ರಯದಲ್ಲಿ ಇದ್ದು, ವಿದ್ಯಾಭ್ಯಾಸ ಮಾಡಿದ ಭಾಸ್ಕರ ಬಿ.ಎ. ಪದವಿಯ ನಂತರ ವಿಲಾಯತಿಗೆ ಹೋಗಿ ಸಿ.ಎಸ್. ಪಾಸು ಮಾಡುತ್ತಾನೆ. ತನ್ನ ಹುಟ್ಟುರಾದ ಕಮಲಾಪುರದಲ್ಲಿಯೇ ಕಲೆಕ್ಟರ್ ಹುದ್ದೆಗೆ ನೇಮಕಗೊಳ್ಳುತ್ತಾನೆ. ಇಂದಿರಾಬಾಯಿಯ ಮನಸ್ಸನ್ನು ಅರಿತ ಆಶ್ರಯದಾತ ದಂಪತಿಗಳು ಪರಸ್ಪರರ ಒಪ್ಪಿಗೆಯಿಂದ ಭಾಸ್ಕರ–ಇಂದಿರಾಬಾಯಿಯ ಮದುವೆ ಆಧುನಿಕ ನಿಯಮಗಳಿಗನುಸಾರವಾಗಿ ಅದ್ದೂರಿಯಿಂದ ನೆರವೇರಿಸುತ್ತಾರೆ. ಕಮಲಾಪುರದಲ್ಲಿ ವಿಧವಾ ವಿವಾಹದ ಬಿರುಗಾಳಿ ಏಳುತ್ತದೆ. ಬ್ರಾಹ್ಮಣರಿಗೆ ಮಠ ಬಹಿಷ್ಕಾರ ಹಾಕುತ್ತದೆ. ಧರ್ಮ ವಿಚಾರಕ ಭೀಮರಾಯನ ದೂರು ವಿಫಲಗೊಳ್ಳುತ್ತದೆ.

ಕೊನೆಯಲ್ಲಿ ಭೀಮರಾಯ ಹಾಗೂ ಅಂಬಾಬಾಯಿ ಅನಿವಾರ್ಯವಾಗಿ ಅಮೃತರಾಯನೊಂದಿಗೆ ಮಗಳು ಇಂದಿರಾ ಹಾಗೂ ಅಳಿಯನೊಂದಿಗೆ ರಾಜಿಮಾಡಿಕೊಂಡು ಸುಖ ಜೀವನ ನಡೆಸುತ್ತಾರೆ.

ಸಮಾಜ ಸುಧಾರಣೆಯನ್ನೇ ಪ್ರಮುಖ ಧ್ಯೇಯವನ್ನಾಗಿಟ್ಟುಕೊಂಡಿದ್ದರಿಂದ ಕಾದಂಬರಿ ಬಹಳ ಮಹತ್ವದ್ದೆನಿಸುತ್ತದೆ. ಇದನ್ನು ಮೆಚ್ಚಿದ ಶಿವರಾಮ ಕಾರಂತರು "ಕಳೆದ ಶತಮಾನದ ಕೊನೆಯಲ್ಲಿ ಗುಲ್ವಾಡಿ ವೆಂಕಟರಾಯರು ಬರೆದ ಇಂದಿರಾಬಾಯಿ ಎಂಬ ಕಾದಂಬರಿ ನನಗೆ ಬಹಳ ಮುಖ್ಯ ಎನಿಸುತ್ತದೆ. ಸಮಾಜದಲ್ಲಿ ಕ್ರಾಂತಿಯನ್ನು ಮೂಡಿಸಬೇಕು ಎಂಬ ಉದ್ದೇಶ ಅವರಲ್ಲಿದ್ದಲ್ಲಿ ಸಾಮಾಜಿಕ ತಳಮಳವನ್ನು ಬಿಂಬಿಸಬೇಕು ಅನ್ನುವುದು ಅವರ ಮನೋಭಾವ. ಹೀಗಾಗಿ ಅವರ ಇಂದಿರಾಬಾಯಿ ಕಾದಂಬರಿಯ ಆಗಿನ ಕಾಲಕ್ಕೆ ಒಂದು ಪ್ರಬುದ್ಧ ಕಾದಂಬರಿಯೆಂದೇ ಹೇಳಬೇಕಾಗುತ್ತದೆ"[೭] ಎನ್ನುತ್ತಾರೆ. ಕಾದಂಬರಿಕಾರರ ಧೋರಣೆಯು ಇದೇ ಆಗಿತ್ತು ಎಂಬುದನ್ನು ಇಲ್ಲಿ ಮರೆಯುವಂತಿಲ್ಲ.

### ೨. ಸದ್ಗುಣಿ ಕೃಷ್ಣಾಬಾಯಿ ಮತ್ತು ಉತ್ತಮ ಗೃಹಿಣಿ(೧೯೦೫)

ಆಧುನಿಕ ಕನ್ನಡ ಮಹಿಳಾ ಸಾಹಿತ್ಯದ ಆದ್ಯ ಲೇಖಕಿಯರಲ್ಲಿ ಸಂತೂಬಾಯಿ ನೀಲಗಾರರಿಗೆ ವಿಶೇಷ ಮಹತ್ವವಿದೆ. ಅವರ ಪ್ರಸ್ತುತ ಕಾದಂಬರಿ ಸದ್ಗುಣಿ ಕೃಷ್ಣಾಬಾಯಿಗೆ ಆಧುನಿಕ ಮಹಿಳಾ

ಸಾಹಿತ್ಯ ಪರಂಪರೆಗೆ ನಾಂದಿ ಹಾಕಿದ ಮೊದಲ ಕೃತಿಯೆನ್ನುವ ಹಿರಿಮೆಯಿದೆ. ಇಪ್ಪತ್ತನೆಯ ಶತಮಾನದ ಆರಂಭಕ್ಕೆ ಪಾಶ್ಚಾತ್ಯ ವೈಚಾರಿಕತೆಯ ಪ್ರಭಾವದಿಂದಾಗಿ ಕನ್ನಡ ಸಾಹಿತಿಗಳ, ಬುದ್ಧಿಜೀವಿಗಳ ಗಮನ ಸೆಳೆದಿದ್ದ ಮಾನವತಾವಾದಿ, ಆದರ್ಶವಾದಿ, ಆಸಕ್ತಿಗಳಿಂದಾಗಿ ಶಿಕ್ಷಣ, ವಿಧವಾವಿವಾಹ, ಬಾಲ್ಯವಿವಾಹ, ಕೇಶಮುಂಡನೆ ಇತ್ಯಾದಿ ಮಧ್ಯಮವರ್ಗದ ಸ್ತ್ರೀ ಸಮಸ್ಯೆಗಳು ಚರ್ಚೆಯ ಕೇಂದ್ರವಾದವು. ಪ್ರಸ್ತುತ ಕಾದಂಬರಿ ಸ್ತ್ರೀಶಿಕ್ಷಣದ ಕೌಟುಂಬಿಕ ಸಾಮಾಜಿಕ ಹಿತಾಸಕ್ತಿಗಳ ಸೃಷ್ಟೀಕರಣದ ಉದ್ದೇಶ ಹೊಂದಿದೆ.

ಮೂಲತಃ ಕರ್ನಾಟಕದ ಗ್ರಾಮವಾಸಿಗಳಾದ ಕೃಷ್ಣಾಬಾಯಿ ತಂದೆ ಹರಿವಂತ ತಾಯಿ ರಾಧಾಬಾಯಿ ಸರಕಾರಿ ಕೆಲಸದ ನಿಮಿತ್ತ ಮಹಾರಾಷ್ಟ್ರದಲ್ಲಿ ವಾಸವಾಗಿರುತ್ತಾರೆ. ತಮ್ಮ ಮಕ್ಕಳನ್ನು ಜ್ಞಾನ ಸಂಪನ್ನರಾಗಿಸುವ ಬಯಕೆ ಹೊಂದಿರುತ್ತಾರೆ. ಸುಸಂಸ್ಕೃತಳೂ, ಸುಸ್ವಭಾವದವಳು ಆದ ರಾಧಾಬಾಯಿ ಮಕ್ಕಳಲ್ಲಿ ಸತ್ಯ-ಸರಳತೆ, ಸ್ವಾವಲಂಬನೆ ಗುಣಗಳನ್ನು ಬೆಳೆಯುವಂತೆ ಮಾಡುತ್ತಾಳೆ. ಕೃಷ್ಣಾಬಾಯಿ ಬಾಲ್ಯದಲ್ಲಿ ತಂದೆಯನ್ನು ಕಳೆದುಕೊಳ್ಳುತ್ತಾಳೆ. ತಾಯಿ ಮತ್ತು ಅಣ್ಣನ ಬೆಂಬಲದಿಂದ ವಿದ್ಯಾಭ್ಯಾಸ ಮುಂದುವರಿಸುತ್ತಾಳೆ. ಅಕ್ಕ ಯಶೋಧಾಬಾಯಿ ವಿವಾಹವಾಗಿ ಗಂಡನ ಮನೆ ಸೇರುತ್ತಾಳೆ.

ಕೃಷ್ಣಾಬಾಯಿ ತಾಯಿ-ಅಣ್ಣನೊಂದಿಗೆ ಮುಂಬಯಿಗೆ ಹೋಗುತ್ತಾಳೆ. ವೈದ್ಯಶಾಸ್ತ್ರವನ್ನು ಅಭ್ಯಾಸ ಮಾಡುತ್ತಾಳೆ. ಮುಂಬಯಿಯ ಸುಶಿಕ್ಷಿತ ಸಭ್ಯ ಗೃಹಸ್ಥನ ಮಗ ಬಿ.ಎ. ಪದವೀಧರ ನಾದ ಮಾಧವರಾಯನೊಂದಿಗೆ ಕೃಷ್ಣಾಬಾಯಿಯ ವಿವಾಹ ನಡೆಯುತ್ತದೆ.

ಮದುವೆಯ ನಂತರವೂ ಗಂಡನ ಪ್ರೋತ್ಸಾಹದಿಂದ ಸಂಸ್ಕೃತ-ಇಂಗ್ಲೀಷ್ ಭಾಷೆಗಳನ್ನು ಕಲಿತು ಚಿತ್ರಕಲೆಯ ಅಭ್ಯಾಸವನ್ನು ಮುಂದುವರೆಸುತ್ತಾಳೆ. ಅತ್ತೆ-ಮಾವನ ಆರೈಕೆಯನ್ನು ಗಂಡನ ಸೇವೆಯನ್ನು ಮನಮುಟ್ಟಿ ಮಾಡುತ್ತಾಳೆ. ಅತ್ತೆಗೆ ಮಗಳಾಗಿ, ವಾತ್ಸಲ್ಯ ತೋರುತ್ತಾಳೆ. ಅತ್ತೆಯ ಮರಣದ ನಂತರ ಕುಟುಂಬದ ಎಲ್ಲಾ ಜವಾಬ್ದಾರಿಯನ್ನು ನಿಭಾಯಿಸುತ್ತಾಳೆ. ಉನ್ನತ ವಿದ್ಯಾಭ್ಯಾಸಕ್ಕಾಗಿ ಗಂಡ ಮಾಧವರಾಯ ಪರದೇಶಕ್ಕೆ ಹೋಗಲು ಸಿದ್ಧತೆ ನಡೆಸುತ್ತಿರುವಾಗ ಮಾವ ಭಾವೂಸಾಹೇಬ ತೀರಿಕೊಳ್ಳುತ್ತಾನೆ. ಅಪಾರ ಸಾಲವನ್ನು ಮಗ-ಸೊಸೆಯರಿಗೆ ಬಿಟ್ಟು ಹೋಗಿರುತ್ತಾನೆ. ತಂದೆಯ ಸಾವಿನಿಂದ ಆಘಾತಗೊಂಡ ಮಾಧವರಾಯನನ್ನು ಸಂತೈಸಿ ಮಾವ ಬಿಟ್ಟು ಹೋದ ಸಾಲವನ್ನು ಜಾಣತನದಿಂದ ತೀರಿಸುತ್ತಾಳೆ. ದುಂದು ವೆಚ್ಚವನ್ನೆಲ್ಲ ಕಡಿತಗೊಳಿಸಿ, ಮನೆಗೆಲಸವನ್ನೆಲ್ಲ ಸ್ವತಃ ನಿಭಾಯಿಸುತ್ತಾಳೆ. ಹೀಗೆ ತನ್ನ ವ್ಯವಹಾರಿಕ ಜಾಣ್ಮೆ ಮತ್ತು ದೂರದೃಷ್ಟಿಯಿಂದ ಸಂಸಾರಕ್ಕೆ ಕವಿದಿದ್ದ ಆಪತ್ತುಗಳನ್ನು ಪರಿಹರಿಸುತ್ತಾಳೆ. ಮಾಧವರಾಯನು ಎಲ್.ಎಲ್.ಬಿ. ಪರೀಕ್ಷೆಯನ್ನು ಯಶಸ್ವಿಯಾಗಿ ಪೂರೈಸಲು ಎಲ್ಲ ರೀತಿಯ ಸಹಾಯ ಮಾಡುತ್ತಾಳೆ. ಗಂಡ

ಮಾಧವರಾಯನಿಗೆ ಸರಿಯಾದ ಉದ್ಯೋಗ ಸಿಗದಿದ್ದಾಗ ಮನೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಾಳೆ. ಹೀಗೆ ಗಂಡನ ಕಷ್ಟ-ಸುಖದಲ್ಲಿ ಸಹಭಾಗಿಯಾಗುತ್ತಾ ತನ್ನ ಆಭರಣಗಳನ್ನು ಮಾರಿ ಗಂಡನಿಗೆ ಸಹಾಯ ಮಾಡಿ ಆತನ ಉನ್ನತ ವಿದ್ಯಾಭ್ಯಾಸದ ಆಸೆ ಫಲಿಸುವಂತೆ ಮಾಡುತ್ತಾಳೆ. ಬ್ಯಾರಿಸ್ಟರ್ ಪರೀಕ್ಷೆಗಾಗಿ ಓದಲು ಇಂಗ್ಲೆಂಡಿಗೆ ಹೋಗಬೇಕೆನ್ನುವ ಗಂಡನ ಇಚ್ಛೆಯನ್ನು ಪೂರೈಸಲು ಹಣಕಾಸಿನ ವ್ಯವಸ್ಥೆ ಮಾಡಿ ಗಂಡನೊಂದಿಗೆ ಇಂಗ್ಲೆಂಡಿನ ಹಡಗನ್ನೇರಿ ಪ್ರಮಾಣ ಬೆಳೆಸುತ್ತಾಳೆ. ದುರ್ದೈವದಿಂದಾಗಿ ಚಂಡಮಾರುತಕ್ಕೆ ಸಿಲುಕಿದ ಹಡಗು ಮುಳುಗತೊಡಗಿದಾಗ ಪ್ರಾಣರಕ್ಷಣೆಗಾಗಿ ಅವಸರದಲ್ಲಿ ಬೇರೆ ದೋಣಿಗಳಲ್ಲಿ ಹತ್ತಿದ್ದರಿಂದ ಗಂಡ-ಹೆಂಡತಿ ಅಗಲುತ್ತಾರೆ. ಮಾಧವರಾಯ ಹತ್ತಿದ ದೋಣಿ ಆತನನ್ನು ಇಂಗ್ಲೆಂಡಿಗೆ ಕರೆದೊಯ್ದರೆ, ಕೃಷ್ಣಾಬಾಯಿ ಮುಂಬಯಿಗೆ ಮರಳಿ ಬರುತ್ತಾಳೆ. ಪರಿ ಪರಿಯಾಗಿ ಪ್ರಯತ್ನಿಸಿದರೂ ಗಂಡನ ಸುಳಿವು ಹತ್ತದೆ ಕೊನೆಗೆ ಪುಣೆಯಲ್ಲಿದ್ದ ವಿಧವೆ ಅಕ್ಕನ ಆಶ್ರಯದಲ್ಲಿರುತ್ತಾಳೆ. ಗಂಡನ ವಾರ್ತೆ ತಿಳಿಯದೆ ದುಃಖಿತಳಾದ ಕೃಷ್ಣಾಬಾಯಿ ಇತ್ತ ಅಣ್ಣ ಸತ್ತ ಸುದ್ದಿಕೇಳಿ ಕಂಗಾಲಾಗುತ್ತಾಳೆ.

ಹೀಗೆ ಒಂದರ ಮೇಲೊಂದು ಆವರಿಸಿದ ದುಃಖದ ಘಟನೆಗಳಿಂದ ಹತಾಶಳಾದ ಕೃಷ್ಣಾಬಾಯಿ ದಾರಿ ತಪ್ಪಿದ ಅಣ್ಣನ ಮಕ್ಕಳ ಶಿಕ್ಷಣದ ಭಾರವನ್ನು ಹೊತ್ತು ಪ್ರೀತಿ-ವಾತ್ಸಲ್ಯದಿಂದ ತಿದ್ದಿ ಸದ್ಗುಣಗಳನ್ನು ಬಿತ್ತುತ್ತಾಳೆ. ತಾಳ್ಮೆ-ಧೈರ್ಯದಿಂದ ವರ್ತಿಸಿ ಆಪತ್ತುಗಳನ್ನು ಆತ್ಮವಿಶ್ವಾಸದಿಂದ ಎದುರಿಸುತ್ತಾಳೆ. ಹೀಗೆ ಸಾವಿನ ಬಾಯಿಯಿಂದ ಕೃಷ್ಣಾಬಾಯಿ ಬದುಕುಳಿದರೆ ಮಾಧವರಾಯನು ಅನಿರೀಕ್ಷಿತವಾಗಿ ಒದಗಿ ಬಂದ ಸಹಾಯದಿಂದ ಇಂಗ್ಲೆಂಡ್ ತಲುಪುತ್ತಾನೆ. ಹೆಂಡತಿ ಇನ್ನೊಂದು ಹಡಗಿನಲ್ಲಿ ಸುರಕ್ಷಿತವಾಗಿ ಮರಳಿ ಊರು ತಲುಪಿರಬಹುದೆಂದು ಭಾವಿಸಿದರೂ ಹೆಂಡತಿಯ ಬಗೆಗೆ ಯಾವುದೇ ಖಚಿತ ಸುದ್ದಿ ತಿಳಿಯದೇ ದುಃಖಪಡುತ್ತಾನೆ. ಹಡಗಿನಲ್ಲಿ ಪರಿಚಯವಾದ ಶ್ರೀಮಂತ ಗೃಹಸ್ಥ ಲ್ಯಾಂಬರ್ಟ್‌ನ್ನನ ಸಹಾಯದಿಂದ ಸಿವ್ಹಿಲ್ ಸರ್ವಿಸ್ ಪರೀಕ್ಷೆಗೆ ಅಭ್ಯಾಸ ಮಾಡಲು ಪ್ರಾರಂಭಿಸುತ್ತಾನೆ. ಇತ್ತ ಕೃಷ್ಣಾಬಾಯಿ ತನ್ನ ಬುದ್ಧಿವಂತಿಕೆ, ವಾತ್ಸಲ್ಯ, ಸಜ್ಜನಿಕೆ, ಸದ್ಗುಣಗಳಿಂದ ಅಕ್ಕನ ಕುಟುಂಬದ ಪ್ರಗತಿಯೊಂದಿಗೆ ಅಕ್ಕ ಯಶೋಧಾಬಾಯಿಯ ಪ್ರೀತಿಗೆ ಪಾತ್ರಳಾಗುತ್ತಾಳೆ. ಮನೆಯಿಂದ ಯಾವಾಗಲೂ ಹೊರಗೇ ಕಾಲಕಳೆಯುತ್ತಾ ಮಕ್ಕಳನ್ನು ನಿರ್ಲಕ್ಷಿಸುತ್ತಿದ್ದ ಅಕ್ಕ ಯಶೋಧಾ ತಂಗಿಯ ಸನ್ನಡತೆಯನ್ನು ಕಂಡು ಬದಲಾಗುತ್ತಾಳೆ. ಮಕ್ಕಳ ವ್ಯಕ್ತಿತ್ವದ ವಿಕಾಸಕ್ಕೆ ಅಗತ್ಯವಾದ ನೀತಿ, ಸದಾಚಾರ, ದುಡಿಮೆ, ವಿನಯ, ವ್ಯವಹಾರ ಜ್ಞಾನವನ್ನು ಕಲಿಸುತ್ತಾಳೆ. ಹೆತ್ತತಾಯಿಗಿಂತಲೂ ಹೆಚ್ಚಾಗಿ ಚಿಕ್ಕಮ್ಮ ಕೃಷ್ಣಾಬಾಯಿಯಲ್ಲಿ ಮಕ್ಕಳು ಅಧಿಕ ವಿಶ್ವಾಸ, ವಾತ್ಸಲ್ಯವನ್ನು ಬೆಳೆಸಿಕೊಂಡ ಕಾರಣ ಯಶೋಧಾಬಾಯಿ ತಾತ್ಕಾಲಿಕವಾಗಿ ತಂಗಿಯ ಮೇಲೆ ಮುನಿಸಿಕೊಂಡರೂ ಕೃಷ್ಣಾಬಾಯಿ ತನ್ನ ತಾಳ್ಮೆ-ವಿವೇಕದಿಂದ ಅಕ್ಕ ಯಶೋಧಾಬಾಯಿಯ ವಿಶ್ವಾಸವನ್ನು ಗಳಿಸುತ್ತಾಳೆ. ಸುತ್ತಮುತ್ತಲಿನವರಿಗೆಲ್ಲ ಆದರ್ಶ ಮಹಿಳೆಯಾಗಿ ಅನುಕರಣೀಯಳಾಗುತ್ತಾಳೆ.

ಗಂಡ ಮಾಧವರಾಯನು ಲಂಡನ್ನಿನಲ್ಲಿ ಸಿವ್ಹಿಲ್‌ಸರ್ವಿಸ್ ಪರೀಕ್ಷೆಯನ್ನು ಪಾಸು ಮಾಡಿದ ಸುದ್ದಿ ಪತ್ರಿಕೆಗಳ ಮೂಲಕ ತಿಳಿದುಬಂದಾಗ ಸ್ವತಃ ಇಂಗ್ಲೆಂಡಿಗೆ ಹೋಗಿ ಗಂಡನನ್ನು ಶೋಧ ಮಾಡಿ ಕರೆತರಲು ನಿಶ್ಚಯಿಸುತ್ತಾಳೆ. ಆದರೆ ಅಷ್ಟರಲ್ಲಿಯೇ ಮಾಧವರಾಯನು ಆಶ್ರಯ ಪಡೆದು ಕೊಂಡಿದ್ದ ವ್ಯಾಪಾರಸ್ಥನ ಮಾಹಿತಿಯನ್ನು ಪತ್ರಿಕೆಗಳಿಂದ ತಿಳಿದ ಕೃಷ್ಣಾಬಾಯಿಯು ಮಾಧವರಾಯನಿಗೆ ತಾನು ಪುಣೆಯಲ್ಲಿ ಅಕ್ಕನ ಮನೆಯಲ್ಲಿರುವ ಸಮಾಚಾರವನ್ನು ತಲುಪಿಸುತ್ತಾಳೆ. ಹೆಂಡತಿ ಸುರಕ್ಷಿತವಾಗಿರುವ ವಾರ್ತೆ ತಿಳಿದ ಮಾಧವರಾಯನು ಮುಂಬಯಿಗೆ ಬರುತ್ತಾನೆ. ಸತಾರೆಯ ಅಸಿಸ್ಟೆಂಟ್ ಕಲೆಕ್ಟರನಾಗಿ ವೃತ್ತಿ ಪ್ರಾರಂಭಿಸುತ್ತಾನೆ. ಗಂಡ–ಹೆಂಡತಿಯರು ಸತಾರೆಯಲ್ಲಿ ಸಂಸಾರ ಪ್ರಾರಂಭಿಸುತ್ತಾರೆ. ಮಾಧವರಾಯನು ದಕ್ಷತೆಯಿಂದ ಸೇವೆ ಮಾಡಿ ವೃತ್ತಿಯಲ್ಲಿ ಬಡ್ತಿ ಪಡೆದು ಪುಣೆಗೆ ಬರುತ್ತಾನೆ. ಕೃಷ್ಣಾಬಾಯಿಗೆ ಒಬ್ಬ ಮಗ–ಮಗಳು ಹುಟ್ಟುತ್ತಾರೆ. ಹೀಗೆ ಕೌಟುಂಬಿಕ ಸೌಖ್ಯ, ಸಾಮಾಜಿಕ ಮನ್ನಣೆ, ಆರ್ಥಿಕ ಸಮೃದ್ಧಿಯನ್ನು ಸಂಪಾದಿಸಿಕೊಂಡು ಕೃಷ್ಣಾಬಾಯಿ ಮತ್ತು ಮಾಧವರಾಯ ಸುಖವಾಗಿ ಬಹುಕಾಲ ಬಾಳುತ್ತಾರೆ. ಹೀಗೆ ಸದ್ಗುಣಿಯಾದ ಕೃಷ್ಣಾಬಾಯಿ ವಿದ್ಯಾವಂತೆಯಾಗಿ ಉತ್ತಮ ಗೃಹಿಣಿಯಾಗಿ, ಕೌಟುಂಬಿಕ ಕರ್ತವ್ಯಗಳನ್ನು ಸಮರ್ಥವಾಗಿ ನಿರ್ವಹಿಸಿ, ಪತಿಗೆ ಅನುರೂಪಳಾದ ಸತಿಯಾಗಿ, ಬಂಧು–ಬಳಗದವರೆಲ್ಲರ ಹಿತ ಚಿಂತಕಳಾಗಿ ಸರ್ವರ ಮನ್ನಣೆಗೆ ಪಾತ್ರಳಾಗುತ್ತಾಳೆ. ಜೀವನದಲ್ಲಿ ಅನಿರೀಕ್ಷಿತವಾಗಿ ಎರಗಿದ ಆಪತ್ತುಗಳನ್ನು ಧೈರ್ಯ, ವಿವೇಕ, ಸಂಯಮದಿಂದ ಸ್ವೀಕರಿಸುತ್ತಾಳೆ. ಚದುರಿಹೋಗಿದ್ದ ತನ್ನ ಬದುಕನ್ನು ಕಟ್ಟಿಕೊಳ್ಳುವಲ್ಲಿ ಪ್ರಬುದ್ಧತೆಯನ್ನು ಪ್ರದರ್ಶಿಸುವ ಕೃಷ್ಣಾಬಾಯಿಯ ಮೂಲಕ ಲೇಖಕಿ ಸಂತೂಬಾಯಿ ಆಧುನಿಕ ಸುಶಿಕ್ಷಿತ ಗೃಹಿಣಿಯ ಮಾದರಿಯನ್ನು ಚಿತ್ರಿಸಿದ್ದಾರೆ.

### ೩. ವಾಗ್ದೇವಿ(೧೯೦೫)

ಕನ್ನಡ ಸಾಹಿತ್ಯ ಆರಂಭಿಕ ಕಾದಂಬರಿಕಾರ ಬೋಳಾರ ಬಾಬುರಾಯರ ಮಹತ್ವದ ಕೃತಿ ವಾಗ್ದೇವಿ. ಮುಗ್ಧ ಪ್ರೇಮದಿಂದ ತೊಡಗಿ, ಹಾದರ, ಮಠಗಳಲ್ಲಿನ ಅತ್ಯಾಚಾರ, ಭ್ರಷ್ಟತನ, ಹೆಣ್ಣಿನ ಅಧಿಕಾರದ ಲಾಲಸೆ ಅವುಗಳೆಲ್ಲವನ್ನು ಅನುಭವಿಸಿ ಪಶ್ಚಾತ್ತಾಪದ ನೆರಳಿಗೆ ಹೊರಳುವುದೇ ಈ ಕಾದಂಬರಿಯ ವಸ್ತು.

ಕುಮುದಾಪುರದ ಮಠಾಧೀಶರಾದ ಚಂಚಲನೇತ್ರ ಶ್ರೀಪಾದಂಗಳವರು ಅರಿಷಡ್ವರ್ಗಗಳನ್ನು ಜಯಿಸಿ ಹೆಸರು ಮಾಡಿಕೊಂಡಿದ್ದರು. ಒಂದು ದಿನ ನದಿಗೆ ಸ್ನಾನ ಮಾಡಲೆಂದು ಹೋದಾಗ ವಿವಾಹಿತ ಸ್ತ್ರೀ ವಾಗ್ದೇವಿಯ ಮೈಮಾಟಗಳಿಗೆ ಸೋತು ಚಂಚಲಿತರಾದರು. ವೆಂಕಟಪತಿಯ ಮಧ್ಯಸ್ಥಿಕೆಯಲ್ಲಿ ವಾಗ್ದೇವಿಯನ್ನು ಮಠದಲ್ಲಿರಿಸಿಕೊಳ್ಳುವ ಏರ್ಪಾಟು ನಡೆಯಿತು. ಚಂಚಲನೇತ್ರ ಶ್ರೀಪಾದಂಗಳವರು ವಾಗ್ದೇವಿಯ ಮೋಹಪಾಶದಲ್ಲಿ ಸಿಲುಕಿ, ಕನವರಿಸುವ ಸಮಯದಲ್ಲಿ ವೇದವ್ಯಾಸ

ಉಪಾಧ್ಯಯರ ಉಪೇಕ್ಷೆಗೆ ಒಳಗಾದನು. ಸ್ವಾಭಿಮಾನದ ಅಬ್ಬರದಲ್ಲಿ ಹುದ್ದೆಯನ್ನು ಕಳೆದುಕೊಂಡು ಕೊರಗಿದನು. ಶ್ರೀ ಪಾದಂಗಳಾದರೋ ಕಾಮ, ಭೋಗ, ಲಾಲಸೆಯಿಂದ ಹುಚ್ಚರಂತೆ ವರ್ತಿಸಿ ಭಕ್ತ ಜನರ ಅಪಹಾಸ್ಯಕ್ಕೆ ಗುರಿಯಾದರು.

ಬಡಬ್ರಾಹ್ಮಣ ಕುಟುಂಬದ ತಮ್ಮಣ್ಣಭಟ್ಟ ಹಾಗೂ ಭಾಗೀರಥಿ ದಂಪತಿಗಳಿಗೆ ವಾಗ್ದೇವಿ ಏಕಮಾತ್ರ ಪುತ್ರಿ. ವಾಗ್ದೇವಿ ಅಬಾಚಾರ್ಯನನ್ನು ಮದುವೆಯಾಗಿದ್ದರೂ ಸುಖ ಕಂಡವಳಲ್ಲ. ಹೆಣ್ಣಾಗಿ ಪಡೆಯಬೇಕಾದ ಸುಖವನ್ನು ಪಡೆಯುವಂತೆಯೂ ಇರಲಿಲ್ಲ. ಇದೆಲ್ಲದಕ್ಕೂ ಹೆಚ್ಚಾಗಿ ಬಡತನದ ಬವಣೆಯೊಂದು ಕಾಡುತ್ತಿತ್ತು. ಚಿಕ್ಕಂದಿನ ಗೆಳೆಯ ತಿಪ್ಪಾಶಾಸ್ತ್ರಿಯ ಜ್ಯೋತಿಷ್ಯದಂತೆ ವಾಗ್ದೇವಿಗೆ ಸಂಪತ್ತನ್ನು ಅನುಭವಿಸುವ ಸದಾವಕಾಶ ಮನೆ ಬಾಗಿಲಿಗೆ ಬಂದಿತ್ತು. ಸಂನ್ಯಾಸಿ ಚಂಚಲನೇತ್ರರಿಗೆ ವಾಗ್ದೇವಿ ಇಟ್ಟುಕೊಂಡವಳಾಗಬೇಕೆಂಬ ಪ್ರಸ್ತಾಪ ವೆಂಕಟಪತಿಯ ಬಾಯಿಂದ ಹೊರಬಂದಾಗ ವಾಗ್ದೇವಿಗಿಂತಲೂ ಹೆಚ್ಚಾಗಿ ಮೆಚ್ಚಿಗೆಯಾದುದು ತಾಯಿ ಭಾಗೀರಥಿಗೆ. ವಾಗ್ದೇವಿಗೆ ಇದು ಸಮ್ಮತವಾಗಿದ್ದರೂ ಶರತ್ತನ್ನು ವಿಧಿಸುವ ವಾಗ್ದೇವಿ "ನನ್ನಲ್ಲಿ ಗಂಡು ಸಂತತಿ ದೇವರು ಅನುಗ್ರಹಿಸಿದರೆ ಚೊಚ್ಚಲು ಮಗನು ಮುಂದಿನ ಯತಿಪಟ್ಟಕ್ಕೆ ಬರುವಂತೆ ಅವನಿಗೆ ಶ್ರೀಪಾದಂಗಳವರ ಆಶ್ರಯ ಕೊಟ್ಟು ಶಿಷ್ಯನನ್ನಾಗಿ ಮಾಡಬೇಕು. ಈ ವಾಗ್ಧಾನವನ್ನು ಪಟ್ಟದೇವರ ಮುಂದೆ ಮಾಡಿ ಮುಂದಿನ ಪ್ರಸಂಗಕ್ಕೆ ಒಡಂಬಡುವವಳಲ್ಲ"[೮] ಎಂದು ಕಡ್ಡಿಮುರಿದಂತೆ ಹೇಳುವಳು.

ವಾಗ್ದೇವಿಯ ವಾಗ್ದಾನವನ್ನು ಪೂರೈಸುವುದಾಗಿ ಪ್ರಮಾಣ ಮಾಡಿದ ಚಂಚಲನೇತ್ರ ಶ್ರೀ ಪಾದಂಗಳವರ ಆದೇಶದಂತೆ ವಾಗ್ದೇವಿಯ ಇಡೀ ಕುಟುಂಬ ಮಠದಲ್ಲಿ ನೆಲೆ ನಿಲ್ಲುತ್ತದೆ. ಸನ್ಯಾಸಿ ಚಂಚಲನೇತ್ರರು ಈವರೆಗಿನ ಸಂನ್ಯಾಸಕ್ಕೆ ತಿಲಾಂಜಲಿಯಿತ್ತು ವಾಗ್ದೇವಿಯೊಂದಿಗೆ ಬೆರೆತು, ಭೋಗ ಜೀವನದಲ್ಲಿ ತೃಪ್ತರಾಗುತ್ತಾರೆ. ವಾಗ್ದೇವಿಯ ಮೇಲಿನ ವ್ಯಾಮೋಹಕ್ಕಾಗಿ ಮತ್ತು ಅವಳನ್ನು ಮೆಚ್ಚಿಸಲಿಕ್ಕಾಗಿ ಹಣವನ್ನು ನೀರಿನಂತೆ ವ್ಯಯ ಮಾಡುತ್ತಾರೆ. ಇಷ್ಟು ಸಾಲದು ಎಂಬಂತೆ ಇಡೀ ಮಠದ ಆಡಳಿತದ ನಿರ್ವಹಣೆಯನ್ನು ವಾಗ್ದೇವಿಯ ತಂದೆಯ ಕೈಗೆ ಒಪ್ಪಿಸಿ ನಿಶ್ಚಿಂತರಾಗುತ್ತಾರೆ.

ವಾಗ್ದೇವಿಗೆ ಶಾಸ್ತ್ರೋಸ್ತವಾಗಿ ತಾಳಿ ಕಟ್ಟಿದವನು ಅಬಾಚಾರ್ಯನಾದರೂ ಮೈ ಮನಸ್ಸು ಗಳೆರಡನ್ನೂ ನೀಡಿ, ನಿಜವಾದ ಗಂಡನೆಂದು ಒಪ್ಪಿಕೊಂಡದ್ದು ಚಂಚಲನೇತ್ರ ಶ್ರೀಪಾದಂ ಗಳವರನ್ನು ಮಾತ್ರ. ಈ ಕಾರಣವೇ ಸಮಾಜದ ದೃಷ್ಟಿಗಾಗಿ ಗಂಡನಿಗೆ ತಗ್ಗಿ ಬಗ್ಗಿ ನಡೆಯುವಂತೆ ನಟಿಸುತ್ತಾಳೆ. ಈ ವಿಷಯ ಇಡೀ ಊರಿಗಷ್ಟೇ ಏಕೆ ಸುತ್ತಲಿನ ಊರುಗಳಿಗೂ ಪಸರಿಸುತ್ತದೆ. ಒಂದು ದಿನ ಗ್ರಹಣದ ನಿಮಿತ್ತ ನದಿಗೆ ಸ್ನಾನ ಮಾಡಲು ಹೋದಾಗ ವಾಗ್ದೇವಿಗೆ

ಮುಖಭಂಗವಾಗುತ್ತದೆ. ಈ ಎಲ್ಲ ಅಪವಾದಗಳ ನಿವಾರಣೆಗಾಗಿ ಗೆಳೆಯ ತಿಪ್ಪಾಶಾಸ್ತ್ರಿಯ ಸ್ನೇಹವನ್ನು ಮತ್ತಷ್ಟು ಗಟ್ಟಿಯಾಗಿಸಿಕೊಳ್ಳುತ್ತಾಳೆ.

ವೇದವ್ಯಾಸ ಉಪಾಧ್ಯಾಯನ ದೂರಿನ ಮೇಲೆ ಪಂಚ ಮಠಗಳಲ್ಲಿ ಉಳಿದ ನಾಲ್ಕು ಮಠಗಳ ಪ್ರತಿನಿಧಿಗಳು ಬಾಲಮುಕುಂದನ ನೇತೃತ್ವದಲ್ಲಿ ವಿಚಾರಣೆಗೆ ಬರುತ್ತಾರೆ. ಇಲ್ಲಿ ಭೀಮಾಚಾರ್ಯ ಹಣ ಪಡೆದು ತೆಪ್ಪಗಾದರೆ, ಸ್ತ್ರೀ ಲಂಪಟನಾದ ಬಾಲಮುಕುಂದ ವಾಗ್ದೇವಿಯ ರೂಪ, ಯೌವನಕ್ಕೆ ಸೋತು ಅವಳೊಂದಿಗೆ ಜಯ ದೊರಕುತ್ತದೆ. ಕೆಲ ದಿನಗಳಲ್ಲಿ ವಾಗ್ದೇವಿ ಗರ್ಭಿಣಿಯಾಗಿ ಸೂರ್ಯನಾರಾಯಣನನ್ನು ಹೆತ್ತು ಸಂತಸದಿಂದ ಉಬ್ಬುತ್ತಾಳೆ. ಅವಳ ಪೂರ್ವಯೋಜನೆಯಂತೆ ಸೂರ್ಯನಾರಾಯಣನ ಉಪನಯನವು ನೆರವೇರುತ್ತದೆ.

ಒಂದು ದಿನ ನದಿಗೆ ಹೋದಾಗ ವೇದವ್ಯಾಸ ಉಪಾಧ್ಯಾಯನ ಹೆಂಡತಿ ಸುಶೀಲಾ ಬಾಯಿಯೊಡನೆ ವಿನಃ ಕಾರಣ ಕಾದಾಡಿ ಅಪಮಾನಿತಳಾದ ವಾಗ್ದೇವಿ, ಕಣ್ಣೀರ ನದಿಯನ್ನೇ ಸುರಿಸುತ್ತಾಳೆ. ಹೀಗಿರುವಾಗ ತಾಯಿ ಹಾಗೂ ತಂದೆಯರ ಮರಣ ವಾಗ್ದೇವಿಯನ್ನು ದುಃಖದಲ್ಲಿ ಮುಳುಗಿಸುತ್ತದೆ. ಖಜಾನೆಯ ಬೀಗದ ಕೈ ವಾಗ್ದೇವಿಯ ಕೈಗೆ ಬಂದಾಗ ಸಣ್ಣಪುಟ್ಟ ಕಳವು ನಡೆಯಲು, ಕಳೆದ ಒಡವೆಗಳನ್ನು ಮರಳಿ ಪಡೆಯಲು ಪೊಲೀಸ್ ಅಧಿಕಾರಿ ಶಾಬಯ್ಯನನ್ನು ಭೇಟಿಯಾದಳು. ಶಾಬಯ್ಯನು ವಾಗ್ದೇವಿಯ ರೂಪ, ಯೌವನಕ್ಕೆ ಮನಸೋತನು. ವಾಗ್ದೇವಿಯನ್ನು ಕುಳಿತುಕೊಳ್ಳಲು ಹೇಳಿದರೂ ನಿಂತುಕೊಂಡೇ ಇರುವ ವಾಗ್ದೇವಿಗೆ ನಿನ್ನನ್ನು ಕೈಹಿಡಿದು ಕೂಡಿಸಲೇ ಎಂಬುವಷ್ಟು ಮುಂದುವರೆದ ಶಾಬಯ್ಯನಿಗೆ ಉತ್ತರವಾಗಿ ತನು, ಮನ, ಧನಗಳಿಂದಲೂ ತಮ್ಮ ಸನ್ನಿದಿಯ ಮೊರೆಹೋದ ನನ್ನನ್ನು ಹ್ಯಾಗೆ ವಿನಿಯೋಗ ಮಾಡಿದರೂ ಹೆಕ್ಕಳ ಪಡೆವೆನು ಎಂದು ದುಃಖ ತೋಡಿಕೊಂಡು ಕಳೆದಿರುವ ವಸ್ತುಗಳನ್ನು ಮರಳಿ ಪಡೆದಳು. ಇದೇ ಸಮಯಕ್ಕೆ ಗಂಡನಿಂದ ದೂರವಾಗಿ ತವರಿನಲ್ಲುಳಿದ ಚಿಕ್ಕಮ್ಮನ ಮಗಳು ಶೃಂಗಾರಿಯನ್ನು ಕರೆಸಿಕೊಂಡು ತನ್ನ ಗುಣಾವಗುಣಗಳನ್ನೆಲ್ಲ ಶೃಂಗಾರಿಗೆ ಧಾರೆ ಎರೆದಳು.

ವಾಗ್ದೇವಿಯ ಮಗ ಸೂರ್ಯನಾರಾಯಣ ಪ್ರಾಯಕ್ಕೆ ಬರುತ್ತಲೇ ಕೊಟ್ಟ ವಚನ ಪೂರ್ಣಗೊಳಿಸದ ಶ್ರೀಪಾದಂಗಳವರಲ್ಲಿ ವಿರಸವುಂಟಾಗಿ ಕೋಪದ ಭರದಲ್ಲಿ ಮಠವನ್ನು ತೊರೆದು ಇದ್ದ ಹಣವನ್ನು ವ್ಯಯ ಮಾಡಿದಳು. ನೇಮಿರಾಜಶೆಟ್ಟಿಯಲ್ಲಿ ಸಾಲ ಮಾಡಿ ಶೃಂಗಾರಿಯೊಂದಿಗೆ ಬೆರೆಯಲು ಸಮ್ಮತಿಸಿದಳು. ಕೆಲದಿನಗಳಲ್ಲಿಯೇ ಸೂರ್ಯನಾರಾಯಣನಿಗೆ ಆಶ್ರಮವಾಯಿತು. ಆದರೆ ಎಲ್ಲಾ ಮಠಾಧಿಪತಿಗಳು ಸೇರಿ ಸೂರ್ಯನಾರಾಯಣ ಅಯೋಗ್ಯನೆಂದು ವಿರೋಧಿಸಿದರು. ಈ ವೇಳೆಗೆ ವಾಗ್ದೇವಿಯ ಪತಿ ಅಬಾಚಾರ್ಯ ಪರಲೋಕ ವಾಸಗೈದು ವಾಗ್ದೇವಿ ವಿಧವೆಯಾದಳು. ತನ್ನೆಲ್ಲಾ ಕಾರ್ಯಗಳನ್ನು ಶೃಂಗಾರಿಯಿಂದ ನಡೆಸಲ್ಪಡುತ್ತಿರುವಾಗ

ಮಠದಲ್ಲಿಯೇ ಪ್ರಣಯ ನಿರತರಾಗಿದ್ದ ಶೃಂಗಾರಿ ಮತ್ತು ನೇಮಿರಾಜಶೆಟ್ಟಿಯನ್ನು ಕಂಡು ಕುಪಿತನಾದ ತಿಪ್ಪಾಶಾಸ್ತ್ರಿ ನೇಮಿರಾಜನ ಕೊಲೆಗೈದನು. ಎರಡು ಲಕ್ಷ ರೂಪಾಯಿಗಳನ್ನು ಕಾಣಿಕೆಯಾಗಿ ನೀಡಲೊಪ್ಪಿದ ವಾಗ್ದೇವಿ ಶವವನ್ನು ಗೌಪ್ಯವಾಗಿ ಸಾಗಿಸಿ, ಮಠದ ಮೇಲಿನ ಅಪವಾದವನ್ನು ನಿವಾರಿಸಿಕೊಂಡಳು.

ಈ ವಿಷಯ ಒಬ್ಬರಿಂದೊಬ್ಬರಿಗೆ ಹರಡಿ ಸುದ್ದಿಯಾಯಿತು. ನೇಮಿರಾಜಶೆಟ್ಟಿಯ ಹೆಂಡತಿ ಪತಿವ್ರತಾ ಸ್ತ್ರೀ. ಆದಾಗ್ಯೂ ಭೀಮಾಜಿ ಹಾಗೂ ಶಾಬಯ್ಯನ ಕುಟಿಲ ನೀತಿಯಿಂದಾಗಿ ನ್ಯಾಯ ಸಿಗದೇ ಹೋಯಿತು. ಇಷ್ಟೆಲ್ಲಾ ಅನ್ಯಾಯ, ಅತ್ಯಾಚಾರಗಳು ಮಠದಲ್ಲಿ ನಡೆದು ಜನಮನವನ್ನು ತಲ್ಲಣಗೊಳಿಸಿದವು. ಆದರೆ ವಾಗ್ದೇವಿ ಇಷ್ಟಕ್ಕೂ ಬಿಡದೇ ನಾಲ್ಕು ಪೀಠಾಧಿಪತಿಗಳು ಬಿಟ್ಟ ಮಂಡೆಯಲ್ಲಿ ಕಛೇರಿ ಹತ್ತಿದ್ದು ನೋಡಬೇಕೆಂಬ ಆಸೆಯೊಂದು ತುಂಬಾ ಇದೆ ಎಂಬ ಅಪೇಕ್ಷೆಯಿಂದಾಗಿ ಅಧಃಪತನದ ಹಾದಿ ಹಿಡಿದಳು. ಚಂಚಲನೇತ್ರರು ಸಾವನ್ನಪ್ಪಿದಾಗ ಇದ್ದ ಹಣವೆಲ್ಲ ದುಷ್ಟತನದ ನಿವಾರಣೆಗಾಗಿ ಖರ್ಚಾಯಿತು. ಮಠದ ಸೇವಕ ಕೆಪ್ಪಮಾಣಿ ಸತ್ಯವನ್ನು ಹೊರಹಾಕಲು ರಾಜರು ದ್ವಂದ್ವ ಮಠದಿಂದ ಆಶ್ರಯ ಹೊಂದಿದವನೆ ಕುಮುದಾಪುರದ ಮಠಾಧಿಪತಿಯೆಂದು ಸಾರುವ ಮೊದಲೇ ಒಡವೆ, ವಸ್ತುಗಳನ್ನು ಕಟ್ಟಿಕೊಂಡು ಶೃಂಗಾರಿ, ತಿಪ್ಪಾಶಾಸ್ತ್ರಿ ಹಾಗೂ ಮಗನೊಂದಿಗೆ ಪಲಾಯನ ಮಾಡಿದಳು. ಊರೂರು ಅಲೆದು ಭೀಮಾಜಿ, ಶಾಬಯ್ಯನಿಂದ ತಿರಸ್ಕೃತಳಾಗಿ "ಸರಿ ಸರಿ ಈಗ ವಾಗ್ದೇವಿಗೆ ಯೌವ್ವನವಿಲ್ಲ. ಕೈಯಲ್ಲಿ ದುಡ್ಡೂ ಇಲ್ಲ. ಇವೆರಡರಲ್ಲಿ ಒಂದಾದರೂ ಇದ್ದರೆ ಯಾರೂ ಇಂತಾ ಲಂಡತನ ಮಾಡುವ ಹಾಗಿಲ್ಲ"ವೆಂದು ಪಶ್ಚಾತ್ತಾಪಪಡುತ್ತಾಳೆ. ಶಿವರಾಮಶೆಟ್ಟಿಯಲ್ಲಿರುವಾಗ ಅವಳ ತಂಗಿಯನ್ನ ಸೂರ್ಯನಾರಾಯಣ ಹಾರಿಸಿಕೊಂಡು ಹೋಗುತ್ತಾನೆ. ಇದರಿಂದ ವಾಗ್ದೇವಿ ದುಃಖಪಡುತ್ತಾಳೆ. ನೆಲೆಯಿಲ್ಲದೆ ಅಲೆದಾಡುತ್ತಾಳೆ. ಕೊನೆಗೆ ವೈದ್ಯಪಂಡಿತನ ಕರುಣೆಗೆ ಪಾತ್ರರಾಗಿ ಶೃಂಗಾರಿ ಮನೆಯ ಯಜಮನಿಯಾಗಿ, ವಾಗ್ದೇವಿ ಅಡಿಗೆ ಸೇವಕಳಾಗಿ ಕೆಲಸ ಮಾಡುತ್ತಾರೆ. ವಾಗ್ದೇವಿ ಈ ರೀತಿಯ ಕೆಲಸದಿಂದ ಬೇಸರಗೊಂಡು ಕೆರೆಗೆ ಹಾರಿ ಪ್ರಾಣ ಬಿಡಲು ಸಿದ್ಧಳಾಗಿರುವಾಗ ಮಗ ಸೂರ್ಯನಾರಾಯಣನಿಂದ ರಕ್ಷಿಸಲ್ಪಡುವುದರೊಂದಿಗೆ ಈ ಕಾದಂಬರಿ ಮುಕ್ತಾಯಗೊಳ್ಳುತ್ತದೆ.

**೪. ಇಂದಿರೆ(೧೯೦೮)**

ಕಾದಂಬರಿ ಗಂಡು ಹೆಣ್ಣಿನಲ್ಲುಂಟಾದ ಪರಸ್ಪರ ಪ್ರೇಮ ಕಥನವನ್ನು ವಸ್ತುವಾಗಿಸಿಕೊಂಡಿದೆ. ಬೆಂಗಳೂರಿನಲ್ಲಿ ನೆಲಸಿದ್ದ ಸುಬ್ಬರಾಯ ಶ್ರೀಮಂತ ವ್ಯಕ್ತಿ. ಈತನ ಒಬ್ಬಳೇ ಮಗಳು ದೇವಯಾನಿ ಬಾಲವಿಧವೆ. ಸುಧಾರಕ ಪಂಥದ ಸುಬ್ಬರಾಯ ವಿಧವೆ ದೇವಯಾನಿಗೆ ಉಪಯುಕ್ತ ಶಿಕ್ಷಣವನ್ನು ಕೊಡಿಸಿದನು. ನವರಸಪುರದ ಶ್ರೀಕಾಂತರಾವ್ ದೇಸಾಯಿಯವರು ತಮ್ಮ ಕಮಲಾಕಾಂತ

ಇಂಜನೀಯರಿಂಗ್ ಪದವೀಧರನಾಗಿ ಬೆಂಗಳೂರಿನಲ್ಲಿಯೇ ಸ್ವತಂತ್ರ ಉದ್ಯೋಗ ಕೈಗೊಂಡಿದ್ದನು. ಈತನ ಸ್ನೇಹಿತ ಜಯರಾಮ ವ್ಯಾಪಾರ ಉದ್ದಿಮೆಯಲ್ಲಿ ನಿರತನಾಗಿದ್ದು ಇವರಿಬ್ಬರೂ ಬಹು ಆತ್ಮೀಯರಾಗಿದ್ದರು.

ವಿದ್ಯಾಬುದ್ಧಿಯಿಂದ ದೇವಯಾನಿ ಕಮಲಾಕಾಂತನ ಮನಸ್ಸನ್ನು ಸೂರೆಗೊಂಡಿದ್ದಳು. ಇವರಿಬ್ಬರು ಪರಸ್ಪರ ಪ್ರೀತಿಸುತ್ತಿದ್ದರು ಮತ್ತು ಮದುವೆಯಾಗಲು ಒಪ್ಪಿದರು. ಆದರೆ ಏಮ್ಮುಖ ಪ್ರೀತಿಯ ಜಯರಾಮ ದೇವಯಾನಿ ತನಗೆ ದಕ್ಕದೇ ಇದ್ದುದಕ್ಕಾಗಿ ಪ್ರೇಮಿಗಳಿಬ್ಬರಲ್ಲಿ ಭೇದ ಕಲ್ಪಿಸಿದನು. ಕಮಲಾಕಾಂತನು ಬೇರೊಂದು ಮದುವೆಯಾಗಲಿರುವನೆಂದು ಸುಳ್ಳು ಹೇಳಿದನು. ಕಮಲಾಕಾಂತ ಎಷ್ಟು ತಿಳಿಹೇಳಿದರೂ ದೇವಯಾನಿ ಅರ್ಥಮಾಡಿಕೊಳ್ಳದೇ ಅವನನ್ನು ದ್ವೇಷಿಸಿದಳು. ಹೀಗೆ ದಿನಗಳು ಉರುಳುತ್ತಿರುವಾಗ ಕಮಲಾಕಾಂತ ಹಿರಿಯರ ಆದೇಶದ ಮೇರೆಗೆ ಬೇರೊಬ್ಬಳನ್ನು ಮದುವೆಯಾದನು. ರಮಾಕಾಂತನಿಗೆ ಜನ್ಮ ನೀಡುತ್ತಲೇ ಕಮಲಾಕಾಂತನ ಪತ್ನಿ ತೀರಿದಳು.

ನಿಜವೇನೆಂಬುದನ್ನು ಅರಿತ ದೇವಯಾನಿ ಪಶ್ಚಾತ್ತಾಪ ಪಟ್ಟಳು. ಕಮಲಾಕಾಂತನ ಪ್ರೀತಿಯಿಂದ ದೂರವಾಗಿ ಕೊರಗಿದಳು, ಜೀವವಿರುವವರೆಗೂ ವಿರಾಗಿಯಾಗಿಯೇ ಬಾಳಲು ನಿಶ್ಚಯಿಸಿದಳು. ದೇವಯಾನಿಗಾಗಿ ಆಸೆಪಟ್ಟಿದ್ದ ಜಯರಾಮನಿಗೆ ಮುಖಭಂಗವಾಗಿ ಬೇರೊಬ್ಬ ಶ್ರೀಮಂತ ಯುವತಿಯನ್ನು ಮದುವೆಯಾದನು. ಅವಳು ಇಂದಿರಾ ಎಂಬ ಮಗಳನ್ನು ಹೆತ್ತು ತೀರಿ ಹೋದಳು.

ರಮಾಕಾಂತ ಇಂಜಿನಿಯರಿಂಗ್ ಪದವಿ ಅಭ್ಯಾಸದಲ್ಲಿರುವಾಗಲೇ ತಂದೆ ಕಮಲಾಕಾಂತ ತೀರಿಕೊಂಡನು. ಇದೇ ದುಃಖದಲ್ಲಿ ಪದವಿ ಪಾಸು ಮಾಡಿದ ರಮಾಕಾಂತ ಬೆಂಗಳೂರಲ್ಲಿ ನೆಲೆಸಿದ. ತಂದೆ ಸಾಯುವ ಮುನ್ನ ಕನವರಿಸುತ್ತಿದ್ದ ದೇವಯಾನಿಯ ಕರೆಗೆ ಓಗೊಟ್ಟು ಶ್ರೀರಂಗಪಟ್ಟಣ ತಲುಪಿದನು. ರಮಾಕಾಂತನ ನಡೆನುಡಿಗಳನ್ನು ಮೆಚ್ಚಿದ ದೇವಯಾನಿ ಸ್ವಂತ ಮಗನೆಂದೇ ಭಾವಿಸಿದಳು. ದೇವಯಾನಿಯು ಆತ್ಮೀಯ ಜಯರಾಮ ತನ್ನ ತಂದೆಯ ಸ್ನೇಹಿತ. ಆತನ ಮಗಳು ಇಂದಿರಾ ಸುಂದರಳು, ಸುಶೀಲೆಯು ಆಗಿದ್ದು, ಆಕಸ್ಮಿಕವಾಗಿ ಪರಿಚಯವಾಯಿತು. ಪರಸ್ಪರ ಸ್ನೇಹಿತರಾಗಿ ಶ್ರೀರಂಗಪಟ್ಟಣ ಸುತ್ತಿದ್ದು ಆಯಿತು. ಇವರಿಬ್ಬರ ಸಲುಗೆಯಿಂದಾಗಿ ಇಬ್ಬರೂ ಸತಿಪತಿಗಳಾಗುವುದೇ ಒಂದು ಪುಣ್ಯ ಎಂದು ಭಾವಿಸಿದ ದೇವಯಾನಿಗೆ ಜಯರಾಮ ನಿಂದ ಅಡ್ಡಿಯೇನಾದರೂ ಆಗುವುದೇ ಎಂಬ ಆತಂಕವೂ ಇತ್ತು.

ಒಂದು ದಿನ ಔತಣಕೂಟದಲ್ಲಿ ದೇವಯಾನಿ, ಇಂದಿರೆ, ಅವಳ ತಂದೆ ಜಯರಾಮ, ಉಪಾಸನ ಪಂಥದ ಪಂಡಿತೆ ರಾಧಾಬಾಯಿ ಹಾಗೂ ರಮಾಕಾಂತನು ಪಾಲ್ಗೊಂಡಿದ್ದನು. ಸ್ತ್ರೀಯರ ಬಗೆಗೆ ಅಭಿಪ್ರಾಯ ಕೇಳಿದಾಗ "ಸ್ತ್ರೀಯರು ಉಚ್ಚ ಪದ್ಧತಿಯ ಶಿಕ್ಷಣ ಹೊಂದಿರುವುದು

ಅವಶ್ಯ. ಅವರ ಸ್ವಾತಂತ್ರ್ಯಾತಿಶಯವು ಮಾತ್ರ ನನಗೆ ಸಹಿಸದು"[೧೦] ಎಂದು ರಮಾಕಾಂತ ನೇರವಾಗಿಯೇ ಉತ್ತರಿಸಿದನು. ಆದರೆ ಮೂರು ಜನರನ್ನು ಮದುವೆಯಾಗಿ ಪಾಶ್ಚಾತ್ಯ ಸಂಸ್ಕೃತಿಗೆ ಮಾರು ಹೋಗಿದ್ದ ಪಂಡಿತೆ ರಾಧಾಬಾಯಿಗೆ ಕಮಲಾಕಾಂತನ ಹೇಳಿಕೆ ಹಿಡಿಸುವುದಿಲ್ಲ. ಭಾರತೀಯರ ಸ್ತ್ರೀತ್ವದ ಸಿದ್ಧಾಂತವನ್ನು ಪಾಲಿಸುವ ಇಂದಿರಾ ಸ್ತ್ರೀಯರ ನಡತೆಗಳು ಹೇಗಿರಬೇಕೆಂಬುದನ್ನು ಹೇಳುತ್ತಾ, ಸ್ತ್ರೀ ತನ್ನ ಅಹಂನಿಂದಾಗಿಯೇ ಅಧೋಗತಿಯಲ್ಲಿ ದುಮುಕುವಳು ಎಂದು ಅಭಿಪ್ರಾಯಪಡುತ್ತಾಳೆ.

ಇಂದಿರೆಯಲ್ಲಿ ಅನುರಕ್ತನಾದ ರಮಾಕಾಂತ ಹೇಳಿಕೊಳ್ಳಲಾಗದೆ ಬೆಂಗಳೂರು ಸೇರುತ್ತಾನೆ. ಕೆಲದಿನಗಳಲ್ಲಿ ಜಯರಾಮ ಮನೆಯೊಂದನ್ನು ಕಟ್ಟಿಸಿ ಬೆಂಗಳೂರಿನಲ್ಲಿಯೇ ನೆಲೆಸಿದಾಗ ರಮಾಕಾಂತನನ್ನು ಕಂಡ ಇಂದಿರೆ ಸಂತಸಗೊಳ್ಳುತ್ತಾಳೆ. ಆದರೆ ಮಗಳು ಇಂದಿರೆಯನ್ನು ಶ್ರೀಕಂಠ ಬಹದ್ದೂರನಿಗೆ ಕೊಡುವುದರ ಮೂಲಕ ಜಹಗೀರದಾರನಾಗಬೇಕೆಂಬ ಆಸೆಯುಳ್ಳ ಜಯರಾಮ ರಮಾಕಾಂತನನ್ನು ಅನಾಧರದಿಂದ ಕಾಣುತ್ತಾನೆ.

ಪಂಡಿತೆ ರಾಧಾಬಾಯಿ ಅವಳ ಶಿಷ್ಯೆ ವಿಧವೆ ಕಮಲಾಬಾಯಿ ವಿಧವಾ ಪುನರ್ವಿವಾಹದ ಸುಧಾರಣೆಯಲ್ಲಿ ತೊಡಗಿದವರು. ರಮಾಕಾಂತನ ಪರಿಚಯ ಮಾಡಿಕೊಂಡ ಕಮಲಾಬಾಯಿ ಮನ ಸೆಳೆಯಲೆತ್ನಿಸಿ ವಿಫಲಳಾಗುವಳು. ಮೂರು ತಿಂಗಳ ಕಾಲ ಇಂದಿರೆಯನ್ನು ಕಾಣದ ರಮಾಕಾಂತ ಮನೆಗೆ ಹೋಗುತ್ತಾನೆ. ಇಂದಿರೆ ಆನಂದ ಭರಿತಳಾಗುತ್ತಾಳೆ. ಇಷ್ಟು ದಿನಗಳು ಬರದೇ ಇದ್ದ ರಮಾಕಾಂತನಿಗೆ ಆಗಾಗ ಬಂದು ಕಾಣಬೇಕೆಂದು ಪ್ರಾರ್ಥಿಸುತ್ತಾಳೆ. ಉತ್ತರವಾಗಿ ರಮಾಕಾಂತನು "ಇದಕ್ಕೆ ಪ್ರಾರ್ಥನೆಯೆನ್ನದೆ ಆಜ್ಞೆಯೆಂದು ತಿಳಿದುಕೊಂಡು ಅನುಗ್ರಹಿತನಾಗಿರುವೆನು. ನಿಮ್ಮ ದರ್ಶನದಿಂದಾದಷ್ಟು ಆನಂದವು ತನಗೆ ಮತ್ಯಾರಿಂದಲೂ ಆಗದು"[೧೧] ಎಂಬ ಮಾತು ಬಾಣ ಬಿಟ್ಟಂತಿದ್ದರೂ ಅರ್ಥವಾಗದೆ ರಮಾಕಾಂತನನ್ನು ಕಂಡರೆ ನನಗೂ ಆನಂದವಾಗುತ್ತದೆ ಏಕೆ? ಎಂಬ ಪ್ರಶ್ನೆಯಲ್ಲಿ ಮುಳುಗುತ್ತಾಳೆ.

ಹೀಗಿರುವಾಗ ಶ್ರೀಕಂಠನನ್ನು ವರಿಸುವಂತೆ ಒತ್ತಡ ತರಲಾಗುತ್ತದೆ. ಇದು ಸಾಲದಕ್ಕೆ ವಿಧವೆ, ಕಮಲೆಯಲ್ಲಿ ರಮಾಕಾಂತನು ಅನುರಕ್ತನಾಗಿದ್ದಾನೆಂಬ ಸುಳ್ಳು ಸುದ್ದಿಯನ್ನು ಹಬ್ಬಿಸಲಾಗುತ್ತದೆ. ಇದರಿಂದ ಇಂದಿರೆಯ ಮನಸ್ಸು ವಿಚಲಿತವಾಗದೇ ಸತ್ಯದ ಶೋಧನೆಗೆ ತೊಡಗುತ್ತದೆ.

ರಮಾಕಾಂತನು ಜಯರಾಮನನ್ನು ಕಂಡು ತಾನು ಇಂದಿರೆಯಲ್ಲಿ ಅನುರಕ್ತನಾಗಿದ್ದು ತನಗೆ ಕೈಗೂಡದ ಕಾರಣ ಜಪಾನ ದೇಶಕ್ಕೆ ಹೋಗಲಿರುವುದಾಗಿ ತಿಳಿಸುತ್ತಾನೆ. ಇದಕ್ಕೆ ಒಪ್ಪದ ಜಯರಾಮ ಯಾರಿಗೂ ತಿಳಿಸದೆ ಮಗಳು ಇಂದಿರೆಯನ್ನು ಕಾಶಿಯಾತ್ರೆಗೆ ಕರೆದೊಯ್ಯುತ್ತಾನೆ. ತಂದೆಯ ಹೆಸರಿಗೆ ಬಂದ ರಮಾಕಾಂತನ ಪತ್ರವನ್ನೋದಿದಾಗ ತಾನು ಕಮಲೆಯಲ್ಲಿ

ಅನುರಕ್ತನಾಗಿಲ್ಲವೆಂತಲೂ, ತಾನು ಇಂದಿರೆಯಲ್ಲಿ ಅನುರಕ್ತನಾಗಿರುವೆನೆಂತಲೂ ಬರೆದುದನ್ನು ತಿಳಿದು ರಮಾಕಾಂತನನ್ನು ಕಾಣಲು ಹಾತೊರೆಯುತ್ತಾಳೆ.

ಈ ವೇಳೆಗಾಗಲೇ ರಮಾಕಾಂತ ದೇವಯಾನಿಗೆ ಎಲ್ಲವನ್ನು ತಿಳಿಸಿರುತ್ತಾನೆ. ಇಂದಿರೆಯ ಬದುಕು ತನ್ನಂತಾಗಬಾರದೆಂದು ದೇವಯಾನಿ ಅದನ್ನು ಸವಾಲಾಗಿ ಸ್ವೀಕರಿಸುತ್ತಾಳೆ. ಅದೇ ರಾತ್ರಿ ತಂದೆಯೊಂದಿಗೆ ವಾದ ವಿವಾದವಾಗಿ "ನನಗೆ ಶ್ರೀಕಂಠನಲ್ಲಿ ಪ್ರೀತಿಯಿಲ್ಲ. ಬೇರೆಯವರಲ್ಲಿ ನಾನು ಅನುರಕ್ತಳು ಎಂದು ವಾದಿಸುವಳಲ್ಲದೆ ತಾನು ಆಜನ್ಮ ಬ್ರಹ್ಮಚಾರಿಣಿಯಾಗಿರಲು ನಿರ್ಧರಿಸಿರುವುದಾಗಿ ಹೇಳುತ್ತಾಳೆ."[೨] ತನ್ನ ಏಕಮಾತ್ರ ಪುತ್ರಿಯ ನಿರ್ಧಾರ ತಂದೆಯ ಕಲ್ಲಾದ ಹೃದಯವನ್ನು ಕರಗಿಸಿ ಮಗಳ ಭವಿಷ್ಯದ ಕುರಿತು ಯೋಚಿಸುವಂತಾಗುತ್ತದೆ. ವಿಧವೆ ಸಾವಿತ್ರಮ್ಮನ ಮಗ ನಟೇಶ ಪರರಿಗೆ ಕೇಡು ಬಗೆಯಲು ಹೋಗಿ ತಾನೇ ನದಿಯಲ್ಲಿ ಬಿದ್ದು ಪ್ರಾಣ ಕಳೆದುಕೊಳ್ಳುತ್ತಾನೆ. ಈಗಾಗಲೇ ನಿರ್ಧಾರವಾದ ಶ್ರೀಕಂಠಬಹದ್ದೂರ ಹಾಗೂ ಇಂದಿರೆಯ ಮದುವೆ ರದ್ದು ಪಡಿಸಲಾಗುತ್ತದೆ. ಜಯರಾಮನ ಒಪ್ಪಿಗೆ ಮೇಲೆ ಮದುವೆಗೆ ಸಿದ್ಧತೆ ನಡೆಯುತ್ತದೆ. ದೇವಯಾನಿ ರಮಾಕಾಂತನನ್ನು ತನ್ನ ಸ್ವಂತ ಮಗನೆಂದೇ ಭಾವಿಸುತ್ತಾಳೆ. ರಮಾಕಾಂತ ಇಂದಿರೆಯ ಮದುವೆ ವಿಜೃಂಭಣೆಯಿಂದ ನೆರವೇರುತ್ತದೆ. ನವರಸಪುರದ ಶ್ರೀಕಾಂತರಾವ್ ದೇಸಾಯಿ ತನಗೆ ಮಕ್ಕಳಿರದಿದ್ದಕ್ಕಾಗಿ ರಮಾಕಾಂತನೇ ದೇಸಾಯಿಯ ವಾರಸುದಾರನಾಗುತ್ತಾನೆ.

ಅಂದಿನ ದಿನಗಳಲ್ಲಿ ಕಾಣಲಾಗದೆ ಇರುವ ಹೊಸದಾದ ಪ್ರೇಮ ವಿವಾಹವೊಂದನ್ನು ಯಶಸ್ವಿಯಾಗಿಸಿದ ಕಾದಂಬರಿಕಾರರ ಧೋರಣೆ ಮೆಚ್ಚುವಂಥದ್ದು.

**೫. ಸುಶೀಲೆ(೧೯೧೩)**

ಈ ಕಾದಂಬರಿಯ ಸುಶಿಕ್ಷಿತ ಗೃಹಿಣಿ ಸುಶೀಲೆ ನೈತಿಕ ನೆಲೆಗಟ್ಟಿನ ಮೇಲೆ ಬದುಕು ಸಾಗಿಸಿದವಳು. ಗಂಡನಿಂದ ದೈಹಿಕ, ಮಾನಸಿಕ ಹಿಂಸೆಯನ್ನು ಅನುಭವಿಸಿಯೂ ಪತಿಯನ್ನು ಒಳ್ಳೆಯ ದಾರಿಗೆ ತಂದು ಸಫಲವಾಗುತ್ತಾಳೆ. ಇದು ಈ ಕಾದಂಬರಿಯ ವಸ್ತು.

ಮಹಾನಂದ ಗ್ರಾಮದ ಸಂಪ್ರದಾಯಿಕ ಬ್ರಾಹ್ಮಣ ಮನೆತನದ ಸುಜ್ಞಾನಶರ್ಮರ ಎರಡನೆಯ ಮಗಳು ಸುಶೀಲೆ ಇವಳು ಮರೆಯಪುರದ ವಿನೋಧನ ಪತ್ನಿ ವಿದ್ಯಾವಂತೆಯಾಗಿದ್ದಳು. ಸಂಪ್ರದಾಯವನ್ನು ಬಿಟ್ಟು, ಬಾಳಿದವಳಲ್ಲ. ಆದರೆ ವಿನೋದ ಕುಡಿತ, ವ್ಯಭಿಚಾರಗಳ ಕಣಿಯಾಗಿದ್ದ. ಗಂಡ ಹೊಡೆದು ಬಡಿದು ಮಾಡಿದರೂ, ಸರಿದಾರಿಗೆ ತರಲು ಸತತ ಪ್ರಯತ್ನಿಸುವ ಆದರ್ಶ ಸತಿ ಸುಶೀಲೆ. ನೆರೆಮನೆಯ ಪಂಚಾಂಗದ ಸಿದ್ಧಾಂತಿಯ ಪತ್ನಿ ಗಿರಿಯಮ್ಮನಿಗೆ ಚಾಡಿ ಹೇಳದಿದ್ದರೆ ತಿಂದ ಊಟ ಅರಗುವುದಿಲ್ಲ. ಸುಶೀಲೆ ಓದುವುದನ್ನು ಕಂಡರೆ ಮೈ ಉರಿ. ಅಂತೆಯೇ "ಹಾಳು ಸುಶೀಲೆ ಯಾವಾಗ ನೋಡಿದರೂ ಪುಸ್ತಕವನ್ನು ಹಿಡಿದೇ ಇರುವಳು. ಹೆಂಗಸು...ಗೆ

ಓದೆಂದರೇನು"[೧೩] ಎಂದು ವಿರೋಧಿಸಿದ್ದಲ್ಲದೆ ಹಾಳು ಓದು ಬರಹ ಬಲ್ಲ ಹೆಂಗಸರು ಅವರು ಮಾಡುವುದೆಲ್ಲ ಕೆಟ್ಟ ಕೆಲಸವೇ!! ಹೊರಗೆ ಮಾತ್ರ ಬಹು ಸಜ್ಜನರಂತೆ ಕಾಣುತ್ತಿರುವರು ಎಂದು ಜರೆಯುತ್ತಾಳೆ. ನೀನಿಲ್ಲದ ವೇಳೆ ನಿಮ್ಮ ಮನೆಗೆ ಯಾರ್‍ಯಾರೋ ಬಂದು ಹೋಗುತ್ತಾರೆ ಎಂಬ ಸಂಶಯದ ಕಿಡಿಯನ್ನು ವಿನೋದನ ತಲೆಯಲ್ಲಿ ತುಂಬುತ್ತಾಳೆ. ಪೂರ್ವಾಪರ ವಿಚಾರ ಮಾಡದ ವಿನೋದ ಸುಶೀಲೆಯನ್ನು ಹೊಡೆದು ಬಡಿದು ಹಿಂಸಿಸುತ್ತಾನೆ. ಅವಿವಾಹಿತ ಯುವತಿ ಚಂಚಲೆಯದು ಹೆಸರಿಗೆ ತಕ್ಕ ನಡೆ. ಚಂಚಲೆ ತಂತ್ರನಾಥ ಹಾಗೂ ವಿನೋಧನ ಪ್ರೇಯಸಿಯೂ ಹೌದು. ಒಂದು ದಿನ ಸುಶೀಲೆಯನ್ನು ಹರಿಕಥೆಗೆ ಹೋಗೋಣ ಬಾ ಎಂದು ಕರೆಯುತ್ತಾಳೆ. ಗಂಡನ ಅನುಮತಿ ಇಲ್ಲದೆ ನಾನೆಲ್ಲಿಗೂ ಬರಲಾರೆ ಎಂದ ಸುಶೀಲೆಯ ಬಗ್ಗೆ ಸಿಡಿ ಮಿಡಿಗೊಳ್ಳುತ್ತಾಳೆ. ಅಷ್ಟರಲ್ಲಿ ಮನೆಗೆ ಬಂದ ಅವಳ ಗಂಡ ಮನೆಗೆಲಸದ ಮಯೂರಿಯನ್ನು ನಿನ್ನ ಒಡತಿ ಯಾರ ಜೊತೆ ಓಡಿ ಹೋಗಲು ನಿರ್ಧರಿಸಿದ್ದಳು? ಎಂದು ಪ್ರಶ್ನಿಸುತ್ತಾನೆ. ಅಷ್ಟೇ ಅಲ್ಲದೆ ಸುಶೀಲೆಯನ್ನು ಕತ್ತಿಯಿಂದ ಇರಿಯಲು ಬರುತ್ತಾರೆ. ಆದರೆ ಮಯೂರಿ ಪೋಲಿಸರಿಗೆ ದೂರು ನೀಡುವಳಲ್ಲದೆ. ಅವಳ ಜೀವಕ್ಕೆ ಅಪಾಯವಾಗದಂತೆ ಚಿಕಿತ್ಸೆ ಮಾಡಿ ತಂದೆ ಸುಜ್ಞಾನಶರ್ಮರಲ್ಲಿಗೆ ಕರೆದೊಯ್ಯುತ್ತಾಳೆ.

ಪೊಲೀಸರ ಕಣ್ಣು ತಪ್ಪಿಸಿ ತಿರುಗುವಾಗ ಮನಸ್ಸಿಗೆ ಶಾಂತಿಯಿಲ್ಲದ ವಿನೋದ ಚಂಚಲೆಯಲ್ಲಿಗೆ ತೆರಳುತ್ತಾನೆ. ಸುಶೀಲೆಯ ಅಕ್ಕನ ಗಂಡ ತಂತ್ರನಾಥನೊಡನೆ ಚಂಚಲೆ ಲೈಂಗಿಕ ಕ್ರಿಯೆಯಲ್ಲಿ ನಿರತಳಾಗಿರುತ್ತಾಳೆ. ಇದನ್ನು ಕಂಡ ವಿನೋದ ತಂತ್ರನಾಥನಿಗೆ ಹೊಡೆಯಲು ಹೋಗುತ್ತಾನೆ. ತಂತ್ರನಾಥನು ವಿನೋದನನ್ನು ಮುಗಿಸಿ ಬಿಡಲು ಕೊಡಲಿ ತಂದು ಬೀಸುತ್ತಾನೆ. ಜಗಳ ಬಿಡಿಸುತ್ತಿದ್ದ ಚಂಚಲೆ ಅಡ್ಡಲಾಗಿ ಬಂದು ಚಂಚಲೆಗೆ ಬಿದ್ದು ಸ್ಥಳದಲ್ಲಿಯೇ ಅಸುನೀಗುತ್ತಾಳೆ. ತಂತ್ರನಾಥ ಪರಾರಿಯಾಗುತ್ತಾನೆ. ವಿನೋದ ಸಿಕ್ಕುಬಿದ್ದು ಸೆರೆಮನೆ ಸೇರುತ್ತಾನೆ.

ಪೊಲೀಸರಿಂದ ತಲೆಮರೆಸಿಕೊಂಡಿದ್ದ ತಂತ್ರನಾಥ ಸುಶೀಲೆಯಿದ್ದಲ್ಲಿಗೆ ಬಂದು ಕಾಡಿಸುತ್ತಾನೆ. ನಿನ್ನ ಗಂಡ ಸೆರೆಮನೆಯಲ್ಲಿ ಕೊಳೆಯುವಾಗ ನೀನ್ಯಾಕೆ ದುಃಖಿಸಬೇಕು. ನನ್ನೊಂದಿಗೆ ಬಂದು ಸುಖವಾಗಿರು ಎಂದು ಪೀಡಿಸುತ್ತಾನೆ. ಮಯೂರಿಯ ಜಾಗೃತ ಪ್ರಜ್ಞೆಯಿಂದ ಇದನ್ನು ಕಣ್ಣಾರೆ ಕಂಡ ಸುಜ್ಞಾನ ಶರ್ಮ, ಛೀಮಾರಿ ಹಾಕಿ ಮನೆಯ ಹೊಸ್ತಿಲು ತುಳಿಯದಂತೆ ಮಾಡುತ್ತಾನೆ. ಪೊಲೀಸರ ಸೆರೆಸಿಕ್ಕ ತಂತ್ರನಾಥನು ಮತ್ತು ವಿನೋದನ ವಿಚಾರಣೆ ನಡೆದು ಕೋಪದ ಆವೇಶದಲ್ಲಿ ತಂತ್ರನಾಥ, ಸುಶೀಲೆ, ವಿನೋದನನ್ನು ಕೊಲ್ಲದೆ ನನಗೆ ಶಾಂತಿಯಿಲ್ಲವೆಂದು ಅಬ್ಬರಿಸಿ ಶಿಕ್ಷೆಗೆ ಒಳಗಾಗುತ್ತಾನೆ. ನ್ಯಾಯಾಲಯ ಗಿರಿಜಮ್ಮನಿಗೆ ದಂಡ ವಿಧಿಸುತ್ತದೆ. ಕೊನೆಯಲ್ಲಿ ತಪ್ಪಿಗೆ ಕ್ಷಮಿಸುವಂತೆ ವಿನೋದ ದೈನ್ಯದಿಂದ ಪ್ರಾರ್ಥಿಸಿದರೆ, ಸುಶೀಲೆ ಗಂಡನ ಪಾದಗಳ ಮೇಲೆ ತಲೆಯಿಟ್ಟು ಸ್ವಾಮಿನ್! ಕ್ಷಮಿಸಲು ಸತ್ಯವಾಗಿಯೂ ನಾನು ಶಕ್ತಳಲ್ಲ. ನಾನು ತಮ್ಮ ಚರಣದಾಸಿ ಎಂದುಕೊಂಡು ಸಂತೃಪ್ತಿಪಡುತ್ತಾಳೆ.

## ೬. ನಭಾ(೧೯೧೩)

ಈ ಕಾದಂಬರಿ ವಿಧವೆಗೆ ಎದುರಾಗುವ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿದೆ ಹಾಗೂ ನೆರೆ ಹೊರೆಯವರ ಹಿಂಸೆ, ದೌರ್ಜನ್ಯ ದಬ್ಬಾಳಿಕೆಗಳನ್ನೆಲ್ಲ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ನಭಾಳ ತಾಯಿ ರೋಗಿಯೊಂದಿಗಿನ ಸಂಭಾಷಣೆಯೊಂದಿಗೆ ಈ ಕಾದಂಬರಿ ಪ್ರಾರಂಭವಾಗುತ್ತದೆ. ಬಾಲ್ಯದಲ್ಲಿಯೇ ಮದುವೆಯಾಗಿ ತಾಯಿಯ ಸೇವೆಗೆ ನಿಂತಿರುವ ನಭಾ ತನ್ನ ಜೀವನದ ಬಗೆಗೆ ಎಳ್ಳಷ್ಟು ಚಿಂತಿಸಿದವಳಲ್ಲ. ಆದರೆ ಹರೆಯದ ಮಗಳನ್ನು ತವರಿನಲ್ಲಿಟ್ಟುಕೊಂಡೆನೆಂಬ ಕೊರಗು ರೋಗಿಯಾದ ತಾಯಿಯದು. ಇದೇ ಚಿಂತೆಯಲ್ಲಿ ರೋಗಿಯ ಆರೋಗ್ಯ ಮತ್ತಷ್ಟು ಕ್ಷೀಣಿಸುತ್ತದೆ. ಮಗಳ ಸೌಖ್ಯವನ್ನೇ ಬಯಸುವ ತಾಯಿ ನಭಾಳನ್ನು ಗಂಡನ ಮನೆಗೆ ಹೋಗುವಂತೆ ಒತ್ತಾಯಿಸುವಳಾದರೂ ನಭಾ ತಾಯಿಯನ್ನು ಬಿಟ್ಟು ಹೋಗುವುದಿಲ್ಲ. ಇದೇ ಗಳಿಗೆಯಲ್ಲಿ ನಭಾಳ ದುರಾದೃಷ್ಟ ಎಂಬಂತೆಯೇ ನಭಾಳ ಪತಿ ಶ್ರೀನಿವಾಸ ಸಾಂಕ್ರಮಿಕ ರೋಗದಿಂದ ತೀರಿಕೊಳ್ಳುತ್ತಾನೆ. ಈ ಸುದ್ದಿ ತಿಳಿದ ನಭಾ ದುಃಖ ಪಡುವಳಾದರೂ ಧೈರ್ಯಗುಂದದೇ ತಾಯಿಗೆ ಸಾಂತ್ವನ ಹೇಳುತ್ತಾಳೆ. ತಾಯಿ ಅಳಿಯನ ಸಾವು ಹಾಗೂ ಮಗಳ ವೈಧವ್ಯದ ಕೊರಗಿನಲ್ಲಿಯೇ ಪ್ರಾಣ ಬಿಡುತ್ತಾಳೆ. ನಭಾ ಚಿಕ್ಕಪ್ಪ ಶಂಕರನಾಥನ ಸಹಾಯದಿಂದ ಶವಸಂಸ್ಕಾರವನ್ನು ಪೂರ್ಣಗೊಳಿಸುತ್ತಾಳೆ. ನಭಾಳ ಚಿಕ್ಕಪ್ಪ ಶಂಕರನಾಥನ ಆಸರೆಯಲ್ಲಿ ಉಳಿಯುವಳು. ನಭಾಳ ಸ್ಥಿರಚರ ಆಸ್ತಿಯನ್ನೆಲ್ಲ ಬರೆಸಿಕೊಂಡ ಚಿಕ್ಕಮ್ಮ ಅವಳಿಗೆ ಅನ್ನ ನೀರು ಕೊಡದೇ ಹಿಂಸಿಸುತ್ತಾಳೆ. ಶಾಮನಗರದಲ್ಲಿ ತಹಸೀಲ್ದಾರನಾಗಿದ್ದ. ಮತ್ತೊಬ್ಬ ಚಿಕ್ಕಪ್ಪ ಚಿದಾನಂದ ನಭಾಳಯನ್ನು ತನ್ನ ಮನೆಗೆ ಕರೆದೊಯ್ಯುತ್ತಾನೆ. ಹಡೆದ ಹೆಣ್ಣು ಮಕ್ಕಳನ್ನೆಲ್ಲ ಕಳೆದುಕೊಂಡಿದ್ದ ಚಿಕ್ಕಮ್ಮ ರಮಾಮಣಿ, ನಭಾಳನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗಳಂತೆ ಆರೈಕೆ ಮಾಡುತ್ತಾಳೆ.

ರಾಜಶೇಖರನೆಂಬುವನು ರಮಾಮಣಿಯ ತಮ್ಮ. ಅವರ ಮನೆಯಲ್ಲಿಯೇ ಇದ್ದು ನಭಾಳಲ್ಲಿ ಅನುರಕ್ತನಾಗುತ್ತಾನೆ. ಶಂಕರನಾಥನ ಮಗ ನಿರಂಜನನಿಗೆ ತಂಗಿಯನ್ನು ಕಂಡರೆ ಎಲ್ಲಿಲ್ಲದ ಮಮತೆ. ರಮಾಮಣಿ ಮತ್ತು ನಿರಂಜನ ಇಬ್ಬರೂ ನಭಾಳಿಗೆ ಮರುಮದುವೆ ಮಾಡಲು ಪ್ರಯತ್ನಿಸುತ್ತಾರೆ. ನಭಾ ಅವರ ಅಭಿಪ್ರಾಯವನ್ನು ಖಂಡಿಸಿ ಸಾಯುವವರೆಗೂ ಚಿರಬ್ರಹ್ಮಚಾರಿಣಿ ಯಾಗಿರಲು ನಿರ್ಧರಿಸುತ್ತಾಳೆ.

ರಾಜಶೇಖರನು ಅವಳಲ್ಲಿ ಪ್ರೇಮ ಭೀಕ್ಷೆಯಾಚಿಸಿ ವಿಫಲನಾಗುತ್ತಾನೆ. ಅವನ ಚೇಷ್ಟೆ ಅರಿತ ಅಕ್ಕನ ಗಂಡ ಚಿದಾನಂದ ಛೀಮಾರಿ ಹಾಕುತ್ತಾನೆ. ಅವಳನ್ನು ಹೇಗಾದರೂ ಅನುಭವಿಸಬೇಕೆಂಬ ಆಸೆ ಅದಮ್ಯವಾಗಿ ಅವಕಾಶಕ್ಕಾಗಿ ಕಾಯುತ್ತಾನೆ. ಇದೇ ಸಂದರ್ಭದಲ್ಲಿ ಶಂಖರ ಪೇಟೆಯಲ್ಲಿ ಶರಾವತಿ ಮತ್ತು ಶಂಕರನಾಥನಿಗೆ ಹುಷಾರಿಲ್ಲದೆ ನೋಡುವುದಕ್ಕೆಂದು

ಚಿದಾನಂದ ರಮಾಮಣಿ ಹೊರಡುತ್ತಾರೆ. ಮಕ್ಕಳಾದ ರಮಾನಂದ ಭಗವಾನಂದರು ಕಾಲ್ಚೆಂಡಾಟ ನೋಡಲು ಹೋಗಿರುತ್ತಾರೆ. ಮನೆಯಲ್ಲಿ ನಭಾ ಒಬ್ಬಳೇ ಇರುವುದನ್ನರಿತ ರಾಜಶೇಖರ ನನ್ನ ಆಸೆ ಪೂರೈಸಿಕೊಂಡು ನಿನ್ನನ್ನು ಕೊಲೆ ಮಾಡಿ ನಾನು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎನ್ನುತ್ತಾನೆ. ದುಡುಕುವುದು ಒಳಿತಲ್ಲವೆಂದು ಚಿಂತಿಸಿದ ನಭಾ 'ರಾತ್ರಿ ಒಂಬತ್ತು ಘಂಟೆಗೆ ಬಾ, ನಿನ್ನಾಸೆ ಪೂರೈಸುತ್ತದೆಂದು ವಚನ ಕೊಡುತ್ತಾಳೆ. ಅವನು ಬರುವ ವೇಳೆಗಾಗಲೇ ಅವನ ಹೆಸರಿಗೆ ಪತ್ರ ಬರೆದಿಟ್ಟು ಮನೆಬಿಟ್ಟು ಹೋಗುತ್ತಾಳೆ. ರಾತ್ರಿ ಮನೆಗೆ ಬಂದ ರಾಜಶೇಖರನಿಗೂ ಬಾಗಿಲು ಕಾಯುವವರಿಗೂ ಮಾತಿನ ಚಕಮಕಿ ನಡೆದು ಗಲಾಟೆಗೆ ಮಲಗಿದ್ದ ಮಕ್ಕಳಿಬ್ಬರು ಏಳುತ್ತಾರೆ. ಮೇಜಿನ ಮೇಲಿದ್ದ ಪತ್ರವನ್ನೋದಿ ಪೊಲೀಸರನ್ನು ಕರೆತರುತ್ತಾರೆ. ಪತ್ರದ ಆಧಾರದ ಮೇಲೆ ರಾಜಶೇಖರನನ್ನು ಬಂಧಿಸಿ ಸೆರೆಮನೆಗೆ ಹಾಕುತ್ತಾರೆ.

**೨. ವಿರಾಗಿಣಿ(೧೯೧೪)**

ನಭಾ ಮುಂದುವರಿದ ಭಾಗ ವಿರಾಗಿಣಿ. ಇಲ್ಲಿ ಎರಡು ಅಧ್ಯಾಯಗಳಲ್ಲಿ ತಲಾ ಹದಿನಾಲ್ಕು ಪರಿಚ್ಛೇದಗಳನ್ನೊಳಗೊಂಡು ಎರಡುನೂರ ಎಂಬತ್ತಾರು ಪುಟಗಳಷ್ಟು ಸುದೀರ್ಘ ವಾಗಿವೆ. ಜೊತೆಗೆ ಹನ್ನೊಂದು ಪುಟಗಳ 'ಹಿತೈಷಿಣಿ ಸಂದೇಶ'ವೂ ಹನ್ನೆರಡು ಪುಟಗಳ ಉಪೋದ್ಘಾತವೂ ಪ್ರತ್ಯೇಕವಾಗಿದೆ. ಸಮಾಜದ ವಿಧವೆಯರ ಅಸಹಾಯಕ ಸ್ಥಿತಿಯ ಗೋಳಿನ ಚಿತ್ರಣ ಹಾಸು ಹೊಕ್ಕಾಗಿರುವ ಈ ಕೃತಿ ಪ್ರಾರಂಭದ ಹಿತೈಷಿಣೀ ಸಂದೇಶದಲ್ಲಿ ವ್ಯಕ್ತವಾಗುವ ಅಭಿಪ್ರಾಯ ಲೇಖಕಿಯ ಜೀವನದ ಮೇಲೆ ಬೆಳಕು ಚೆಲ್ಲುವಂತಿದೆ.

ರಾಜಶೇಖರನ ಉಪಟಳವನ್ನು ಸಹಿಸಲಾರದೆ ಹಿರಿಯರಿಗೆ ಹೇಳದೆ ಕೇಳದೆ ಶಂಕರ ಪೇಟೆಯ ಚಿದಾನಂದ ಚಿಕ್ಕಪ್ಪನ ಮನೆ ಬಿಟ್ಟ ನಭಾ ಹಳ್ಳಿ ಹಳ್ಳಿ ತಿರುಗಿ ಕಡೆಗೆ ಕಾಂತರಾಜ ಪೇಟೆಯ ಜಗುಲಿಯೊಂದರ ಮೇಲೆ ಕುಳಿತಿರುತ್ತಾಳೆ. ಆಕಸ್ಮಿಕವಾಗಿ ಆ ಮನೆಯ ಮಾಲೀಕ ಅವಳ ಸೋದರ ಮಾವನಾಗಿದ್ದು, ಅಲ್ಲಿಯೇ ಆಶ್ರಯ ಪಡೆಯುತ್ತಾಳೆ. ಅತ್ಯಂತ ಸಾತ್ವಿಕನಾದ ರಘುನಾಥ ಪರಮಾನಂದನು ಶಾಲೆಯ ಮುಖ್ಯೋಪಾಧ್ಯಾಯನಾಗಿದ್ದು, ಚಾಡಿ ಮಾತಿಗೆ ಕಿವಿಕೊಟ್ಟು ಮಗನಿಗೆ ಕಿರಿ ಕಿರಿ ಮಾಡುವ ಲಕ್ಷ್ಮೀ ದೇವಮ್ಮನೆಂಬ ತಾಯಿ, ವಿಧವೆಯಾದರೂ ಶೀಲಕ್ಕೆ ಬೆಲೆ ಕೊಡದ ತುಂಗೆ ಎಂಬ ತಂಗಿ, ನಡತೆಗೆಟ್ಟು ಮನೆ ಬಿಟ್ಟು ಊರೂರು ಸುತ್ತುತ್ತಿರುವ ಸೌಬಲನೆಂಬ ಸಹೋದರ, ಮಾತ್ಸರ್ಯವೇ ಮೂರ್ತಿವೆತ್ತಂತೆ ಗಂಡನಲ್ಲಿ ತಪ್ಪನ್ನೇ ಅರಸಿ ಮನಶ್ಶಾಂತಿ ಕಳೆದುಕೊಳ್ಳುವ ಕೃಷ್ಣವೇಣಿಬಾಯಿ ಎಂಬ ಧರ್ಮಪತ್ನಿ ಇಷ್ಟು ದೊಡ್ಡ ಸಂಸಾರದ ಹೊರೆ ಹೊತ್ತಿದ್ದಳು.

ರಘುನಾಥನ ನೆರೆಮನೆಯಲ್ಲಿ ನರಸಮ್ಮನೆಂಬುವವಳಿಗೆ ಮಕರಂದ ಮಿತ್ರನೆಂಬ ಮಗ. ಅವನ ಹೆಂಡತಿ ಚಂದ್ರಭಾಗೆ, ಸಜ್ಜನಿಕೆಯ ಸಾಕಾರ ರೂಪವಾದ ಅವಳು ವಿರಾಗಿಣಿಯ

ಆತ್ಮೀಯ ಗೆಳತಿಯಾಗುತ್ತಾಳೆ. ರಘುನಾಥನ ತಂಗಿ ತುಂಗೆಗೆ ವಿರಾಗಿಣಿ ಹೇಳುವ ಶೀಲದ, ಪಾವಿತ್ರ್ಯದ ಮಾತುಗಳೆಲ್ಲ ಕಾಲಕಸವಾಗುತ್ತದೆ. ಚಂದ್ರಭಾಗೆಯ ಗಂಡ ಮಕರಂದನನ್ನು ಬುಟ್ಟಿಗೆ ಹಾಕಿಕೊಂಡ ತುಂಗೆ ಕುಣಿಸುತ್ತಾಳೆ. ಅರ್ಧಾಂಗಿಗೆ ಅನ್ಯಾಯ ಮಾಡಿ ಅನ್ಯಳೊಡನೆ ಸಂಪರ್ಕ ಅಧರ್ಮ ಎಂಬ ವಿರಾಗಿಣಿಯ ಹಿತಬೋಧನೆ ಮಕರಂದನಿಗೆ ಅಪಥ್ಯವಾಗಿ, ತನ್ನ ಹೆಂಡತಿ ವಿರಾಗಿಣಿಯ ಜೊತೆ ಸ್ನೇಹ ಬೆಳೆಸದಂತೆ ಕಟ್ಟಪ್ಪಣೆ ಮಾಡಿ ಗೃಹಬಂಧನದಲ್ಲಿಡುತ್ತಾನೆ.

ಗೆಳತಿಯ ದರ್ಶನವಿಲ್ಲದ ಚಂದ್ರಭಾಗೆ ರಾಹುಗ್ರಸ್ತ ಚಂದ್ರನಂತೆ ಕೊರಗಿನಲ್ಲಿ ಹಾಸಿಗೆ ಹಿಡಿಯುತ್ತಾಳೆ. ಸೊಸೆ ಸಾಯುವಂತಾದಾಗ ನರಸಮ್ಮ ವಿರಾಗಿಣಿಯ ಬಳಿ ಓಡಿ ಹೋಗಿ ಹೇಗಾದರೂ ಮಾಡಿ ನನ್ನ ಸೊಸೆಯನ್ನು ಕಾಪಾಡು, ಮನೆಗೆ ಬಾ ಎಂದು ಕೈ ಹಿಡಿದು ಎಳೆಯುತ್ತಾಳೆ. ವಿರಾಗಿಣಿ ಗೆಳತಿ ಚಂದ್ರಭಾಗೆಯ ಬಳಿಗೆ ತೆರಳಿ, ಅವಳ ತಲೆ ನೇವರಿಸಿ ಸಾಂತ್ವನ ನೀಡಿ ಔಷಧಿ ಕುಡಿಸುತ್ತಾಳೆ. ಮಕರಂದ ಮಿತ್ರನನ್ನು ಕರೆದು, ಅವಳ ಕಾಯಿಲೆಯ ಕಾರಣವನ್ನು ವಿವರಿಸಿ, ಅವನು ಇನ್ನು ಮುಂದೆ ತುಂಗೆಯ ಸಹವಾಸ ಬಿಡುವಂತೆ ಪ್ರಮಾಣ ಮಾಡಿಸುತ್ತಾಳೆ. ಅವನು ನಡೆಸುತ್ತಿದ್ದ ನಾಟಕ ಕಂಪನಿಗೆ ತಿಲಾಂಜಲಿ ನೀಡಿ, ಜನರನ್ನು ಅಜ್ಞಾನದಿಂದ ಎಚ್ಚರಿಸಲು ವಾರ್ತಾಪತ್ರಿಕೆ ಹೊರಡಿಸುವ ಸತ್ಕಾರ್ಯದಲ್ಲಿ ತೊಡಗುತ್ತಾನೆ.

ಒಮ್ಮೆ ರಘುನಾಥ ಮನೆಯವರನ್ನೆಲ್ಲ ನಾಟಕಕ್ಕೆ ಹೊರಡಿಸುತ್ತಾನೆ. ವಿರಾಗಿಣಿಯೂ ಒತ್ತಾಯಕ್ಕೆ ಕಟ್ಟುಬಿದ್ದು ಹೊರಡುತ್ತಾಳೆ. ತುಂಗೆಯಂತು ತುದಿಗಾಲಲ್ಲಿ ನಿಂತಿರುತ್ತಾಳೆ. ಹೆಂಡತಿ ಕೃಷ್ಣವೇಣಿ ಮಾತ್ರ ನಾಟಕಕ್ಕೆ ಹೋಗುವುದಿಲ್ಲ. ನಾಟಕ ನೋಡಿಕೊಂಡು ಮನೆಗೆ ಬಂದ ತುಂಗೆ ಅತ್ತಿಗೆಯ ಬಳಿಯಲ್ಲಿ ಅಣ್ಣ–ವಿರಾಗಿಣಿಯ ಬಗ್ಗೆ ಸಲ್ಲದ ಕಥೆ ಕಟ್ಟಿ ಕಿವಿ ತುಂಬುತ್ತಾಳೆ. ಮನ ಕಲಕಿದ ಕೃಷ್ಣವೇಣಿ ಮನೆಯಲ್ಲಿಯೇ ಒಂದು ಹೊಸ ನಾಟಕ ಆಡುತ್ತಾಳೆ. ನಭಾಳ ಸತ್ತ ಗಂಡನ ಭೂತ ತನ್ನ ಮೈಮೇಲೆ ಬಂದಂತೆಯೂ, ವಿರಾಗಿಣಿಯ ವ್ಯಭಿಚಾರದಿಂದ ನನಗೆ ಸ್ವರ್ಗಚ್ಯುತಿಯಾಯಿತೆಂದೂ ಪಿಶಾಚಿಯ ಅಭಿನಯ ಮಾಡುತ್ತಾಳೆ. ವಿರಾಗಿಣಿಯ ಶೀಲದ ಬಗ್ಗೆ ಪತ್ನಿಯಿಂದ ಬಂದ ಅಪಾದನೆಗೆ ಕಡುನೊಂದ ರಘುನಾಥ ತಾಯಿ ಹಾಗೂ ತನ್ನ ಪತ್ನಿಗೆ ಛೀಮಾರಿ ಹಾಕಿ ನಿನ್ನಲ್ಲಿರುವ ಮಾತ್ಸರ್ಯದ ಪಿಶಾಚಿ ದೂರವಾಗುವವರೆಗೆ ನಾನು ಗಂಡನಲ್ಲ, ನೀನು ಹೆಂಡತಿಯಲ್ಲವೆಂದು ಬೈದು ದೂರವಾಗುತ್ತಾನೆ.

ಗರ್ಭಿಣಿಯಾಗಿದ್ದ ಕೃಷ್ಣವೇಣಿ ಹೆಣ್ಣು ಮಗುವನ್ನು ಹಡೆಯುತ್ತಾಳೆ. ಜ್ವರ ಬಂದು ಬಾಣಂತಿ ನಿತ್ರಾಣಳಾಗಿ ಹಾಸಿಗೆಯಿಂದ ಏಳಲಾರದೆ ಇರಲು ಮಗುವಿನ ಆರೈಕೆಗೆ ಅತ್ತೆ, ನಾದಿನಿ ಇಬ್ಬರೂ ಅಲಕ್ಷ್ಯ ತೋರಿದಾಗ ವಿರಾಗಿಣಿ ತಾಯಿ ಮಗುವಿನ ಸೇವೆಗೆ ನಿಲ್ಲುತ್ತಾಳೆ. ಆಕಸ್ಮಿಕವಾಗಿ ತಮ್ಮ ಮನೆಗೆ ಬಂದ ಮಕರಂದನನ್ನು ತುಂಗೆ ನೋಡುತ್ತಾಳೆ. ಅತ್ತಿಗೆ ಮಲಗಿದ್ದಾಳೆಂದು ಭಾವಿಸಿ ತನ್ನ

ಪ್ರೇಮಪರಿಧಿಯೊಳಗಿಂದ ದೂರವಾದದ್ದು ಏಕೆಂದು ಅವನನ್ನು ಪ್ರಶ್ನಿಸುತ್ತಾಳೆ. ಮೈಮೇಲೆ ಬೀಳಲು ಬಂದ ಅವಳನ್ನು ದೂರ ತಳ್ಳುತ್ತಾನೆ. ಅಷ್ಟರಲ್ಲಿ ಎಚ್ಚರಗೊಂಡ ಕೃಷ್ಣವೇಣಿಗೆ ಕೇಳಿಸುವಂತೆ ತನ್ನ ಪತ್ನಿ ಜೀವಂತವಾಗಿ ಉಳಿಯಲು ಕಾರಣಳಾದ ದೇವತೆ ವಿರಾಗಿಣಿ ಎಂದು ಹೊಗಳಿದಾಗ ನಾದಿನಿಯ ಕಳ್ಳ ಪ್ರೇಮಾಲಾಪವನ್ನು ಕಣ್ಣಾರೆ ಕಂಡ ನಂತರ ಕೃಷ್ಣವೇಣಿಗೆ ತನ್ನ ತಪ್ಪಿನ ಅರಿವಾಗುತ್ತದೆ. ಗಂಡ ರಘುನಾಥಪರಮಾನಂದನ ಕಾಲು ಹಿಡಿದು ಕ್ಷಮೆ ಕೇಳುತ್ತಾಳೆ. ನಿರ್ಮತ್ಸರೆ, ಪವಿತ್ರೆ ವಿರಾಗಿಣಿ ಬಗ್ಗೆ ತಪ್ಪು ಗ್ರಹಿಸಿದ್ದಕ್ಕೆ ವಿಷಾಧಿಸಿ ಓಲೈಸುತ್ತಾಳೆ.

ರಘುನಾಥನ ತಮ್ಮ ಸೌಬಲನು ವಿರಾಗಿಣಿಯ ಸಹವಾಸದಲ್ಲಿ ತನ್ನ ತಪ್ಪನ್ನು ತಿದ್ದಿಕೊಂಡು ಒಳ್ಳೆಯವನಾಗುತ್ತಾನೆ. ತುಂಗೆ ಸಹ ತನ್ನ ತಪ್ಪನ್ನು ಒಪ್ಪಿಕೊಂಡು ತನ್ನ ಭವಿಷ್ಯಕ್ಕೆ ಸುಮಾರ್ಗ ತೋರೆಂದು ಪ್ರಾರ್ಥಿಸುತ್ತಾಳೆ. ನಭಾ ಸತ್ತ ಗಂಡನ ತಮ್ಮ ಮುರಳೀನಾಥ ಶರ್ಮ ಅತ್ತಿಗೆಯನ್ನು ತಮ್ಮ ಮನೆಗೆ ಆಹ್ವಾನಿಸುತ್ತಾನೆ. ಅತ್ತೆ ಮಾವಂದಿರಾದ ವೇಣುಗಂಗಾ, ಹರೀಶ್ವರರು ಮರು ಮದುವೆಯಾಗದೆ ತಮ್ಮ ಸತ್ತ ಮಗನ ನೆನಪಿನಲ್ಲಿಯೇ ಚಿರವಿರಾಗಿಣಿಯಾಗಿರುವ ಸೊಸೆ ನಭಾಳನ್ನು ಕಂಡು ಹರ್ಷಿಸುತ್ತಾರೆ.

ರಘುನಾಥ ಹೊಸದಾಗಿ ಕಟ್ಟಿಸಿದ ನವನಂದ ಮಂದಿರ ಎಂಬ ಶಾಲಾ ಆಶ್ರಮಕ್ಕೆ ವಿರಾಗಿಣಿ ಮುಖ್ಯೋಪಾಧ್ಯಾಯಿನಿ, ಅಧ್ಯಕ್ಷಿಣಿಯಾಗಿ ಅಧಿಕಾರ ವಹಿಸಿಕೊಳ್ಳುತ್ತಾಳೆ.

### ೮. ಮಾಡಿದುಣ್ಣೋ ಮಹಾರಾಯ(೧೯೧೫)

ಸದಾಶಿವ ದೀಕ್ಷಿತರು ಮೈಸೂರು ಒಡೆಯರ ಕೃಪೆಗೆ ಪಾತ್ರರಾದವರು. ಹೆಂಡತಿ, ಗಂಡು ಮಗುವೊಂದನ್ನು ಹೆತ್ತು ಸ್ವರ್ಗಸ್ಥಳಾದಳು. ವಯಸ್ಸಾದ ದೀಕ್ಷಿತರ ತಾಯಿ ಪಾರ್ವತಿ ಮೊಮ್ಮಗ ಮಹಾದೇವನನ್ನು ಬೆಳೆಸಿದಳು. ದೀಕ್ಷಿತರು ಸಂಜೆವಾಡಿಯ ನೀಲಕಂಠ ಜ್ಯೋಯಿಸರ ಮಗಳು ತಿಮ್ಮಮ್ಮಳನ್ನು ಎರಡನೆಯದಾಗಿ ಮದುವೆಯಾದನು. ತಿಮ್ಮಮ್ಮ ಮಹಾದೇವನನ್ನು ಬಹು ಪ್ರೀತಿಯಿಂದಲೇ ಕಾಣುವಳು. ಜ್ಯೋಯಿಸರು ತೀರಿಕೊಂಡ ನಂತರ ದೀಕ್ಷಿತರು ಕುಟುಂಬ ಸಮೇತ ಸಂಜೆವಾಡಿಗೆ ಬಂದು ನೆಲೆಸಿದರು.

ಮಹಾದೇವನ ವಿದ್ಯಾಭ್ಯಾಸ ಪಂತ ನಾರಾಪ್ಪನ ಬಳಿ ಸಾಗಿತು. ಏಟು ಮಂಚು ಓದು ಹಿಂಚು ಎಂಬ ಸಿದ್ಧಾಂತವುಳ್ಳ ನಾರಪ್ಪ ಕುಟಿಲ ಶಿಷ್ಯರ ದೆಸೆಯಿಂದಾಗಿ ನಾಲ್ಕು ತಿಂಗಳು ಆರೈಕೆಯಾಗುತ್ತದೆ. ಮಕ್ಕಳನ್ನು ಒಲಿಸಿಕೊಂಡು ಪಾಠ ಹೇಳಬೇಕೆ ಹೊರತು, ಪೆಟ್ಟಿನಿಂದಲ್ಲ ಎಂಬ ದೀಕ್ಷಿತರ ಮಾತು ನಾರಪ್ಪನಲ್ಲಿಯ ದ್ವೇಷದ ಹೊಗೆ ಹೊತ್ತಲು ಪ್ರೇರಕವಾಗುತ್ತದೆ.

ವಿದ್ಯಾವಂತ ಮಹಾದೇವ ಸೋದರ ಮಾವ ಸಾಂಬಾಶಾಸ್ತ್ರಿಯ ಮೊಮ್ಮಗಳು ಸೀತೆಯನ್ನು ಮದುವೆಯಾಗುತ್ತಾನೆ. ಸತಿ ಸಾಧ್ವಿ ಸೀತೆ ನಡೆ-ನುಡಿಗಳಲ್ಲಿ ಸುಶೀಲೆಯೂ, ಸುಂದರಿಯೂ ಆಗಿದ್ದಳು. ತನ್ನ ಸಂಬಂಧದ ಕನ್ಯೆಯನ್ನು ತಂದುಕೊಳ್ಳದ ಕಾರಣಕ್ಕಾಗಿ ಅತ್ತೆ ತಿಮ್ಮಮ್ಮ ಸೊಸೆಯನ್ನು ದ್ವೇಷಿಸುತ್ತಾಳೆ. ತಾಯಿಯ ಮಾತಿಗೆ ಪುಟ ಕೊಡುವ ಒಂಬತ್ತು ವರ್ಷದ ಸಾತಿ ಅತ್ತಿಗೆಯ ಮೇಲೆ ಅಪವಾದ ಹೊರಿಸುವುದರಲ್ಲಿಯೇ ಆಕೆಗೆ ತೃಪ್ತಿ. ಅತ್ತೆಯಿಂದ ಬೈಗುಳ, ಹೊಡೆತ, ಅಲ್ಲದೆ ಅರೆಹೊಟ್ಟೆಯಿಂದ ದುಡಿಯುವ ಸೀತೆ ಒಮ್ಮೆಯಾದರೂ ಅತ್ತೆಯೊಂದಿಗೆ ವಾದಿಸದೇ ತನ್ನ ನೋವನ್ನು ತಾನೇ ನುಂಗಿಕೊಳ್ಳುತ್ತಾಳೆ.

ಅರುಂಧಮ್ಮಳ ಪತಿ ಸೇವೆ, ಗುರು ಹಿರಿಯರಲ್ಲಿಯ ಭಕ್ತಿ, ಸತ್ಯವ್ರತದ ಆರಾಧನ ಅಲ್ಲದೆ ಪತಿಯೊಂದಿಗೆ ಚಿತೆಯೇರಿ ಸಹಗಮನ ಹೊಂದಿದ ಕಥೆ ಸೀತೆಯನ್ನು ಆಕರ್ಷಿಸುತ್ತದೆ. ದಿನಃ ಪ್ರತಿ ಅರುಂಧಮ್ಮಳನ್ನು ಪೂಜಿಸಿ, ಗಂಡು ಮಗುವಿನ ತಾಯಿಯೂ ಆಗುತ್ತಾಳೆ.

ಅಮ್ಮನ ಗುಡಿಯ ಪೂಜಾರಿ ಸತ್ತ ನಂತರ ಅವರ ಸಂಬಂಧಿಕನೆಂದು ಹೇಳಿಕೊಂಡು ಬಂದ ಸಿದ್ದ-ಸಿದ್ಧಪ್ಪನಾಗಿ ಸಿದ್ದಪ್ಪಾಜಿಯಾಗಿ ಅಪ್ಪಾಜಿಯಾಗಿ ಪ್ರಸಿದ್ಧಿ ಪಡೆದನು. ಕಳ್ಳರ ಗುಂಪಿನ ಪ್ರಧಾನ ಪೋಷಕನಾದನು. ಅರುಂಧಮ್ಮಳ ಪೂಜೆ ಮಾಡಿಕೊಂಡು ಮರಳಿದ ಸೀತೆಯ ಮೇಲೆ ಪೂಜಾರಿ ಸಿದ್ದಪ್ಪಾಜಿಯ ವಕ್ರದೃಷ್ಟಿ ಬೀಳಲಾಗಿ, ಪಂತ ನಾರಪ್ಪಯ್ಯನ ಕುಮ್ಮಕ್ಕು ಅವನನ್ನು ಹುರಿ ದುಂಬಿಸುತ್ತದೆ. ಅಮ್ಮನ ಅಲಂಕಾರದಲ್ಲಿ ಬದಲಾವಣೆಯಾಗಿ ಊರ ಜನರ ಮನವೊಲಿಸುತ್ತದೆ. ಪ್ರತಿ ಶುಕ್ರವಾರದಂದು ಹೆಂಗಸರು ಮಾತ್ರ ಅಮ್ಮನ ದರ್ಶನ ಪಡೆಯಬಹುದೆಂದು ಕಟ್ಟಳೆ ಮಾಡಲಾಗುತ್ತದೆ. ಆದರೆ ಸೀತೆ ಇದಾವುದಕ್ಕೂ ಹೋಗಲು ಇಚ್ಛಿಸುವುದಿಲ್ಲ. ಇದರಿಂದಾಗಿ ಪೂಜಾರಿಯ ಕೆಲಸ ಮತ್ತಷ್ಟು ಹೆಚ್ಚುತ್ತದೆ. ನಾನಾ ವಿಧಾನಗಳಿಂದ ಸೀತೆಯ ಮನ ಸೆಳೆಯಲು ಪ್ರಯತ್ನಿಸಿ ವಿಫಲನಾಗುತ್ತಾನೆ. "ಒಂದು ದಿನ ತುಳಸಿ ಪೂಜೆ ಮಾಡಿ ನಮಸ್ಕರಿಸುತ್ತಿರುವಾಗ, ಕಾಮಾಭಿಲಾಷೆಯುಳ್ಳ ಪೂಜಾರಿ ಸೀತೆಯ ಸೆರಗಿಡಿದು ಅಪ್ಪಿಕೊಳ್ಳಲು ಹೋಗುತ್ತಾನೆ. ಕಿಡಿ ಕಿಡಿಯಾದ ಸೀತೆ, ಎಲಾ ಖೂಳ ನೀಚ, ಚಾಂಡಾಲ, ನನ್ನ ಮೈಯನ್ನು ಮುಟ್ಟಿಯೆ, ಇಲ್ಲಿಯೇ ನಿನ್ನನ್ನು ಕೊಂದು ಹೆಣವನ್ನು ನಾಯಿಗೆ ಹಾಕಿ ಮನೆಗೆ ಹೋಗುವ ಶಕ್ತಿ ನನಗೆ ಇದೆ. ಜೋಕೆ ದೂರದಲ್ಲಿರು. ಇಂದಿಗೆ ನಿನ್ನ ಹಣೆ ಬರಹ ತೊಡೆದು ಹೋಯಿತು; ನಿನ್ನ ಭಾಗಕ್ಕೆ ನಾನೇ ಮೃತ್ಯು ದೇವತೆ ಎಂದು ತಿಳಿ"[೧೪] ಎನ್ನುತ್ತಲೇ ತೆಂಗಿನ ಕಾಯಿ ಹಾಗೂ ಕಲ್ಲಿನಿಂದ ಹೊಡೆದು ತಪ್ಪಿಸಿಕೊಂಡು ಮನೆ ಸೇರುತ್ತಾಳೆ.

ಪೂಜಾರಿಯ ಮಾಟ-ಮಂತ್ರ ಪ್ರಯೋಗದ ಫಲವಾಗಿ ಸೀತೆಯ ಆರೋಗ್ಯ ದಿನದಿನಕ್ಕೂ ಕ್ಷೀಣಿಸುತ್ತದೆ. ಅನ್ನ, ನೀರು, ಸೇರದೆ ಅರೆಗಣ್ಣಿನಲ್ಲಿಯೇ ಜೀವ ಹಿಡಿದು ಸಾವು ಬದುಕಿನ ಮಧ್ಯೆ

ಹೋರಾಟ ನಡೆಸುತ್ತಾಳೆ. ಯಾವ ಔಷಧಿಯಿಂದ ಸೀತೆಯ ಆರೋಗ್ಯ ಸುಧಾರಿಸದೇ ಇಡೀ ಕುಟುಂಬ ದುಃಖದಲ್ಲಿ ಮುಳುಗುತ್ತದೆ. ಎರಡು ವರ್ಷದ ಮಗು ಕೃಷ್ಣಯ್ಯ ತಾಯಿಗಾಗಿ ಹಂಬಲಿಸಿ ಅಳುವಾಗ ನೋಡುಗರ ಕರುಳು ಕಿವುಚಿದಂತಾಗುತ್ತದೆ. ಹೀಗೆ ಆರು ತಿಂಗಳು ಕಳೆದು ಕಡೆಗೆ ಒಂದು ದಿನ ತೀರಿಕೊಳ್ಳುತ್ತಾಳೆ. ಆದರೆ ಅವಳ ಆಯಸ್ಸು ಪೂರ್ಣಗೊಂಡಿರಲಿಲ್ಲ. ನದಿಯ ಸಮೀಪ ಸೀತೆಯ ಶವಕ್ಕೆ ಅಗ್ನಿಸಂಸ್ಕಾರ ಮಾಡಿ ಹಸಿ ಕಟ್ಟಿಗೆ ನಿಧಾನವಾಗಿ ಹತ್ತಿ ಕೊಳ್ಳುವುದೆಂದು ಮನೆಗೆ ಹಿಂದಿರುಗುತ್ತಾರೆ. ಅದೇ ಸಮಯಕ್ಕೆ ಸ್ಮಶಾನದ ಹಾದಿಯಲ್ಲೇ ಬರುವ ಮಂತ್ರ ವಿದ್ಯೆಯಲ್ಲಿ ಪ್ರವೀಣನಾದ ಭಟಜಿಯು ಸ್ನೇಹಿತನೊಂದಿಗೆ ಬರುವಾಗ ಚಿತೆಯಲ್ಲಿದ್ದ ಕಳೇಬರಹಕ್ಕೆ ಜೀವವಿರುವುದನ್ನು ಕಂಡುಕೊಳ್ಳುತ್ತಾನೆ. ಮಾಟ ಪರಿಹಾರಕ ಮಂತ್ರಗಳಿಂದ ಸೀತೆಗೆ ಜೀವ ಬರುವಂತೆ ಮಾಡುತ್ತಾನೆ. ಭಟಜಿಯ ಮಂತ್ರ ಶಕ್ತಿಯ ಮುಂದೆ ಅಪ್ಪಾಜಿಯ ಶಕ್ತಿ ನಿಂತು ಹೋಗುತ್ತದೆ. ಅಪ್ಪಾಜಿ ಹೂಳಿಟ್ಟಿದ್ದ ಗೊಂಬೆಯನ್ನು ಅಗ್ನಿಯಲ್ಲಿ ಹಾಕಿ ಬೂದಿ ಮಾಡುತ್ತಾನೆ. ಅಪ್ಪಾಜಿಯ ಹಲ್ಲುಗಳನ್ನೆ ಉದುರಿಸಿ ರಕ್ತಕಾರಿಸಿ ಮತ್ತಾರಿಗೂ ಕೇಡಾಗದಂತೆ ನಿವಾರಣೆ ಮಾಡುತ್ತಾನೆ.

ಸೀತೆಯಿಂದ ಎಲ್ಲವನ್ನು ತಿಳಿದು ನಡೆದ ಘಟನೆಯನ್ನು ಜ್ಯೋಯಿಸರಿಗೆ ತಿಳಿಸಿ ಸೀತೆಯನ್ನು ಒಪ್ಪಿಸುತ್ತಾನೆ. ಯಾವುದೇ ಕಾಣಿಕೆಯನ್ನು ಪಡೆಯದೇ ನಿಸ್ವಾರ್ಥಪರನಾಗಿ ಕೊಯ್ಮತ್ತೂರಿಗೆ ಹೊರಟು ಹೋಗುತ್ತಾನೆ. ಕುಟುಂಬದ ಜನರೆಲ್ಲರೂ ಅಗ್ನಿಯಿಂದ ಎದ್ದು ಬಂದ ಸೀತೆ ಸತೀತ್ವವುಳ್ಳ ಭಾಗ್ಯಲಕ್ಷ್ಮಿ ಎಂದೇ ಹೊಗಳುತ್ತಾರೆ.

ಕಳ್ಳರ ಕೂಟದ ಹಿರಿಯ ಸದಸ್ಯ ಅಮಾಸೆ ಗುಟ್ಟೆಲ್ಲವನ್ನು ಬಯಲು ಮಾಡುತ್ತಾನೆ. ನಾರಪ್ಪಯ್ಯ ಹಾಗೂ ಪೂಜಾರಿ ಅವನ ಅನುಯಾಯಿಗಳನ್ನು ಶಿಕ್ಷಿಸಲಾಗುತ್ತದೆ. ಅಮಾಸೆಯ ಬಿಡುಗಡೆಯಾಗಿ 'ಮಾಡಿದುಣ್ಣೋ ಮಹಾರಾಯ' ಎಂಬ ಹೇಳಿಕೆಯೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ. ಊರಿನ ಜನರೆಲ್ಲರೂ ಊರು ಬಿಟ್ಟು ಹೋಗುತ್ತಾರೆ. ದೀಕ್ಷಿತರು ಸಹ ತಮ್ಮ ಕುಟುಂಬದೊಂದಿಗೆ ಮೈಸೂರಲ್ಲಿ ನೆಲೆಸುತ್ತಾರೆ.

ಒಟ್ಟಾರೆ ಕಾದಂಬರಿಯನ್ನು ಓದಿದಾಗ ಇಲ್ಲಿ ಸೀತೆ ಎಲ್ಲಾ ಸಿಹಿ-ಕಹಿಗಳನ್ನು ಉಂಡ ವಾಸ್ತವಿಕ ಪಾತ್ರವಾದರೂ ಕಾದಂಬರಿಯ ಕೊನೆಯಲ್ಲಿ ರಾಮಾಯಣದ ಸೀತೆಯಂತೆ ಅಗ್ನಿಯಿಂದ ಹೊರಬಂದು ಪುನರುಜ್ಜೀವನದ ಪಡೆದು ಆದರ್ಶ ಗೃಹಿಣಿ ಎಂಬ ಹೆಸರನ್ನು ಪಡೆಯುತ್ತಾಳೆ.

"ಲಂಚಕೋರರು ಅವರಿಂದ ಉಂಟಾಗುವ ಪ್ರಮಾದಗಳು, ಗ್ರಾಮಗಳಲ್ಲಿ ಕಕ್ಷಿ ಅವರ ದೋಷಿಗಳು, ಮೈಸೂರು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನ, ಅವರ ಮಹತ್ತರವಾದ ಔದಾರ್ಯ, ಆಸ್ಥಾನದ ನಕಲಿ, ಹೇಳಿದ್ದನ್ನೆಲ್ಲಾ ನಂಬುವ ಗ್ರಾಮವಾಸಿಗಳು, ಪತಿವ್ರತಾ ಚರಿತ್ರೆ, ಅತ್ತೆ

ಸೊಸೆಯರ ಕಿರುಕುಳ, ಮಠದ ಉಪಾಧ್ಯಾಯ, ಅವನ ಕ್ರೌರ್ಯ, ಬಾಲಕರಿಗೆ ಅವನು ಕೊಡುವ ಶಿಕ್ಷೆ, ಅದರ ಧರ್ಮಸೂಕ್ಷ್ಮ, ಕಪಟ ಅದರ ನೀಚ ಕೃತ್ಯಗಳು, ಪಾತಿವ್ರತ್ಯವನ್ನು ಭಂಗಪಡಿಸಲು ನಡೆಸಿದ ಅತಿ ಹೇಯವಾದ ಪ್ರಯತ್ನ, ಒಬ್ಬ ಹುಟ್ಟು ಕಳ್ಳ ಹೇಳಿಕೊಳ್ಳುವ ಸ್ವವಿಚಾರದ ಕಥೆ, ಸ್ಮಶಾನದಲ್ಲಿ ನಡೆದ ಅತಿಭಯಂಕರ ಘಟನೆ, ಒಬ್ಬ ಮಹಾಮಂತ್ರವಾದಿ ಮಾಡಿದ ಅದ್ಭುತವಾದ ಕಾರ್ಯ, ಅವರ ಪಾರಮಾರ್ಥಿಕತೆ.... ಹೀಗೆ ಕಾದಂಬರಿಯ ಕಥಾವಸ್ತುವನ್ನು ಒಳಗೊಂಡಿದೆ"[೧೫]

### ೯. ಮಾತೃ ನಂದಿನಿ(೧೯೧೬)

ಮೂರು ಸಲ ಮರುಮುದ್ರಣಗೊಂಡಿರುವ ಈ ಕಾದಂಬರಿ ಕ್ರಿ.ಶ.೧೯೧೬ರಲ್ಲಿ ಬೆಳಕು ಕಂಡಿದೆ. ಇತರ ಕಾದಂಬರಿಗಳಿಗಿಂತ ಇದರಲ್ಲಿ ಇವತ್ತಿಗೂ ಪ್ರಸ್ತುತವೆನಿಸುವ ಅನೇಕ ಸಮಸ್ಯೆಗಳು, ಈಗಲೂ ಮುಂದೆಯೂ ಪ್ರಶ್ನಿಸಬೇಕಾದ ಹಲವಾರು ಪರಿಸ್ಥಿತಿಗಳು ಇಲ್ಲಿವೆ. ಸಮಸ್ಯೆಗಳ ಬಗ್ಗೆ ವ್ಯಕ್ತವಾಗುವ ಕಾಳಜಿ, ಪರಿಸ್ಥಿತಿಯನ್ನು ಪ್ರಶ್ನಿಸುವ, ವಿಮರ್ಶಿಸುವ ಮನೋಭಾವ... ಎಲ್ಲಕ್ಕಿಂತ ಹೆಚ್ಚಾಗಿ ಎಚ್ಚೆತ್ತ ಸ್ತ್ರೀ ಪ್ರಜ್ಞೆಯೊಂದರ ಅಭಿವ್ಯಕ್ತಿ ಈ ಕಾದಂಬರಿಯಲ್ಲಿ ಸೃಷ್ಟಿಯಾಗಿ ಕಾಣುತ್ತದೆ. ಜೊತೆಗೆ ಲೇಖಕಿಯ ಉಪದೇಶ, ನೀತಿ, ಆದರ್ಶಗಳ ಭಾರದಿಂದ ಬಾಗಿರುವ ಈ ಕಥೆ ಅನೇಕ ಸಾಮಾಜಿಕ ಸುಧಾರಣೆಗಳನ್ನು ಪ್ರತಿಪಾದಿಸುತ್ತದೆ.

ನಂದಿನಿಯ ತಂದೆ ಆನಂದವನದ ಸತ್ಯಾನಂದಸ್ವಾಮಿ. ಅವರು ಮಾತೆಯೊಡನೆ ತೀರ್ಥಯಾತ್ರೆ ಹೋದವರು. ತಾಯಿಯನ್ನು ಕಳೆದುಕೊಂಡು ತಬ್ಬಲಿಯ ಭಾವನೆಯೊಡನೆ ಸನ್ಯಾಸಿಯಾಗುತ್ತಾರೆ. ವಿಧವೆಯಾದ ಅವರ ತಂಗಿಯೊಬ್ಬಳು ಬಂಧುಗಳ ಕಿರುಕುಳಕ್ಕೆ ಬೇಸತ್ತು ತಪಸ್ವಿನಿಯಾಗಿ ಅಣ್ಣನ ಆಶ್ರಯವನ್ನು ಸೇರುತ್ತಾಳೆ.

ಸತ್ಯಾನಂದಸ್ವಾಮಿ ತನ್ನ ಮಗಳಾದ ನಂದಿನಿಯನ್ನು ಗೆಳೆಯನಾದ ನಾಗೇಶರಾಯನ ಮನೆಯಲ್ಲಿ ಎರಡು ವರ್ಷ ಬಿಟ್ಟಿರುತ್ತಾನೆ. ನಾಗೇಶರಾಯನ ಹೆಂಡತಿ ಚಿತ್ರಕಲೆ ಇವರಿಗೆ ಇಬ್ಬರು ಮಕ್ಕಳು ನಾದಾನಂದ ಮತ್ತು ಸ್ವರ್ಣಕುಮಾರಿ. ಮಗ ಸೌಂದರ್ಯಾರಾಧಕನಾಗಿ ಗೃಹಸ್ಥಾಶ್ರಮಕ್ಕೆ ಹಾತೊರೆದರೆ ಮಗಳು ಆಭರಣ ಪ್ರಿಯೆ, ಅವರ ಮನೆಗೆ ನಂದಿನಿ ಬಂದ ಮೇಲೆ ಅವಳ ಸಹವಾಸ ಹಾಗೂ ನೀತಿಭೋದೆಯಿಂದ ನಿರಾಭರಣ ಸುಂದರಿಯಾಗುತ್ತಾಳೆ. ಹೆಣ್ಣಿಗೆ ಶೀಲ, ಚಾರಿತ್ರ್ಯ, ಸನ್ನಡತೆಗಳೇ ನಿಜವಾದ ಆಭರಣಗಳೆಂದು ಅರಿಯುತ್ತಾಳೆ. ನಾದಾನಂದ ನಂದಿನಿಯನ್ನು ಪ್ರೀತಿಸುತ್ತಾನೆ.

ಸತ್ಯಾನಂದ ಸ್ವಾಮಿಯ ಪೂರ್ವಾಶ್ರಮದ ತಮ್ಮ ಶರಚ್ಚಂದ್ರ ಠಾಕೂರ್ ಅವನ ಹೆಂಡತಿ ಚಂದ್ರಮತಿ ದೇವಿ ಈ ದಂಪತಿಗಳಿಗೆ ಇಬ್ಬರು ಮಕ್ಕಳು. ಮಗ ಅಚಲಚಂದ್ರ ವಿದ್ಯಾವಂತ,

ಸಮಾಜ ಸುಧಾರಕ ನಂದಿನಿಗೆ ಅಣ್ಣನನ್ನು ಕಂಡರೆ ಎಲ್ಲಿಲ್ಲದ ಅಭಿಮಾನ. ಇಬ್ಬರ ಚಿಂತನೆ, ಧೋರಣೆ, ಅಭಿಪ್ರಾಯಗಳು ಒಂದೇ ಆಗಿರುತ್ತವೆ. ಮಗಳು ಸದ್ಗೃಹಸ್ಥೆ, ನಂದಿನಿಯ ಗೆಳತಿ.

ನಾಗೇಶರಾಯನ ಮನೆಗೆ ಬಂದು ಗೌರಿ ಗಣೇಶ ಪಂಥ ವಿಶ್ವನಾಥರಾಯನೆಂಬ ರಕ್ತ ಸಂಬಂಧಿಗಳು ಬರುತ್ತಾರೆ. ತಮ್ಮ ಮಗನಿಗೆ ಸ್ವರ್ಣಕುಮಾರಿಯನ್ನು ತಂದುಕೊಳ್ಳುವ ಇಂಗಿತದಿಂದ ಬರುತ್ತಾರೆ. ವಯಸ್ಸಿಗೆ ಬಂದಿರುವ ಮಗಳನ್ನು ಇನ್ನೂ ಏಕೆ ಮದುವೆ ಮಾಡಿಲ್ಲವೆಂದು ಪ್ರಶ್ನಿಸುತ್ತಾರೆ. ಒಳ್ಳೆ ವರ ಇನ್ನೂ ದೊರೆತಿಲ್ಲ ದೊರೆಯುವ ತನಕ ಮದುವೆ ಮಾಡುವುದಿಲ್ಲ ಎನ್ನುತ್ತಾನೆ. ಶ್ರೀಮಂತನಾದ ಆತನಿಂದ ವರದಕ್ಷಿಣೆ ರೂಪದಲ್ಲಿ ಸೊಸೆಯ ಸಮೇತ ಸರ್ವಸ್ವವನ್ನು ದೋಚಬಹುದೆಂಬ ಆಸೆಯಿಂದ ಬಂದ ಅವರಿಗೆ ನಿರಾಶೆಯಾಗುತ್ತದೆ.

ಗಂಡಸರು ಹೆಂಗಸರನ್ನು ಹೇಗೆ ಶೋಷಿಸುತ್ತಿದ್ದಾರೆ. ಹೆಣ್ಣಿನ ಮೇಲ್ಮೆ ಏನು, ಹೆಂಗಸರಿಗೆ ವಿದ್ಯೆ ಏಕೆ ಕಲಿಸಬೇಕು. ದೇಶದ ಅಭ್ಯುದಯ ವಿದ್ಯಾವಂತೆಯಾದರೆ ಮಾತ್ರ ಸಾಧ್ಯ ಇತ್ಯಾದಿ ವಿಚಾರಗಳ ಬಗ್ಗೆ ನಂದಿನಿ ಅವರ ಅಭಿಪ್ರಾಯಗಳನ್ನು ಮಂಡಿಸಿ ಉಪದೇಶ ನೀಡುತ್ತಾಳೆ. ಕುಲ ನೆಲೆ ಗೊತ್ತಿಲ್ಲದ ಯಾವಳೋ ಭೀಕ್ಷುಕನ ಮಗಳಿಂದ ನಮಗೆ ಅಪಮಾನ ಮಾಡಿಸಿದನೆಂದು ಸಿಟ್ಟಾಗುತ್ತಾರೆ. ಶಿವಪುರದ ಜೀವಾನಂದ ಪರಮಹಂಸರ ಪವಿತ್ರಾಶ್ರಮಕ್ಕೆ ತೆರಳಿ, ಮಠದ ಸ್ವಾಮಿಗಳಿಗೆ ನಾಗೇಶರಾಯನ ಬಗ್ಗೆ ಆತನ ಆಶ್ರಿತೆ ನಂದಿನಿಯ ಬಗ್ಗೆ ದೂರು ನೀಡುತ್ತಾರೆ. ಹೆಣ್ಣು ಕೊಡದೇ ಹೋದ ಹೊಟ್ಟೆ ಕಿಚ್ಚಿನಿಂದ ಹೆಣ್ಣು ಮಕ್ಕಳಿಗೆ ಬಾಲ್ಯವಿವಾಹವೇ ಶ್ರೇಯಸ್ಕರವೆಂಬ ಆರ್ಯಧರ್ಮ ಸಂಸ್ಕೃತಿ ಅವನತಿ ಹೊಂದುತ್ತಿದೆ ಎಂದು ಬೊಬ್ಬೆ ಹಾಕುತ್ತಾರೆ. ಗುರುಪೀಠಕ್ಕೆ ಚಾಡಿ ಹೇಳಿ ಒಂದು ಶಾಸನ ಹೊರಡಿಸುತ್ತಾರೆ.

ಪ್ರೌಢ ವಿವಾಹ ಏರ್ಪಡಿಸಿ, ಧರ್ಮವನ್ನು ಕುಲಗೆಡಿಸಿ ಪೀಠಾಧಿಪತಿಗಳನ್ನು ತುಚ್ಛೀಕರಿಸಿ, ನಾಸ್ತಿಕತೆಯನ್ನು ಮರೆಯುತ್ತಿರುವ ನಾಗೇಶರಾಯರು ಸ್ವಾಮಿಗಳ ಬಳಿ ಕ್ಷಮಾಪಣೆ ಕೇಳಿ ತಪ್ಪು ಕಾಣಿಕೆ ಐದು ಸಾವಿರ ರೂಪಾಯಿಗಳನ್ನು ನೀಡಬೇಕೆಂದು ಶ್ರೀಮದಭಿನವ ಜೀವಾನಂದ ಪರಮಹಂಸ ಜಗದ್ಗುರುಗಳು ಶಾಸನ ಹೊರಡಿಸುತ್ತಾರೆ. ಆದರೂ ನಾಗೇಶರಾಯ ಮಠದ ಕಡೆ ತಿರುಗಿ ನೋಡುವುದಿಲ್ಲ! ದಂಡವನ್ನೂ ಕೊಡುವುದಿಲ್ಲ! ಊರಿನವರು, ಪೀಠಾಶ್ರಿತರು ನಾಗೇಶರಾಯನ ಮನೆಯವರೊಡನೆ ಸಂಪರ್ಕ ಇರಿಸಿಕೊಳ್ಳಬಾರದೆಂದು ಬಹಿಷ್ಕಾರದ ಶಾಸನ ಹೊರಡಿಸಿ ಶಿಕ್ಷೆ ವಿಧಿಸುತ್ತಾರೆ.

ನಾಗೇಶರಾಯ, ಶರಚ್ಚಂದ್ರ ಠಾಕೂರ ಕಲೆಕ್ಟರ್ ಚಕ್ರವರ್ತಿಗಳೊಡನೆ ಕೂಡಿ ಅಚಲಚಂದ್ರನ ನೇತೃತ್ವದಲ್ಲಿ ಒಂದು ಉಪಾಯ ಹೂಡುತ್ತಾರೆ. ಕಲೆಕ್ಟರ್ ಜ್ಞಾನಸಾರ ಚಕ್ರವರ್ತಿಗಳ ಹುಟ್ಟುಹಬ್ಬದ ಆಚರಣೆ ರಾತ್ರಿ ಹನ್ನೆರಡು ಘಂಟೆವರೆಗೆ ದಾನಧರ್ಮ ಊಟೋಪಚಾರವಿದೆ. ಪತಿತರು,

ಧೀನರು, ಅನಾಥರು, ಅಂಗಹೀನರು, ಗುರುಪೀಠದಿಂದ ಬಹಿಷ್ಕೃತರಾದವರಿಗೆ ಸ್ವಾಗತ, ಉಳಿದವರು ಅಪ್ಪಣೆ ಇಲ್ಲದೆ ಬರಲಾಗದು ಎಂಬ ನಾಮಫಲಕ ಮನೆಯ ಮುಂದೆ ರಾರಾಜಿಸುತ್ತದೆ.

ನಾಗೇಶರಾಯನಿಗೆ ಬಹಿಷ್ಕಾರ ಹಾಕಿಸಿದ್ದ ಗಣೇಶಪಂಥ ಭಟ್ಟಾಚಾರ್ಯರು ಗುಂಪು ಊಟದ ವಾಸನೆ, ದಕ್ಷಿಣೆಯ ಆಸೆಯಿಂದ ಕಲೆಕ್ಟರರ ಮನೆಗೆ ಆಗಮಿಸುತ್ತಾರೆ. ತಮ್ಮ ಪರಮ ಗುರುಗಳು ತಮ್ಮಲ್ಲಿ ಪುತ್ರವಾತ್ಸಲ್ಯವನ್ನೆ ಇಟ್ಟು ತಮ್ಮ ಶ್ರೇಯೋಭಿವೃದ್ಧಿಯನ್ನು ಕುರಿತು ಅನುಗ್ರಹಿಸಿದ್ದಾರೆ. ಅವರ ಆಜ್ಞಾನುಸಾರ ಇಲ್ಲಿಗೆ ಬಂದಿದ್ದೇವೆ. ನ್ಯಾಯಮೂರ್ತಿಗಳಾದ ತಾವು ಜಗದ್ಗುರು ಪೀಠಕ್ಕೆ ಅವಿಧೇಯರಾಗಿ ಮಠಾಚಾರಕ್ಕೆ ವಿರುದ್ಧವಾಗಿ ದೈವದ್ರೋಹಿಯಾದ ನಾಗೇಶರಾಯನೊಡನೆ ಸೇರಿರುವುದು ಸರಿಯೇ ಎಂದು ಪ್ರಶ್ನಿಸುತ್ತಾರೆ. ಗುರುಪೀಠ ವಿಧಿಸಿದ್ದ ಐದು ಸಾವಿರ ದಂಡದ ಹಣವನ್ನು ನಾಗೇಶರಾಯನಿಂದ ನಾನು ತೆಗೆದುಕೊಂಡು ಸರಿಯಾಗಿ ಪ್ರಾಯಶ್ಚಿತ್ತ ಮಾಡಿಸಿದ್ದೇನೆ. ಅನಾಥರಿಗೆ ವಿಕಲಾಂಗರಿಗೆ ಅಭಿವೃದ್ಧಿ ಕೆಲಸಕ್ಕೆ ವಿನಿಯೋಗಿಸಿದ್ದೇನೆ. ನ್ಯಾಯಮೂರ್ತಿಯ ಗತ್ತಿನಿಂದ ಕಲೆಕ್ಟರ್ ಹೇಳುತ್ತಿದ್ದ ವೇಳೆಗೆ ಸರಿಯಾಗಿ ಅಚಲಚಂದ್ರನು ಬರುತ್ತಾನೆ. ಸ್ವಾಮಿಗಳಿಗೆ ಬೇಗ ತಿಳಿಸಿರಿ ಬಹಿಷ್ಕೃತರಾಗಿರುವ ನಮ್ಮೊಡನೆ ಇದ್ದರೂ ವ್ಯವಹರಿಸಿ ಭ್ರಷ್ಟರಾಗಿದ್ದಾರೆ. ಕರ್ಮಹೀನರ ವಸತಿಗೆ ಬಂದಿರುವುದರಿಂದ ಮೊದಲು ನಿಮ್ಮ ಕೈಕಾಲುಗಳಿಗೆ ಇಲ್ಲಿಯೇ ಪ್ರಾಯಶ್ಚಿತ್ತ ಮಾಡಿಕೊಳ್ಳಿರಿ ಎಂದ ಅಚಲಚಂದ್ರನ ಮಾತಿಗೆ ಉತ್ತರ ನೀಡದೆ ಭಟ್ಟಾಚಾರ್ಯರ ಗುಂಪು ಹೊರ ನಡೆಯುತ್ತದೆ.

ಶಿವಪುರದ ವಿಶ್ವಕಲಾ ಶಾಲೆಯಲ್ಲಿ ಅಚಲಚಂದ್ರನ ಭಾಷಣ ಏರ್ಪಾಡಾಗುತ್ತದೆ. ನಿಜವಾದ ಆರ್ಯಧರ್ಮದ ಶ್ರೇಷ್ಠತೆ, ಗೊಡ್ಡು ಆಚಾರ, ವಿಚಾರ, ಮೌಢ್ಯಗಳು ಜೀವಾನಂದ ಸ್ವಾಮಿಗಳ ಪವಿತ್ರ ಶ್ರಮದ ಹಾಗೂ ಅವರ ಅನುಯಾಯಿಗಳ ಮೋಸದ ಕಥೆಗಳನ್ನು ಬಹಿರಂಗಗೊಳಿಸುತ್ತಾನೆ. ಗಣೇಶ ಪಂಥ ಆಸ್ತಿ ಆಸೆಗಾಗಿ ಸ್ವತಃ ಅಣ್ಣನ ಮಗಳಿಗೆ ವಿಷ ಹಾಕಿದ್ದು, ನಂದಿನಿಯ ತಂದೆಯ ತಂಗಿ ತಪಸ್ವಿನಿ, ವಿಧವೆಯಾದ ಮೇಲೆ ತಾನು ಹೇಳಿದಂತೆ ಕೇಳಲಿಲ್ಲವೆಂದು ಗುರುಮಠದಿಂದ ಬಹಿಷ್ಕಾರ ಹಾಕಿಸಿದ್ದನ್ನೆಲ್ಲಾ ಬಯಲಿಗೆಳೆಯುತ್ತಾನೆ. ವರದಕ್ಷಿಣೆ, ಪ್ರೌಢವಿವಾಹ, ದೇಶಭಕ್ತಿ, ಸಂಘಶಕ್ತಿ ಹೀಗೆ ಹತ್ತು ಹಲವು ವಿಚಾರಗಳ ಬಗ್ಗೆ ಉಪನ್ಯಾಸ ನೀಡಿ ಜನರ ಗಮನ ಸೆಳೆಯುತ್ತಾನೆ.

ನಂದಿನಿಗೂ ಉಪನ್ಯಾಸ ನೀಡಲು ಅವಕಾಶ ಕಲ್ಪಿಸುತ್ತಾರೆ. ಹೆಣ್ಣಿಗೆ ವಿದ್ಯೆಯ ಪ್ರಾಮುಖ್ಯತೆ, ಗೃಹಿಣಿಧರ್ಮ, ದೇಶಭಕ್ತಿ ಮುಂತಾದ ವಿಚಾರಗಳನ್ನು ಕುರಿತಂತೆ ನಿರರ್ಗಳವಾಗಿ ಮಾತನಾಡುತ್ತಾಳೆ. ಸತ್ಯಾನಂದ ಸ್ವಾಮಿಗೆ ಸ್ವವಿಚಾರವನ್ನು ತಿಳಿಸಿ, ಮಗಳು ನಂದಿನಿಯನ್ನು ನಾಗೇಶರಾಯನ ಮನೆಯಲ್ಲಿ ಬಿಟ್ಟ ಕಾರಣವನ್ನು ವಿವರಿಸಿ ಗೃಹಸ್ಥಧರ್ಮ, ದೇಶಭಕ್ತಿ, ಜಗನ್ಮಾತೆಯ ಬಗ್ಗೆ

ಉಪನ್ಯಾಸ ನೀಡುತ್ತಾ ನಂದಿನಿಗೆ ನಾದಾನಂದನಿಂದ, ಸ್ವರ್ಣಕುಮಾರಿಗೆ ಅಚಲಚಂದ್ರನಿಂದ ಮಾಂಗಲ್ಯಧಾರಣೆ ಮಾಡಿಸಿ

"ಸುಕುಮಾರರೇ! ಸುಭಾಗಿಯರೇ! ಇದು ಮೊದಲು ನೀವು ಧರ್ಮಪ್ರಜಾಪತಿಗಳೆನ್ನಿಸುವ ದಂಪತಿಗಳಾಗುವಿರಿ. ಇನ್ನು ಮುಂದೆ ನೀವು ಮಾಡಬೇಕಾದ ಪ್ರತಿಯೊಂದು ಕಾರ್ಯವೂ ನಿಮ್ಮಿಬ್ಬರ ಚಿತ್ತೈಕಾಗ್ರತೆಯನ್ನೇ ಅವಲಂಬಿಸಿತ್ತು. ನಿಯಮವನ್ನು ಮೀರದೇ ನಡಯಿಸಲ್ಪಡ ಬೇಕಾಗಿರುವುದು. ಇದಕ್ಕಾಗಿ ಮಾತೃ ಸಮ್ಮುಖದಲ್ಲಿ ಈಗಲೇ ಪ್ರಮಾಣ ಪೂರ್ವಕವಾಗಿ ದೀಕ್ಷೆಯನ್ನು ವಹಿಸಬೇಕು."[೧೬]

"ನೀವು ಗೃಹಸ್ಥಾಶ್ರಮಗಳಾದ ಮಾತ್ರಕ್ಕೆ ಭೋಗೋಪಭೋಗಗಳಲ್ಲಿಯೇ ನಿರಂತರವಾಗಿರ ಬಾರದು, ಮಿತವ್ಯಯದಿಂದ ಉಚಿತ ಮಾರ್ಗದಲ್ಲಿ ನಿಮ್ಮ ತನು, ಮನ, ಧನಗಳನ್ನು ವಿನಿಯೋಗಿಸಿ, ನಿಮ್ಮ ಮುಂದಿನ ಮಕ್ಕಳನ್ನು ನಿಜವಾದ ದೇಶ ಸೇವಕರನ್ನಾಗಿ ಮಾಡುವ ಸದ್ವರ್ತನೆಯು ನಿಮ್ಮಲ್ಲಿ ಸ್ಥಿರವಾಗಿರಬೇಕು..."[೧೭] ಎಂಬುದಾಗಿ ಹೊಸ ದಂಪತಿಗಳಿಗೆ ಪ್ರತಿಜ್ಞಾ ವಿಧಿಯನ್ನು ಬೋಧಿಸುತ್ತಾರೆ. ಇಲ್ಲಿ ಹೆಣ್ಣಿನ ತಂದೆ ಮಗಳು ಅಳಿಯ ಇಬ್ಬರಿಗೂ ಬಾಳುವೆಯ ಬಗ್ಗೆ ಬೋಧಿಸುತ್ತಾರೆ. ಹಾಗೆಯೇ ಮಂತ್ರ ಮಾಂಗಲ್ಯದ ಸರಳ ವಿವಾಹಗಳಲ್ಲಿನ ದೀಕ್ಷೆ ನೆನಪಾಗುತ್ತದೆ. ತಿರುಮಲಾಂಬಾ ಸರಳ ಮದುವೆಯ ಮಹತ್ವವನ್ನು ಅದರ ಅಗತ್ಯವನ್ನು ವಿವರಿಸಿದ್ದಾರೆ.

### ೧೦. ಪೂರ್ಣಕಲಾ(೧೯೧೭)

ಪ್ರತಿಭಾನಗರದ ಶಾಂತಿನಿಕೇತನ ಎಂಬ ಗುರುಕುಲಾಶ್ರಮದ ಅಧ್ಯಕ್ಷರು ಸಚ್ಚಿದಾನಂದ ವಿಜ್ಞಾನ ಭಾಸ್ಕರ ಭಟ್ಟಾಚಾರ್ಯರು ಮಗಳೇ ಪೂರ್ಣಕಲೆ. ವಿಧವೆ ಸತೀಮಣಿಯ ಏಕೈಕ ಪುತ್ರ ಮಧುಮಿತ್ರ, ಅವಳು ತನ್ನ ಮಗ ಹಳ್ಳಿಯಲ್ಲಿದ್ದರೆ ಹಾಳಾಗುತ್ತಾನೆ ಎಂದು ಭಾವಿಸಿ ನಗರದ ಗುರುಕುಲಾಶ್ರಮಕ್ಕೆ ಸೇರಿಸುತ್ತಾಳೆ.

ಮದುಮಿತ್ರ ವಿದ್ಯಾಭ್ಯಾಸವನ್ನು ಮರೆತು ವಾರುಣಿ ಸೇವೆಯಲ್ಲಿ ನಿರತನಾಗಿ, ರಕ್ತಾಕ್ಷಿ ಎಂಬ ವೇಶ್ಯಾಂಗನೆಯ ಸಂಸರ್ಗ ಸಹವಾಸದಲ್ಲಿ ಮುಳುತ್ತಾನೆ. ಗುರುಪುತ್ರಿ ಪೂರ್ಣಕಲೆಯನ್ನು ಪ್ರೀತಿಸಲು ಪ್ರಯತ್ನಿಸಿ ವಿಫಲನಾಗುತ್ತಾನೆ. ರಕ್ತಾಕ್ಷಿಯ ಅಂಗಸಂಗ ಸಂಬಂಧದಿಂದ ರತಿರೋಗ ಪೀಡಿತನಾಗಿ ಅವಳ ಮನೆಯಲ್ಲಿಯೇ ನರಳುವಾಗ, ಗುರುಗಳ ಗಮನಕ್ಕೆ ಬಂದು ಆಶ್ರಮಕ್ಕೆ ಕರೆತರುತ್ತಾರೆ. ಅವನ ಪ್ರೇಮವನ್ನು ನಿರಾಕರಿಸಿದ್ದ ಗುರುಪುತ್ರಿ ಪೂರ್ಣಕಲೆಯೇ ಅವನ ಶುಶ್ರೂಷೆಗೆ ನಿಲ್ಲುತ್ತಾಳೆ. ಶಾರೀರಿಕವಾಗಿ ನೋವುಂಡ ವಿಧವೆಯ ಪುತ್ರ ಮದುಮಿತ್ರನಿಗೆ ತನ್ನ ತಪ್ಪಿನ ಅರಿವಾಗುತ್ತದೆ. ಲೇಖಕಿ ಆ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಬ್ರಹ್ಮಚರ್ಯದ ಅಗತ್ಯ ಹಾಗೂ ಮಹತ್ವದ ಬಗ್ಗೆ ಮನವರಿಕೆಯಾಗುವಂತೆ ಸಂದೇಶ ನೀಡುತ್ತಾರೆ.

ಲೇಖಕಿ ಸ್ತ್ರೀ ಶಿಕ್ಷಣವನ್ನು ಬಯಸಿದರೂ ಮಹಿಳೆಯರಿಗೆ ಸನಾತನ ಸಂಸ್ಕೃತಿಯ ವಿಜೃಂಭಣೆ ಅಗತ್ಯವಾದ ವಿದ್ಯೆಬೇಕು. ಅದರಲ್ಲಿ ನಾಗರಿಕತೆಯ ಲೇಪ ಇರಕೂಡದು ಎಂದು ಸಂಪ್ರದಾಯ ಕುರಿತು ಮಾತನಾಡುತ್ತಾರೆ. ಮಹಿಳೆಯರ ಕಾರ್ಯಕ್ಷೇತ್ರ ಮನೆಯೇ ಹೊರತು ಮನೆಯ ಹೊರಗಲ್ಲ ಎಂಬ ಅಭಿಪ್ರಾಯಗಳು ಅಂದಿನ ಸಮಾಜಕ್ಕೆ ಅನ್ವಯವಾಗುವಂತವು. ಇಂದಿಗೆ ಆ ವಿಚಾರಗಳು ಪ್ರಸ್ತುತ ಎನಿಸುವುದಿಲ್ಲ. ಆಧುನಿಕತೆಯನ್ನು ಕಂಡರೆ ಕೆಂಡ ಕಾರುವ ಲೇಖಕಿ ನಾಗರಿಕತೆಯನ್ನು ಸುಲಭವಾಗಿ ಸ್ವೀಕರಿಸುವುದಿಲ್ಲ. ಹೊರಗಿನ ಆಡಂಭರಕ್ಕಿಂತ ಅಂತರಂಗಕ್ಕೆ ಹೆಚ್ಚು ಮಾನ್ಯತೆ ನೀಡುವ ಅವರು ಹೊಸದಾದ ಆಮದಾದ ಉಡುಗೆ ತೊಡುಗೆಗಳ ಬಗ್ಗೆ ಲೇಖನಿಯನ್ನು ಝಳಪಿಸಿದ್ದಾರೆ.

ಟೊಪ್ಪಿಗೆ, ಮುಖಕ್ಷೌರ, ಬೀಡಿ, ಬ್ರಾಂದಿ, ಮುಂಜುಟ್ಟು, ಕುತ್ತಿಗೆಗೆ ನೇಣು ಇಷ್ಟರಿಂದಲೇ ನೀನು ಆಂಗ್ಲ ಸರದಾರ ಶ್ರೇಷ್ಠನೆನ್ನಿಸಿದೆಯಾದರೆ ನಾಟಕದ ವೇಷಧಾರಿಗಳು ಕೂಡ ಚಕ್ರೇಶ್ವರರಾಗಿ ಹೋಗುವರು ಎಂದಿದ್ದಾರೆ. ಯಾರ ಅಡ್ಡಿ ಆತಂಕಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ನಾಗರಿಕತೆ ಮಂದ ಹೆಜ್ಜೆಯನ್ನು ಇಟ್ಟೇ ಇಡುತ್ತದೆ. ಪರಂಪರೆಯನ್ನು ತನ್ನೊಳಗೆ ಜೀರ್ಣಿಸಿಕೊಳ್ಳುತ್ತದೆ. ಹೊಸದಾಗಿ ಬಂದದ್ದು ಕಾಲಕ್ರಮೇಣ ನಮ್ಮದೇ ಎಂಬಷ್ಟು ಒಗ್ಗಿ ಹೋಗುತ್ತದೆ. ಇಂದಿನ ನಾಗರಿಕತೆಯೇ ನಾಳಿನ ಸಂಸ್ಕೃತಿಯಾಗಿ ಪರಂಪರೆಯ ಅವಿಭಾಜ್ಯ ಅಂಗವಾಗಿ ಹೋಗುವುದನ್ನು ಇತಿಹಾಸ ಸಾರುತ್ತದೆ.

## ೧೧. ವಿದ್ಯುಲ್ಲತಾ(೧೯೧೭)

ನಭಾ ಮತ್ತು ವಿರಾಗಿಣಿಯಂತೆ ವಿದ್ಯುಲ್ಲತಾ ಮತ್ತು ಮಣಿಮಾಲಾ ಎರಡು ಭಾಗದಲ್ಲಿ ಪ್ರಕಟವಾಗಿರುವ ಒಂದೇ ಕಥೆಯಾಗಿದೆ. ಸ್ತ್ರೀ ಜನಾಂಗದ ಅಭ್ಯುದಯಕ್ಕೆ ಮಹಿಳಾ ಶಿಕ್ಷಣ ಅತ್ಯಗತ್ಯ ಎಂಬ ನಂಬುಗೆಯುಳ್ಳ ಲೇಖಕಿ "ವಿದ್ಯಾವತಿ ಸ್ತ್ರೀಯರಿಂದ ಹೊಂದಬಹುದಾದ ಲೋಕ ಶಿಕ್ಷಣದ ಉತ್ತಮ ಫಲವೆಂತಹುದೆಂಬುದೂ ಕಥಾ ನಾಯಿಕೆಯ ಶೀಲ ಉದ್ಯಮಾದಿ ಪಾಂಡಿತ್ಯ ಪ್ರಭೆಯಲ್ಲಿ ಪ್ರತಿಫಲಿತವಾಗಿರುವುದು"[೧೯] ಎಂದಿದ್ದಾರೆ.

ದಾಮೋದರರಾಯರ ತಂಗಿ ಗಂಡ ಸತ್ತ ಮೇಲೆ ಸ್ಥಿರ ಆಸ್ತಿಯನ್ನೆಲ್ಲ ಮಾರಿ, ಹಣದೊಡನೆ ಇದ್ದೊಬ್ಬ ಮಗನ ಸಮೇತ ತವರಿಗೆ ಬರುತ್ತಾಳೆ. ರಾಯರು ತಮ್ಮ ಮಗಳು ಮಣಿಮಾಲೆಯನ್ನು ಸೋದರಳಿಯ ಅಮರನಾಥನಿಗೆ ಕೊಡುವುದೆಂದು ಮಕ್ಕಳ ಮುಂದೆ ಅಡಿಗಡಿಗೆ ಮದುವೆಯ ಬಗ್ಗೆ ಮಾತನಾಡುತ್ತಾರೆ. ಅವರು ಆಕಸ್ಮಿಕವಾಗಿ ಸಾವಿಗೀಡಾದ ನಂತರ, ರಾಯರ ಆಸ್ತಿ, ಪಾಸ್ತಿ

ಆಸೆಗೆ ಬಲಿಯಾಗಿ ವಂಚನೆಯ ದಾರಿ ಹಿಡಿಯುತ್ತಾರೆ. ಅವರ ಗಂಡನ ತಂಗಿ ತನ್ನ ಗಂಡ ಸತ್ತ ಮೇಲೆ ಸ್ಥಿರಚರ ಆಸ್ತಿ ಸಮೇತ ಅಣ್ಣನ ಮನೆಗೆ ಬಂದಿರುತ್ತಾಳಲ್ಲ, ಅವಳ ಆಸ್ತಿಯನ್ನೆಲ್ಲ ಇವಳು ಲಪಟಾಯಿಸಿ ತಾಯಿ ಮಗನನ್ನು ಮನೆಯಿಂದ ಹೊರ ಹಾಕುತ್ತಾಳೆ. ತಂಗಿ ಮಗನಿಗೆ ತಮ್ಮ ಮಗಳು ಕೊಡಬೇಕು ಎನ್ನುತ್ತಿದ್ದ ಗಂಡನ ಅಂತಿಮ ಸಂದೇಶವನ್ನು ಕಡೆಗಣಿಸಿ ಮಗಳು ಮಣಿಮಾಲೆಯನ್ನು ಶಚೀಕಾಂತ ಎಂಬ ವರನಿಗೆ ಕೊಟ್ಟು ಮದುವೆ ಮಾಡುತ್ತಾಳೆ.

ಮಣಿಮಾಲೆ ಸಿಗದೇ ಬೇರೆ ಮದುವೆಯಾದ್ದರಿಂದ ಅಮರನಾಥನು ಅತ್ತೆ ಇದ್ದ ಮನೆಗೆ ಬೆಂಕಿ ಹಚ್ಚಿ ಮಣಿಮಾಲೆಯನ್ನು ಸೆರೆಯಲ್ಲಿಟ್ಟು ಅತ್ತೆಯನ್ನು ಜೀವಂತ ಸುಡುತ್ತಾನೆ. ವಿದೇಶದಲ್ಲಿ ಓದುತ್ತಿದ್ದ ಗೆಳೆಯ ಶಚೀಕಾಂತನಿಗೆ ಅಗ್ನಿ ಆಕಸ್ಮಿಕದಲ್ಲಿ ನಿನ್ನ ಪತ್ನಿ ಹಾಗೂ ಅತ್ತೆ ಸುಟ್ಟು ಹೋದರೆಂದು ಸುದ್ದಿ ಮುಟ್ಟಿಸುತ್ತಾನೆ.

ವಿವಾಹಿತೆ ಮಣಿಮಾಲೆಯನ್ನು ಒಲಿಸಿಕೊಳ್ಳುವ ಪ್ರಯತ್ನದಲ್ಲಿ ಅಮರನಾಥ ಸಫಲನಾಗುವುದಿಲ್ಲ. ಅವನಿಗೆ ಚಳ್ಳೆ ಹಣ್ಣು ತಿನ್ನಿಸಿ ಕಣ್ಮರೆಯಾದ ಮಣಿಮಾಲೆ ಹರಿಣಿ ಎಂಬ ಹೆಸರು ಬದಲಾಯಿಸಿಕೊಂಡು ಸಮಾಜ ಸುಧಾರಕ ಗೋಪಿನಾಥರಾಯರ ಬಳಿ ಆಶ್ರಯ ಪಡೆಯುತ್ತಾಳೆ. ಅವರು ಇವಳನ್ನು ಸಾಕು ಮಗಳೆಂದೇ ಭಾವಿಸಿ, ಓದಿಸುತ್ತಾರೆ. ವ್ಯಾಸಂಗ ಮುಗಿಸಿ ವಿದೇಶದಿಂದ ಮರಳಿ ಬಂದ ಶಚೀಕಾಂತ ಹರಿಣಿಯನ್ನು ಪ್ರೀತಿಸುತ್ತಾನೆ. ರಾಯರು ಸಾಕು ಮಗಳೊಡನೆ ಮಗನ ಮದುವೆ ಮಾಡುವ ಅಪೇಕ್ಷೆ ವ್ಯಕ್ತಪಡಿಸುತ್ತಾರೆ. ಹರಿಣಿ ತಿರಸ್ಕರಿಸುತ್ತಾಳೆ. ಪತ್ರ ಬರೆದು ಮುಂದೆ ಅಲ್ಲಿರಬಾರದೆಂದು ಭಾವಿಸಿ ಕಣ್ಮರೆಯಾಗುತ್ತಾಳೆ.

### ೧೨. ನಿರ್ಭಾಗ್ಯವನಿತೆ(೧೯೨೧)

ಬಾಲ್ಯವಿವಾಹದ ದುರಂತ ಚಿತ್ರಣದೊಂದಿಗೆ ವೈಧವ್ಯದ ಕಷ್ಟನಷ್ಟಗಳನ್ನು ಒಳಗೊಂಡು ವಿವೇಚನೆಗೆ ತೊಡಗಿ ವಿಧವೆಯ ಉದ್ಧಾರಕ್ಕಾಗಿಯೇ ಶ್ರಮಿಸುವುದು ಈ ಕಾದಂಬರಿಯ ವಸ್ತು.

ಕಲೆಕ್ಟರ್ ಸತೀಶ–ಸ್ವರ್ಣೆಯರ ಮಗ ಶಚೀಂದ್ರ ಹಾಗೂ ಮಗಳು ಇಂದಿರೆಯನ್ನೊಳಗೊಂಡ ಚಿಕ್ಕ ಕುಟುಂಬ. ಶಚೀಂದ್ರ ಬಿ.ಎ ಪದವಿಗಾಗಿ ಮದ್ರಾಸ್‌ನಲ್ಲಿ ಓದುತ್ತಿದ್ದರೆ, ಮಗಳು ಇಂದಿರೆ ಇನ್ನು ಚಿಕ್ಕವಳು. ಸತೀಶನ ಸಹೋದರಿ ಅವಳ ಗಂಡ ಉಪೇಂದ್ರ ಇವರಿಗೆ ನಾರಾಯಣನೆಂಬ ಒಬ್ಬ ಪುತ್ರನಿದ್ದು ಇವರು ಕಲ್ಕತ್ತೆಯಲಿ ವಾಸವಾಗಿದ್ದರು. ನಾರಾಯಣ ನೋಡಲು ಕುರೂಪಿಯಾಗಿದ್ದ. ಈತ ಲೋಯರ್ ಸೆಂಕಡಿರಿಯಲ್ಲಿ ನಾಲ್ಕು ಬಾರಿ ಅನುತ್ತೀರ್ಣನಾಗಿದ್ದ.

ಈ ಕಡೆ ಸ್ವರ್ಣೆಯ ಅಣ್ಣನ ಮಗ ಸುಂದರೇಶ ಕಲ್ಲಿಕೋಟೆಯಲ್ಲಿದ್ದನು. ಬಹಳ ಸುಂದರನು ಜಾಣನು ಆಗಿದ್ದನು. ಎಫ್.ಎ. ತರಗತಿಯಲ್ಲಿ ಅಭ್ಯಾಸ ಮಾಡುತ್ತಿದ್ದನು. ಸ್ವರ್ಣ

ಇಂದಿರೆಯನ್ನು ಸುಂದರೇಶಗೆ ಕೊಟ್ಟು ಮದುವೆ ಮಾಡಬೇಕೆಂದು ಆಶಿಸಿದ್ದಳು. ಅಷ್ಟೇ ಅಲ್ಲ ಗಂಡನೊಂದಿಗೆ ಮಾತಾಡಿ ಒಪ್ಪಿಸಿದ್ದಳು. ಇದು ಎಲ್ಲರಿಗೂ ಒಪ್ಪಿಗೆಯಾಗಿತ್ತು. ಆಗಾಗ ರಜೆಯ ಮೇಲೆ ಮಾವನ ಮನೆಗೆ ಬಂದ ಸುಂದರೇಶನನ್ನು ಮನೆಯ ಅಳಿಯನೆಂದು ಕರೆಯುತ್ತಿದ್ದರು. ಹೀಗಾಗಿ ಸುಂದರೇಶನ ಅಜ್ಜಿ ಪದೇ ಪದೇ ಸತೀಶನ ಊರಿಗೆ ಬಂದು ಹೋಗುತ್ತಿದ್ದರು ಹಾಗೂ ಇಂದಿರೆಯೂ ಸಹ ಅಜ್ಜಿಯ ಊರಿಗೆ ಹೋಗುತ್ತಿದ್ದಳು. ಅಜ್ಜಿಯ ಪಾಲನೆಯಲ್ಲಿ ಬೆಳೆದವಳಾದ್ದರಿಂದ ಅಜ್ಜಿಯ ಮೇಲೆ ಹೆಚ್ಚಿನ ಪ್ರೀತಿ ಇಟ್ಟುಕೊಂಡಿದ್ದಳು. ಹೀಗಾಗಿ ಇಂದಿರೆ ಕಲ್ಲಿಕೋಟೆಯಲ್ಲಿಯೇ ಉಳಿದು ಸುಂದರೇಶನ ಒಡನಾಡಿಯಾಗಿ ಬೆಳೆದಳು. ಸುಂದರೇಶನ ಪ್ರಯತ್ನದ ಫಲವಾಗಿಯೇ ಅಲ್ಪಸ್ವಲ್ಪ ಅಕ್ಷರ ಜ್ಞಾನವನ್ನು ಪಡೆದಿದ್ದಳು. ಹೀಗಿರುವಾಗ ಸುಂದರೇಶನ ತಂದೆ ಆಕಸ್ಮಿಕವಾಗಿ ಕೊನೆಯುಸಿರೆಳೆದ. ಆಗ ಕಲ್ಲಿಕೋಟೆಗೆ ಬಂದ ಸ್ವರ್ಣ ಇಂದಿರೆಯನ್ನು ತನ್ನೊಂದಿಗೆ ಕರೆತಂದಳು. ಏಳೆಂಟು ವರ್ಷ ಒಂದೆಡೆಯಲ್ಲಿ ಬೆಳೆದ ಇಂದಿರೆ-ಸುಂದರೇಶ ಅಗಲಿ ದೂರವಾಗಬೇಕಾಯಿತು.

ಸತೀಶನ ತಾಯಿ ಸಂಪ್ರದಾಯವನ್ನು ನಂಬಿ ಜೀವಿಸಿದವಳು. ಮೊಮ್ಮಗಳು ಒಂಬತ್ತರಲ್ಲಿ ಕಾಲಿಡುವ ಮುನ್ನ ಮದುವೆ ಮಾಡಬೇಕೆಂದು ಅತ್ತು ಕರೆದಳು. ಆಗ ಉದಾರ ಧೋರಣೆಯ ಸತೀಶ "ಅಮ್ಮ ಇದೇನು ನ್ಯಾಯ, ನೀನು ಹೀಗೆಲ್ಲಾ ಪೇಚಾಡುವುದನ್ನು ನೋಡಿದರೆ ನನ್ನ ಮನಸ್ಥಿತಿಗೆ ಬಹಳ ವ್ಯಾಕುಲವಾಗುತ್ತದೆ. ಇಂದಿರೆಯು ಇನ್ನು ಆಡುವ ಹಸು ಮಗು. ಅವಳನ್ನು ಈಗಲೇ ವಿವಾಹ ಬಂಧನಕ್ಕೆ ಸಿಲುಕಿಸಿ, ಸಂಸಾರ ಸಾಗರದಲ್ಲಿ ಮುಳುಗಿಸಿ ತೇಲಿಸುವುದಕ್ಕೆ ನನ್ನ ಮನಸ್ಸು ಎಂದಿಗೂ ಒಪ್ಪಲಾರದು"[೨೦] ಎಂದು ಪರಿತಪಿಸುವನಾದರೂ ತಾಯಿಯ ಅಳಲಿಗೆ ಅನಿವಾರ್ಯವಾಗಿ ಒಪ್ಪಿದನು. ಇಂದಿರೆಯನ್ನು ನಾರಾಯಣನಿಗೆ ಕೊಡುವುದಕ್ಕೆ ಸತೀಶನಿಗಷ್ಟೇ ಏಕೆ ಯಾರಿಗೂ ಸಮ್ಮತಿಯಿರಲಿಲ್ಲ. ಆದರೂ ಹಿರಿಯಳಾದ ತಾಯಿಯ ಮಾತಿಗೆ ತಲೆಬಾಗಿದನು.

ಉಪೇಂದ್ರನ ವಿಧವೆ ತಂಗಿ ಕಾಳೀಮಣಿ ವ್ಯವಹಾರದಲ್ಲಿ ಜಾಣೆ, ಅತ್ತಿಗೆಯರ ಮೇಲೆ ಚಾಡಿ ಹೇಳಿ ಅಣ್ಣನನ್ನು ಹದ್ದುಬಸ್ತಿನಲ್ಲಿಟ್ಟು ಕೊಂಡಿದ್ದಳು. ಅತ್ತಿಗೆಯರು ಹಗಲು ಹೊತ್ತಿನಲ್ಲಿ ಗಂಡಂದಿರೊಂದಿಗೆ ಮಾತನಾಡುವುದನ್ನು ನಿಷೇಧಿಸಿದ್ದಳು. ಇದಾವುದರ ಪರಿವೆಯಿಲ್ಲದ ಉಪೇಂದ್ರ ತಂಗಿಯ ಮಾತನ್ನು ಮೀರಿ ನಡೆಯುದಿಲ್ಲ. ಹೀಗಾಗಿ ಉಪೇಂದ್ರ ವರದಕ್ಷಿಣೆಗಾಗಿ ಪಟ್ಟು ಹಿಡಿದನು. ಇದು ಸತೀಶನ ಮನಸ್ಸಿಗೆ ಒಪ್ಪಿಗೆಯಾಗದೆ ತಾಯಿಯ ಜೊತೆ ವಾದ ವಿವಾದವಾಗಿ ಕೊನೆಗೆ ತಾಯಿಯ ಕಣ್ಣೀರ ಧಾರೆಗೆ ಕರಗಿ ಮಗನ ವಿರೋಧವನ್ನು ಲೆಕ್ಕಿಸದೆ ಇಂದಿರೆ ಮತ್ತು ನಾರಾಯಣನ ಮದುವೆ ಸಿದ್ಧತೆ ನಡೆಸಿದನು. ಈ ವಿಷಯ ತಿಳಿಸಿದಾಗ ಚಿಕ್ಕಂದಿನಿಂದ ಒಂದೆಡೆ ಬೆಳೆದು ಕೊನೆಯವರೆಗೂ ಒಂದಾಗಿ ಬಾಳುವ ಕನಸನ್ನು ಕಟ್ಟಿಕೊಂಡ ಸುಂದರೇಶನ ಮನಸ್ಸು

ಛಿದ್ರವಾಯಿತು. ಆದರೂ ಮನಸ್ಸಿಲ್ಲದೆ ಮದುವೆಗೆ ಆಗಮಿಸಿದ. ಮದುವೆಯ ಹಂದರದಲ್ಲಿ ಸುಂದರೇಶನನ್ನು ಕಂಡ ಇಂದಿರೆ ನಾಚಿಕೆ, ಲಜ್ಜೆಯಿಂದ ಮಾತನಾಡಲಾರದ ಸ್ಥಿತಿಯಲ್ಲಿದ್ದಳು. ಹೀಗಿರುವಾಗ ಇಂದಿರೆಯ ಮದುವೆ ನಡೆದು ಹೋಯಿತು.

ಬಾಲೆಯಾಗಿರುವ ಇಂದಿರೆ ಮದುವೆ ನಂತರ ತವರಿನಲ್ಲಿಯೇ ಉಳಿದಳು. ರಜೆಯ ದಿನಗಳಲ್ಲಿ ಸುಂದರೇಶ ಮಾವನ ಮನೆಯಲ್ಲಿಯೇ ಹೆಚ್ಚಾಗಿ ಕಳೆಯುತ್ತಿದ್ದು, ಇಂದಿರೆಯನ್ನು ಕಂಡಾಗಲೆಲ್ಲಾ ತನ್ನ ಪತ್ನಿಯಾಗಲಿಲ್ಲವಲ್ಲ ಎಂದು ಕೊರಗಿದನು. ಆದರೆ ಅವಳು ಪರಸ್ತ್ರೀ ಎಂಬ ಕಾರಣಕ್ಕಾಗಿ ಹಿಂದಿನದೆಲ್ಲವನ್ನು ಮರೆತು ನಿಸ್ವಾರ್ಥ ಪ್ರೇಮಕ್ಕಾಗಿ ಹಾತೊರೆದನು. ನಡುವೆಯೇ ನಿಲ್ಲಿಸಿದ ಇಂದಿರೆಯ ವಿದ್ಯಾಭ್ಯಾಸ ಕಲಿಕೆಯನ್ನು ಮುಂದುವರಿಸಿ ವಿದ್ಯಾವಂತಳನ್ನಾಗಿ ಮಾಡಲು ಪ್ರಯತ್ನಿಸಿದನು. ಹೀಗಿರಲು ಕಾಳಿಮಣಿಯ ಸ್ವಾರ್ಥದಾಸೆಗೆ ಇಂದಿರೆ ತವರಲ್ಲಿಯೇ ಉಳಿಯಬೇಕಾಯಿತು. ಮೊಮ್ಮಗಳ ಸುಖಕ್ಕಾಗಿ ಮಾಡಿದ ಅಜ್ಜಿಯ ಪ್ರಯತ್ನ ವಿಫಲವಾಗಿ ಕಣ್ಣಿನಿಂದ ನೋಡಲಾರನೆಂಬಂತೆ ಮೂರ್ಛಿತಳಾಗಿ ಮರಣ ಹೊಂದಿದಳು. ಇದಾದ ಮಾರನೇ ವರ್ಷ ಸುಂದರೇಶನ ಮದುವೆಯಾಯಿತು. ವರ್ಷ ಕಳೆಯುವುದರಲ್ಲಿಯೇ ಪತ್ನಿ ಪುಷ್ಪವತಿಯಾದಳು. ಆದರೆ ಒಂದು ವರ್ಷ ನಂತರ ಶೋಭಾನ ಪ್ರಸ್ಥದ ಸಿದ್ಧತೆ ನಡೆಯಿತು. ಇದಕ್ಕೆ ಸತೀಶ–ಸ್ವರ್ಣೆ ಹಾಗೂ ಇಂದಿರೆಯು ಬಂದಿದ್ದಳು. ಕಾರ್ಯಕ್ರಮ ನಡೆಯುವ ಮುಂಚೆಯೇ ನಾರಾಯಣನಿಗೆ ಮೈ ಸರಿಯಾಗಿಲ್ಲವೆಂಬ ಟೆಲಿಗ್ರಾಂ ಬಂದಿತು. ಸತೀಶ–ಸ್ವರ್ಣೆಯರು ಗಾಬರಿಯಿಂದ ಇಂದಿರೆ ಯನ್ನೊಡಗೂಡಿ ಕಲ್ಕತ್ತೆ ನಗರವನ್ನು ತಲುಪಿದರು. ಆದರೆ ಮನೆ ತಲುಪುವ ಮುನ್ನವೇ ನಾರಾಯಣ ತೀರಿಕೊಂಡನು. ಸ್ವರ್ಣೆ–ಸತೀಶ ಈರ್ವರು ಸುದ್ಧಿ ಕೇಳುತ್ತಲೇ ಮೂರ್ಛಿತರಾದರು. ಎಚ್ಚರಗೊಂಡಾಗ ತಾಯಿ ಸ್ವರ್ಣ "ಅಯ್ಯೋ? ಇಂದಿರೇ, ನಿನ್ನ ತಲೆಯಲ್ಲಿ ಕಲ್ಲು ಬಿತ್ತಲ್ಲ"[೨೧] ಎಂದು ಪ್ರಲಾಪಿಸಿದರೆ ಇಂದಿರೆ ತನ್ನ ಪೂರ್ವಕರ್ಮವನ್ನು ನೆನೆದು ಮದುವೆಯಾದಂದಿನಿಂದ ಒಂದು ಸಲವಾದರೂ ಅವರ ಮುಖದರ್ಶನವನ್ನು ಮಾಡಲಿಲ್ಲ. ಅಯ್ಯೋ ನನ್ನ ಗತಿ ಹೀಗಾಯಿತೆ ಎಂದು ಮುಂತಾಗಿ ಹಳಹಳಿಸುತ್ತಾ ಶವದ ಮೇಲೆ ಬಿದ್ದು ರೋಧಿಸಿದಳು.

ನಾರಾಯಣ ಸತ್ತನೆಂದು ತಿಳಿದಾಗ ಇಂದಿರೆಯ ಭವಿಷ್ಯವನ್ನು ನೆನೆದು ಸುಂದರೇಶ ಜ್ಞಾನವನ್ನು ಕಳೆದುಕೊಂಡನು. ಹೀಗಿರುವಾಗ ಇಂದಿರೆ, ನಾರಾಯಣ ಸತ್ತು ಹೋದನೆಂದು ಮಾತ್ರ ಬಲ್ಲಳು. ಆದರೆ ಅವನ ಮರಣದಿಂದ ತನಗೆ ಯಾವ ರೀತಿಯ ಕಷ್ಟಗಳು ಬಂದೊದಗುತ್ತವೆ ಎಂದು ಭ್ರಮಿಸಿರಲಿಲ್ಲ. ಹೊರಗಿನ ಸಮಾಜ ಆಡಿಕೊಳ್ಳುವ ಮಾತುಗಳು, ಇಂದಿರೆಗೆ ಅರ್ಥವಾಗದೆ ತಾಯಿಯನ್ನು ಕೇಳಿದಾಗಲಂತೂ ಒಂದೊಂದು ಸಾರಿ ತಾಯಿಯ ಕಣ್ಣೀರೆ ಉತ್ತರವಾಗುತ್ತಿತ್ತು. ಮಗಳ ಭವಿಷ್ಯವನ್ನು ನೋಡಲಾಗದೆ ಸ್ವರ್ಣೆ ಮರಣ ಹೊಂದಿದಳು. ಇದರಿಂದ ಇಂದಿರೆಗೆ

ಮತ್ತಷ್ಟು ದುಃಖವಾಯಿತು. ತಂಗಿಯ ದುಃಖ ಶಮನಕ್ಕಾಗಿ ಶಚೀಂದ್ರನೇ ವಿದ್ಯಾಭೋದಕನಾಗಿ ನಿಂತು ಸಮಾಧಾನಪಡಿಸಿದನು.

ವಿಧವೆ ಮಗಳು ಎದುರಿಗಿರುವಾಗಲೇ ವಿಧುರ ಸತೀಶ ಹದಿಹರೆಯದ ಲೀಲೆಯನ್ನು ಮದುವೆಯಾದ. ಲೀಲೆಯೊಂದಿಗೆ ಅವಳ ವಿಧವೆ ತಾಯಿಯೂ ಬಂದಳು. ಸಮಾಜ ನಿರ್ಮಿಸಿದ ಈ ವ್ಯವಸ್ಥೆಯನ್ನು ಶಚೀಂದ್ರ ವಿರೋಧಿಸಿದನಾದರೂ ಏನು ಮಾಡುವ ಹಾಗಿರಲಿಲ್ಲ. ಕೊನೆಗೆ ಕೆಲಸವನ್ನು ಹುಡುಕಿಕೊಂಡು ಮದ್ರಾಸಿಗೆ ಹೋಗಬೇಕಾಯಿತು. ಇಂದಿರೆ ವಿಧವೆಯಾದುದಕ್ಕೆ ಶಂಕರಿಯಿಂದ ಬೈಗುಳ, ಹೊಡೆತ, ಒದೆತಗಳನ್ನು ಅನುಭವಿಸಬೇಕಾಯಿತು. ಇಂತಹ ದುಃಸ್ಥಿತಿಯಲ್ಲಿ ಬಳಲುತ್ತಿರುವ ಮಗಳ ಮನೋವೇದನೆ ತಂದೆಯ ಕಿವಿ ಮುಟ್ಟುವಂತಿರಲಿಲ್ಲ.

ಸುಂದರೇಶ ಹಾಗೂ ಶಚೀಂದ್ರ ಒಂದೆಡೆ ವಾಸಿಸುತ್ತಿದ್ದರು. ಆದರೆ ಸುಂದರೇಶ ಹೆಂಡತಿಯಿಂದ ಸುಖ ಕಂಡವನಲ್ಲ. ದಿನ ಬೆಳಗಾದರೆ ಜಗಳ. ಹೀಗಿರುವಾಗ ಇಂದಿರೆಯ ವೈಧವ್ಯದ ವೇದನೆಯ ಪತ್ರ ಸುಂದರೇಶನ ಕೈ ಸೇರಿತು. ಇದೇ ದಿನವೇ ಸುಂದರೇಶನ ಗರ್ಭಿಣಿ ಪತ್ನಿ ನೀರು ತುಂಬುವಾಗ ಕಾಲುಜಾರಿ ಬಿದ್ದು ಪ್ರಾಣಬಿಟ್ಟಳು. ಮತ್ತೆ ಸುಂದರೇಶನಲ್ಲಿ ತಳಮಳ ಉಂಟಾಗಿ ತನ್ನ ಒಡಲಾಳದ ಆಸೆಯೊಂದನ್ನು ಶಚೀಂದ್ರನಿಗೂ ಹೇಳಿದ ಸಮಾನ ಮನಸ್ಕರಾದ ಸುಂದರೇಶ ಶಚೀಂದ್ರರು ಕೂಡಿ ವಿಧವೆಯ ಮರು ವಿವಾಹಕ್ಕಾಗಿ ಚಿಂತನೆ ಮಾಡಿದರು. ಪುರಾಣ, ಶಾಸ್ತ್ರ, ಧರ್ಮಪಂಡಿತರಲ್ಲದೆ ಕಾನೂನು ಶಾಸ್ತ್ರಜ್ಞರನ್ನು ಭೇಟಿ ಮಾಡಿ ಚರ್ಚಿಸಿದರು. ವಿಧವೆಗೆ ಪುನರ್ ವಿವಾಹವೇ ಪರಿಹಾರ ಸೂಚಕವೆಂದು ಮನಗಂಡರು. ಸುಂದರೇಶ ಜನ ಸಮ್ಮತಿಯನ್ನು ಪಡೆದು ಮದುವೆಯಾಗಲು ನಿರ್ಧರಿಸಿದನಾದರೂ ಆ ಉದ್ದೇಶ ಈಡೇರದೇ ಬ್ರಹ್ಮ ಸಮಾಜವನ್ನು ಸೇರಿ ವಿಧವೆ ಇಂದಿರೆಯನ್ನು ಮದುವೆಯಾದನು.

ಒಟ್ಟಾರೆಯಾಗಿ ಹಿಂದೂ ಸಮಾಜದ ಪರಂಪರಾಗತ ಮೌಲ್ಯಗಳನ್ನು ವಿರೋಧಿಸುವ ನಿಟ್ಟಿನಲ್ಲಿ ವಿಧವೆ ಮತ್ತು ವಿಧುರನ ವಿವಾಹ ಮಾಡಿಸುವಲ್ಲಿ ಶಾಸ್ತ್ರ ಪುರಾಣ, ಕಾನೂನುಗಳ ಸಾಕ್ಷಾಧಾರಗಳನ್ನು ನೀಡುವುದರ ಮೂಲಕ ಯಶಸ್ವಿಯಾಗಿರುವುದು ಸ್ತ್ರೀಪರ ಧೋರಣೆಯಾಗಿದೆ.

**೧೩. ಸುಖಲತಾ(೧೯೨೭)**

ಆರ್.ಕಲ್ಯಾಣಮ್ಮನವರ ಇನ್ನೊಂದು ಕಾದಂಬರಿ ಸುಖಲತಾ ಅರವತ್ತರ ವಯೋವೃದ್ಧ ರಾಜ ಬೇರೊಂದು ಮದುವೆಯಾಗುವುದು. ಮಲತಾಯಿಯಿಂದ ತೊಂದರೆಗಳುಂಟಾದಾಗ ಬೇರೊಂದು ಮನೆಯಲ್ಲಿದ್ದ ಮಗಳು ಯುವರಾಜನನ್ನು ಮೆಚ್ಚಿ ಹಿರಿಯರ ಒಪ್ಪಿಗೆಯಿಂದ ಮದುವೆಯಾಗುವುದಲ್ಲದೆ ಎಲ್ಲರನ್ನು ಒಂದಾಗಿಸಿ ಸ್ತ್ರೀ ಧರ್ಮ ನೀತಿಯ ಪರಿಪಾಲನೆ ಮಾಡುವುದು ಈ ಕಾದಂಬರಿಯ ವಸ್ತುವಾಗಿದೆ.

ಸುಖಲತಾ ಜ್ಯೋತಿಪುರದ ರಾಣಾ ಅಮರಸಿಂಹ ಸರಸ್ವತಿಯ ಒಬ್ಬಳೇ ಮಗಳು. ಸುಖಲತಾ ಹದಿನೆಂಟರ ವಯಸ್ಸಿನಲ್ಲಿ ತಾಯಿಯನ್ನು ಕಳೆದುಕೊಂಡು ದುಃಖದಲ್ಲಿರುವಾಗ ಅರವತ್ತರ ವಯೋವೃದ್ಧನಾದ ತಂದೆ ಹದಿಹರೆಯದ ಮಂಜುಳೆಯನ್ನು ಮದುವೆಯಾಗುತ್ತಾನೆ. ಅಧಿಕಾರದ ದುರಾಸೆಯುಳ್ಳ ಮಂಜುಳೆ ತನ್ನ ಹೆಡ್ಡ ತಮ್ಮನಿಗೆ ಸುಖಲತೆಯನ್ನು ಕೊಟ್ಟು ವಿವಾಹ ಮಾಡುವ ವಿಚಾರ ಮಾಡುತ್ತಾಳೆ. ಆದರೆ ಇದು ಸಾಧ್ಯವಾಗುವುದಿಲ್ಲ. ಇದರಿಂದ ಅವಳಿಗೆ ಸುಖಲತೆಯನ್ನು ಕಂಡರೆ ಕೋಪ ಉಕ್ಕುತ್ತದೆ.

ಸುಖಲತೆಯ ಮೇಲೆ ಅಪಾರ ಪ್ರೀತಿಯುಳ್ಳ ರಾಜ ಅವಳನ್ನು ಜ್ಯೋತಿಪುರದ ಅರಮನೆಯಲ್ಲಿರುವಂತೆ ವ್ಯವಸ್ಥೆ ಮಾಡುತ್ತಾನೆ. ಜೊತೆಗೆ ಒಬ್ಬ ಸಖಿ ಪದ್ಮಾಳನ್ನು ಇಟ್ಟಿರುತ್ತಾನೆ. ಹೀಗಿರುವಾಗ ಆಕಸ್ಮಿಕವಾಗಿ ಕೋಟೆಯ ಒಳಹೊಕ್ಕು ಬಿಕನೀರಿನ ಯುವರಾಜ ಸರ್ಧಾರಸಿಂಹ ಹಾಗೂ ಮಂತ್ರಿ ಪ್ರತಾಪಸಿಂಹ ದಾರಿ ಕಾಣದೆ ಕಂಗೆಡುತ್ತಾರೆ. ಆಗ ಪದ್ಮಲತೆ ಅವರನ್ನು ಸ್ವಾಗತಿಸಿ ಸತ್ಕರಿಸುತ್ತಾಳೆ. ಸುಖಲತೆಯ ಭಾವಚಿತ್ರಕ್ಕೂ ಆಕೆಯ ಸಂಗೀತ ಧ್ವನಿಗೂ ಮನಸೋತ ರಾಜ ಅವಳನ್ನು ಪ್ರತ್ಯಕ್ಷ ಕಂಡಾಗ ಮದುವೆಯಾಗಲು ನಿರ್ಧರಿಸುತ್ತಾನೆ. ಈರ್ವರಲ್ಲಿ ಮಾತುಕತೆ ಯಾಗುತ್ತಿರುವಾಗಲೇ ತಂದೆ ಅಮರಸಿಂಹನು ಬರುವ ಸೂಚನೆಯಿಂದಾಗಿ ಯುವರಾಜ ಹಾಗೂ ಮಂತ್ರಿಯನ್ನು ಸುರಂಗ ಮಾರ್ಗದಿಂದ ಪಾರು ಮಾಡಲಾಗುತ್ತದೆ. ಇಂತಹ ಸಂದಿಗ್ಧತೆಯಲ್ಲಿರುವಾಗ ಮಗಳನ್ನು ಸಂಶಯದಿಂದ ಕಂಡ ರಾಜ ಅಮರಸಿಂಹ ಕೆನ್ನೆಗೆ ಥಳಿಸುವುದರೊಂದಿಗೆ ಸಂನ್ಯಾಸಿಯ ಸೇವೆಗೆ ಹಚ್ಚುವೆನೆಂದು ಹೆದರಿಸಿ ಕರೆದೊಯ್ಯುತ್ತಿರುವಾಗ ಯುವರಾಜ ಸುಖಲತೆಯನ್ನು ಅಪಹರಿಸುತ್ತಾನೆ. ನಂತರ ಪದ್ಮಲತೆಯನ್ನು ಕರೆದೊಯ್ಯುತ್ತಾನೆ. ರಾಜ ಅಮರಸಿಂಹ ಮಗಳನ್ನು ಕಳೆದುಕೊಂಡು ಪಶ್ಚಾತ್ತಾಪ ಪಡುತ್ತಿದ್ದರೆ ಹೆಂಡತಿ ಮಂಜುಳೆ ಸಂತಸದಿಂದ ಬೀಗುತ್ತಾಳೆ. ಆದರೆ ಯುವರಾಜ ಸರ್ಧಾರಸಿಂಹನು ಅಪಹರಿಸಿರುವನೆಂದಾಗ ತಂದೆಗೆ ಅತ್ಯಾನಂದವಾಗುತ್ತದೆ. ಅಪಹರಣದ ಸಮಯ ಎಚ್ಚರ ತಪ್ಪಿದ ಸುಖಲತೆ ಏನೆಲ್ಲ ಔಷಧಿಗಳಿಂದ ಉಪಚರಿಸಿದರೂ ಗುಣವಾಗುವುದಿಲ್ಲ. ಸಖಿ ಪದ್ಮಲತೆ ಹಾಗೂ ಸುಖಲತಾಳ ಪ್ರಿಯಕರ ಯುವರಾಜ ಚಿಂತೆಯಲ್ಲಿ ಮುಳುಗುತ್ತಾರೆ. ಇಂತಹ ಕೊರಗಿನಲ್ಲಿರುವಾಗಲೇ ಸುಖಲತೆಯ ಅಪಹರಣವಾಗಿ ಎಲ್ಲಿ ಹುಡುಕಿದರು ನಿಷ್ಪ್ರಯೋಜನವಾಗುತ್ತದೆ. ಯುವರಾಜ ಸುಖಲತೆಗಾಗಿ ಕಣ್ಣೀರ ಧಾರೆಯನ್ನೇ ಹರಿಸುತ್ತಾನೆ. ಕೊನೆಗೆ ಜೀವಿತವಿರಲು ಆಗದ್ದೆಂದು ರಾಜ್ಯವನ್ನೆಲ್ಲವನ್ನು ಮಂತ್ರಿ ಪುತ್ರನಿಗೆ ದಾನವಾಗಿ ನೀಡಲು ನಿರ್ಧರಿಸುತ್ತಾನೆ. ಮಂತ್ರಿ ಪುತ್ರನ ಧೈರ್ಯ-ಸ್ಥೈರ್ಯದಿಂದಾಗಿ ಶೋಧನೆ ಕೈಗೊಳ್ಳಲಾಗುತ್ತದೆ.

ಸುಖಲತೆಗೆ ಜ್ಞಾನ ಬಂದಾಗ ಅವಳು ಕತ್ತಲೆಯ ಗುಹೆಯೊಂದರಲ್ಲಿದ್ದು, ಭಯದಿಂದ ತಲ್ಲಣಿಸುತ್ತಾಳೆ. ದೇವರನ್ನು ಪ್ರಾರ್ಥಿಸುವಾಗ ಹೊರಗಿನಿಂದ ವ್ಯಕ್ತಿಯೋರ್ವನ ಧ್ವನಿ ಕೇಳಿ

ಉಪಾಯದಿಂದ ಗುಹೆಯ ಬಾಗಿಲನ್ನು ತೆಗೆಸಿ ಗುರುಮಠವನ್ನು ಸೇರುತ್ತಾಳೆ. ಬುದ್ಧಿ ಚಾತುರ್ಯದಿಂದ ಗುರು ದಂಪತಿಗಳ ಪ್ರೀತಿಗೆ ಪಾತ್ರಳಾಗಿ "ಅನುಸೂಯ ಎಂಬ ಹೆಸರನ್ನು ಪಡೆಯುತ್ತಾಳೆ. ಚಂಚಲ ಚಿತ್ತನಾದ ರಾಜ ಗುರುದಂಪತಿಗಳಿಂದ ಆಶೀರ್ವಾದ ಪಡೆಯಲೆಂದು ಬರುವಾಗ ಮಾರ್ಗ ಮಧ್ಯದಲ್ಲಿಯೇ ಸುಖಲತೆಯ ಭೇಟಿಯಾಗುತ್ತದೆ. ಸ್ತ್ರೀಧರ್ಮ ಎಂದರೆ ಯಾವುದು ಎಂಬ ರಾಜನ ಪ್ರಶ್ನೆಗೆ ಪತಿಯನ್ನಷ್ಟೇ ದೈವದಂತೆ ಭಾವಿಸಿ, ಶುದ್ಧಿಯಿಂದ ಪೂಜಿಸಿ ಸೇವೆ ಮಾಡುವುದು"[೨೨] ಎಂಬ ಉತ್ತರ ಸುಖಲತಾಳಿಂದ ಬರುತ್ತದೆ. ಇಬ್ಬರ ದೃಷ್ಟಿಗಳು ಒಂದಾಗುತ್ತದೆ. ಅಪೂರ್ವಮಿಲನದಿಂದ ಪಾಣಿಗ್ರಹಣವಾಗಿ ಸತಿಪತಿಗಳಾಗುತ್ತಾರೆ.

ವಿಷಯ ತಿಳಿದ ಪದ್ಮಲತೆ ಎಲ್ಲಾ ಹಿರಿಯರ ಒಪ್ಪಿಗೆ ಪಡೆದು ಮದುವೆ ಸಿದ್ಧತೆ ನಡೆಸುತ್ತಾಳೆ. ರಾಜ ಅಮರಸಿಂಹ ಮಂತ್ರಿ ರಘುನಾಥಸಿಂಹ, ಪ್ರತಾಪಸಿಂಹ, ಪದ್ಮಲತೆ, ಸುಖಲತೆ, ಸರ್ಧಾರ ಸಿಂಹರನ್ನು ಕಂಡು ಸಂತಸಗೊಳ್ಳುತ್ತಾರೆ. ಪದ್ಮಲತೆ ಸುಖಲತೆಯ ಮಾವನ ಮಗಳೆಂದಾಗ ಅವಳನ್ನು ಪ್ರತಾಪಸಿಂಹನೊಂದಿಗೆ ನಿಶ್ಚಿತವಾಗುತ್ತದೆ.

ಮಂಜುಳೆ ಪಶ್ಚಾತ್ತಾಪದಿಂದ ಆತ್ಮಹತ್ಯೆಗೆ ಪ್ರಯತ್ನಿಸಲು ಸುಖಲತೆ ಅವಳನ್ನು ತಡೆದು ಪ್ರೀತಿಯಿಂದ ಕಾಣುತ್ತಾಳೆ. ಎಲ್ಲರನ್ನೂ ಒಂದುಗೂಡಿಸುತ್ತಾಳೆ. ಧಾನ, ಧರ್ಮ ಕಾರ್ಯಗಳಲ್ಲದೆ ಪ್ರಜಾಹಿತಕ್ಕೋಸ್ಕರ ಶ್ರಮಿಸುತ್ತಾಳೆ. ಪತಿಯನ್ನು ಪರದೈವವೆಂದು ನಂಬಿ ಸುಖೀ ಜೀವನ ನಡೆಸುವುದರಲ್ಲಿಯೇ ಸಂತೃಪ್ತಿ ಹೊಂದುತ್ತಾಳೆ. ಈ ಕಾದಂಬರಿ ಪ್ರಾಚೀನ ಸ್ತ್ರೀ ಧರ್ಮನೀತಿಯ ಚೌಕಟ್ಟುಗಳಲ್ಲಿಯೇ ಯಶಸ್ವಿ ಕಾಣಲು ಪ್ರಯತ್ನಿಸಿದೆ. ಇದು ಲೇಖಕಿಯ ಧೋರಣೆಯೂ ಆಗಿದೆ.

ಹೀಗೆ ಕನ್ನಡ ಕಾದಂಬರಿಯು ಮೊದಲ ಘಟ್ಟದಲ್ಲಿ ಎರಡು ರೀತಿಯ ಧೋರಣೆಗಳನ್ನು ಅನುಸರಿಸಿ ಕಾದಂಬರಿಗಳು ರಚನೆಯಾಗಿವೆ. ಅವುಗಳಲ್ಲಿ ಮೊದಲನೆಯದು ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಗಿ ಭಾರತೀಯ ಸಂಸ್ಕೃತಿಯನ್ನು ಸುಧಾರಣೆ ಮಾಡಿಕೊಳ್ಳಬೇಕೆಂಬ ಧೋರಣೆ. ಮತ್ತೊಂದು ರೀತಿಯಲ್ಲಿ ಸಂಪ್ರದಾಯಿಕ ಮೌಲ್ಯಗಳೇ ಶ್ರೇಷ್ಠವಾಗಿದ್ದು ಅವುಗಳ ಹಿರಿಮೆಯನ್ನು ಎತ್ತಿ ಹಿಡಿಯಬೇಕೆಂಬುದು.

ಒಟ್ಟಾರೆಯಾಗಿ ಈ ಕಾಲಘಟ್ಟದ ಕಾದಂಬರಿಗಳ ಸ್ವರೂಪ ಹಾಗೂ ತಾತ್ವಿಕತೆ ಗಮನಿಸಿದಾಗ ಇಲ್ಲಿಯ ಪ್ರಧಾನ ವಸ್ತು ಸ್ತ್ರೀಗೆ ಸಂಬಂಧಿಸಿದ್ದಾಗಿದೆ. ಸ್ವಾತಂತ್ರ್ಯಪೂರ್ವ ಸಂದರ್ಭದಲ್ಲಿ ಎಷ್ಟೊಂದು ಸಮಸ್ಯೆಗಳಿದ್ದರೂ ಅವೆಲ್ಲವುಗಳಲ್ಲಿ ಸ್ತ್ರೀ ಜೀವನ ಪ್ರಧಾನ ಸಮಸ್ಯೆಯಾಗಿ ಕಂಡುಬಂದಿದೆ. ಅಂತೆಯೇ ಸಮಾಜ ಸುಧಾರಕರು ಹಾಗೂ ಸಾಹಿತಿಗಳ ದೃಷ್ಟಿ ಸ್ತ್ರೀ ಪರವಾಗಿದ್ದರಿಂದಲೇ ಸ್ತ್ರೀ ಜೀವನವನ್ನೊಳಗೊಂಡ ಕಾದಂಬರಿಗಳು ಹೊರಬರಲು ಸಾಧ್ಯವಾಗಿದೆ. ಆರಂಭಕಾಲದ ಹೆಚ್ಚಿನ ಕಾದಂಬರಿಗಳ ಶೀರೋನಾಮಗಳು ಸಹ ಸ್ತ್ರೀವಾಚಿ ಹೆಸರುಗಳಾಗಿರುವುದು ವಿಶೇಷತೆಯೆನಿಸಿದೆ.

ಪುರುಷ ಹಾಗೂ ಸ್ತ್ರೀಯರಿಂದ ರಚನೆಯಾದ ಸ್ತ್ರೀ ಪ್ರಧಾನ ವಸ್ತುವುಳ್ಳ ಕಾದಂಬರಿಗಳ ದೃಷ್ಟಿಕೋನ ಸ್ತ್ರೀ ಸುಧಾರನೆಯನ್ನು ಉದ್ದೇಶವಾಗಿರಿಸಿಕೊಂಡಿವೆ. ಈ ಕಾಲದಲ್ಲಿ ಕಾದಂಬರಿ ರಚನೆಯಲ್ಲಿ ಪಾಲ್ಗೊಂಡಿದ್ದವರು ಸಾಮಾನ್ಯವಾಗಿ ಮೇಲ್ವರ್ಗದ ಲೇಖಕರಾಗಿದ್ದುದರಿಂದ ಮೇಲ್ವರ್ಗದ ಅಥವಾ ಮದ್ಯಮವರ್ಗದ ಸ್ತ್ರೀಯರ ಸ್ತ್ರೀಯರ ಸಮಸ್ಯೆಗಳತ್ತ ಗಮನಹರಿಸಿದೆ ಎರಡು ಸಂಸ್ಕೃತಿಗಳ ಸಂಘರ್ಷದಲ್ಲಿ ಸಂಪ್ರದಾಯಿಕ ವ್ಯವಸ್ಥೆಗೆ ಸಡಿಲತೆಯುಂಟಾಗಬಹುದೆಂಬ ಆತಂಕವೇ ಈ ಬಗೆಯ ಸ್ತ್ರೀ ಪ್ರಧಾನ ಕಾದಂಬರಿಗಳ ರಚನೆಗೆ ಕಾರಣವಾಗಿವೆ.

### ೧೪. ಸುಬ್ಬಣ್ಣ(೧೯೨೮)

ಸ್ಮಾರ್ತ ಬ್ರಾಹ್ಮಣರಾದ ನಾರಾಯಣಶಾಸ್ತ್ರಿಗಳು ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದ ಸಂಸ್ಕೃತ ಪಂಡಿತರು. ಶಾಸ್ತ್ರಿಗಳಿಗೆ ಮೂರು ಜನ ಮಕ್ಕಳು. ಮೊದಲೆರಡು ಹೆಣ್ಣಾದರೆ, ಮೂರನೆಯವನೇ ಸುಬ್ಬಣ್ಣ. ಸಂಸ್ಕೃತ ಪಂಡಿತರೆಂದೇ ಕೀರ್ತಿಗಳಿಸಿದ ನಾರಾಯಣಶಾಸ್ತ್ರಿಗಳು ಸಂಸ್ಕೃತ ಉಪಾಧ್ಯಾಯ ಹಾಗೂ ಪುರಾಣ ಪ್ರವಾಚಕರಾಗಿ ಆಸ್ಥಾನದಲ್ಲಿ ವಿಶೇಷ ಸ್ಥಾನ ಪಡೆದಿದ್ದರು. ಹೀಗಿರುವಾಗ ಶಾಸ್ತ್ರೀಗಳ ಮಗ ಸುಬ್ಬಣ್ಣ ಸಂಗೀತದಲ್ಲಿ ಹೆಚ್ಚಿನ ಆಸಕ್ತಿಯುಳ್ಳವನಾಗಿದ್ದ. ಈ ಕಾರಣದಿಂದಾಗಿ ತಂದೆ ತಾಯಿಗಳ ತಿರಸ್ಕಾರಕ್ಕೂ ಆತ ಗುರಿಯಾದನು.

ಸುಬ್ಬಣ್ಣ ತನ್ನ ಹದಿನೇಳನೆಯ ವಯಸ್ಸಿಗಾಗಲೇ ಲಲಿತೆ ಎಂಬ ಸುಸಂಸ್ಕೃತ ಯುವತಿಯನ್ನು ಮದುವೆಯಾಗಿದ್ದನು. ಸಂಗೀತ ಕಲಿತು ರಾಜರಿಂದ ಖಿಲ್ಲತ್ತು ಗಳಿಸುವ ಸುಬ್ಬಣ್ಣನ ಆಸೆ ಕೈಗೂಡಲಿಲ್ಲ.

ಬ್ರಾಹ್ಮಣ ಸಮಾಜದಲ್ಲಿಯ ಪರಂಪಾರನುಗತವಾಗಿ ಬಂದ ಕಟ್ಟುನಿಟ್ಟುಗಳು ಬಲಿಷ್ಠವಾಗಿದ್ದವು. ಸೊಸೆಯಾದ ಲಲಿತೆ ಅತ್ತೆ ಹೇಳಿದ್ದನ್ನೇ 'ವೇದವಾಕ್ಯ'ವೆಂದು ಭಾವಿಸಬೇಕಾಗಿತ್ತು. ಯಾವುದೋ ಮರೆವಿನಿಂದಾಗಿ ಲಲಿತ ತನ್ನ ಗಂಡನ ಕಾಲಿಗೆ ನೀರು ಕೊಟ್ಟಿದ್ದಕ್ಕಾಗಿಯೇ ಅತ್ತೆಯಿಂದ ಬೈಯಿಸಿಕೊಳ್ಳಬೇಕಾಯಿತು. ಸುಬ್ಬಣ್ಣನ ಸಂಗೀತ ಅಭ್ಯಾಸ ನೀಲಾಸಾನಿಯ ಮನೆಯಲ್ಲಿ ನಡೆಯುತ್ತಿತ್ತು. ಒಂದು ದಿನ ತಂದೆಗೂ ಮಗನಿಗೂ ಮಾತಿಗೆ ಮಾತು ಬೆಳೆದು ಅತಿರೇಕಕ್ಕಿಳಿಯಿತು. ಅಂದು ಮನೆಮಂದಿಯೆಲ್ಲ ಉಪವಾಸ. ಈ ಕಾರಣವಾಗಿ ಸುಬ್ಬಣ್ಣ ತನ್ನ ಹೆಂಡತಿ ಲಲಿತೆಯನ್ನು ಥಳಿಸಿದನು. ಪತಿಭಕ್ತೆಯಾದ ಲಲಿತ ಗಂಡನನ್ನು ದ್ವೇಷಿಸದೆ ಹೊಡೆದ ಕೈಗಳನ್ನು ಮುದ್ದಿಸಿದಳು. ಸುಬ್ಬಣ್ಣನ ಮನಸ್ಸು ಕರಗಿತು. ಇಬ್ಬರ ಮನಸ್ಸು ಒಂದಾದವು.

ಸುಬ್ಬಣ್ಣ ಸಂಗೀತ ಕಲಿಯಲು ನೀಲಾಸಾನಿಯ ಮನೆಗೆ ಹೋಗುತ್ತಿದ್ದ. ನೀಲಾಸಾನಿ ಸುಬ್ಬಣ್ಣನನ್ನು ದೇವರೆಂದೇ ಭಾವಿಸಿದ್ದಳು. ಆದರೆ ಇದನ್ನರಿತ ಸುಬ್ಬಣ್ಣನ ತಾಯಿ ಸೊಸೆಯನ್ನು ಕಾರಣವಾಗಿಸಿ ಜರೆದಳು. ಇದರಿಂದಾಗಿ ತಾಯಿಯ ಮೇಲಿನ ಪ್ರೀತಿ ಸುಬ್ಬಣ್ಣನಿಗೆ ಕಡಿಮೆಯಾಗುತ್ತಾ

ಬಂದಿತು. ಹಬ್ಬ, ಹುಣ್ಣಿಮೆಗಳಲ್ಲಿ ಅರಸು ಮಕ್ಕಳ ಮನೆಯಿಂದ ಬಾಗಿನ ತರುವುದು ರೂಢಿ. ಅತ್ತೆ ಸೊಸೆಯರೂ ದ್ವೇಷಿಸುವುದರಿಂದ ಬೇರೆ ಬೇರೆಯಾಗಿ ತರುತ್ತಿದ್ದರು. ಅಪರಿಚಿತ ವ್ಯಕ್ತಿಯೊಬ್ಬ ದುರುಗಟ್ಟಿ ನೋಡಿದ್ದರಿಂದ ಲಲಿತ ಬಾಗಿನ ತರುವುದನ್ನೇ ಬಿಟ್ಟಳು. ಅತ್ತೆಯಿಂದ ಬೈಗುಳವನ್ನು, ಗಂಡನಿಂದ ಹೊಡೆತವನ್ನು ಅನುಭವಿಸಿದಳು. ಅತ್ತೆ ಒಂದಿಲ್ಲೊಂದು ಕಾರಣ ಮುಂದೆ ಮಾಡಿ ಸೊಸೆಯನ್ನು ಪೀಡಿಸುತ್ತಿದ್ದಳಾದರೂ ಲಲಿತ ತನ್ನ ನೋವನ್ನು ತನ್ನ ಒಡಲಲ್ಲಿಯೇ ಅದುಮಿಟ್ಟು ಕೊಳ್ಳುವಳು.

ಸುಬ್ಬಣ್ಣ ಈಗಾಗಲೇ ಒಂದು ಮಗುವಿನ ತಂದೆ. ತನ್ನ ಹಿರಿಯಕ್ಕ ಲಕ್ಷ್ಮಿ ಹೆರಿಗೆಗೆಂದು ಬಂದಾಗ ಊಟದಲ್ಲಿ ಏರುಪೇರುಗಳಾದವು. ಯಜಮಾನಿ ಸುಬ್ಬಣ್ಣನ ತಾಯಿ ಮನೆಮಂದಿಯನ್ನು ತಿರಸ್ಕರಿಸತೊಡಗಿದಳು. ಇದನ್ನು ಸುಬ್ಬಣ್ಣ ಕಣ್ಣಾರೆ ಕಂಡು ಬೇಸರಗೊಂಡು, ಲಲಿತ ಎರಡನೆಯ ಗರ್ಭ ಧರಿಸಿರುವಾಗ ಆಕೆಯ ಮುಖ ಸಪ್ಪೆಯಾಗಿತ್ತು. ಈ ವಿಷಯ ಸುಬ್ಬಣ್ಣನ ಕಿವಿಗೂ ಮುಟ್ಟಿತು. ಅದೇ ರಾತ್ರಿಯೇ ಹೆಂಡತಿ ಮಗನೊಂದಿಗೆ ಸುಬ್ಬಣ್ಣ ಮನೆಬಿಟ್ಟು ಹೊರಟನು. ಇದು ಲಲಿತೆಗೆ ಹಿಡಿಸದೆ ಗಂಡನನ್ನು ಪರಿಪರಿಯಾಗಿ ಬೇಡಿಕೊಂಡಳು. ಕೊನೆಗೆ ದಾರಿ ಕಾಣದೆ ಗಂಡನನ್ನು ಅನುಸರಿಸಿದಳು. ಮಾರ್ಗಮಧ್ಯದಲ್ಲಿ ಗರ್ಭಸ್ರಾವವಾಯಿತು. ಕಲ್ಕತ್ತೆ ಸೇರಿದ ಸುಬ್ಬಣ್ಣ ಸಣ್ಣದೊಂದು ಮನೆಮಾಡಿ ಸಂಗೀತ ಪಾಠ ಹೇಳುತ್ತಾ ಜೀವನ ಸಾಗಿಸಿದನು.

ದೇಶಾಂತರ ಹೋದ ಮಗ ಮತ್ತು ಸೊಸೆಯ ಕೊರಗಿನಲ್ಲಿ ವೃದ್ಧರಿಬ್ಬರೂ ಜೀವನ ಸಾಗಿಸಿದರು. ಹತ್ತು ವರ್ಷದ ಬಳಿಕ ಹರಿದ್ವಾರದ ಮೇಳದಲ್ಲಿ ಮಗನನ್ನು ಕಾಣದೆ ನಿರಾಶರಾಗಿ ಹಿಂದಿರುಗಿದರು ಅಷ್ಟರಲ್ಲಿಯೇ ನಾರಾಯಣಶಾಸ್ತ್ರಿಗಳು ತೀರಿಕೊಂಡರು. ಮೂರು ವರ್ಷಗಳಲ್ಲಿ ಯಜಮಾನಿಯು ತೀರಿಕೊಂಡಳು.

ಏಳು ವರ್ಷದ ಮಗ ಶೇಷ ಜ್ವರದಿಂದ ಬಳಲಿ ತೀರಿಕೊಂಡಾಗ ಲಲಿತ–ಸುಬ್ಬಣ್ಣ ದುಃಖದಲ್ಲಿ ಮುಳುಗುತ್ತಾರೆ. ಉಳಿದ ಒಂಬತ್ತು ವರ್ಷದ ಮಗಳಿಗೆ ಮದುವೆ ಮಾಡಬೇಕೆಂಬ ಯೋಚನೆಯಲ್ಲಿರುವಾಗಲೇ ಅವಳು ಗಂಗಾನದಿಯ ಪ್ರವಾಹಕ್ಕೆ ತುತ್ತಾಗುತ್ತಾಳೆ. ಒಂದಾದ ಮೇಲೊಂದರಂತೆ ಮಕ್ಕಳಿಬ್ಬರ ಅಗಲುವಿಕೆಯಿಂದ ಆಘಾತಗೊಂಡ ದಂಪತಿಗಳು ಶಾಶ್ವತ ದುಃಖದಲ್ಲಿ ಮುಳುಗುತ್ತಾರೆ. ಹೀಗೆ ಆರೇಳು ವರ್ಷಗಳ ಕಾಲ ಗೌರಿವ್ರತದಲ್ಲಿಯೇ ತಲ್ಲೀನಳಾಗಿದ್ದ ಲಲಿತಾ "ತಾಯಿ ಎಲ್ಲಿಲ್ಲದ ದುಃಖವನ್ನು ನೋಡಿದ್ದಾಯಿತು ಇವರನ್ನು ಸುಖವಾಗಿ ನೋಡಿಕೋ ನನ್ನನ್ನು ಸುಮಂಗಲೆಯನ್ನಾಗಿ ನಿನ್ನ ಪಾದಕ್ಕೆ ಸೇರಿಸಿಕೋ"[೨೨] ಎಂದು ಪ್ರಾರ್ಥಿಸುತ್ತಾಳೆ ಹಾಗೂ ಪ್ರಾಣ ಬಿಡುತ್ತಾಳೆ. ಎಲ್ಲವನ್ನು ಕಳೆದುಕೊಂಡ ಸುಬ್ಬಣ್ಣ ಜೀವನದ ಆಸೆಯನ್ನು ತೊರೆದು ಯಾತ್ರೆ ಮಾಡುತ್ತಾನೆ. ಪಿಟೀಲನ್ನು ಮಾತ್ರ ಇಟ್ಟುಕೊಂಡು ಉಳಿದೆಲ್ಲವನ್ನು ದಾನ ಮಾಡಿ

ಮುಂಬೈಗೆ ಬರುತ್ತಾನೆ. ಕೆಲದಿನಗಳಾದ ಮೇಲೆ ಮೈಸೂರಿಗೆ ಬಂದಾಗ ತನ್ನದೆಂಬುದು ಯಾವುದು ಉಳಿದಿಲ್ಲ. ದೇವಸ್ಥಾನವೊಂದೇ ನೆಲೆಯಾಗುತ್ತದೆ. ನಟುವರಳ ಮಗ ವೆಂಕಟರಮಣನಿಗೆ ಗುರುವಾಗುತ್ತಾನೆ. ಹದಿಮೂರು ವರ್ಷಗಳ ಕಾಲ ಊಟವೊಂದನ್ನು ಬಿಟ್ಟು ಏನನ್ನು ಸ್ವೀಕರಿಸದ ನಿಸ್ವಾರ್ಥ ಬದುಕು ಆತನದು. ಸ್ವತಃ ಸುಭೇದಾರರೆ ಹೋಗಿ ವಿನಂತಿಸಿಕೊಂಡಾಗ ಅವರ ಮಗಳು ಲಲಿತಳಿಗೆ ಸಂಬಳವಿಲ್ಲದೆ ಪಾಠ ಹೇಳುತ್ತಾರೆ. ಜೀವನದಲ್ಲಿ ನಿರಾಶಾವಾದಿಯಾಗಿ ಆಧ್ಯಾತ್ಮವನ್ನೇ ಮುಕ್ತಿಯ ಸಾಧನವನ್ನಾಗಿ ಮಾಡಿಕೊಂಡು ಸುಬ್ಬಣ್ಣ ಸ್ವರ್ಗಸ್ಥನಾಗುತ್ತಾನೆ. ಈ ಕಾದಂಬರಿ ಸುಬ್ಬಣ್ಣನ ಜೀವನದ ಕಥೆ ಹೇಳುವಂತೆ ಕಂಡುಬಂದರೂ ಬದಲಾಗುತ್ತಿದ್ದ ಸಮಾಜದ ಸಂಕ್ರಮಣ ಕಾಲದ ಗೊಂದಲದ ಜೊತೆಗೆ ಪರಂಪರಾನುಗತವಾಗಿ ನಡೆದುಬಂದ ಮೌಲ್ಯಗಳು ಅನಿವಾರ್ಯ ಪಲ್ಲಟಗಳಂತಹ ವಿಷಯಗಳನ್ನು ವಸ್ತುವಾಗಿರಿಸಿಕೊಂಡಿದೆ.

**೧೫. ಚೋಮನದುಡಿ(೧೯೩೩)**

ದಟ್ಟವಾದ ಕತ್ತಲಿನ ವರ್ಣನೆಯೊಡನೆ ಕಾದಂಬರಿ ಪ್ರಾರಂಭವಾಗುತ್ತದೆ. ಬೋಗನಹಳ್ಳಿ ಅರಣ್ಯದ ಸಮೀಪದ ಊರು ಐವತ್ತು ಮನೆಗಳು ಇವೆ. ಜನರು ಎರಡನೂರು ಇರಬಹುದು. ಸಂಕಪ್ಪಯ್ಯ ಊರಿನ ಪ್ರಮುಖ ಜಮೀನುದಾರ. ಚೋಮ ಹೊಲೆಯರವನು. ಜೋಮನಿಗೆ ಐದು ಜನ ಮಕ್ಕಳು. ಚನಿಯ, ಗುರುವ, ಬೆಳ್ಳಿ, ಕಾಳ ಮತ್ತು ನೀಲ. ಹೆಂಡತಿಯು ತೀರಿಕೊಂಡಿದ್ದಳು. ಚೋಮನ ಜೀವನದ ಕಾರ್ಯ ಮತ್ತು ಹಸಿವಿನ ಅನಾವರಣ ಇಲ್ಲಿದೆ. ಹಸಿವು ಒಂದು ಹಿಂಸೆಯಾಗಿ ಶೋಷಣೆಯಾಗಿ ಚೋಮನ ಕುಟುಂಬವನ್ನು ಆವರಿಸಿಕೊಂಡು ಬಂದು ಹಸಿವಿನ ಜಗತ್ತಿನ ಪರಿಚಯ ಮಾಡಿಕೊಡುತ್ತದೆ. ಹಸಿವು ಜೋಮನ ಒಂದು ಭಾಗವಾಗಿತ್ತು.

ಚೋಮ ಬಡವ. ಅವನ ಜೀವನ ಬಡತನದಿಂದ ಕೂಡಿದೆ. ಜೋಮನ ಮಕ್ಕಳಲ್ಲಿ ನೀಲ, ಕಾಳ ಸದಾ ಹಾಸಿಗೆ ಹಿಡಿದು ಮಲಗಿರುತ್ತಾರೆ. ಅವರಿಗೆ ಆಯಾಸ, ಹಸಿವು ಹಾಗೂ ಅನಾರೋಗ್ಯ ಕಾಡುತ್ತದೆ. ಅವರು ಚಳಿಜ್ವರದಿಂದ ಸದಾ ಬಳಲುತ್ತಾರೆ. ಚೋಮನ ಮಗಳು ಬೆಳ್ಳಿ, ಅವಳು ಮುಂಜಾನೆಯಿಂದ ಸಂಜೆಯತನಕ ಅಡುಗೆ, ತಮ್ಮಂದಿರ ಆರೈಕೆ, ದಣಿಯರ ಮನೆಗೆ ಸೊಪ್ಪು ತರುವ ಕೆಲಸ ಮಾಡುತ್ತಾಳೆ.

ಇನ್ನು ಚೋಮನಿಗೆ ಕಾಯಕದ ನಿಯಮವಿಲ್ಲ. ಅವನು ದಣಿಗಳ ಮನೆಯ ಎಲ್ಲಾ ಕೆಲಸ ಮಾಡುತ್ತಾನೆ. ಆದರೆ ಚೋಮನಿಗೆ ಬೇಸಾಯಗಾರನಾಗುವ ಹಂಬಲವಿದೆ. ತನ್ನ ನೆಲವನ್ನು ತಾನು ಉತ್ತಿ, ಬಿತ್ತಿ ಬೆಳೆಯಬೇಕೆಂಬ ಆಕಾಂಕ್ಷೆ ಇದೆ. ಆದರೆ ಹೊಲೆಯರಿಗೆ ಭೂಮಿ ಉಳುವ ಅವಕಾಶ ಇಲ್ಲ. ಚೋಮ ಮಾರಿ ಹೊಲೆಯನಾದ ಕಾರಣ ಅವನು

ಬೇಸಾಯಗಾರ ಆಗುವುದನ್ನು ಅಲ್ಲಿನ ಜನರು ಬಯಸುವುದಿಲ್ಲ. ತಾನು ರೈತನಾಗಲೆಂದೇ ಮೂರು ವರ್ಷದ ಹಸುವಿನ ಕರುಗಳನ್ನು ಸಾಕುತ್ತಿದ್ದಾನೆ. ಒಂದು ದಿನ ಊರಿನ ಮಾಪಿಳ್ಳೆ ಸಾಹುಕಾರನು ಚೋಮನ ಕರುಗಳನ್ನು ಹತ್ತು ರೂಪಾಯಿಗೆ ಮಾರುವಂತೆ ಕೇಳಿದನು. ಆದರೆ ಚೋಮ ಆ ಹತ್ತು ರೂಪಾಯಿಗೆ ಮರುಳಾಗಲಿಲ್ಲ. ಹತ್ತಲ್ಲ ನೂರು ಕೊಟ್ಟರೂ ಅವನು ಮಾರುವವನಲ್ಲ. ಈಗ ಚೋಮನ ಕರುಗಳು ಎತ್ತುಗಳಾಗಿವೆ. ಅವನು ಧನಿಯರ ಬಳಿಗೆ ಹೋಗಿ ಒಂದು ಮುಡಿ ಭೂಮಿಯನ್ನು ಗೇಣಿಗೆ ಕೇಳಬೇಕೆಂದು ಮನಸ್ಸು ಮಾಡಿದನು. ಮಕ್ಕಳಿಗೂ ಈ ವಿಷಯ ತಿಳಿಸಿದ್ದಾನೆ. ಆದರೆ ಬೆಳ್ಳಿ ಮಾತ್ರ ಈ ಗೇಣಿಗೆ ಭೂಮಿ ಕೇಳಲು ಹೋಗಿ ಮರ್ಯಾದೆ ಕಳೆದುಕೊಳ್ಳಬೇಡ ಎಂದು ಎಚ್ಚರಿಸಿದ್ದಳು. ಸೀರೆಗಾರ ಮನ್ವೇಲ ಚೋಮ ಮಾಡಿದ್ದ ಇಪ್ಪತ್ತು ರೂಪಾಯಿಗಳ ಸಾಲವನ್ನು ನೆನಪಿಸಿದನು. ೪-೫ ರೂಪಾಯಿಗಳ ಸಾಲ, ೨೦ ರೂಪಾಯಿ ಆಗಿದೆ. ಎತ್ತುಗಳನ್ನು ಮಾರಿಯಾದರೂ ಋಣ ಮುಕ್ತನಾಗುವ ಬಯಕೆ ಅವನಲ್ಲಿತ್ತು. ಆದರೆ ಎತ್ತುಗಳಿಲ್ಲದಿದ್ದರೆ ತಾನು ಗೇಣಿದಾರನಾಗುವ ಅವಕಾಶವಿಲ್ಲ ಎಂದೆ ಚೋಮ ಎತ್ತುಗಳನ್ನು ಮಾರುವ ಕನಸನ್ನು ಕೈಬಿಟ್ಟನು. ಮಕ್ಕಳಿಗೆ ಕೆಲಸಕ್ಕೆ ಕಳುಹಿಸುವುದು ಚೋಮನಿಗೆ ಹಿಂಸೆ ಅನಿಸಿತು. ಎಲ್ಲಿ ಮಕ್ಕಳು ಕುಡಿತದ ಚಟಕ್ಕೆ ಗುರಿಯಾಗುತ್ತಾರೆ ಎಂಬ ಭಯದಿಂದ ಚೋಮನೇ ಕಾಫಿ ತೋಟಕ್ಕೆ ಕೆಲಸಕ್ಕೆ ಹೊರಟುನಿಂತ. ಅಲ್ಲಿ ಹೆಂಡದಂಗಡಿಗಳು ಇರುವುದರಿಂದ ಚೋಮ ಎಂದಿಗೂ ಸಾಲ ತೀರಿಸಲಾರ ಎಂಬ ಬಯಕೆ ಬೆಳ್ಳಿಗಿತ್ತು.

ಕೊನೆಗೂ ಚೋಮನು ಧಣಿಯರ ಬಳಿ ತಾನು ಗೇಣಿ ಮಾಡುವ ವಿಚಾರ ಹೇಳಿಕೊಂಡನು. ಆದರೆ ಸಂಕಪ್ಪನ ತಾಯಿ "ಅಬ್ಬಾ! ಈ ಹೊಲೆಯರಿಗೆ ಬಂದ ಸೊಕ್ಕೆ"[೨೪] ಎಂದು ಶಪಿಸುವ ಮೂಲಕ ಚೋಮನ ಬೇಸಾಯಗಾರನಾಗುವ ಕನಸಿಗೆ ಮಣ್ಣು ಹಾಕಿದಳು. ಸಾಲಕ್ಕೆ ಮನ್ವೇಲ ತೋಟಕ್ಕೆ ದುಡಿಯಲು ಚೋಮನನ್ನು ಕರೆಯಲು ಬಂದಾಗ ಚೋಮನಿಗೆ ಜ್ವರ ಎಂದು ಹೇಳಿದಳು. ಆದರೂ ಮನ್ವೇಲ ನಂಬಲಿಲ್ಲ. ಕೊನೆಗೆ ತೋಟದ ದುಡಿಮೆಗೆ ತನ್ನ ಮಕ್ಕಳಾದ ಚನಿಯ, ಗುರುವನ್ನು ಕಳುಹಿಸುವುದಾಗಿ ಚೋಮ ಹೇಳಿದಾಗ ಮನ್ವೇಲ ಖುಷಿಗೊಂಡನು. ಚನಿಯ, ಗುರುವ ದುಡಿಯಲಿಕ್ಕೆಂದೇ ಮನೆ ತೊರೆದರು. ಬೆಳ್ಳಿ, ಕಾಳ, ನೀಲ ಉಳಿದರು.

ಮಕ್ಕಳು ತೋಟಕ್ಕೆ ದುಡಿಯಲು ಮರೆಯಾಗಿ ಹೋದದ್ದು ಚೋಮನಿಗೆ ಅಪಾರವಾದ ದುಃಖ ತಂದಿತು. ಇದುವರೆಗೆ ಧಣಿಯೆಂದರೆ ಬಾಗುತ್ತಿದ್ದ ಅವನ ಮನಸ್ಸು ಈಗ ಬಂಡಾಯವೇಳಲು ತೊಡಗಿತು. ಅವನು ಧಣಿಯರ ಬಳಿಗೆ ಕೂಲಿಗಾಗಿ ಹೋಗುವುದನ್ನು ಬಿಟ್ಟು ಸ್ವತಂತ್ರವಾಗಿ ಬಾಳಲು ಯೋಚಿಸಿದನು. ಬುಟ್ಟಿ, ಚಾಪೆ ಹೆಣೆದು ಮಾರಿ ಬದುಕಿದರೂ ಸರಿ ಧಣಿಯರ ಮನೆಯ ಜೀತ ಮಾತ್ರ ಬೇಡವೆಂದುಕೊಂಡನು. ಆದರೆ ಧಣಿ ಸಂಕಪ್ಪಯ್ಯ ಬಂದು ಕರೆದಾಗ

ನಾಳೆಯಿಂದ ದುಡಿಮೆಗಾಗಿ ಬರುವುದಾಗಿ ಚೋಮ ಒಪ್ಪಿದನು. ಇದು ಅವನ ಅಸಹಾಯಕ ಪರಿಸ್ಥಿತಿ ತೋರಿಸುತ್ತದೆ.

ಪಾದ್ರಿ ಸಾಹೇಬ ಕ್ರಿಶ್ಚಿಯನ್ ಆಗಿ ಮತಾಂತರ ಹೊಂದಿದರೆ ಒಳ್ಳೆಯ ಗದ್ದೆಗಳನ್ನೆ ಗೇಣಿಗೆ ಕೊಡುವುದಾಗಿ ಹುರಿದುಂಬಿಸಿದ. ಆದರೆ ಚೋಮನು ಮತಾಂತರ ಹೊಂದಲು ಇಚ್ಛಿಸಲಿಲ್ಲ. ಚೋಮ ತನ್ನ ಪ್ರತಿ ಸೋಲಿನ ದುಃಖವನ್ನು ದುಡಿಯೊಡನೆ ಹಂಚಿಕೊಂಡ. ಗುರುವ, ಚನಿಯ ತಿಂಗಳು ಏಳು ರೂಪಾಯಿ ಸಂಬಳದ ಮೇರೆಗೆ ಕೂಲಿಯಾಳುಗಳಾದರು. ಗುರುವ ಚನಿಯ ತೋಟದ ಕೆಲಸಕ್ಕೆ ಒಗ್ಗಿಕೊಂಡರು. ಕುಡಿತದ ಚಟಕ್ಕೆ ಬಿದ್ದು ಸಾಲ ತೀರಿಸಲಿಲ್ಲ, ಸಾಲ ಹಾಗೆಯೆ ಉಳಿಯಿತು. ಗುರುವ ಕ್ರಿಶ್ಚಿಯನ್ನಳಾದ ಮೇರಿಯೊಡನೆ ಸಂಬಂಧ ಹೊಂದಿ ಓಡಿ ಹೋದ. ಚನಿಯ ಮರಳಿ ಮನೆಗೆ ಬಂದ. ಈ ವಿಷಯ ತಿಳಿದ ಚೋಮ, ಬೆಳ್ಳಿ ದುಃಖದಿಂದ ಬಳಲಿದರು. ಚೋಮ ಕೊಕ್ಕಡದ ಹಾದಿಯಲ್ಲಿ ಗುರುವನನ್ನು ಹುಡುಕಿಕೊಂಡು ಹೊರಟನು. ಅಲ್ಲಿ ಗುರುವನ ವಿವಾಹವಾಗಿತ್ತು. ಇತ್ತ ಚನಿಯ ಹೆಣವಾದ ಚೋಮನ ಮನಸ್ಸು ದಿಕ್ಕು ತಪ್ಪಿತು. ಅವನು ಮಗನ ಹೆಣದ ಮುಂದೆಯೂ ದುಡಿ ನುಡಿಸಿದನು. ಚನಿಯನ ಸಾವು ಚೋಮನ ಕುಟುಂಬದಲ್ಲಿ ಒಂದು ನೆನಪಾಯಿತು. ಬೆಳ್ಳಿಯು ಗುರುವನ ಪಲಾಯನ, ಚನಿಯನ ಸಾವುಗಳಿಂದ ತತ್ತರಿಸಿದಳು.

ಚೋಮನಿಗೆ ದುಡಿ ಹಾಗೂ ಸೇಂದಿ ಸಮನಾಂತರವಾಗಿದ್ದವು. ಚೋಮ ವ್ಯವಸ್ಥೆಯ ಮೇಲಿನ ಸಿಟ್ಟನ್ನು ಎತ್ತುಗಳ ಕಾಲುಗಳ ಮೇಲೆ ಹೊಡೆದು ರಕ್ತ ಬರಿಸಿದನು. ಜಮೀನ್ದಾರಿ ಪದ್ಧತಿಯಲ್ಲಿ ಶೋಷಿತ ಮನಸ್ಸೊಂದು ಪ್ರತಿಭಟಿಸಿ ಬಂಡಾಯ ಹೂಡುವಾಗ ಸ್ವಶಿಕ್ಷಿಸಿಕೊಳ್ಳುವುದು ಒಂದು ಬಗೆಯಾಗಿದೆ. ಚೋಮ ಮೆಲ್ಲನೆ ಸಂಕಪ್ಪಯ್ಯನ ವಿರುದ್ಧ ತಿರುಗಿ ಬೀಳತೊಡಗಿದನು. ಈ ವಿಷಯ ಊರೆಲ್ಲ ಹರಡಿತು. ಬೆಳ್ಳಿ ತಮಗೆ ಉಳಿಗಾಲವಿಲ್ಲವೆಂದು ಸಂಕಪ್ಪಯ್ಯನವರ ಕಾಲಿಗೆ ಬಿದ್ದಳು. ಚೋಮನ ಬದಲಿಗೆ ತಾನು ಧಣಿಯರ ಮನೆಯಲ್ಲಿ ದುಡಿಯಲು ಸಿದ್ಧಳಾದಳು. ಮನ್ವೇಲ ಮರಳಿ ಚೋಮನ ಬಳಿ ತೋಟದ ಸಾಲವನ್ನು ವಸೂಲಿ ಮಾಡಲು ಬಂದನು. ಆದರೆ ಚೋಮನು ಭ್ರಮಿತನಾಗಿದ್ದ. ಬೆಳ್ಳಿಯು ತನ್ನ ಅಸಹಾಯಕತೆಯನ್ನು ಮನ್ವೇಲನ ಬಳಿ ಹೇಳಿಕೊಂಡಳು. ಆದರೆ ಮನ್ವೇಲನಿಗೆ ಚೋಮನ ಭ್ರಮೆ, ಚನಿಯನ ಮರಣ, ಬೆಳ್ಳಿಯ ಅಸಹಾಯಕತೆ ಕಾಳ–ನೀಲರ ಅಭದ್ರತೆ, ಮುಗ್ಧತೆಗಳು ಬೇಕಾಗಿರಲಿಲ್ಲ. ಬೆಳ್ಳಿಯು ತಾನೇ ಕಾಫಿ ತೋಟಕ್ಕೆ ಹೋಗಿ ದುಡಿದು ತಂದೆಯ ಋಣ ತೀರಿಸಬೇಕೆಂದು ನಿರ್ಧರಿಸಿದಳು. ಚೋಮ ಮಾನಸಿಕವಾಗಿ ಕುಸಿದ. ಅವನು ಗುರುವ, ಚನಿಯರನ್ನು ಕಾಫಿ ತೋಟಕ್ಕೆ ಕಳುಹಿಸಿದಾಗ ಪಟ್ಟ ಸಂಕಟವನ್ನು ಈಗಲೂ ಪಟ್ಟನು. ಮುಂದಿನ ಹಬ್ಬದೊಳಗೆ ಬೆಳ್ಳಿ ಹಿಂದಿರುಗಿ ಬರುವುದಾಗಿ

ಮಾತು ಕೊಟ್ಟಳು. ಬೆಳ್ಳಿಯು ನೀಲನೊಡನೆ ತೋಟವನ್ನು ತಲುಪಿದಳು. ಬೆಳ್ಳಿಯು ಹದಿನೈದು ರೂಪಾಯಿಗಳ ಸಾಲ ತೀರಿಸಲು ದುಡಿಮೆಗೆ ನಿಂತಳು. ಮನ್ವೇಲನು ಸಾಲ ಇಪ್ಪತ್ತೈದು ರೂಪಾಯಿಗಳೆಂದು ಹೆದರಿಸಿದನು. ಬೆಳ್ಳಿಯು ದುಡಿಯತೊಡಗಿದಳು. ಆದರೆ ನೀಲ ಚಳಿಜ್ವರದಿಂದ ಬಳಲಿದನು. ಇದರಿಂದಾಗಿ ಮೊದಲ ತಿಂಗಳ ಸಂಬಳ ಐದು ರೂಪಾಯಿ ಆಯಿತು. ಹೀಗಾದರೆ ಸಾಲ ತೀರಿಸುವುದು ಹೇಗೆಂದು ಚಿಂತಿಸಿದಳು. ಮುಂದೆ ಮನ್ವೇಲನು ಬೆಳ್ಳಿಯನ್ನು ತೋಟದ ಕೆಲಸ ಬಿಡಿಸಿ ಮನೆಗೆಲಸಕ್ಕೆ ಇಟ್ಟುಕೊಂಡನು. ಆಗ ಮನ್ವೇಲನ ಜೊತೆ ಸಂಬಂಧ ಬೆಳೆಯಿತು. ಈ ವಿಷಯ ಕೂಲಿಗಾರರ ನಡುವೆ ಹಬ್ಬಿತು. ಅಲ್ಲಿಂದ ಮರಳಿ ಊರಿಗೆ ಬಂದಳು. ಮಗಳು ಸಾಲ ತೀರಿಸಿ ತೋಟದಿಂದ ಮರಳಿ ಬಂದಳೆಂದು ಸಂತೋಷವಾಯಿತು. ಚೋಮ ಸಾಯುವುದರೊಳಗೆ ಭೂಮಿ ಉಳುಮೆ ಮಾಡಬೇಕೆಂಬುದು ಅವನ ಆಶಯವಾಗಿತ್ತು.

ನೀಲನು ಆಕಸ್ಮಿಕವಾಗಿ ನೀರಿನಲ್ಲಿ ಮುಳುಗಿ ಸತ್ತನು. ಬ್ರಾಹ್ಮಣ ಯುವಕನೊಬ್ಬ ನೀಲನನ್ನು ಕಾಪಾಡಲು ಹೋದಾಗ ಇತರರು ತಡೆದರು. ಕೊನೆಗೂ ಆ ಬ್ರಾಹ್ಮಣ ಯುವಕನು ನೀಲನ ಹೆಣವನ್ನು ನೀರಿನಿಂದ ಹೊರ ತೆಗೆದನು. ಇದರಿಂದ ಚೋಮ ಮತ್ತು ಬೆಳ್ಳಿಯ ಬದುಕು ಬೇಸರದ ಗೂಢಾಯಿತು. ಗುರುವ ಕ್ರಿಶ್ಚಿಯನ್ ಆಗಿ ಬೇಸಾಯಗಾರನಾದನು. ತಾನು ಮತಾಂತರಗೊಂಡು ಬೇಸಾಯಗಾರನಾಗಬಾರದೇಕೆ ಎಂದು ಚಿಂತಿಸತೊಡಗಿದನು. ಬೆಳ್ಳಿ ಕೂಡ ಮತಾಂತರದ ಬಗ್ಗೆ ಯೋಚಿಸಿದಳು. ಚೋಮ ಗುರುವನೊಡನೆ ಕೂಡಿ ಬಾಳಲು ನಿರ್ಧರಿಸಿದನು.

ಚೋಮನಿಗೆ ಭಾವ ಸಂಬಂಧಗಳನ್ನು ಹರಿದುಕೊಳ್ಳಲಾಗಲಿಲ್ಲ. ಪಂಜುರ್ಲಿ ಭೂತದ ಗುಡಿಯನ್ನು ಅವನು ದಾಟಲಾಗಲಿಲ್ಲ. ಚೋಮನು ಮತಾಂತರವಾಗುವ ನಿರ್ಧಾರ ಕೈಬಿಟ್ಟನು. ಚೋಮನಿಗೆ ಬೆಳ್ಳಿ ಹಾಗೂ ಮನ್ವೇಲರ ಸಹ ಸಂಬಂಧ ತಿಳಿಯಿತು. ಚೋಮನು ವ್ಯಾಘ್ರವಾದನು. ಅವನು ಎತ್ತುಗಳನ್ನು ತ್ಯಜಿಸಿದ. ಅವನು ಕಂಡ ಉಳುಮೆಯ ಕನಸು ನನಸಾಯಿತು. ಚೋಮನು ದುಡಿಯನ್ನು ಬಾರಿಸಿದ. ದುಡಿಯ ಸದ್ದಿನೊಡನೆ ಚೋಮನ ಜೀವವೂ ಲೀನಾವಾಯಿತು. ಬೆಳ್ಳಿ, ಎತ್ತುಗಳು, ಕಾಳ, ಬಾಡು, ನಾಯಿ ತಬ್ಬಲಿಯಾದರು.

### ೧೬. ಕಾನೂರು ಹೆಗ್ಗಡಿತಿ(೧೯೩೬)

'ಕಾನೂರು ಹೆಗ್ಗಡಿತಿ' ಕಾದಂಬರಿಯ ಕಥಾವಸ್ತು ಮಲೆನಾಡಿನ ಚಂದ್ರಯ್ಯಗೌಡರನ್ನು ಕೇಂದ್ರವಾಗಿರಿಸಿಕೊಳ್ಳಲಾಗಿದೆ. ಅಲ್ಲದೇ ಕಾನೂರು ಮನೆಯ ಕಥೆಯನ್ನು ಮತ್ತು ಅದಕ್ಕೆ ಸಂಬಂಧಿಸಿದ ಮುತ್ತಳ್ಳಿ, ಸೀತೆಮನೆ ಹಾಗೂ ಕೆಳಕಾನೂರು ಗೌಡರುಗಳ ಮನೆತನದ ಜೀವನದ ಕಥೆಯನ್ನು ಒಳಗೊಂಡಿದೆ.

ಕಾನೂರು ಚಂದ್ರಯ್ಯಗೌಡರ ಮಗ ರಾಮಯ್ಯ ಹಾಗೂ ದಿವಂಗತ ಅಣ್ಣ ಸುಬ್ಬಯ್ಯಗೌಡರ ಮಗ ಹೂವಯ್ಯ ಮೈಸೂರಲ್ಲಿ ಓದುತ್ತಿದ್ದರು. ಅವರಿಬ್ಬರು ರಜೆಯ ನಿಮಿತ್ತ ಊರಿಗೆ ಮರಳುತ್ತಿರುವಾಗ ಪ್ರಯಾಣದ ಮಧ್ಯೆದಲ್ಲಿ ಎತ್ತಿನ ಗಾಡಿ ಉರುಳಿಬಿದ್ದು, ಹೂವಯ್ಯನಿಗೆ ಪೆಟ್ಟಾಗುತ್ತದೆ. ಹೀಗಾಗಿ ಹೂವಯ್ಯ ಅಲ್ಲಿಗೆ ಸಮೀಪವಿರುವ ಶಾಮಯ್ಯ ಗೌಡರ ಮನೆಯ ಅತಿಥಿಯಾಗುತ್ತಾನೆ. ಆಗ ಹೂವಯ್ಯನ ಸೇವೆಗಾಗಿ ನಿಂತ ಸೀತೆಯ ಪ್ರೇಮ ಸಂಬಂಧ ಅವರಿಬ್ಬರಿಗೂ ಗೊತ್ತಾಗದಂತೆ ಗಟ್ಟಿಗೊಳ್ಳುತ್ತದೆ. ಈ ವೇಳೆಗಾಗಲೇ ಕಾನೂರಿನ ಚಂದ್ರಯ್ಯಗೌಡರಿಗೆ ಮೂರು ಜನ ಮಕ್ಕಳಿದ್ದು, ವಿಧುರನಾಗಿದ್ದ. ಗೌಡರ ಈರ್ವರು ಹೆಂಡತಿಯರು ಹೆರಿಗೆಯ ಸಮಯದಲ್ಲಿಯೇ ಸಾವನ್ನಪ್ಪಿದ್ದರು. ಆದರೆ ಚಂದ್ರಯ್ಯಗೌಡ ಹದಿಹರೆಯದ ಸುಬ್ಬಮ್ಮಳನ್ನು ಮದುವೆಯಾಗುತ್ತಾನೆ. ಪೆದ್ದುಗೌಡರಿಗೆ ಹೆಣ್ಣು ಕೇಳಲು ಹೋಗಿದ್ದಾಗ ತಾನು ಹೂವಯ್ಯನನ್ನೇ ಮದುವೆಯಾಗಲಿರುವೆನೆಂದು ಭಾವಿಸುವ ಸುಬ್ಬಮ್ಮ ನೈಶಾಕಾಶದ ಬಹುದೂರ ಪ್ರಾಂತದಲ್ಲಿ ಶಾಶ್ವತ ಜ್ಯೋತಿಯಿಂದ ತಳತಳಿಸುವ ತಾರೆಗೆ ಅಳುಪುವ ಹಣತೆಯಾಗಿದ್ದಳು. ಆದರೆ ಚಂದ್ರಯ್ಯಗೌಡರ ಮೂರನೆಯ ಹೆಂಡತಿಯಾಗುವುದೆಂದು ಅರಿತಾಗಲೂ ವ್ಯಸನಗೊಳ್ಳದೇ ಹೆಗ್ಗಡಿತಿಯಾಗುವುದು ಸುಕೃತವೆಂದೇ ಭಾವಿಸಿದ್ದಳು. ವೃದ್ಧ ಚಂದ್ರಯ್ಯಗೌಡರು ಹರೆಯದ ಸುಬ್ಬಮ್ಮಳನ್ನು ಚೆನ್ನಾಗಿಯೇ ನೋಡಿ ಕೊಳ್ಳುವರಾದರೂ ಅವರ ಸಂಶಯದ ದೃಷ್ಟಿ ಹೆಚ್ಚುತ್ತದೆ. ಕಾಡು ಸ್ವಭಾವದ ಅನಾಗರಿಕಳಂತಿರುವ ಸುಬ್ಬಮ್ಮ ಹೆಗ್ಗಡಿತಿಯಾದಾಗ ಸಹಜವಾಗಿಯೇ ಅವಳ ಅಹಂಕಾರ, ಹಮ್ಮುಬಿಮ್ಮುಗಳು ಹೆಚ್ಚಿ ಹಿರಿಯ ಕಿರಿಯರೆಂದು ಗೌರವಿಸದೆ ಶೋಷಣೆಗೆ ತೊಡಗುತ್ತಾಳೆ. ಇದರಿಂದಾಗಿ ಕಾನೂರು ಮನೆ ಸಂಘರ್ಷದ ತಾಣವಾಗುತ್ತದೆ.

ಮೂರು ಜನ ಹೆಂಡಂದಿರಿಂದ ವಿಧುರನಾದ ಅಣ್ಣಯ್ಯಗೌಡ ಸಾಲ ಮಾಡಿ ತೆರಕೊಟ್ಟು ನಾಲ್ಕನೆಯವಳನ್ನು ಮದುವೆಯಾದವ. ದುರಾದೃಷ್ಟಕ್ಕೆ ಅವಳು ಅನಾರೋಗ್ಯದಿಂದಾಗಿ ಸಾವನ್ನಪ್ಪುತ್ತಾಳೆ. ತಂದೆಯ ನಡೆತೆಯಿಂದಾಗಿ ಹರೆಯದ ಅವಿವಾಹಿತ ಮಗ ಓಬಯ್ಯ ಉದಾಸೀನನಾಗಿ ಕುಡಿಯಲು ಪ್ರಾರಂಭಿಸುತ್ತಾನೆ. ಗಂಗೆಯ ಅಂಗ ಸುಖಕ್ಕೂ ಬಲಿಯಾಗುತ್ತಾನೆ. ಗಂಗೆಯಾದರು ಕೃಷ್ಣಯ್ಯ ಶೆಟ್ಟಿಯನ್ನು ಪ್ರೀತಿಸಿ ಒತ್ತಾಯದಿಂದ ಮುದುಕ ತಿಮ್ಮಯ್ಯಶೆಟ್ಟಿಯನ್ನು ಮದುವೆಯಾಗುತ್ತಾಳೆ. ಮದುವೆಯ ನಂತರವೂ ಅನೈತಿಕ ಸಂಬಂಧವನ್ನು ಮುಂದುವರೆಸಿದಾಗ ಕೃಷ್ಣಯ್ಯಶೆಟ್ಟಿಯ ಕೊಲೆಯಾಗುತ್ತದೆ. ಗಂಗೆ ರಂಗಪ್ಪನೊಡನೆ ಘಟ್ಟದ ಕೆಳಗೆ ಓಡಿ ಬಂದು ರಂಗಪ್ಪನಿಗಲ್ಲದೆ ಚಂದ್ರಯ್ಯಗೌಡರಿಗೂ ಓಬಯ್ಯನಿಗೂ ಪ್ರೇಯಸಿಯಾಗುತ್ತಾಳೆ.

ಚಂದ್ರಯ್ಯಗೌಡರ ಮನೆ ಪಾಲಾಗಿ ಹೂವಯ್ಯ ತಾಯಿ ನಾಗಮ್ಮಳೊಂದಿಗೆ ಕೆಳಕಾನೂರಲ್ಲಿ ನಿಂತರೆ ಚಂದ್ರಯ್ಯಗೌಡರು ಕಾನೂರಿನಲ್ಲಿ ನೆಲಸುತ್ತಾರೆ. ಹೀಗಿರುವಾಗ ಹೆಂಡತಿ ಸುಬ್ಬಮ್ಮಳಿಗೆ ಸುಖ ನೀಡಲಾಗದ ಚಂದ್ರಯ್ಯಗೌಡ ಸುಬ್ಬಮ್ಮಳಲ್ಲಿ ಉದಾಸೀನಗೊಂಡು ಶಾಶ್ವತವಾಗಿ ಗಂಗೆಯ

ಸಂಪರ್ಕ ಬೆಳೆಸುತ್ತಾನೆ. ಗಂಗೆಯ ವಿಷಯದಲ್ಲಿ ಗೌಡರಿಗೂ ಸುಬ್ಬಮ್ಮಳಿಗೂ ಜಗಳ ಹತ್ತಿ ಕತ್ತಿಯಿಂದ ಕೊಲ್ಲಲು ಬೆನ್ನತ್ತಿದಾಗ ಸುಬ್ಬಮ್ಮ ತಪ್ಪಿಸಿಕೊಂಡು ತವರು ಸೇರುತ್ತಾಳೆ. ಹೂವಯ್ಯನಲ್ಲಿ ಅನುರಕ್ತಳಾದ ಸೀತೆಯ ಮದುವೆ ಸಿಂಗಪ್ಪಗೌಡರ ಮಗ ಕೃಷ್ಣಪ್ಪನೊಂದಿಗೆ ನಿಶ್ಚಯವಾದಾಗ ಸೀತೆ ಮನೋರೋಗದಿಂದ ಬಳಲುತ್ತಾಳೆ. ಕೃಷ್ಣಪ್ಪ ಹುಲಿ ಬಾಯಿಗೆ ತುತ್ತಾಗಿ ಸತ್ತ ಮೇಲೆ ಸೀತೆ ಗುಣಮುಖಳಾದರೂ ಅದು ಮಳೆಗಾಲದಲ್ಲಿ ಮೂಡಿದ ಕಾಮನಬಿಲ್ಲಿನಷ್ಟೇ. ಹೂವಯ್ಯನಿಗೆ ಸೀತೆಯನ್ನು ಕೊಡುವ ವಿಚಾರ ಚಂದ್ರಯ್ಯಗೌಡ ಹಾಗೂ ವೆಂಕಪ್ಪ ಜೋಯಿಸರ ಕುತಂತ್ರದಿಂದ ಕೈತಪ್ಪಿ ಹೋಗುತ್ತದೆ. ಸೀತೆಯನ್ನು ರಾಮಯ್ಯನಿಗೆ ಕೊಡುವುದೆಂದು ನಿಶ್ಚಿತವಾಗುತ್ತದೆ. ಸೀತೆ ಈ ಮದುವೆಗೆ ತನ್ನ ಒಪ್ಪಿಗೆಯಿಲ್ಲವೆಂದು ಪರಿಪರಿಯಿಂದ ಬೇಡಿಕೊಂಡರು ತಂದೆ ಶಾಮಯ್ಯಗೌಡರು ಹೆಣ್ಣು ಮಕ್ಕಳು ಗಂಡುಬೀರಿಗಳಂತೆ ವರ್ತಿಸಬಾರದು ಎಂದು ಕಡೆಗಣಿಸುತ್ತಾರೆ. ಆಗ ಸೀತೆ ಮತ್ತೆ ಮನೋರೋಗಕ್ಕೆ ಬಲಿಯಾಗುತ್ತಾಳೆ.

ಇಷ್ಟವಿಲ್ಲದ ಮದುವೆಯಿಂದ ಸೀತೆ ಪ್ರಜ್ಞಾಶೂನ್ಯಳಾಗಿದ್ದಳು. ಅಕ್ಷತೆಯ ಸಮಯಕ್ಕೆ ಮದುವೆ ಮನೆಗೆ ಬೆಂಕಿ ಬಿದ್ದಾಗ ಅಸ್ವಸ್ಥನಾದ ರಾಮನ ಕೈಯಿಂದ ಮಂಗಳಸೂತ್ರ ಕಳಚಿ ಬೀಳುತ್ತದೆ. ವೆಂಕಟಪ್ಪ ಜೋಯಿಸರೇ ಮಾಂಗಲ್ಯವನ್ನು ರಾಮನ ಕೈಗೆ ಮುಟ್ಟಿಸಿದಂತೆ ಶಾಸ್ತ್ರ ಮಾಡಿ ಪ್ರಜ್ಞೆಯಿಲ್ಲದ ಸೀತೆಯ ಕೊರಳಿಗೆ ಮಾಂಗಲ್ಯ ಕಟ್ಟುತ್ತಾರೆ. ನಿರಾಸೆಯ ನಿಟ್ಟುಸಿರು ಬಿಟ್ಟ ಹೂವಯ್ಯ ಸೀತೆಯನ್ನು ಜೀವನ ಸಂಗಾತಿಯೆಂದು ಭಾವಿಸಿ ಸಂಯಮಿಯಾಗುತ್ತಾನೆ. ಗೌಡರು ಪರಿವಾರದೊಡನೆ ಯಾತ್ರೆ ಕೈಗೊಂಡಾಗ ತಾಯಿ ಜೊತೆಗೂಡಿ ಕಾನೂರಿಗೆ ಬಂದ ಸುಬ್ಬಮ್ಮ ಗಂಗೆಯೊಡನೆ ಕಾದಾಡಿ ಒಡವೆಗಳನ್ನು ಒಯ್ದು ಹೂವಯ್ಯನಲ್ಲಿಡುತ್ತಾಳೆ. ಬರಿಗೈಯಲ್ಲಿ ತವರು ಮನೆ ಸೇರಿ ಅಣ್ಣ, ಅತ್ತಿಗೆ, ತಂದೆ-ತಾಯಿಯರ ಕೋಪಕ್ಕೆ ಗುರಿಯಾಗುತ್ತಾಳೆ. ಊರ ಜನರ ಕಡುನಿಂದನೆಗಳಿಂದ ಬೇಸರಗೊಳ್ಳುತ್ತಾಳೆ. ರಾಮಯ್ಯನೊಂದಿಗೆ ಇರಲು ಒಪ್ಪದ ಸೀತೆಯ ನಡವಳಿಕೆಯನ್ನು ಚಂದ್ರಯ್ಯ ಗೌಡರು ಸವಾಲಾಗಿ ಸ್ವೀಕರಿಸುತ್ತಾರೆ. ವೆಂಕಟಪ್ಪ ಜೋಯಿಸರ ಹೇಳಿಕೆಯಂತೆ ಸೀತೆಯ ಎರಡು ಕೈಗಳಿಗೆ ಬರೆ ಹಾಕುತ್ತಾರೆ. ಆ ರಾತ್ರಿಯೇ ಸೀತೆ ಕೆಳಕಾನೂರಿಗೆ ಓಡಿ ಬಂದು ರಾಮಯ್ಯ ಕಟ್ಟಿದ ತಾಳಿಯನ್ನು ಕಿತ್ತೆಸೆದು ಅವನನ್ನು ಗಂಡನೆಂದು ಒಪ್ಪದೇ ತಂದೆ ಮನೆ ಸೇರುತ್ತಾಳೆ. ಹೀಗಿರುವಾಗ ಮಗನ ಮದುವೆ ಚಿಂತೆಯಲ್ಲಿ ನಾಗಮ್ಮ ತೀರಿಕೊಂಡಾಗ ಹೂವಯ್ಯ ವೇದಾಂತದೆಡೆಗೆ ವಾಲುತ್ತಾನೆ.

ಚಂದ್ರಯ್ಯಗೌಡರು ಕಾಯಿಲೆಯಿಂದ ಅಸ್ವಸ್ಥರಾದಾಗ ಸುಬ್ಬಮ್ಮ ಕಾನೂರಿಗೆ ಬಂದು ಪತಿಯ ಸೇವೆಯಲ್ಲಿ ನಿರತಳಾಗುವಳು. ತನ್ನ ತಪ್ಪನ್ನರಿತ ಗೌಡರು ಗಂಗೆಯನ್ನು ದ್ವೇಷಿಸಿ ಹೆಂಡತಿಯೊಂದಿಗೆ ಸುಖವಾಗಿರಲು ಅಪೇಕ್ಷಿಸಿ ಸಾವನ್ನಪ್ಪಿದಾಗ ವಿಧವೆ ಸುಬ್ಬಮ್ಮ ದುಃಖಪಡುತ್ತಾಳೆ.

ಹೆಗ್ಗಡಿತಿಯಾಗಿ ಮನೆಯ ಅಧಿಕಾರ ವಹಿಸಿಕೊಂಡು ಮನೆತನದ ಹೊಣೆಯನ್ನು ನಿರ್ವಹಿಸುತ್ತಾಳೆ. ಆದರೆ ಸೇರೆಗಾರ ರಂಗಪ್ಪನ ಚೇಷ್ಟೆಗಳಿಂದ ಸುಬ್ಬಮ್ಮಳ ಲೈಂಗಿಕ ಆಸಕ್ತಿ ಚಿಗುರಿ, ಸೇರೆಗಾರನೊಂದಿಗೆ ಸುಖಪಡುತ್ತಾಳೆ. ಗರ್ಭವತಿಯಾದಾಗ ಸಮಾಜದ ನಿಯಮಾವಳಿಗೆ ಹೆದರಿ ಗರ್ಭಪಾತಕ್ಕಾಗಿ ಚಿಂತಿಸುತ್ತಾಳೆ. ಗಂಗೆ ಕೊಟ್ಟ ಔಷಧಿಯನ್ನು ಬಳಸುವ ಕ್ರಮವನ್ನರಿಯದೇ ಸೇವಿಸಿ ದುರ್ಮರಣವನ್ನಪ್ಪುತ್ತಾಳೆ. ಇದರಿಂದ ರಾಮಯ್ಯನ ಸ್ವಾಭಿಮಾನಕ್ಕೆ ಧಕ್ಕೆಯುಂಟಾಗಿ ಮನೆತನಕ್ಕೆ ಮಸಿಬಳೆದಳು ಎಂದು ಭಾವಿಸಿ ವಿಷ ಸೇವನೆ ಮಾಡಿ ಪ್ರಾಣ ಬಿಡುತ್ತಾನೆ.

ಈ ಎಲ್ಲಾ ಘಟನೆಗಳಿಂದ ವ್ಯಸನಿಯಾದ ಹೂವಯ್ಯ ಕೊನೆಗೆ ಕಾನೂರಿಗೆ ಬಂದು ನೆಲೆಸುತ್ತಾನೆ. ಸೀತೆ ತನ್ನ ಎರಡನೆಯ ಜೀವದಂತಿದ್ದ ತಂಗಿ ಲಕ್ಷ್ಮೀಯೊಡಗೂಡಿ ಕಾನೂರಿಗೆ ಬಂದು ನೆಲೆಸುವುದರೊಂದಿಗೆ ಸಮಾಜ ಸುಧಾರಣೆಯ ಕೆಲಸಗಳಲ್ಲಿ ಹೂವಯ್ಯನಿಗೆ ನೆರವಾಗುತ್ತಾಳೆ. ಇವರಿಬ್ಬರೂ ಒಡಲ ಸೋಂಕಿನ ಗೊಡವೆ ಇಲ್ಲದ ಪ್ರೇಮ ಸಂಬಂಧವನ್ನು ಅಪ್ಪಿಕೊಂಡು ಸಮಾಜ ಸೇವೆಗೆ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ.

**೧೭. ಸರಸಮ್ಮನ ಸಮಾಧಿ(೧೯೩೭)**

ವಕೀಲ ತಿಮ್ಮಪ್ಪಯ್ಯನ ಹೆಂಡತಿ ಜಾನಕಿ ತನ್ನ ಜೀವನದ ದುರಂತ ಕಥೆಯನ್ನು ಹೇಳುವಾಗ ಮೈ ಬೆವೆತು, ಹಣೆಯ ಬೆವರು ಒರೆಸಿಕೊಂಡಾಗ ಸ್ನೇಹಿತೆ ಸೀತೆ, ಕುಂಕುಮದ ನೀರನ್ನೇ ರಕ್ತವೆಂದು ಭಾವಿಸುತ್ತಾಳೆ. ಆದರೆ ಜಾನಕಿಯ ದಾಂಪತ್ಯ ಜೀವನ ಸುಖಕರವಾಗಿರಲಿಲ್ಲ. ಮದುವೆಯಾಗಿ ಗಂಡನಿಂದ ಕಾಣಲಿಚ್ಚಿಸುವ ಸುಖವನ್ನು ನೆನೆದು ದುಃಖ ಪಡುತ್ತಾಳೆ. ಜಾನಕಿಯಂತೆ ವಿಧವೆ ಸೀತೆ ಸಹ ಸಮಸ್ಯೆಗಳಲ್ಲಿ ಬೆಂದವಳಾಗಿದ್ದು ಎಲ್ಲವನ್ನು ಹಣೆಬರಹವೆಂದೇ ನಂಬಿ ಸಮಧಾನಪಡಿಸುತ್ತಾಳೆ.

ಮಂಜೇಶ್ವರದ ಅಣ್ಣಪ್ಪ ಕಮ್ತಿ ಹಾಗೂ ವಿದ್ಯಾವಂತೆ ಸುನಾಲಿನಿ ಹೊಸದಾಗಿ ಮದುವೆಯಾದ ನವ ದಂಪತಿಗಳು. ಇವರ ದಾಂಪತ್ಯ ಜೀವನ ಸುಖಮಯವಾಗುವ ಬದಲು ವಿಷಮಯವಾಗಿ ಸಾಗಿತು. ಇದರಿಂದ ಸುನಾಲಿನಿ 'ಸರಸಮ್ಮನ ಸಮಾಧಿ'ಯನ್ನು ಸುತ್ತಿದಳಾದರೂ ಫಲ ನೀಡಲಿಲ್ಲ.

ಸಂಪ್ರದಾಯಸ್ಥೆ ಮನೆತನದ ಹಿರಣಯ್ಯ-ಭಾಗೀರಥಿ ಮದುವೆಯಾದ ಹೊಸದರಲ್ಲಿ ಮುಕ್ತ ಪ್ರಣಯಕ್ಕಾಗಿ ಹಾತೊರೆದು, ತಂದೆ ವೆಂಕಟರಮಣಯ್ಯನ ಕೋಪಕ್ಕೆ ಗುರಿಯಾಗುತ್ತಾರೆ. "ಹೆಂಡತಿ ಮನೆಗೆ ಬಂದಳು ಎಂದು ನಾಯಿಯ ಹಿಂದಿನ ಬಾಲವಾಗುವುದಿಲ್ಲ ಯಾವುದು ಎಲ್ಲೆಲ್ಲಿರಬೇಕೋ ಅದು ಅಲ್ಲಲ್ಲಿ ಇದ್ದರೇನೆ ಚಂದ. ಕಾಲಿನದ್ದು ಕಾಲಿಗೆ! ತಲೆಗಲ್ಲ"[೨೫] ಎಂಬ ವೆಂಕಟರಮಣಯ್ಯನ ಮಾತಿಗೆ ಹೆಂಡತಿಯು ಧ್ವನಿಗೂಡಿಸುತ್ತಾಳೆ. ಇದನ್ನು ಅರಿತ ಭಾಗೀರಥಿಯ ಅಭಿಮಾನಕ್ಕೆ ಬರೆ

ಎಳೆದಂತಾಗಿ ತವರಿಗೆ ಹೋದವಳು ಕಾಲಿನದ್ದಾಗಿ ಬರಲು ಇಚ್ಛಿಸುವುದಿಲ್ಲ. ಭಾಗೀರಥಿ ತವರಿನಲ್ಲಿದ್ದಾಗ ಚಂದ್ರಯ್ಯ ಮತ್ತು ಭಾಗೀರಥಿಯ ಮನಸ್ಸು ಒಂದುಗೂಡುವುದು. ಆದರೆ ಭಾಗೀರಥಿಗೆ ಗಂಡನಿರುವ ಕಾರಣ ಚಂದ್ರಯ್ಯ ಮತ್ತೆ ಭೇಟಿ ಮಾಡುವುದಿಲ್ಲ. ಬೇರೊಂದು ಮದುವೆಗೆ ಸಿದ್ಧನಿರದ ಹಿರಣಯ್ಯನಿಗೆ ಮದುವೆ ಸಿದ್ಧತೆ ನಡೆದು, ಅದು ಭಾಗೀರಥಿಯ ಕಿವಿಗೂ ಬೀಳುತ್ತದೆ. ಇದರಿಂದ ಮತ್ತೆ ಚಂದ್ರಯ್ಯನ ನೆನಪಾಗುತ್ತದೆ. ಇದೇ ಸಮಯಕ್ಕೆ ಚಂದ್ರಯ್ಯನ ಆಗಮನವಾಗಿ ಈರ್ವರು ಮುಕ್ತವಾಗಿ ಮಾತನಾಡುತ್ತಾರೆ. ಮರುದಿನ ಸಂಜೆ ಭಾಗೀರಥಿಯನ್ನು ಕರೆದೊಯ್ಯುವುದಾಗಿ ವಚನವಿತ್ತಿರುವಾಗ, ಹಿರಣಯ್ಯ ಹೆಂಡತಿಗಾಗಿ ಮನೆಯನ್ನು ತೊರೆದು ಬರುತ್ತಾನೆ. ಆಗ ಚಂದ್ರಯ್ಯ ಅನಿವಾರ್ಯವಾಗಿ ಊರಿಗೆ ಮರಳುತ್ತಾನೆ. ಮೊದಮೊದಲು ಭಾಗೀರಥಿ ಗಂಡ ಹಿರಣಯ್ಯನನ್ನು ತಿರಸ್ಕರಿಸುವಳಾದರೂ ತನ್ನ ಮನದಲ್ಲಾದ ಬದಲಾವಣೆಗಳನ್ನು ತಿಳಿಸುತ್ತಾಳೆ. ಅದಕ್ಕೆ ಹಿರಣಯ್ಯ ತನ್ನ ತಪ್ಪನ್ನು ಒಪ್ಪಿಕೊಂಡು ತಾನು ಒಂಟಿಯಾಗಿ ಬಾಳಲು ಸಾಧ್ಯವಿಲ್ಲವೆಂದಾಗ ಇಬ್ಬರು ಒಂದಾಗುತ್ತಾರೆ.

ರಾತ್ರಿ ನಿದ್ರೆ ಬಾರದೆ ಪ್ರೇತವನ್ನು ಕಾಣಲು ಗುಡ್ಡದೆಡೆ ಬರುವ ಚಂದ್ರಯ್ಯನಿಗೆ ಪ್ರೇತ ಬೆಳ್ಯಕ್ಕ ಪ್ರತ್ಯಕ್ಷಳಾಗಿ ತನ್ನ ನಿಜ ಜೀವನದಲ್ಲಿ ಪಡೆಯದ ಸುಖವನ್ನು ಚಂದ್ರಯ್ಯನಿಂದ ಪಡೆಯಲು ಪರಿಪರಿಯಿಂದ ಬೇಡುತ್ತಾಳೆ.

ಮೂವರನ್ನು ಮದುವೆಯಾಗಿದ್ದ ವಿಧುರ ಸೀತಾರಾಮ, ಏನು ಅರಿಯದ ಹಳ್ಳಿಯ ಬಾಲೆ ನಾಗವೇಣಿಯನ್ನು ಮದುವೆಯಾಗುತ್ತಾನೆ. ರಾತ್ರಿ ನಿದ್ರೆಯಲ್ಲಿ ಗಂಡನ ಬಾಹುಗಳಲ್ಲಿ ಬಂಧಿಯಾಗಿ ಅನಿವಾರ್ಯವಾಗಿ ಕಷ್ಟ ಅನುಭವಿಸುತ್ತಾಳೆ. ಗಂಡನನ್ನು ತಿರಸ್ಕರಿಸಿ ತಂದೆಯ ಮನೆ ಸೇರುತ್ತಾಳೆ.

ಗಂಡ ಹಾಗೂ ಅತ್ತೆಯಿಂದ ಅವಮಾನಿತಳಾದ ಸುನಾಲಿನಿ ನಾನು ಬೇಕೆಂದಿದ್ದಾದರೆ ಮಾತ್ರ... ಬರಿಯ ಭೋಗಕ್ಕಲ್ಲ ಎಂದು ವಾದಿಸುತ್ತಾಳೆ. ಅತ್ತೆಯಾದವಳು ಮಗನಿಗೆ ಬೇರೊಂದು ಮದುವೆ ಮಾಡುವೆನೆಂದಾಗ ಸುನಾಲಿನಿ ನಾನು ನಿಮ್ಮಂತೆಯ ನಾಲ್ಕು ಜನರನ್ನು ಇದೇ ಮನೆಯಲ್ಲಿ ತಂದಿಟ್ಟು ಕೊಳ್ಳಬಲ್ಲೆನೆಂದು ಪ್ರತಿಭಟಿಸುತ್ತಾಳೆ. ಜೀವನವೇ ಬೇಸರವಾಗಿ ಕೆರೆಗೆ ಹಾರಿದಾಗ ಚಂದ್ರಯ್ಯನೇ ಕಾಪಾಡುತ್ತಾನೆ. ಕೊನೆಯಲ್ಲಿ ಸುನಾಲಿನಿ ತಂದೆಯ ಮನೆಯಲ್ಲಿ ಸ್ವತಂತ್ರವಾಗಿ ಜೀವಿಸುತ್ತಾಳೆ.

ಹೆಣ್ಣಿನ ಅಗೋಚರ ಚಿತ್ರಗಳನ್ನು ನೆನೆದ ಚಂದ್ರಯ್ಯ ಪ್ರೇತದಲ್ಲಿ ಜೀವವನ್ನು ಕಾಣುತ್ತಾನೆ. ರಾತ್ರಿ ಬೆಟ್ಟಕ್ಕೆ ನಡೆಯಲು ಬೆಳ್ಯಕ್ಕ ಪ್ರತ್ಯಕ್ಷಳಾಗಿ ಮನದ ವೇದನೆಯನ್ನು ತೋಡಿಕೊಳ್ಳುವಳು. ಆಗ ಚಂದ್ರಯ್ಯ ಒಂದು ಜೀವನ ಬಯಕೆಯೆಂದು ಭಾವಿಸಿ ಈಡೇರಿಸಲು ಒಪ್ಪಿಕೊಳ್ಳುವನು. ಬೆಳ್ಯಕ್ಕನ

ಕೈ ಹಿಡಿದು ಸರಸಮ್ಮನ ಗುಡಿಯೊಳಗೆ ಎಳೆದೊಯ್ದು ಚಂದ್ರಯ್ಯ ಆಲಂಗಿಸಿ ಇದು ಮದುವೆ ಎನ್ನುವುದಕ್ಕಿಂತ ಮೊದಲೇ ಬೆಳ್ಯಕ್ಕ ಚೀರಿ ಹೊರಕ್ಕೆ ಓಡಿ ಬರುತ್ತಾಳೆ. ಕಾರಣ ಕೇಳಿದಾಗ ತನ್ನ ವೈವಾಹಿಕ ಜೀವನದ ದುರಂತ ಕಥೆಯನ್ನು ಹೇಳುತ್ತ, ಇದು ನನ್ನನ್ನು ಬಲವಂತವಾಗಿ ಗಂಡನೊಂದಿಗೆ ಸುಟ್ಟ ಸ್ಥಳ. ನನ್ನನ್ನು ಮಹಾಸತಿಯನ್ನಾಗಿ ಮಾಡಿ ವೈಭವೀಕರಿಸಿದ್ದಾರೆ. ಅದ್ದರಿಂದಲೇ ಇಲ್ಲಿ ನನ್ನನ್ನು ನನ್ನ ಪತಿಯ ಪ್ರೇತ ಅಂಕೆಯಲ್ಲಿಡುತ್ತದೆ ಎಂದು ನಿಜ ವೃತ್ತಾಂತ ವನ್ನು ಹೇಳುವುದರೊಂದಿಗೆ ಕಾದಂಬರಿ ಕೊನೆಗೊಳ್ಳುತ್ತದೆ.

ಕಾದಂಬರಿಯ ಮಹತ್ವವನ್ನು ಕುರಿತು ಕೀರ್ತಿನಾಥ ಕುರ್ತುಕೋಟಿ ಅವರು ಸತ್ತರೂ ದಂತಕತೆಯಾಗಿ ಬದುಕಿರುವ ಸರಸಮ್ಮನ ಸಮಾಧಿಯ ಸುತ್ತಲೂ ವಿಷಮ ದಾಂಪತ್ಯದ ಜೀವಂತ ಭೂತ ಪಂಜು ಹಿಡಿದುಕೊಂಡು ನಿಂತಿದೆ. ವ್ಯಕ್ತಿಗಳಲ್ಲಿಯ ರಹಸ್ಯವೇ ಕಾದಂಬರಿಯ ಕ್ರಿಯೆಗೆ ಪ್ರೇರಕ ಶಕ್ತಿಯಾಗಿರುವುದು ಕಾದಂಬರಿಯ ಏಕಸೂತ್ರತೆಗೆ ಮಹಾಪತಿವ್ರತೆಯಾಗಿದ್ದ ಸರಸಮ್ಮ ದಾಂಪತ್ಯದ ಅತೃಪ್ತಿಯಿಂದ ಪ್ರೇತವಾದ ಬೆಳ್ಯಕ್ಕನೆ ಎಂಬ ದೊಡ್ಡ ರಹಸ್ಯ ಕಾದಂಬರಿಯ ವಿಡಂಬನದ ಶಿಖರವಾಗಿದೆ"[೨೬] ಎಂದಿದ್ದಾರೆ. ಸತಿಯನ್ನಾಗಿ ಮಾಡಿ ಉನ್ನತ ಸ್ಥಾನಕ್ಕೇರಿಸಿದ ಹೆಣ್ಣಿನ ಜೀವನದ ದುರಂತವನ್ನು ಪ್ರೇತ ಬೆಳ್ಯಕ್ಕನಿಂದ ಹೇಳಿಸುವ ಕಾರಂತರ ಜಾಣತನ ಇಲ್ಲಿ ಮೆಚ್ಚುವಂತಿದೆ.

### ೧೮. ಮರಳಿ ಮಣ್ಣಿಗೆ(೧೯೪೨)

ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಗ್ರಾಮೀಣ ಬ್ರಾಹ್ಮಣ ಪುರೋಹಿತ ಕುಟುಂಬದ ಸ್ತ್ರೀಯರ ವಿವಿಧ ನೆಲೆಗಳಲ್ಲಿಯ ಬದಲಾವಣೆಗಳನ್ನು ಪ್ರತಿಬಿಂಬಿಸುತ್ತದೆ.

ಮರಳಿ ಮಣ್ಣಿಗೆಯಲ್ಲಿ ಮೂರು ತಲೆಮಾರುಗಳ ಕಥೆ ಒಂದಕ್ಕೆ ಒಂದು ಬೆಸೆದುಕೊಂಡು ಬೆಳೆದಿದೆ. ಬಡತನದ ಕೋಟಲೆಯಲ್ಲಿ ಈ ತಲೆಮಾರಿನವರು ಬದುಕಿನ ಮರ್ಮವೇನೆಂಬುದನ್ನು ಕಂಡುಕೊಂಡ ಕತೆ ಇದರ ಮುಖ್ಯ ವಸ್ತು.

ಕೋಟ ಗ್ರಾಮದ ಬ್ರಾಹ್ಮಣ ಪುರೋಹಿತ ವೃತ್ತಿಯ ಕೋದಂಡ ಐತಾಳರ ಮಗ ರಾಮ, ಐತಾಳರು, ಇವರ ಪತ್ನಿ ಪಾರ್ವತಿ ಹಾಗೂ ಐತಾಳರ ತಂಗಿ ಬಾಲ ವಿಧವೆ ಸರಸ್ವತಿ ಈ ಮೂರು ಜನರನ್ನೊಳಗೊಂಡ ಕೌಟುಂಬಿಕ ಜೀವನ ಸುಖಮಯವಾದುದು. ದಯೆ, ಕರುಣೆ, ಸಹನಾಶೀಲಳಾದ ಪಾರ್ವತಿ ಹಾಗೂ ನಿಸ್ವಾರ್ಥ ಬದುಕಿನ ಸರಸ್ವತಿ ದೇವರಲ್ಲಿ ನಂಬಿಕೆಯುಳ್ಳವರು. ಮನೆಗೆಲಸ, ಹೊಲಗೆಲಸ ಯಾವುದೇ ಇದ್ದರೂ ಸಮಭಾಗಿಗಳಾಗಿ ದುಡಿಯುತ್ತಿದ್ದರು. ಮದುವೆಯಾಗಿ ಹದಿನೈದು ವರ್ಷಗಳು ಗತಿಸಿದರೂ ಪಾರ್ವತಿಗೆ ಮಕ್ಕಳಾಗಲಿಲ್ಲ. ಸಂಸಾರಕ್ಕೆ ಬಂದು ಬಂಜೆಯಾಗಿ

ಸಾಯಬೇಕೆ? ಎಂಬುದೊಂದು ಸಿಡಿಲು ಮನಸ್ಸನ್ನು ಹಾಯ್ದರೆ ಜೀವ ಏತಕ್ಕೂ ಬೇಡವೆನಿಸುತ್ತದೆ. ಅವಳು ಮೈತುಂಬಿದ ಆ ಗಳಿಗೆಯಿಂದ ಇಂದಿನತನಕ ತಾಯಾಗುವ ಹಂಬಲ ತೊಟ್ಟವಳು. ಮೊದಲಲ್ಲಿ ಆ ಬಯಕೆಯು ಕನಸಿನ ಸ್ವರ್ಗದಲ್ಲಿ ಅವಳನ್ನು ತೇಲಿಸಿತು. ಐದಾರು ವರ್ಷ ಅಂತೆಯೇ ಕಳೆಯಲು ಕಾಲವೆಲ್ಲ ಬೇಡಿಕೆ, ಹರಕೆ, ಆಸೆಗಳಲ್ಲಿಯೇ ಮುಗಿಯಿತು. ಹತ್ತು ವರ್ಷವಾದರೂ ಹಾಗೆಯೇ ಇದ್ದುದ್ದನ್ನು ಕಂಡು ತಾನು ಪಾಪಿ, ತನ್ನ ಪೂರ್ವಕರ್ಮದ ಫಲ ಅನುಭವಿಸುತ್ತಿದ್ದೇನೆ ಎಂದು ಹಳಹಳಿಸುತ್ತಾಳೆ. ಈಕೆಗೆ ಸರಸ್ವತಿ ಎಂದರೆ ತುಂಬಾ ಪ್ರೀತಿ, ಅಷ್ಟೇ ಗೌರವ. ತನ್ನ ಬಂಜೆತನದ ಕೊರಗೊಂದನ್ನು ಗೌರವಿಸುವುದರಲ್ಲಿಯೇ ಮರೆತು ಸಂತಸಪಡುತ್ತಾಳೆ. ಸರಸ್ವತಿಯೂ ಅಷ್ಟೇ ಪಾರ್ವತಿಯ ಸುಖ ದುಃಖಗಳಲ್ಲಿ ಭಾಗಿಯಾಗಿ ಸಮಾಧಾನ ಮಾಡುತ್ತಾಳೆ.

ಮಗುವನ್ನು ದತ್ತಕ ತೆಗೆದುಕೊಳ್ಳುವ ವಿಚಾರದಲ್ಲಿ ರಾಮೈತಾಳರಿಗೆ ನಂಬಿಕೆಯಿಲ್ಲ. ಹೆಂಗಸರು ಕೇಳಿದರೆ ಹೆಂಗಸರಿಗೇಕೆ ಈ ಪಾರುಪತ್ಯ ಎಂದಷ್ಟೇ ಹೇಳಿ ಹಾರಿಕೆಯ ಉತ್ತರ ನೀಡುತ್ತಾರೆ. ಎರಡನೆಯ ಮದುವೆ ಸಿದ್ಧತೆ ನಡೆಸುವವರಾದರು ಯಾರಿಗೂ ತಿಳಿಯದು. ಇದರಿಂದಾಗಿ ಕೋಪಗೊಂಡ ಸರಸ್ವತಿ ಮಾವನ ಮನೆಗೆ ಹೊರಟು ನಿಂತಾಗ "ಸರಸೋತಿ, ನೀನು ಅವರ ಮೇಲೆ ಸಿಟ್ಟುಗೊಂಡ ಹಾಗೆ ಕಾಣುತ್ತದೆ. ಯಾಕೆ ಸಿಟ್ಟಾಗುತ್ತೀ! ಹೆಣ್ಣಾದವಳಿಗೆ ಯಾವ ಮನೆಯಲ್ಲಿ ಏನು ಸಿಕ್ಕೀತು? ನೀನು ಆ ಮನೆಗೆ ಹೋದರೆ ಏನು ಸುಖ?"[೨೭] ಎಂದು ಪಾರ್ವತಿ ಸಮಾಧಾನ ಪಡಿಸುವಳಾದರೂ ಪ್ರಯೋಜನವಾಗಲಿಲ್ಲ. ಸರಸ್ವತಿ ಹೋಗಿಯೇ ಬಿಟ್ಟಳು ಎಂದೂ ಅಗಲದ ಪಾರ್ವತಿಯ ಕಣ್ಣೀರು ನೀರಾಗಿ ಹರಿಯಿತು.

ಎರಡನೆಯ ಮದುವೆಯಾಗಿ ಸವತಿ ಬರುವಳೆಂಬ ಸುದ್ದಿ ಕಿವಿಗೆ ಬೀಳುತ್ತಲೇ ಒಂದು ಕ್ಷಣ ಪಾರ್ವತಿಯ ಹೊಟ್ಟೆ ಉರಿದಂತಾಗುತ್ತದೆ. ಆದರೂ ಮನದಲ್ಲಿಯೇ ಅದುಮಿಟ್ಟುಕೊಂಡು ಮದುವೆ ಮಾಡುತ್ತಾಳೆ. ಸತ್ಯಭಾಮೆ ರಾಮೈತಾಳರ ಎರಡನೇ ಪತ್ನಿಯಾಗಿ ಮನೆ ಸೇರಿದಳು. ಮನೆ ಮಂದಿಯ ಮೆಚ್ಚಿಗೆ ಗಳಿಸಿದಳು. ಒಂದು ವರ್ಷದಲ್ಲಿಯೇ ಲಕ್ಷ್ಮೀ ನಾರಾಯಣನೆಂಬ ಗಂಡು ಮಗುವನ್ನು ಹೆತ್ತಳು. ಲಚ್ಚ ಬೆಳೆದು ದೊಡ್ಡವನಾಗುತ್ತಲೇ ದೊಡ್ಡಮ್ಮಳನ್ನು ಬಿಟ್ಟು ಅರೆಕ್ಷಣವು ಇರುವಂತಿರಲಿಲ್ಲ. ಇದರಿಂದ ಪಾರ್ವತಿ ಮತ್ತು ಸತ್ಯಭಾಮೆಯರಲ್ಲಿ ಮನಸ್ತಾಪವು ಆಯಿತು. ಈ ಸಮಯಕ್ಕೆ ಸತ್ಯಭಾಮೆ ಸುಬ್ಬಮ್ಮಳನ್ನು ಹೆತ್ತಳು. ಲಚ್ಚನಿಗೆ ಉಪನಯನವಾಗಿ ಸರಕಾರಿಯ ಇಂಗ್ಲೀಷ್ ಶಾಲೆಗೆ ಸೇರಿದ. ಪ್ರಾರಂಭದಲ್ಲಿ ಚೆನ್ನಾಗಿಯೇ ಅಭ್ಯಾಸ ಮಾಡಿದ. ಮುಂದಿನ ಅಭ್ಯಾಸ ಕುಂದಾಪುರದಲ್ಲಿ ಸಾಗಿತು. ಲಚ್ಚ ಉಡಾಳನಾದ, ಲೈಂಗಿಕತೆಯಲ್ಲಿ ಹೆಚ್ಚಿನ ಒಲವು ಗಳಿಸಿಕೊಂಡ. ಚೆಲುವೆ ಸಂಜೀವಿನಿಯೊಂದಿಗೆ ಸಂಪರ್ಕ ಬೆಳೆಸಿ ಇದ್ದ ಹಣವನ್ನು ಖರ್ಚು ಮಾಡಿದ. ಇಷ್ಟು ಸಾಲದಕ್ಕೆ ಹೊಟೇಲಿನ ಮಾಲೀಕ ಕಿಚ್ಚನ ಹೆಂಡತಿ ಜಲಜೆಯೊಂದಿಗೂ

ಸಂಪರ್ಕ ಬೆಳೆಸಿದ. ಮರ್ಯಾದೆಗೆಟ್ಟ ಮಗ ಲಚ್ಚನ ಕೊರಗಿನಲ್ಲಿಯೇ ಪಾರ್ವತಿ ಸ್ವರ್ಗಸ್ಥಳಾಗುತ್ತಾಳೆ. ಐತಾಳರ ಒಬ್ಬಳೇ ಮಗಳು ಸುಬ್ಬಮ್ಮಳನ್ನು ಮದುವೆ ಮಾಡಿಕೊಡುತ್ತಾರೆ. ತನ್ನ ತಂಗಿಗೆ ಹಣ ಖರ್ಚು ಮಾಡಿದ್ದು, ತನಗೇಕೆ ಕೊಡುವುದಿಲ್ಲವೆಂದು ಲಚ್ಚ ತಂದೆಯ ಮೇಲೆ ಕೋಪಗೊಳ್ಳುತ್ತಾನೆ. ಮನೆತನದ ಮರ್ಯಾದೆಯನ್ನೇ ಬೀದಿಗೆಳೆಯುತ್ತಾನೆ.

ಮರ್ಯಾದೆಗೆ ಹೆದರಿದ ತಂದೆ ಐರೋಡಿಯ ವಕೀಲ ಸದಾಶಿವಯ್ಯನ ಮಗಳು ನಾಗವೇಣಿ ಒಳ್ಳೆಯ ಕನ್ಯೆಯೆಂದು ನಿರ್ಧರಿಸುತ್ತಾನೆ. ನಾಗವೇಣಿ ಲಚ್ಚ ಮದುವೆಯಾಗಿ ನವದಂಪತಿಗಳಾಗುತ್ತಾರೆ. ನಾಗವೇಣಿ ಎರಡು ವರ್ಷಗಳಲ್ಲಿಯೇ ಮೈನೆರೆದು ದೊಡ್ಡವಳಾಗಿ ದಾಂಪತ್ಯದ ಸುಖವನ್ನು ಅನುಭವಿಸುತ್ತಾಳೆ. ಬಿ.ಎ. ಕಲಿಯಲೆಂದು ಮದ್ರಾಸಿಗೆ ಹೋದ ಲಚ್ಚ ವೇಶ್ಯೆಯೊಂದಿಗೆ ಸುಖ ಪಡುತ್ತಾನೆ. ಹಣ ಸಾಲದಕ್ಕೆ ಸಾಲ ಮಾಡುತ್ತಾನೆ.

ನಾಗವೇಣಿ ಗರ್ಭಿಣಿಯಾಗಿ ಮನೆ ಮಂದಿಗೆಲ್ಲ ಸಂತಸವುಂಟಾಗಿ ಮೂರು ತಿಂಗಳಲ್ಲಿಯೇ ಗರ್ಭಸ್ರಾವವಾಗಿ ರೋಗದಿಂದ ಬಳಲುತ್ತಾಳೆ. ಲಚ್ಚನ ಅನೈತಿಕ ಸಂಬಂಧದ ರೋಗವೇ ನಾಗವೇಣಿಯ ರೋಗಕ್ಕೆ ಕಾರಣವೆಂದು ತಿಳಿದಾಗ, ಮಗಳ ಭವಿಷ್ಯಕ್ಕಾಗಿ ತಂದೆ ಸದಾಶಿವಯ್ಯ ಮರುಗುತ್ತಾನೆ. ಮೊದಲು ನಾಗವೇಣಿ "ನನ್ನ ಬಾಳ್ವೆ ಕೆಡಿಸಲು ಬಂದ ಪ್ರಾಣಿ ಎಂದು ತಿಳಿಯುವಳಾದರೂ ದೈವಿಚ್ಛೆಯೆಂದೆ ಭಾವಿಸುತ್ತಾಳೆ."[೨೮] ಈ ವಿಷಯ ರಾಮೈತಾಳರ ಕಿವಿಗೆ ಬಿದ್ದಾಗ ಮಗನಾದ ಲಚ್ಚನನ್ನು ಥಳಿಸುತ್ತಾರೆ. ತನ್ನ ಪಾಲಿಗೆ ಸತ್ತನೆಂದೇ ಭಾವಿಸುತ್ತಾರೆ.

ಲಚ್ಚನ ಕೊರಗಿನಲ್ಲಿರುವಾಗ ರಾಮೈತಾಳರು ಅನಾರೋಗ್ಯಕ್ಕೆ ಈಡಾಗುವರು. ಮಾವನನ್ನು ನೋಡಲೆಂದು ಬಂದ ವಿದ್ಯಾಸಂಪನ್ನಳಾದ ನಾಗವೇಣಿ ಮಾವನ ಸೇವೆಗೆ ನಿಲ್ಲುತ್ತಾಳೆ. ಐತಾಳರು ನಾಗವೇಣಿಯನ್ನೆ ಮಗ–ಮಗಳು ಎಂಬುವುದಾಗಿ ಭಾವಿಸಿ ಆಸ್ತಿಯೆಲ್ಲವನ್ನು ಅವಳ ಹೆಸರಿಗೆ ಬರೆಸಿ ಪ್ರಾಣ ಬಿಡುತ್ತಾರೆ.

ಮುದುಕಿಯರು ನಾಗವೇಣಿಯನ್ನು ತಂದೆಯಲ್ಲಿಗೆ ಹೋಗಿ ಸುಖವಾಗಿರೆಂದು ಒತ್ತಾಯಿಸಿದರು. ನಾಗವೇಣಿ ಅವರನ್ನು ಬಿಟ್ಟು ಹೋಗಲು ಒಪ್ಪುವುದಿಲ್ಲ. ಮೂರು ವರ್ಷದ ಮೇಲೆ ಬಂದ ಲಚ್ಚ ನಾಗವೇಣಿಯ ಮೈಕಾಂತಿಗೆ ಸೋತು ಸವಿ ಮಾತುಗಳಿಂದ ಒಲಿಸಿಕೊಂಡು ತನ್ನ ಬಯಕೆಯನ್ನು ಈಡೇರಿಸಿಕೊಳ್ಳುವನು. ಎರಡನೆಯ ಬಾರಿ ಗರ್ಭಿಣಿಯಾದ ನಾಗವೇಣಿ ಗಂಡು ಮಗುವಿಗೆ ಜನ್ಮ ನೀಡಿದಳಾದರೂ ಆರು ತಿಂಗಳಲ್ಲಿ ತೀರಿಕೊಳ್ಳುತ್ತದೆ. ಸರಸ್ವತಿ, ಸತ್ಯಭಾಮೆ ಕಾಶಿಗೆ ತೆರಳಿದಾಗ ಲಚ್ಚ ರೋಗಗ್ರಸ್ಥ ಶರೀರವನ್ನೊತ್ತು ಊರು ಸೇರುವನು. ಕೆಲ ದಿನಗಳು ಕೆಲಸ ಮಾಡಿದಂತೆ ನಟಿಸಿ ನಾಗವೇಣಿಯನ್ನು ಮತ್ತೆ ಗರ್ಭವತಿ ಮಾಡಿ ಆಸ್ತಿಯೆಲ್ಲವನ್ನು ಮಾರಾಟ ಮಾಡಿ ಪರಾರಿಯಾದನು. ಆಗ ಪಶ್ಚಾತ್ತಾಪದಿಂದ ನಾಗವೇಣಿ ಭೂಮಿಯನ್ನು

ಗೇಣಿಗೆ ಪಡೆದು ವ್ಯವಸಾಯ ಆರಂಭಿಸುತ್ತಾಳೆ. ಹೀಗಿರುವಾಗ ನಾಗವೇಣಿ ರಾಮನಿಗೆ ಜನ್ಮ ನೀಡಿದಳು. ರಾಮನಿಗೆ ಎರಡು ವರ್ಷಗಳು ತುಂಬಿದಾಗ ಅಜ್ಜಿ ಸರಸ್ವತಿ ತೀರಿಕೊಂಡಳು. ಕೆಲದಿನಗಳಲ್ಲಿಯೇ ನಾಗವೇಣಿ ಹಾಗೂ ಮಗುವಿನ ಆರೋಗ್ಯ ಹದಗೆಟ್ಟ ಪರಿಸ್ಥಿತಿಯಲ್ಲಿ ಅತ್ತೆ ಸತ್ಯಭಾಮೆಯ ಸಂಸ್ಕಾರ ನಡೆದು ಹೋಗಿರುತ್ತದೆ.

ಮಗನ ಓದಿಗಾಗಿ ಮಂಗಳೂರಿನಲ್ಲಿ ತಂದೆ ತಾಯಿಯಲ್ಲುಳಿದಳು. ತಂದೆ ತೀರಿದ ಮೇಲೆ ವಿಧವೆ ತಾಯಿಯೊಂದಿಗೆ ಅಣ್ಣನ ಮನೆ ಸೇರಿದಳು. ಇಷ್ಟರಲ್ಲಿಯೇ ಮಗ ರಾಮನ ಮೆಟ್ರಿಕ್ ಪರೀಕ್ಷೆ ಮುಗಿದು ಊರಿಗೆ ಮರಳಿದಳು. ಮತ್ತೆ ಅದೇ ವ್ಯವಸಾಯದಲ್ಲಿ ತೊಡಗಿ ಜೀವನ ಸಾಗಿಸಿದಳು. ರಾಮ ಬಿ.ಎ.ಗಾಗಿ ಮದ್ರಾಸ್ ಸೇರಿ ಚಿಕ್ಕಪ್ಪ, ಚಿಕ್ಕಮ್ಮರ ಸಹಕಾರದಿಂದ ಅಭ್ಯಾಸದಲ್ಲಿ ತೊಡಗಿದ. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿದ. ಹೀಗಿರುವಾಗ ನಾಗವೇಣಿಯ ತಾಯಿ ತೀರಿಕೊಂಡಳು. ಆದರೂ ನಾಗವೇಣಿ ಮಗನ ಓದನ್ನು ನಿಲ್ಲಿಸಲಿಲ್ಲ. ರಾಮ ಬಿ.ಎ. ಪೂರ್ಣಗೊಳಿಸಿ ನೌಕರಿಗಾಗಿ ಅಲೆದ. ನರಸಿಂಹಯ್ಯನ ತಮ್ಮ ಜನಾರ್ಧನ ಹೋಟೆಲಿನ ಮ್ಯಾನೇಜರಾಗಿ ಕೆಲಸ ಮಾಡಿದ. ಇದೆಲ್ಲದರಿಂದ ಬೇಸತ್ತು ಮುಂಬೈಗೆ ತೆರಳಿದದನು. ನೌಕರಿ ಸಿಗದೇ ಪಿಟೀಲು ಬಾರಿಸುವ ಪಾಠ ಹೇಳಿ ಜೀವನ ಸಾಗಿಸಿದನಾದರೂ, ಕೊನೆಗೆ ತಾಯಿಯ ಆದೇಶದಂತೆ ಊರಿಗೆ ಮರಳಿದನು.

ಮಾಸ್ತರಿಕೆ ಕೆಲಸದೊಂದಿಗೆ ವ್ಯವಸಾಯ ಕೈಗೊಂಡು ಕಷ್ಟಪಟ್ಟು ದುಡಿದನು. ತಂದೆಯಿಂದ ಮಾರಾಟವಾದ ಆಸ್ತಿಯೆಲ್ಲವನ್ನು ಮರಳಿ ಖರೀದಿಸಿ ಸುಖದಿಂದ ಜೀವಿಸಿದನು. ತಾಯಿ ನಾಗವೇಣಿಗೆ ಸಂತಸವನ್ನುಂಟು ಮಾಡಿದನು. ಹೀಗೆ 'ಮರಳಿ ಮಣ್ಣಿಗೆ' ಕಾದಂಬರಿ ಪ್ರಾರಂಭವಾಗುವುದೇ ರಾಮೈತಾಳರ ಮತ್ತು ಪಾರೋತಿಯರ ಮದುವೆಯ ವರ್ಣನೆಯಿಂದ ಇದು ಕಾದಂಬರಿಯ ಜೀವನ ಕ್ರಮದಲ್ಲಿ ಒಂದು ಮಹತ್ವದ ಹಂತ.

ಈ ಮದುವೆಯಿಂದ ಒಂದೆಡೆ ಸೇರಿದ ಐತಾಳರು ಪಾರ್ವತಿ, ಸರಸ್ವತಿಯರು ಅಷ್ಟೇನೂ ಸಹಾನುಭೂತಿ ಪರವಲ್ಲದ ಪ್ರಕೃತಿಯೊಂದಿಗಿನ ಬದುಕಿನ ಹೋರಾಟದಲ್ಲಿ ಪಾಲುಗೊಳ್ಳುತ್ತಾರೆ. ಇದೊಂದು ವಿಶೇಷವೆಂದು ಅನಿಸಿದಷ್ಟು ಅವರಿಗೆ ಅದು ರಕ್ತಗತವಾಗಿ ಬಿಟ್ಟಿದೆ. "ಪೂರ್ವಜನ್ಮದ ಕರ್ಮದಂತೆ ಹೋರಾಟ ಅವರಿಗೆ ಅನಿವಾರ್ಯವೂ, ಸಹಜವೂ ಆಗಿದೆ. ಅವರ ನಡುವೆ ಆಗಾಗ ವಿರಸ ತಲೆದೂರಿದರೂ ಈ ಹೋರಾಟದ ಗುಂಗು ಅವರನ್ನು ಭದ್ರವಾಗಿ ಒಂದೆಡೆ ಕೂಡಿಸಿ ಹಿಡಿಯುತ್ತದೆ. ಈ ಹೋರಾಟದ ಉತ್ಕಟತೆಯೇ ಅವರ ಬದುಕಿನ ಇನ್ನುಳಿದ ದುಃಖವನ್ನು ನುಂಗಿ ಜೀವನಕ್ಕೊಂದು ಅರ್ಥ ಕೊಡುತ್ತದೆ"[೨೯] ಎನ್ನುವ ಗಿರಡ್ಡಿ ಗೋವಿಂದರಾಜ ಅವರ ಹೇಳಿಕೆ ಕಾದಂಬರಿಯ ಮಹತ್ವವನ್ನು ಎತ್ತಿ ತೋರಿಸಿದೆ.

## ೧೯. ಬೆಟ್ಟದ ಜೀವ(೧೯೪೩)

ಬೆಟ್ಟದ ಜೀವದಲ್ಲಿ ಗೋಪಾಲಯ್ಯ, ಶಂಕರಿ ಮೊದಲಾದ ಪಾತ್ರಗಳ ಚಿತ್ರಣ ಸುಂದರವಾಗಿದೆ. ಶಿವರಾಮಯ್ಯ ಕೆಳಬೈಲಿಗೆ ಬರುವುದು ಒಂದು ಆಕಸ್ಮಿಕ ಘಟನೆ. ಕಳೆದು ಹೋದ ದಿನವೊಂದನ್ನು ಹುಡುಕುತ್ತಾ ಸುಬ್ರಹ್ಮಣ್ಯಕ್ಕೆ ಬಂದ ಶಿವರಾಮಯ್ಯ ನಿಂತ ಗಡಿಯಾರವನ್ನು ನಂಬಿ ಪಂಜಕ್ಕೆ ಹೊರಟನು. ಕತ್ತಲಾಗುವ ವೇಳೆಗೆ ಗುತ್ತಿದಾರ ಸುಳ್ಯ ರಸ್ತೆಗೆ ಸೇರುತ್ತಾನೆ. ಅಲ್ಲಿ ಅವನಿಗೆ ಹಳ್ಳಿಯ ಗೌಡರಿಬ್ಬರು ಸಿಗುತ್ತಾರೆ. ಕಾಡಿನ ಹಳ್ಳಿಗಳ, ಮರ, ಬೇರು, ಪೊದೆಗಳ ಎಡೆಯುವ ರುಮು ರುಮು ಸಾಗುತ್ತಿದ್ದ ಅವರ ಧೈರ್ಯ ನಿಮ್ಮ ಜತೆಯಲ್ಲಿ ಬಂದರೆ ರಾತ್ರಿ ಉಳಿದುಕೊಳ್ಳಲು ಒಂದಿಷ್ಟು ಜಾಗ ಕೊಡುತ್ತೀರ? ಎಂದು ಬೇಡುವ ತನ್ನ ದೈನ್ಯ ಇವೆರಡರ ಅನುಭವವೂ ಅವನಿಗೆ ಆಗುತ್ತದೆ. ದೇರಣ್ಣನ ಮನೆಯ ಹತ್ತಿರದ ಸೇತುವೆಯನ್ನು ಕತ್ತಲಲ್ಲಿ ದಾಡುವಾಗ ನಾಗರಿಕ ಶಿವರಾಮಯ್ಯನ ಗೌರವಭಂಗ ಅವನ ಪರಿವರ್ತಿತ ಅವಸ್ಥೆಯನ್ನು ಪ್ರಭಾವಿಯಾಗಿ ಸೂಚಿಸುತ್ತದೆ. ಗೋಪಾಲಯ್ಯನವರ ಮನೆ ತಲುಪಿದಾಗ ಶಿವರಾಮಯ್ಯನಿಗೆ ಪರದೇಶಿಯಾದ ತನಗೂ ಸಂಜೆ ದೇವನಂತೆ ಕಾಣಿಸುತ್ತಿದ್ದ ಅವರಿಗೂ ಇದ್ದ ಅಂತರ ಒಡೆದು ಕಂಡರೂ ಅವರು ತೋರುವ ಆದರ, ಪ್ರೀತಿಗಳಲ್ಲಿ ಅದನ್ನು ಮರೆತು ಬಿಡುತ್ತಾನೆ. ಪ್ರಕೃತಿಯ ಸಾನಿಧ್ಯ ಅವನಿಗೆ ಅಪೂರ್ವವಾದ ಆನಂದಕೊಡುತ್ತದೆ.

"ತಮ್ಮ ಹೃದಯವನ್ನು ಮರೆಯಿಸುವ ಶೀಲವೇ ಇಲ್ಲದ ಗೋಪಾಲಯ್ಯ ಮಾತಾಡುತ್ತಿದ್ದಂತೆ, ಅವರ ಮತ್ತು ಅವರ ಹೆಂಡತಿ ಶಂಕರಮ್ಮನ ಹೃದಯಗಳನ್ನು ಕೊರೆಯುತ್ತಿದ್ದ ಗುಪ್ತ ದುಃಖದ ಅರಿವು ಶಿವರಾಮಯ್ಯನಿಗೆ ಆಗುತ್ತದೆ. ಆ ಅರಿವು ಕಾದಂಬರಿ ಬೆಳೆದಂತೆ ಅವರೀರ್ವರ ನಡುವಿನ ಆಪ್ತತೆಗೆ ಕಾರಣವಾಗುತ್ತದೆ. ತಮ್ಮ ಮಗ ಶಂಭುವನ್ನು ಅಪಹರಿಸಿದ್ದು, ನಗರಜೀವನದ ಆಕರ್ಷಣೆಯೇ ಎಂದು ಶಂಕರಮ್ಮನ ಭಾವನೆ."[೩೦]

ನಂತರ ಶಿವರಾಮಯ್ಯ ಗ್ರಾಮ ಜೀವನಕ್ಕೆ ಆಕರ್ಷಿತನಾಗುವ ಹೊಂದಿಕೊಳ್ಳುವ ಕ್ರಿಯೆ ಪ್ರಾರಂಭವಾಗುತ್ತದೆ. ಈ ಕ್ರಿಯೆಯ ಏರಿಳಿತಗಳೇ ಕಾದಂಬರಿಯ ಸಂವಿಧಾನವನ್ನು ರೂಪಿಸುವ ಮುಖ್ಯ ಘಟಕಗಳು. ಕತೆಯು ಕೊನೆಗೆ ಶಿವರಾಮಯ್ಯ ಗ್ರಾಮ ಜೀವನದ ಅನುಭವವನ್ನು ತನ್ನಲ್ಲಿ ಅರ್ಥವತ್ತಾಗಿ ಸೇರಿಸಿಕೊಳ್ಳುತ್ತಾನಷ್ಟೇ. ಅಲ್ಲದೇ ತನ್ನ ಸ್ವಭಾವ ಸಹಜವಾದ ಅನುಕಂಪದ ಮೂಲಕ ನಗರಜೀವನದ ತನ್ನ ವಿಶಾಲವಾದ ಅನುಭವದ ಮೂಲಕ ಅವರ ದುಃಖವನ್ನು ನಿವಾರಿಸಲು ಶಕ್ತನಾಗುತ್ತಾನೆ. ಈ ದೃಷ್ಟಿಯಿಂದಲೇ ನಾವು ನೋಡಬೇಕಾಗುತ್ತದೆ. ಇಲ್ಲವಾದರೆ ಶಿವರಾಮಯ್ಯ ಸಂಚಾರಿಯಾದರೂ, ಕೂಡ ಶಂಭುವನ್ನು ಪುಣೆಯಲ್ಲಿ ಭೇಟಿಯಾದರೂ,

ಕೆ.ಎಸ್.ಶರ್ಮನೇ ಶಂಭುವೆಂದು ಗುರುತಿಸಿದ್ದು ಅತ್ಯಂತ ಆಕಸ್ಮಿಕವಾದ ಘಟನೆಗಳಾಗಿ ಕಂಡುಬರುತ್ತದೆ.

ಶಿವರಾಮಯ್ಯ ಕೆಳಬೈಲಿನ ಹೊಳೆಯಲ್ಲಿ ಮೀಯುವುದು ಇದು ಅವನಿಗಾಗುವ ಗ್ರಾಮ ಜೀವನದ ಸಂಸ್ಕಾರದ ಒಂದು ಪ್ರತೀಕ. ನಿಮ್ಮ ಊರು ಕೈಲಾಸವಯ್ಯ ಎಂದು ಕೆಳಬೈಲನ್ನು ಹೊಗಳಿದರೂ ನನ್ನಂಥವನಿಗೆ ತಿಂಗಳಿಗೆ ನೂರುರೂಪಾಯಿ ಕೊಡುತ್ತೇನೆಂದರೂ ಇಲ್ಲಿಯೇ ಇದ್ದು ಆರು ತಿಂಗಳು ಸಮಯವನ್ನು ಕಳೆಯಲಾರೆ ಎಂದು ಶಿವರಾಮಯ್ಯ ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾನೆ. ನಂತರ ದೇರಣ್ಣ, ಗೋಪಾಲಯ್ಯ, ಶಂಕರಮ್ಮ ಇವರಿಗೆ ಮಾತ್ರ ಸೀಮಿತವಾದ ಗ್ರಾಮ ಜೀವನದ ಬೇರೆ ಮುಖಗಳನ್ನು ನೋಡಲು ಇಲ್ಲಿ ಶಿವರಾಮಯ್ಯನಿಗೆ ಸಾಧ್ಯವಾಗುತ್ತದೆ. ನಾರಾಯಣಯ್ಯನಿಂದಾಗಿ ಶಿವರಾಮಯ್ಯನಿಗೆ ಗೋಪಾಲಯ್ಯನವರ ಊರ ಜೀವನದ ದರ್ಶನ ಪರಿಚಯ ಇನ್ನೂ ಗಾಢವಾಗುತ್ತದೆ. ಬದುಕುವುದು ಹೊನ್ನಿಗಾಗಿ ಅಲ್ಲ ಎನ್ನುವ ತತ್ವದ ಸಿದ್ಧಿಯನ್ನೆ ಕಾಟುಮೂಲೆಯಲ್ಲಿ ಅವನು ಕಾಣುತ್ತಾನೆ.

ಕಾಟು ಮೂಲೆಯಿಂದ ತಿರುಗಿ ಬಂದ ನಂತರ ಶಿವರಾಮಯ್ಯನಿಗೆ ಗೋಪಾಲಯ್ಯನವರ ಹಸ್ತದಿಂದ ಅಭ್ಯಂಜನ ನಡೆಯುತ್ತದೆ. ಗೋಪಾಲಯ್ಯ ಮತ್ತು ಶಂಕರಮ್ಮನವರ ಅನ್ಯೋನ್ಯ ಸಂಬಂಧ ಕಾಣುತ್ತಾನೆ. ಮುಖ್ಯವಾಗಿ ನಿಸರ್ಗದತ್ತ ನೋಡುವ ಗೋಪಾಲಯ್ಯ-ಶಿವರಾಮಯ್ಯ ದೃಷ್ಟಿಗಳಿಗೆ ಸಂಬಂಧಿಸಿದೆ.

"ಈ ದೆವ್ವನ ಹಾಗಿರುವ ಮರಗಳು, ಅವುಗಳನ್ನು ನುಂಗುವಂತೆ ಕಾಣುವ ಈ ಬೆಟ್ಟಗಳು, ಇವೆಲ್ಲವನ್ನು ನೋಡಿದರೆ ಮನುಷ್ಯ ಎಷ್ಟು ಸಣ್ಣ ಪ್ರಯಾಣಿಕನಾಗಿ ಕಾಣುತ್ತಾನೆ. ನನಗೆ ಈ ಸುತ್ತಲೂ ನೋಡಿ ನನ್ನ ಕಿರಿತನದ ನೆನಪೇ ಬರುತ್ತದೆ. ಮನುಷ್ಯ ಎಷ್ಟರವನು ಎನಿಸುತ್ತದೆ ಎಂದು ಶಿವರಾಮಯ್ಯನಿಗೆ"[೩೧]

ಶಿವರಾಮಯ್ಯ, ಗೋಪಾಲಯ್ಯ ಜೊತೆಗೂಡಿ ಪುತ್ತೂರಿಗೆ ಹೊರಡುವುದರಲ್ಲಿ ನಗರ ಜೀವನ ಮತ್ತು ಗ್ರಾಮ ಜೀವನಗಳ ಅನ್ಯೋನ್ಯ ಸಂಬಂಧದ ಸಂಕೇತವನ್ನು ಕಾಣುತ್ತೇವೆ.

ಇಲ್ಲಿನ ತಂತ್ರ ಕತೆಯ ಹುಟ್ಟು-ಬೆಳವಣಿಗೆ ಮುಕ್ತಾಯಗಳ ಸಂಪ್ರದಾಯಿಕ ಬಂಧದಿಂದ ದೂರ ಸರಿದು ತನ್ನದೇ ಆ ಬಂಧವನ್ನು ಸಿದ್ಧಪಡಿಸಿಕೊಳ್ಳುತ್ತದೆ. ಪಾತ್ರ, ಘಟನೆ, ಅವುಗಳ ವಾಸ್ತವಿಕತೆ, ಅವುಗಳನ್ನೊಂದು ನಿಯಂತ್ರಿತ ಉದ್ದೇಶಕ್ಕಾಗಿ ಬಳಸಿಕೊಂಡ ಜಾಣ್ಮೆ, ಸಾಹಿತ್ಯ ದೃಷ್ಟಿಯಿಂದ ನಾವಿಲ್ಲಿ ಮೆಚ್ಚಬೇಕಾದ ಮುಖ್ಯ ಗುಣಗಳಾಗಿವೆ. ಈ ಉದ್ದೇಶ ಈಗಾಗಲೇ ವಿವರಿಸಿದಂತೆ ಗ್ರಾಮ ಜೀವನದ ಮೌಲ್ಯಗಳನ್ನು ನಾಗರೀಕ ಸಂವೇದನೆಯ ಬೆಳವಣಿಗೆಗಾಗಿ

ಮತ್ತು ವಿಕಾಸಕ್ಕಾಗಿ ಉಪಯೋಗಿಸುವುದು. ಈ ದೃಷ್ಟಿಯಿಂದ ಶಿವರಾಮಯ್ಯ ಕತೆಯ ಕೇಂದ್ರ ಪ್ರಜ್ಞೆಯಾದರೆ, ಗೋಪಾಲಯ್ಯ ಕತೆಯ ಮೌಲ್ಯಗಳ ಕೇಂದ್ರ ಪ್ರತೀಕ. ಪ್ರಜ್ಞೆ–ಪ್ರತೀಕಗಳೆರಡು ಸಾಹಿತ್ಯಿಕ ದೃಷ್ಟಿಯಲ್ಲಿ ಅವುಗಳ ಸಂಬಂಧವನ್ನು ನಾಟ್ಯೀಕರಿಸುವ ಸಂವಿಧಾನದ ರಚನೆಯಲ್ಲಿ ಕಾರಂತರು ಪಡೆದಿರುವ ಯಶಸ್ಸು ಈ ಕಾದಂಬರಿಯ ಸಫಲತೆಗೆ ಕಾರಣವಾಗಿದೆ ಎಂದು ಹೇಳಬಹುದು. ಒಟ್ಟಿನಲ್ಲಿ ಬೆಟ್ಟದ ಜೀವ ಯಶಸ್ಸಿನ ತುದಿಯಲ್ಲೇ ಹೊಸ ಸಂಸ್ಕೃತಿಯೊಂದರ ಉದಯ ಕಾಣಿಸಿಕೊಳ್ಳುತ್ತದೆ. ಎಲ್ಲರೂ ಗೋಪಾಲಯ್ಯನನ್ನು ಒಪ್ಪಿ ಮೆಚ್ಚಿಕೊಂಡು ಮಗ ಶಂಭು ಅವನನ್ನು ಮೆಚ್ಚಲಾರ. ಗೋಪಾಲಯ್ಯ ಪ್ರತಿನಿಧಿಸುವ ಸಂಸ್ಕೃತಿಯನ್ನು ಪ್ರಶ್ನಿಸುವ ಮೂಲಕ ಹೊಸ ಸಂಸ್ಕೃತಿಯೊಂದರ ಉದಯದ ಸಂಕೇತವಾಗುತ್ತದೆ. ಗೋಪಾಲಯ್ಯನಿಗೆ ಇದನ್ನು ಒಪ್ಪಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಶಂಭುವಿನ ಬಗ್ಗೆ ಅನಾಸ್ಥೆ, ಜಿಗುಪ್ಸೆ, ಕಠೋರತೆಯನ್ನು ಪ್ರದರ್ಶಿಸುವ ಮೂಲಕ ಗೋಪಾಲಯ್ಯ ಹೊಸ ಸಂಸ್ಕೃತಿಯ ಉದಯವನ್ನು ಅಡಗಿಸಲು, ನಿರಾಕರಿಸಲು, ಮರೆಯಲು ಯತ್ನಿಸುತ್ತಾರೆ. ಆದರೆ ಅದು ಗುಪ್ತ ನೋವಾಗಿ ನಿರಾಶೆಯಾಗಿ, ಬದುಕಿನ ಶೂನ್ಯವಾಗಿ ಗೋಪಾಲಯ್ಯ ದಂಪತಿಗಳನ್ನು ಕಾಡಿ ಅವರನ್ನು ಏಕಾಂಗಿತನಕ್ಕೆ ದೂಡುತ್ತದೆ. "ಶಿವರಾಮಯ್ಯನ ಸಂಪರ್ಕದಿಂದ ಗೋಪಾಲಯ್ಯ ತನ್ನ ನಿಲುಮೆಯ ವ್ಯರ್ಥತೆಯನ್ನು ಮನಗಾಣುತ್ತಾನೆ. ತಾನು ಒಪ್ಪಲಿ ಬಿಡಲಿ ಹೊಸ ಸಂಸ್ಕೃತಿಯೊಂದರ ಉದಯ ಅನಿವಾರ್ಯ ಮಾತ್ರವಲ್ಲದೆ, ತನ್ನ ಸೋಲೂ ಅನಿವಾರ್ಯ ಎಂಬುದನ್ನು ಒಪ್ಪಿಕೊಳ್ಳುತ್ತಾನೆ. ಗೋಪಾಲಯ್ಯನಿಗೆ ಉಂಟಾಗುವ ಈ ಹೊಸ ಅರಿವು ಮಾಗುವಿಕೆಯ ವಿಜಯವೂ ಹೌದು, ಹೊಸ ಸಂಸ್ಕೃತಿಗೆ ಶರಣಾಗುವಿಕೆಯೂ ಹೌದು. ಗೋಪಾಲಯ್ಯನ ಮಟ್ಟಿಗೆ ಸೋಲು, ಗೆಲುವು ಹಾಗೂ ಅಂತ್ಯವನ್ನು ಅದ್ಭುತವಾಗಿ ಅಭಿನಯಿಸಿ ತೋರಿಸುತ್ತದೆ."[೨೬] ಇವರ ನಂತರವೇ ಗೋಪಾಲಯ್ಯ ಶಂಭುವನ್ನು ಕಾಣಲು ಹೊರಡುವುದು. ಈ ದೃಷ್ಟಿಯಿಂದ ಗಮನಾರ್ಹ. ಶಿವರಾಮಯ್ಯ ಗೋಪಾಲಯ್ಯನನ್ನು ಹೊಸ ಜಗತ್ತಿಗೆ ಒಯ್ಯುವ ಮಾರ್ಗದರ್ಶಕ ನಾಗುತ್ತಾನೆ.

## ೨೦. ನಿಸರ್ಗ(೧೯೪೫)

ಚಂದೂರಿನ ಜೈನ ಕುಟುಂಬದ ಮಲ್ಲಪ್ಪ–ರತ್ನವ್ವರ ಒಬ್ಬಳೇ ಮಗಳು. ತಾರಾಳನ್ನೊಳಗೊಂಡ ಒಂದು ಚಿಕ್ಕ ಕುಟುಂಬವಾದರೆ, ಇನ್ನೊಂದು ಕುಟುಂಬ ಹೂವಣ್ಣ ಚಿಮ್ಮವ್ವರ ಒಬ್ಬನೇ ಮಗ ಭರಮಪ್ಪರನ್ನೊಳಗೊಂಡದ್ದು. ಈ ಎರಡು ಕುಟುಂಬಗಳು ಬದುಕಿಗೆ ಅಗತ್ಯವಿದ್ದಷ್ಟು ಜಮೀನನ್ನು ಹೊಂದಿ ಸುಖವಾಗಿದ್ದರು.

ಸೋದರ ಮಾವನ ಮಗನಾದ ಐನಾಪುರದ ರಾಮಣ್ಣ–ಸುಂದರಾಬಾಯಿಯ ಮಗ ಅನಂತ ಹಾಗೂ ಮಲ್ಲಪ್ಪ–ರತ್ನವ್ವರ ಮಗಳು ತಾರ ಒಂದೆಡೆಯಲ್ಲಿ ಬೆಳೆದವರು. ಹೀಗಾಗಿ

ಅವರಿಬ್ಬರಲ್ಲಿ ಹೆಚ್ಚಿನ ಪ್ರೀತಿ. ಅನಂತನು ಇನ್ನು ಚಿಕ್ಕವನಿರುವಾಗಲೇ ಇಂದಿರೆಯೊಂದಿಗೆ ಮದುವೆಯಾಗುತ್ತದೆ. ಅನಂತನಿಗಿಂತ ಸ್ವಲ್ಪ ದೊಡ್ಡವಳಾದ ತಾರಾಳನ್ನು ಭರಮಪ್ಪನಿಗೆ ಕೊಡಲಾಗುತ್ತದೆ. ಚಿಮ್ಮವ್ವ ಅಣ್ಣನ ಆಸ್ತಿಯ ಆಸೆಗಾಗಿಯೇ ತಾರಾಳನ್ನು ಸೊಸೆಯನ್ನಾಗಿಸಿಕೊಂಡಿದ್ದಳು. ಗಂಡನ ಮನೆಗೆ ಕಳಿಸುವಾಗ ಅತ್ತೆಯ ಮನೆಯಲ್ಲಿ ವಿಧೇಯಳಾಗಿರಬೇಕೆಂದು ತಾರಾಳಿಗೆ ಬೋಧಿಸಲಾಯಿತು. ತಾರಾಳು ಅಷ್ಟೇ ಒಳ್ಳೆಯ ಸೊಸೆ ಎನ್ನಿಸಿಕೊಳ್ಳಲು ಪ್ರಯತ್ನಿಸಿದಳು.

ತಾರಾ ಮೈನೆರೆದು ಅತ್ತೆ ಮನೆ ಸೇರಿದಾಗ, ತನ್ನ ಮಗನಿಗೆ ಬಂಗಾರ ಹಾಕಲಿಲ್ಲ, ದುಡ್ಡು ಕೊಡಲಿಲ್ಲವೆಂತಲೂ ಸೊಸೆಗೆ ಕಿರುಕುಳ ಕೊಡಲು ಪ್ರಾರಂಭಿಸಿದಳು. ಹೀಗೆಯೇ ಮೂರು ವರ್ಷಗಳು ಕಳೆದವು. ಹದಿಹರೆಯದ ಮಗ ಸೊಸೆ ಬೆರೆಯದಂತೆ ಅಡ್ಡಗೋಡೆಯಾಗಿ ನಿಲ್ಲುವಳು. ತಾರಾಳ ಗಂಡ ಭರಮಪ್ಪನಾದರೋ ತಾಯಿಯ ಉಗುಳು ದಾಟದ ಪೆದ್ದು. ಸೊಸೆಯ ನೋವಿಗೆ ಮಾವ ಹೂವಣ್ಣಾ ಸ್ಪಂದಿಸುವವನಾದರೂ ಪರಿಹರಿಸಲಾಗದೆ ಮೊಮ್ಮಕ್ಕಳನ್ನು ಕಾಣುವ ಕೊರಗಿನಲ್ಲಿಯೇ ತೀರಿಕೊಳ್ಳುತ್ತಾನೆ.

ತಂದೆ ತೀರಿದ ಮೇಲೆ ತಾಯಿಗೂ ಭರಮಪ್ಪನಿಗೂ ಮನಸ್ತಾಪವಾಗುತ್ತದೆ. ಭರಮಪ್ಪ ಬೇರೆಯಾಗಿರಲು ನಿಶ್ಚಯಿಸಿ ಹೆಂಡತಿ ತಾರಾಳನ್ನು ತನ್ನೊಂದಿಗೆ ಬರುವಂತೆ ಕೇಳುತ್ತಾನೆ. ಈ ವಿಷಯ ತಾರಾಳ ತಾಯಿ ರತ್ನವ್ವಳ ಕಿವಿಗೆ ಬಿದ್ದಾಗ "...ಈಗ ಸದ್ಯಕ್ಕರ ಅವನ ತಲ್ಯಾಗ ಹುಳಾಬಿದ್ದಾಂಗ ಆಗಿದಾವ. ನಾಲ್ಕ ದಿನಾ ಸಿಟ್ಟಿನಾಗ ಇದಾ ಇದ ಬುದ್ಧಿ ಕಡೀತನಕಾ ಉಳೀತೇತಿ ಅಂತ ಹೇಳಾಕ ಬರೂದಿಲ್ಲ. ನೀ ಎಲ್ಲ್ಯಾರ ಬರತ್ಯಾನಂತ ಮನೀಬಿಟ್ಟ ಅವನ ಬೆನ್ನಹತ್ತಿ...! ಮುಂದ ನಿನ್ನ ವಗತನ ಹತ್ತಲಾರೆಲ್ಲ ದಂಡಿಗಿ ಹಾಂಗ್ಯಾನಾದರ ಮಾಡಿ! ನನ್ನ ಕುತಗಿ ಕೊಯ್ಕೊಂಡ ರಕ್ತ ಕುಡದಂಗ ಆದೋತ"[೩] ಎಂದಿರುವಾಗ ತಾರಾಳಿಗೆ ಮನಸ್ಸಿದ್ದರೂ ತಾಯಿಯ ಮಾತಿಗಾಗಿ ಮೌನ ವಹಿಸುತ್ತಾಳೆ. ಮಗನ ಈ ತಪ್ಪನ್ನೇ ಸೊಸೆಯ ಮೇಲೆ ಹೊರಿಸಿ ಅತ್ತೆ ಚಿಮ್ಮವ್ವ ಮತ್ತಷ್ಟು ಪೀಡಿಸುತ್ತಾಳೆ. ತಾರಾಳ ಬಗೆಗೆ ಚಾಡಿ ಹೇಳಿ ಮಗನ ಮನಸ್ಸನ್ನು ಕೆಡಿಸುತ್ತಾಳೆ.

ಲಗಮವ್ವನ ಜಾತ್ರೆಗಾಗಿ ತಾರಾ ತವರಿಗೆ ಬರುತ್ತಾಳೆ. ಅನಂತನು ಮೊದಲೇ ಬಂದಿರುತ್ತಾನೆ. ಪ್ರೌಢಳಾದ ತಾರಾ ಅನಂತನ ಮೈಮಾಟಕ್ಕೆ ಮನಸೋಲುತ್ತಾಳೆ. ಒಂದು ದಿನ ಇಬ್ಬರೇ ಕುಳಿತಿರುವಾಗ ಅಲ್ಲಿಯವರೆಗೆ ಅದುಮಿಟ್ಟುಕೊಂಡ ಕಾಮ ಎಚ್ಚರಗೊಳ್ಳುತ್ತದೆ. ಈರ್ವರ ಕಣ್ಣು ದೃಷ್ಟಿಗಳು ಒಂದಾಗಿ ಭಾವಪರವಶರಾಗುತ್ತಾರೆ. ಬೆಳಗಿನ ಜಾವ ಮನೆಯಲ್ಲಿ ಯಾರು ಇಲ್ಲದಾಗ ತಾರಾಳ ಮನಸ್ಸು ವಿಚಲಿತಗೊಳ್ಳುತ್ತದೆ. ಅನಂತನನ್ನು ತಟ್ಟಿ ಎಚ್ಚರಿಸುತ್ತಾಳೆ. ಮನದ ಬಯಕೆಯನ್ನು

ಈಡೇರಿಸುವಂತೆ ಪ್ರಾರ್ಥಿಸುತ್ತಾಳೆ. ಅನಂತನ ಮನಸ್ಸು ಒಪ್ಪದಿದ್ದರೂ ತಾರಾಳ ಬೇಡಿಕೆಯನ್ನು ತಿರಸ್ಕರಿಸಲಾಗದೆ ಮೌನವಹಿಸುತ್ತಾನೆ. ಕೆಲಕ್ಷಣಗಳಲ್ಲಿಯೇ ಈರ್ವರು ಒಂದಾಗಿ ಸುಖಪಡುತ್ತಾರೆ.

ಗಂಡನ ಮನೆ ಸೇರಿದ ತಾರಾ ಮತ್ತಷ್ಟು ಕಷ್ಟಕ್ಕೆ ಸಿಲುಕುತ್ತಾಳೆ. ಉಪವಾಸ, ದುಡಿಮೆ, ಈ ಎಲ್ಲಾ ಕೊರಗಿನಲ್ಲಿ ಆಕೆ ಮತ್ತಷ್ಟು ಕ್ಷೀಣಿಸುತ್ತಾಳೆ. ತಾರಾಳ ಚಿಂತನೆಯಲ್ಲಿ ಅನಂತ ಊಟ, ನಿದ್ರೆಯನ್ನು ತೊರೆಯುತ್ತಾನೆ. ತಾರಾ ಬಿಡುಗಡೆಯಾಗಿ ಐನಾಪುರಕ್ಕೆ ಬಂದರೆ ತಾರಾಳ ಗಂಡ ಬೇರೊಂದು ಮದುವೆಯಾಗುತ್ತಾನೆ.

ಅನಂತ, ತಾರಾಳ ಎರಡನೇ ಮದುವೆ ವಿಚಾರ ತೆಗೆದಾಗ ಸುಂದರಬಾಯಿ "ಗಂಡಸಪ್ಪ ಅಂವ, ಅವಂಗ ಬೇಕಾದಷ್ಟು ಮಾಡಿಕೋಕ ಬರತೈತಿ, ಹೆಂಗಸರು ಮಣ್ಣಿನ ಗಡಿಗಿ ಇದ್ದಾಂಗ ಒಮ್ಮಿ ಮುಟ್ಟಿದರ ಬಾದ ಆಯ್ತು"[೩೩] ಎಂಬ ನಂಬಿಕೆಯುಳ್ಳವಳು. ತಾರಾಳನ್ನು ಅಪ್ಪಣ್ಣನೊಂದಿಗೆ ಉಡಿಕೆ ಮಾಡಲು ಕರೆದೊಯ್ಯುವಾಗ ತಾರಾ ಕಣ್ಣೀರಿನಿಂದ ಅನಂತನ ಪಾದ ತೊಳೆಯುತ್ತಾಳೆ. ಅನಂತನನ್ನು ಗಂಡನೆಂದು, ದೇವರೆಂದು ಸರ್ವಸ್ವವೆಂದು ಭಾವಿಸುತ್ತಾಳೆ. ಉಡಿಕೆಯ ದಿನ ತಾರಾ ಅನಂತನೊಂದಿಗೆ ಓಡಿ ಹೋಗಲು ಬಯಸಿ ಸಾಯುವುದಾದರೆ ಜೊತೆಯಲ್ಲೇ ಸಾಯೋಣವೆಂದು ನಿರ್ಧರಿಸುತ್ತಾಳೆ. ಇದಕ್ಕೆ ಅನಂತನ ಮೌನವೇ ಉತ್ತರವಾಗುತ್ತದೆ. ನಲ್ವತ್ತರ ಹರೆಯದ ಅಪ್ಪಣ್ಣನೊಂದಿಗೆ ತಾರಾಳ ಉಡಿಕೆಯಾಗುತ್ತದೆ. ಉಣ್ಣಲು, ಉಡಲು, ಯಾವ ಕೊರತೆಯಿರದಿದ್ದರೂ ಸೋನಾಳೊಂದಿಗಿನ ಅನೈತಿಕ ಸಂಬಂಧ ಅವಳಿಗೊಂದು ಹೆಣ್ಣು ಮಗುವಿದ್ದುದು, ಈ ಅನೈತಿಕ ಸಂಬಂಧದ ಫಲವಾಗಿ ರೋಗದಿಂದ ಬಳಲಿರುವುದು ಎಲ್ಲವನ್ನು ಅರಿತಾಗ ತಾರಾಳಿಗೆ ಸುಖವೆಂಬುದು ಕನಸಿನ ಬುತ್ತಿಯಾಗುತ್ತದೆ. ಆದರೂ ನಿರಾಶಾವಾದಿಯಾದೆ ತಾರಾ ಗಂಡ, ಅತ್ತೆ, ಇನ್ನುಳಿದವರನ್ನು ಪ್ರೀತಿಯಿಂದ ಕಾಣುತ್ತಾಳೆ. ಐದಾರು ವರ್ಷ ಕಳೆದರೂ ಮಕ್ಕಳಾಗದೆ ಗಂಡನಿಗೆ ಹುಟ್ಟಿದ ಸೋನಾಳ ಮಗಳನ್ನು ಸ್ವಂತ ಮಗಳಿಗಿಂತ ಹೆಚ್ಚಾಗಿ ನೋಡಿ ಕೊಳ್ಳುತ್ತಾಳೆ.

ಅನಂತನು ದಿನ ಕಳೆದಂತೆ ಕುಡಿತ, ಇಸ್ಪೀಟಿಗೆ ಬಲಿಯಾದ, ಸಾಲದಕ್ಕೆ ಬಂಗಾರಿಯನ್ನು ಇಟ್ಟುಕೊಂಡ, ಇದ್ದ ಆಸ್ತಿಯೆಲ್ಲವನ್ನು ಮಾರಿದ. ಈ ಸಮಯಕ್ಕೆ ಅನಂತನಿಗೆ ಎರಡು ಗಂಡು ಮಕ್ಕಳು. ಅವರನ್ನು ಹೆಂಡತಿ ಇಂದಿರಾ ಕಷ್ಟಪಟ್ಟು ಸಾಕಿದಳು. ಗಂಡನಿಂದ ಅಂಟಿಕೊಂಡ ರೋಗದಿಂದ ಬಳಲಿ ಅಶಕ್ತಳಾದಳು. ಗಂಡ-ಹೆಂಡತಿ ಇಬ್ಬರು ತೇರದಾಳದಲ್ಲಿ ಔಷಧಿ ಪಡೆದು ಗುಣವಾಗುವುದರಲ್ಲಿಯೇ ಅನಂತನು ಅತ್ತೆಯ ಬೈಗುಳದಿಂದ ಬೇಸರಗೊಂಡು ಮನೆಯಿಂದ ಹೊರಬೀಳುತ್ತಾನೆ.

ತಾರಾ ಗರ್ಭಿಣಿಯಾಗಿ ಮನೆ ಮಂದಿಗೆ ಸಂತಸವನ್ನುಂಟು ಮಾಡಿದ್ದಳು. ಅನಂತನು ಮನೆ ತೊರೆದು ಹೋದನೆಂಬ ಸುದ್ದಿಯಿಂದ ಮೂರ್ಛಿತಳಾಗಿ ಗರ್ಭಸ್ರಾವವಾಗುತ್ತದೆ. ಗಂಡನಿಂದ ಅಂಟಿದ ರೋಗ, ಅನಂತನ ಚಿಂತೆ ಈ ಎಲ್ಲವುಗಳಿಂದ ಎರಡು ತಿಂಗಳಾದರೂ ಗುಣವಾಗದೇ ಇರುವಾಗ ಗಂಡನ ಕಾಮದಾಹಕ್ಕೆ ಬಲಿಪಶುವಾಗಿ ಜ್ವರದಿಂದ ನರಳುತ್ತಾಳೆ. ತೇರದಾಳದ ವೈದ್ಯರಿಗೆ ತೋರಿಸಲು ತಾರಾ ಉಳಿಯುವ ಲಕ್ಷಣವಿಲ್ಲವೆಂದು ತಿಳಿಯುತ್ತದೆ. ತಾರಾಳ ಆಸೆಯಂತೆ ಚಂದೂರಿಗೆ ತರಲಾಗಿ ಅನಂತನ ಕನವರಿಕೆಯಲ್ಲಿಯೇ ಮೂರು ದಿವಸಗಳು ಕಳೆಯುವುದರೊಳಗೆ ಅವಳ ದೇಹ ರಕ್ತದಿಂದ ತೊಯ್ದು ಹೋಗುತ್ತದೆ. ಅನಂತನ ಕನವರಿಕೆಯಲ್ಲಿಯೇ ತಾರಾ ಜೀವ ಬಿಡುತ್ತಾಳೆ. ತಂದೆ ತಾಯಿಗಳಿಬ್ಬರೂ ಮಗಳ ಅವಸ್ಥೆಗಾಗಿ ದುಃಖದ ಮಡುವಿನಲ್ಲಿ ಮುಳುಗುತ್ತಾರೆ. ತಾರಾಳ ಈ ಸುದ್ದಿ ಕವಿಗೆ ಬೀಳುತ್ತಲೇ ಅನಂತನು, ಮಿಂಚಿನಿಂದ ಚಂದೂರಿಗೆ ತೆರಳುತ್ತಾನೆ. ತಾರಾಳಿಗಾಗಿ ದುಃಖಿಸುತ್ತಾನೆ. ತಾರಾ ಸತ್ತಳೆಂದು ಕೇಳುತ್ತಲೇ ಕಾರಿನಿಂದಿಳಿದು ಕಲ್ಲು, ಮುಳ್ಳುಗಳನ್ನು ಲೆಕ್ಕಿಸದೇ ಓಡುತ್ತಾನೆ. ತಾರಾಳ ಚಿತೆಯಲ್ಲಿ ಹಾರಿ ಒಂದಾಗುತ್ತಾನೆ.

ಸಂಪ್ರದಾಯಿಕ ವಿವಾಹಕ್ಕೆ ಹೆಚ್ಚಿನ ಪ್ರಾಮುಖ್ಯತೆ ಇರುವ ದಿನಗಳಲ್ಲಿ ಪ್ರೇಮಿಗಳಿಬ್ಬರ ಜೀವನ ದುರಂತದಲ್ಲಿ ಕೊನೆಗೊಂಡ ವಾಸ್ತವ ಚಿತ್ರಣ ಕಾದಂಬರಿಯ ಮಹತ್ವವನ್ನು ಎತ್ತಿ ತೋರಿಸುತ್ತದೆ.

### ೨೧. ಮಲೆಗಳಲ್ಲಿ ಮದುಮಗಳು(೧೯೬೭)

ಕುವೆಂಪು ಅವರ ಎರಡನೆಯ ಕಾದಂಬರಿ 'ಮಲೆಗಳಲ್ಲಿ ಮದುಮಗಳು' ಹೊರಬಂದದ್ದು ೧೯೬೭ರಲ್ಲಿ. ಕಾನೂರು ಹೆಗ್ಗಡತಿಯಂತೆ ಇದು ಮಲೆನಾಡಿನ ಕಾಡಿನಲ್ಲಿ ನಾಡನ್ನು ಕಟ್ಟಿಕೊಂಡು ಬದುಕುವ ಜನಗಳ ಜೀವನವನ್ನು ಪರಿಚಯಿಸುತ್ತದೆ. ಕಾದಂಬರಿಯ ಶೀರ್ಷಿಕೆಯೇ ಹೇಳುವಂತೆ ಮಲೆನಾಡಿನ ಹೆಣ್ಣುಮಕ್ಕಳ ವೈವಿಧ್ಯಮಯ ಬದುಕೇ ಈ ಕಾದಂಬರಿಯ ವಸ್ತು. "ಮಹಾದೇವ ಕಣವಿಯವರು ಅಭಿಪ್ರಾಯಪಟ್ಟಂತೆ ಬೇರೆ ಬೇರೆ ಊರುಗಳಲ್ಲಿ ಬೇರೆ ಬೇರೆ ಮನೆತನಗಳಿಗೆ ಸೇರಿದ ಕತೆಗಳು ಸಮಕಾಲೀನವಾಗಿ ನಡೆಯುತ್ತವೆ. ಮಲೆನಾಡಿನ ಹೆಗ್ಗಡೆಗಳು, ಬಿಲ್ಲವರು, ಹೊಲೆಯರು, ಗಡ್ಡದ ಕೆಳಗಿನ ಸೀರೆಗಾರರು, ಅಲ್ಲಲ್ಲಿ ಕಾಣಿಸಿಕೊಳ್ಳುವ ಕಿರಿಸ್ಥಾನರು ಮತ್ತು ಸಾಬರು ಇವರೆಲ್ಲರ ಸಾಂಸ್ಕೃತಿಕ ಸ್ತರಗಳಲ್ಲಿಯ ತಾರತಮ್ಯಗಳನ್ನು ನಿಸರ್ಗಕ್ಕೆ ಅತಿ ಸಮೀಪವಾಗಿ ಬದುಕುವ ಅವರ ವೈವಿಧ್ಯ ಪೂರ್ಣ ಜೀವನದ ಅನುಭವಗಳನ್ನು ಕಾದಂಬರಿ ಒಳಗೊಳ್ಳುತ್ತದೆ"[೩೪] ಎಂಬ ಹೇಳಿಕೆ ಕಾದಂಬರಿಯ ವಸ್ತು ವೈವಿಧ್ಯತೆ ಬಗೆಗಿನ ಕುರಿತದ್ದಾಗಿದೆ.

ಸಿಂಬಾವಿ ಭರಮೈ ಹೆಗ್ಗಡೆಯ ಜೀತದಾಳು ಹೊಲೆಯರ ಗುತ್ತಿ ಮನೆಗೆಲಸದ ಮರಾಠ ಮಂಜನೊಂದಿಗಿನ ಸಂಭಾಷಣೆಯೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ.

ಭರಮ್ಮೈ ಹೆಗ್ಗಡೆ ನಡುವಯಸ್ಸಿನ ರೋಗಿ, ತನ್ನ ವಂಶೋದ್ಧಾರಕ್ಕಾಗಿ ಹಳೆಮನೆ ಸುಬ್ಬಣ್ಣ ಹೆಗಡೆಯ ಮಗಳನ್ನು ಮದುವೆಯಾಗಲು ನಿರ್ಧರಿಸುತ್ತಾನೆ. ಇದಕ್ಕೆ ಪ್ರತಿಯಾಗಿ ತಂಗಿ ಲಕ್ಕಮ್ಮಳನ್ನು ಹೆಗ್ಗಡೆಯ ಕಿರಿಯ ಮಗ ತಿಮ್ಮಪ್ಪನಿಗೆ ಕೊಡುವುದಾಗಿ ನಿರ್ಧರಿಸಿ ಬರೆದ ಚೀಟಿಯನ್ನು ಹೊತ್ತೊಯ್ಯುವ ಗುತ್ತಿಯ ಉದ್ದೇಶ ಇದೊಂದೇ ಆಗಿರದೇ, ತಿಮ್ಮಿಯನ್ನು ಹಾರಿಸಿಕೊಂಡು ಬರುವುದಾಗಿತ್ತು. ಹೀಗೆ ಪ್ರಯಾಣ ಬೆಳೆಸಿರುವಾಗ ಲಕ್ಕುಂದವನ್ನು ತಲುಪುತ್ತಿರುವಾಗಲೇ ಪುಟ್ಟನ ಅತ್ತೆ ಕಾಡಿ ಮುಂಡೆಯ ಗರ್ಭದ ವಿಚಾರಣೆ ನಡೆದಿತ್ತು. ತಾನು ಯಾರಿಂದ ಗರ್ಭಿಣಿಯಾದೆನೆಂದು ಹೇಳಲಾಗದೆ, ಸೇಸನಾಯಕನ ಸಹಾಯದಿಂದ ಔಷಧ ತಿಂದು ಗರ್ಭವನ್ನು ಇಳಿಸಿಕೊಳ್ಳುತ್ತಾಳೆ. ತಿಮ್ಮಿಯನ್ನು ಹಾರಿಸಿಕೊಂಡು ಬರಲೆಂದು ಹೊರಟ ಹೊಲೆಯ ಗುತ್ತಿ, ಭಟ್ಟರಿಂದ ವಶೀಕರಣದ ಚೀಟಿ ಪಡೆದು ಹಳೆಮನೆಗೆ ಚೀಟಿ ತಲುಪಿಸಿ ಬೆಟ್ಟಳ್ಳಿಯನ್ನು ಸೇರುತ್ತಾನೆ.

ಸ್ವಾಭಿಮಾನವಿಲ್ಲದ ಅತ್ತೆ ನಾಗತ್ತೆ, ವಿಧವೆ ಸೊಸೆ ನಾಗಕ್ಕಳನ್ನು ಯಾವನಾದರೊಬ್ಬ ಶ್ರೀಮಂತ ವ್ಯಕ್ತಿಯೊಡನೆ ಸೀರುಡಿಕೆ ಮಾಡಿಸಿ ಸುಖವಾಗಿರುವ ಉದ್ದೇಶವನ್ನು ಹೊಂದಿದ್ದಳು. ಈ ಕಾರಣವಾಗಿ ವೆಂಕಟಪ್ಪನಾಯಕನೊಡನೆ, ಸೀರುಡಿಕೆ ಮಾಡಿಸುವ ಹುನ್ನಾರದಿಂದಲೇ ಕರೆದೊಯ್ಯುತ್ತಿದ್ದಳು. ಆದರೆ ಇದರ ಪರಿವೆಯೇ ಇಲ್ಲದ ನಾಗಕ್ಕ ಅತ್ತೆಯನ್ನು ಹಿಂಬಾಲಿಸಿ ವೆಂಕಟಪ್ಪನಾಯಕನಿಂದ ಶೀಲಹರಣಗೊಂಡಳು. ಇಲ್ಲಿ ನಾಗತ್ತೆ ಕುತಂತ್ರದಿಂದ ಸೊಸೆಯನ್ನಷ್ಟೇ ಅಲ್ಲ ತನ್ನನ್ನು ತಾನೇ ಬಲಿಯಾಗಿಸಿಕೊಳ್ಳುವಂತೆ ಮಾಡುತ್ತದೆ. ಹೀಗೆ ಮನಸ್ಸಿಲ್ಲದ ಮನಸ್ಸಿನಿಂದ ವೆಂಕಟಪ್ಪ ನಾಯಕನೊಂದಿಗೆ ಸೀರುಡಿಕೆ ಮಾಡಿಕೊಂಡ ವಿಧವೆ ನಾಗಕ್ಕ, ಚಿನ್ನಮ್ಮಳ ಸ್ನೇಹಕ್ಕಾಗಿ ಎಂಬುದು ಪ್ರಸ್ತುತ. ವೆಂಕಟಪ್ಪ ನಾಯಕನ ಒಬ್ಬಳೇ ಮಗಳು ಚಿನ್ನಮ್ಮ. ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡು ಅಜ್ಜಿಯ ಆರೈಕೆಯಲ್ಲಿ ಬೆಳೆದಳು. ಚಿನ್ನಮ್ಮಳ ಹಾರೈಕೆಗಾಗಿ ಬಂದಿರುವ ಕೋಣೂರಿನ ಅಜ್ಜಿಗೆ ಮೊಮ್ಮಗ ಮುಕ್ಕಂದಯ್ಯನನ್ನು ಸಹ ಕರೆ ತಂದಿದ್ದಳು. ಹೀಗಾಗಿ ಚಿನ್ನಮ್ಮ ಮತ್ತು ಮುಕ್ಕುಂದಯ್ಯ ಒಂದೆಡೆಯಲ್ಲಿಯೇ ಬೆಳೆದು ದೊಡ್ಡವರಾಗಿದ್ದರು. ಹೀಗಿರುವಾಗ ದೈಹಿಕ ಬೆಳವಣಿಗೆಯಿಂದಾಗಿ ಉಂಟಾದ ಸಂಕೋಚ ಸ್ವಭಾವ ಅವರಿಬ್ಬರನ್ನು ಬೇರೆ ಬೇರೆಯಾಗಿಸಿದ್ದರೂ ಅವರಿಬ್ಬರೂ ಮಾನಸಿಕವಾಗಿ ಪ್ರೇಮ ಸಂಬಂಧವನ್ನು ಅಪ್ಪಿಕೊಂಡಿದ್ದರು. ಇದನ್ನು ಅಲ್ಪಸ್ವಲ್ಪ ಅರಿತಿದ್ದ ವೆಂಕಟಪ್ಪ ನಾಯಕ ತನ್ನ ಸಾಲದ ಋಣಕ್ಕಾಗಿ ಚಿನ್ನಮ್ಮಳನ್ನು ಸಿಂಬಾವಿಯ ಭರಮ್ಮೈ ಹೆಗ್ಗಡೆಗೆ ಮದುವೆ ಮಾಡಿಕೊಡಲು ಒಪ್ಪಿದರು. ಈ ವಿಷಯ ಕಿವಿಗೆ ಬೀಳುತ್ತಲೇ ಪ್ರೇಮಿಗಳಿಬ್ಬರಲ್ಲಿಯೂ ಆತಂಕ, ಅಸಮಾಧಾನ ಉಂಟಾಗಿತ್ತು. ಈ ಮದುವೆ ತಪ್ಪಿಸಲೆಂದು ಮುಕುಂದಯ್ಯ ಪೀಂಚಲುವಿನ ಸಹಾಯ ಪಡೆದು ಚಿನ್ನಮ್ಮಳ ಮನಸ್ಸನ್ನು ಒಲಿಸಿಕೊಂಡಿದ್ದಲ್ಲದೆ, ಅವಳನ್ನು ನೇರವಾಗಿ ಸಂಧಿಸಿ ಮದುವೆಯನ್ನು ತಪ್ಪಿಸುವ ಯೋಜನೆಯನ್ನು ರೂಪಿಸುತ್ತಾನೆ.

ಅತ್ತೆಯ ಮನೆ ಸೇರಿದವನೇ ಗುತ್ತಿ, ತಿಮ್ಮಿಯೊಂದಿಗೆ ಬೆರೆಯುತ್ತಾನೆ. ಇಬ್ಬರು ಮದುವೆಯಾಗಲು ಇಚ್ಛಿಸುತ್ತಾರೆ. ಅತ್ತೆ ಸೇಸಿಯ ಸಹಾಯದಿಂದ ತಿಮ್ಮಿಯನ್ನು ಹಾರಿಸಿಕೊಂಡು ಬಂದು ಮದುವೆಯಾಗುತ್ತಾನೆ.

ಬೆಟ್ಟಳ್ಳಿಯ ದೇವಯ್ಯಗೌಡ ನಾಗರಿಕತೆಯ ಮೋಹಕ್ಕೆ ಬಲಿಯಾದವನು. ಪಾದ್ರಿಯ ಮಗಳೊಂದಿಗೆ ಸ್ನೇಹ ಬೆಳೆಸಿದ್ದಷ್ಟೇ ಅಲ್ಲ ಕಾವೇರಿಯ ಅಂಗದ ಸುಖವನ್ನು ಸವಿದವನು. ಹೀಗಾಗಿ ಪೆದ್ದು ಹೆಂಡತಿ ಎಂದರೆ ಅವನಿಗಾಗದು. ಇದೆಲ್ಲವನ್ನು ತಿಳಿದ ದೇವಮ್ಮ ಗಂಡಸರ ಹಣೆಬರಹವೇ ಹಾಗೆ, ನನ್ನ ಗಂಡ ಒಬ್ಬನನ್ನೆ ಬೇರೆ ರೀತಿ ನಡೆ ಎಂದರೆ ನಡೆಯುತ್ತಾನೆಯೇ? ಭಗವಂತ ನನ್ನ ತಾಳಿ ಕೆಡದಂತೆ ಕಾಪಾಡಿದರೆ ಸಾಕು! ದೇವರೆ ಅವರು ತಮ್ಮ ಸಂತೋಷಕ್ಕಾಗಿ ಏನನ್ನಾದರೂ ಮಾಡಲಿ ನನ್ನ ಮುತ್ತೈದೆತನ ಮಾತ್ರ ದೀರ್ಘಾಯುವಾಗಿರುವಂತೆ ಕರುಣಿಸಿ ಎಂದು ದೇವರಲ್ಲಿ ಬೇಡುತ್ತಾಳೆ. ಗಂಡ ಕ್ರಿಶ್ಚಿಯನ್ ಮತ ಸ್ವೀಕರಿಸುವನೆಂದಾಗ ಅದನ್ನು ತಪ್ಪಿಸುವಲ್ಲಿ ಸಫಲಳಾಗುತ್ತಾಳೆ.

ಹೆಂಡತಿಯ ರೋಗ ನಿವಾರಣೆಯ ಹರಕೆಗೆಂದು ತಿರುಪತಿಗೆ ಹೋದ ದೊಡ್ಡಣ್ಣ ಹೆಗ್ಗಡೆ ಎಂಟು ತಿಂಗಳಾದರೂ ಮರಳದಿರುವಾಗ ಹೆಂಡತಿ ರಂಗಮ್ಮ ಹುಚ್ಚಿಯಾಗುತ್ತಾಳೆ. ಸ್ಮರಣೆ ಕಳೆದುಕೊಂಡು ತೀರ್ಥಹಳ್ಳಿಗೆ ಬಂದ ದೊಡ್ಡಣ್ಣ ಹೆಗ್ಗಡೆಯ ಸುದ್ದಿ ಕಿವಿಗೆ ಬೀಳುತ್ತಲೇ ರಂಗಮ್ಮ ಧಾವಿಸಿ ಹೋಗುವ ಹೊತ್ತಿಗೆ ದೊಡ್ಡಣ್ಣ ಆಗಲೇ ಮೃತನಾಗಿರುತ್ತಾನೆ. ರಂಗಮ್ಮ ಗಂಡನ ಪಾದವಿಡಿದು ದುಃಖಿಸುತ್ತಿರುವಾಗಲೇ ಪ್ರಾಣ ಬಿಡುತ್ತಾಳೆ. ನಿಜವಾದ ಪತಿವ್ರತಾ ಶಿರೋಮಣಿ ಎನಿಸುತ್ತಾಳೆ.

ತಿಮ್ಮಿ ಕಾಣೆಯಾದಾಗ ಕೋಪಗೊಂಡ ಕಲ್ಲಯ್ಯಗೌಡರು ತಂದೆ ದೊಡ್ಡಬೀರ ಹಾಗೂ ಅವನ ಮಗ ಸಣ್ಣಬೀರನಿಗೆ ಕಂಬಕ್ಕೆ ಹೊಡೆಸುತ್ತಾರೆ. ಮಗನ ಚೀತ್ಕಾರವನ್ನು ಕೇಳಲಾಗದ ಸೇಸಿಯ ಕರಳು ಚುರ್ರೆನ್ನುತ್ತದೆ. ಪರಿಪರಿಯಿಂದ ಬೇಡಿ ಬಿಡಿಸಿಕೊಳ್ಳುತ್ತಾಳೆ.

ಕಲ್ಲೂರು ಮಂಜಯ್ಯ ಭಟ್ಟರು ಸೊಸೆಯನ್ನು ಬಡಿಯುವುದಷ್ಟೇ ಅಲ್ಲಾ ಆಕೆಯ ಕಾಲನ್ನು ತಿರುವಿ ಕುಂಟಿಯನ್ನಾಗಿ ಮಾಡುತ್ತಾರೆ. ಇದು ಸಾಲದೆಂಬಂತೆ ಆಕೆ ಪೂಜೆಗೆಂದು ಬಂದ ದೇವಯ್ಯನ ಮೇಲೂ ಮನಸ್ಸು ಮಾಡುತ್ತಾಳೆ. ದೇವಯ್ಯನಾದರೂ ಕಾವೇರಿ ಸಂಗದಲ್ಲಿ ಸುಖ ಪಡೆದವನು. ಶಾರೀರಿಕ ಸುಖದ ಪ್ರತಿಯಾಗಿ ದೇವಯ್ಯನು ಕೊಟ್ಟ ಉಂಗುರವನ್ನು ಕಳೆದುಕೊಂಡ ಕಾವೇರಿ ಚೀಂಕ್ರನ ಬುದ್ಧಿಗೆ ಮರುಳಾಗಿ ಸಾಬಿಗಳು ಹಾಗೂ ಚೀಂಕ್ರನು ಎಸಗಿದ ಅತ್ಯಾಚಾರದಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಮದುವೆಗೆ ಒಪ್ಪದ ಚಿನ್ನಮ್ಮ ಪೂರ್ವಯೋಜನೆಯಂತೆ ನಾಗಕ್ಕ, ಪೀಂಚಲು, ಐತ, ತಿಮ್ಮಿ, ಗುತ್ತಿಯರ ಸಹಾಯದಿಂದ ಪರಾರಿಯಾಗುತ್ತಾಳೆ. ತಂದೆಯ ನಿಧನದ ವಾರ್ತೆಯಿಂದಾಗಿ ಪ್ರಿಯಕರ ಮುಕುಂದಯ್ಯನೊಂದಿಗೆ ಊರಿಗೆ ಮರಳುತ್ತಾಳೆ. ಹಿರಿಯರ ಸಮ್ಮತಿಯಿಂದಾಗಿ ಚಿನ್ನಮ್ಮ-ಮುಕುಂದಯ್ಯರು ಮದುವೆಯ ಶುಭ ಮಹೂರ್ತಕ್ಕಾಗಿ ಕಾಯುವುದರೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ. "ಇಲ್ಲಿನ ಕಥೆಗಳಲ್ಲಿಯ ಒತ್ತು ಪರಿಸರಕ್ಕಿಂತ ಹೆಚ್ಚಾಗಿ ಮನುಷ್ಯ ವ್ಯವಹಾರಗಳ ಮೇಲಿದೆ. ಪರಿಸರ ಜೀವಂತವಾಗಿ ಚಿತ್ರಿತವಾಗಿಲ್ಲವೆಂತಲ್ಲ. ಆದರೆ ಇಲ್ಲಿ ನಡೆದದ್ದೆಲ್ಲವೂ ಮಲೆನಾಡಿನಲ್ಲಿ ನಡೆಯಿತೆಂದ ಮಾತ್ರಕ್ಕೆ ಬೇರೆ ಕಡೆಯಲ್ಲಿ ನಡೆಯಲಾರದು ಎಂದು ಹೇಳುವಂತಿಲ್ಲ. ಈ ಮಾತನ್ನು 'ಕಾನೂರು ಹೆಗ್ಗಡತಿ' ಕಾದಂಬರಿಯ ವಿಚಾರವಾಗಿ ಹೇಳಲಾಗುವುದಿಲ್ಲ. ಇಲ್ಲಿ ನಡೆದದ್ದು ಎಲ್ಲಿಯೂ ನಡೆಯಬಹುದಾದ್ದರಿಂದ ಕಾದಂಬರಿಯ ಅರ್ಥ ವ್ಯಂಜಕತೆ, ಸಾರ್ವತ್ರಿಕತೆಯ ಗುಣವನ್ನು ಪಡೆಯುತ್ತದೆ"[೩೫] ಒಟ್ಟಾರೆಯಾಗಿ ಕಾದಂಬರಿಕಾರ ಗ್ರಹಿಸಿರುವಂತೆ ಸಂಪ್ರದಾಯಿಕ ಬದುಕಿನ ಚೌಕಟ್ಟಿನ ಒಳಗೆ ಪ್ರಗತಿಪರ ವಿಚಾರಗಳನ್ನು ಎತ್ತಿ ಹಿಡಿಯಲು ಪ್ರಯತ್ನಿಸಲಾಗಿದೆ.

**ಕೊನೆಟಿಪ್ಪಣಿಗಳು**

೧. ಗಿರಡ್ಡಿ ಗೋವಿಂದರಾಜು, **ಸಾಹಿತ್ಯ ಮತ್ತು ಪರಂಪರೆ,** ಪು.೧೨೪.

೨. ಗಿರಡ್ಡಿ ಗೋವಿಂದರಾಜು, **ಕಾದಂಬರಿ ವಸ್ತು ಮತ್ತು ತಂತ್ರ,** ಪು.೪

೩. ವಿಲಿಯಂ ಹೆನ್ರಿಹಡ್ಸನ್(ಮೂಲ), ಕೃಷ್ಣಕುಮಾರ ಸಿ.ಪಿ.(ಅನು), **ಸಾಹಿತ್ಯ ಪ್ರವೇಶ,** ಪು.೯೭

೪. ಅದೇ, ಪು.೧೦೦.

೫. ಗುಲ್ವಾಡಿ ವೆಂಕಟರಾಯ, **ಇಂದಿರಾಬಾಯಿ,** ಪು.೨೬

೬. ಅದೇ, ಪು.೧೫೦.

೭. ಜಿ.ಎಸ್.ಅಮೂರ, **ಕನ್ನಡ ಕಥನ ಸಾಹಿತ್ಯ ಕಾದಂಬರಿ,** ಪು.೩೫.

೮. ಬೋಳಾರ ಬಾಬುರಾಯ, **ವಾಗ್ದೇವಿ,** ಪು.೧೮.

೯. ಅದೇ, ಪು.೧೫೪.

೧೦. ಅದೇ, ಪು.೨೯೪.

೧೧. ಕೆರೂರು ವಾಸುದೇವಾಚಾರ್ಯ, **ಇಂದಿರೆ,** ಪು.೮೯.

೧೨. ಅದೇ, ಪು.೧೪೮.

೧೩. ನಂಜನಗೂಡು ತಿರುಮಲಾಂಬಾ, **ಸುಶೀಲಾ,** ಪು.೩೦.

೧೪. ಪುಟ್ಟಣ್ಣ ಎಂ.ಎಸ್., **ಮಾಡಿದುಣ್ಣೋ ಮಹಾರಾಯ,** ಪು.೧೩೩.

೧೫. ಅದೇ, ಮೊದಲ ಆವೃತ್ತಿಯ ಮುನ್ನುಡಿ.

೧೬. ನಂಜನಗೂಡು ತಿರುಮಲಾಂಬಾ, **ಮಾತೃನಂದಿನಿ,** ಪು.೨೧೨.

೧೭. ಅದೇ, ಪು.೨೧೩.

೧೮. ನಂಜನಗೂಡು ತಿರುಮಲಾಂಬಾ, **ಪೂರ್ಣಕಲಾ,** ಪು.೨೨೪.

೧೯. ನಂಜನಗೂಡು ತಿರುಮಲಾಂಬಾ, **ವಿದ್ಯುಲ್ಲತಾ,** ಪು.೧

೨೦. ಕಲ್ಯಾಣಮ್ಮ, **ನಿರ್ಭಾಗ್ಯ ವನಿತೆ,** ಪು.೨೭೪.

೨೧. ಕಲ್ಯಾಣಮ್ಮ, ಪು.೩೦೦.

೨೨. ಕಲ್ಯಾಣಮ್ಮ, **ಸುಖಲತಾ,** ಪು.೭೪.

೨೩. ಮಾಸ್ತಿವೆಂಕಟೇಶ ಅಯ್ಯಂಗಾರ್, **ಸುಬ್ಬಣ್ಣ,** ಪು.೪೯.

೨೪. ಶಿವರಾಮಕಾರಂತ, **ಚೋಮನದುಡಿ,** ಪು.೫.

೨೫. ಶಿವರಾಮಕಾರಂತ, **ಸರಸಮ್ಮನ ಸಮಾಧಿ,** ಪು.೩೯.

೨೬. ಕೀರ್ತಿನಾಥ ಕುರ್ತಕೋಟಿ, **ಯುಗಧರ್ಮ ಹಾಗೂ ಸಾಹಿತ್ಯ ದರ್ಶನ,** ಪು.೨೭೧.

೨೭. ಶಿವರಾಮಕಾರಂತ, **ಮರಳಿ ಮಣ್ಣಿಗೆ,** ಪು.೧೨.

೨೮. ಅದೇ, ಪು.೫೨.

೨೯. ಗಿರಡ್ಡಿ ಗೋವಿಂದರಾಜ, **ಮರಳಿ ಮಣ್ಣಿಗೆ** ೨, ಕಾರಂತ ಪ್ರಪಂಚ, ಅಭಿನಂದನಾ ಗ್ರಂಥ, ಪು.೪೬೫.

೩೦. ಶಿವರಾಮಕಾರಂತ, **ಬೆಟ್ಟದ ಜೀವ,** ಪು.೨೪.

೩೧. ಜಿ.ಎಸ್.ಅಮೂರ, **ಕೃತಿ ಪರೀಕ್ಷೆ,** ಪು.೪೫.

೩೨. ಮಿರ್ಜಿ ಅಣ್ಣಾರಾಯ, **ನಿಸರ್ಗ,** ಪು.೧೪೪-೧೪೫.

೩೩. ಅದೇ, ಪು.೭೮.

೩೪. ಕಣವಿ ಮಹಾದೇವ, **ಕನ್ನಡದ ಪ್ರಾತಿನಿಧಿಕ ಪ್ರಾದೇಶಿಕ ಕಾದಂಬರಿಗಳು,** ಪು.೮೧.

೩೫. ಎ.ಎಮ್.ಇನಾಂದಾರ್, **ಕುವೆಂಪು ಕಾದಂಬರಿಗಳು,** ಪು.೫೨.

# ಅಧ್ಯಾಯ ಆರು

## ಕಾದಂಬರಿಗಳಲ್ಲಿ ಸ್ತ್ರೀ ಸಮಸ್ಯೆಗಳು

೬.೧. ಕೌಟುಂಬಿಕ ಸಮಸ್ಯೆ

೬.೨. ವಿಷಮ ದಾಂಪತ್ಯ ಸಮಸ್ಯೆ

೬.೩. ವರದಕ್ಷಿಣೆ ಸಮಸ್ಯೆ

೬.೪. ಬಂಜೆತನ ಸಮಸ್ಯೆ

೬.೫. ವಿವಾಹದ ಸಮಸ್ಯೆ

೬.೬. ಬಾಲ್ಯ ವಿವಾಹದ ಸಮಸ್ಯೆ

೬.೭. ವಿಧವಾ ವಿವಾಹದ ಸಮಸ್ಯೆ

೬.೮. ಬಹುಪತ್ನಿತ್ವ ವಿವಾಹದ ಸಮಸ್ಯೆ

೬.೯. ಸ್ತ್ರೀ ಶಿಕ್ಷಣದ ಸಮಸ್ಯೆ

೬.೧೦. ವೈಧವ್ಯದ ಸಮಸ್ಯೆ

## ಅಧ್ಯಾಯ ಆರು

# ಕಾದಂಬರಿಗಳಲ್ಲಿ ಸ್ತ್ರೀ ಸಮಸ್ಯೆಗಳು

**ಪ್ರವೇಶ**

ಸ್ವಾತಂತ್ರ್ಯಪೂರ್ವಕಾಲ ಭಾರತೀಯ ಸಮಾಜದಲ್ಲಿ ಸಂಕ್ರಮಣಕಾಲವಾಗಿತ್ತು. ಪಾಶ್ಚಾತ್ಯ ಸಂಸ್ಕೃತಿ ಮತ್ತು ಆಡಳಿತದಿಂದ ಜನತೆಯಲ್ಲಿ ಆಂದೋಲನ ರೂಪವಾಗಿ ಉದ್ಭವಿಸಿದ ಸ್ವಾತಂತ್ರ್ಯಾಪೇಕ್ಷೆ, ಸ್ತ್ರೀ ಸಮಸ್ಯೆಗಳನ್ನು ಒಳಗೊಂಡಿತ್ತು. ಈವರೆಗೂ ಬ್ರಿಟೀಷರ ದಾಸ್ಯದಲ್ಲಿ ಶೋಚನೀಯ ಬದುಕು ಸಾಗಿಸಿದ ಭಾರತೀಯ ಎಚ್ಚೆತ್ತ ಮನಸ್ಸುಗಳಿಗೆ ಹೊಸ ಆಯಾಮವಾಗಿ ಪರಿಣಮಿಸಿದ್ದೆಂದರೆ ರಾಷ್ಟ್ರೀಯ ಪುನರುತ್ಥಾನವಾದಿ ಆಂದೋಲನ. ಈ ಸಂದರ್ಭದಲ್ಲಿ ಭಾರತೀಯ ಸಂಸ್ಕೃತಿಯ ಶ್ರೇಷ್ಠತೆಯನ್ನು ಶೋಧಿಸುವ ಕೆಲಸ ಬರದಿಂದ ಸಾಗಿದ್ದು, ಭಾರತೀಯ ವಿದ್ವಾಂಸರಿಗೆ ಆತ್ಮಗೌರವದ ಪ್ರಶ್ನೆಯೂ ಆಗಿತ್ತು.

ಈ ಹಿನ್ನೆಲೆಯಲ್ಲಿ ನಡೆದುಬಂದ 'ರಾಷ್ಟ್ರೀಯ ಪುನರುತ್ಥಾನವಾದಿ ಚಳುವಳಿ' ದೇಶೀಯ ಸನಾತನ ಧರ್ಮಗಳು ಮತ್ತು ಸಮಾಜ ಸುಧಾರಕರು ತಮ್ಮ ತಾತ್ವಿಕ ಚಿಂತನೆಗೆ ಹಾಗೂ ಸಮಾಜ ಸುಧಾರಣೆಗೆ ಸ್ತ್ರೀ ಸಮಸ್ಯೆಯನ್ನೇ ವಸ್ತುವಾಗಿ ಸ್ವೀಕರಿಸುವ ಅನಿವಾರ್ಯತೆಗೆ ಸಿಲುಕಿದರು. ಸ್ತ್ರೀ ಸುಧಾರಣೆಯ ಧೋರಣೆಯುಳ್ಳ ಪಾಶ್ಚಿಮಾತ್ಯ ಮತ ಪ್ರಚಾರಕರಿಗೆ ಇದು ಮತ್ತಷ್ಟು ಪುಷ್ಟಿ ನೀಡಿತು. ದೇಶೀಯ ಸುಧಾರಣಾವಾದಿಗಳ ಫಲವಾಗಿ ಸ್ತ್ರೀ ಸುಧಾರಣಾ ಸಂಸ್ಥೆಗಳು ನೆಲೆ ಕಂಡವು. ಇದರಿಂದಾಗಿ ಸ್ತ್ರೀ ಸುಧಾರಣೆಯ ಕಾನೂನುಗಳು ಜಾರಿಯಾಗಿ, ಹಿಂದೂ ಸನಾತನ ಧರ್ಮದ ನಿರ್ಬಂಧನೆಗಳಿಗೆ ನಲುಗಿ ಮೂಲಭೂತ ಅವಶ್ಯಕತೆಗಳಿಂದಲೂ ವಂಚಿತಳಾದ ಸ್ತ್ರೀ, ಸೀಮಿತ ಕ್ಷೇತ್ರಗಳಲ್ಲಾದರೂ ಪಾದಾರ್ಪಣೆ ಮಾಡುವಂತಾಯಿತು. "…..ತಮ್ಮ ಸಂಸಾರಗಳ, ಬಂಧು ಬಳಗಗಳ ಮಧ್ಯೆ ಒಳ್ಳೆಯ ಪತ್ನಿಯರಾಗಿ, ತಾಯಂದಿರಾಗಿ, ವಿದ್ಯಾರ್ಥಿನಿಯರು ತಮ್ಮ

ಮುಂದಿನ ಜೀವನ ನಡೆಸಬೇಕು"[7] ಎಂಬ ಉದ್ದೇಶಗಳಿಂದ ನೀಡಲ್ಪಟ್ಟ ಶಿಕ್ಷಣ, ಸ್ತ್ರೀಗೆ ಪರೋಕ್ಷವಾಗಿ ತನ್ನ ಜೀವನದ ವಾಸ್ತವ ಬದುಕನ್ನು ಅರಿತುಕೊಳ್ಳಲು ದಾರಿಮಾಡಿಕೊಟ್ಟಿತು.

ಅನುಕಂಪದ ಆದರ್ಶವನ್ನು ಹೊತ್ತ ನವೋದಯ ಕಾಲದ ಕವಿಗಳು 'ತಾಯೆ ಬಾರ ಮೊಗವ ತೋರ ಎನ್ನ ಜನ್ಮದಾತೆಯೇ' ಎಂದು ಭಾವುಕರಾಗಿ ಅವಳ ಶ್ರೇಷ್ಠತೆಯನ್ನು ಹಾಡಿ ಹೊಗಳಿದರೆ, ಸಾಹಿತಿಗಳು ಸ್ತ್ರೀ ಬದುಕಿನ ವಾಸ್ತವ ಚಿತ್ರಣವನ್ನು ಜನತೆಯ ಮುಂದಿಡಲು ಪ್ರಯತ್ನಿಸಿದರು. ಒಂದು ಹೆಣ್ಣು ತನ್ನ ನೋವು-ನಲಿವುಗಳನ್ನು ಬಿಚ್ಚಿಡಲಾಗದ ಮನದಾಳದಲ್ಲಿ ಮುಚ್ಚಿಟ್ಟುಕೊಂಡು ಮೂಕ ಸಾಕ್ಷಿಯಾಗಿ ನಿಂತಿರುವಾಗ, ಅವಳ ನೋವಿಗೆ ಸ್ಪಂದಿಸಿದವರು ಪುರುಷರೇ.

ಹತ್ತೊಂಬತ್ತನೆಯ ಶತಮಾನ ಈ ನಾಡಿನ ಇತಿಹಾಸದಲ್ಲಿ ಸಂಘರ್ಷದ ಕಾಲವಾದರೆ, ಸ್ತ್ರೀ ಬದುಕಿನಲ್ಲಿ ಸಂಕ್ರಮಣದ ಕಾಲ. ಒಂದೆಡೆ ಭಾರತೀಯ ಸಮಾಜದ ಸರ್ವಾಂಗೀಣ ಅಭ್ಯುದಯಕ್ಕಾಗಿ ಹೋರಾಟದ ಮೂಲಕ ಸ್ವಾತಂತ್ರ್ಯಗಳಿಕೆ ಅನಿವಾರ್ಯವಾಗಿ ಕಂಡರೆ, ಇನ್ನೊಂದೆಡೆ ಸ್ವಾತಂತ್ರ್ಯಾಪೇಕ್ಷೆಯ ಜೊತೆಗೆ ಸ್ತ್ರೀ ಸುಧಾರಣೆಗೂ ಗಮನ ಹರಿಸಿತ್ತು. ಸ್ತ್ರೀಗೆ ಸಮಸ್ಯೆಗಳಾಗಿ ಕಾಡಿದ ಅಂಶವೆಂದರೆ ಶಿಕ್ಷಣ, ಬಾಲ್ಯವಿವಾಹ, ವಿಧವಾವಿವಾಹ, ಕೇಶಮುಂಡನೆ, ವೈಧವ್ಯ ಹಾಗೂ ಸತಿಪದ್ಧತಿಗಳ ಚಿಂತನೆ ಇತ್ಯಾದಿ ಅಂಶಗಳು.

ಭಾರತೀಯ ವೇದಕಾಲೀನ ಸ್ಥಿತಿಯನ್ನು ಗಮನಿಸಿದಾಗ, ಸ್ತ್ರೀಯ ಬದುಕು ಇಷ್ಟೊಂದು ಕ್ಲಿಷ್ಟಕರವಾಗಿರಲಿಲ್ಲ. ಆದರೆ ಕ್ರಮೇಣ ದಿನಗಳು ಉರುಳಿದಂತೆ ಅವಳ ಮೇಲೆ ಹಿಡಿತ, ನಿರ್ಬಂಧನೆಗಳು ಹೇರಲ್ಪಟ್ಟವು. ಅವಳು ಹೆಣ್ಣಾಗಿ ಹುಟ್ಟಿದ ಮಾತ್ರಕ್ಕೆ ಜೀವನವಿಡೀ ಒಂದಿಲ್ಲೊಂದು ಒತ್ತಡಕ್ಕೆ ಮಣಿದು ತನ್ನ ಬದುಕನ್ನು ಕಳೆದುಕೊಳ್ಳಬೇಕಾಯಿತು. ವೇದಕಾಲದಿಂದ ಹೆಣ್ಣು ಮೂಲೆಗುಂಪಾಗಿ ಜೀವನ ತಳ್ಳಿದ್ದಕ್ಕೆ ಸೀತೆ, ದ್ರೌಪದಿಯರ ಕಥೆಗಳೇ ಸಾಕ್ಷಿ. ಹೆಣ್ಣಿಗೆ 'ಶೀಲ ಮತ್ತು ಪಾವಿತ್ರ್ಯ ಪ್ರಾಣಕ್ಕಿಂತಲೂ ಮಿಗಿಲು' ಎಂಬುದನ್ನು ರಾಮಾಯಣ ಕೃತಿ ಜನಮನದಲ್ಲಿ ಪ್ರತಿಬಿಂಬಿಸಿದೆ. ಭಾರತೀಯ ಆರ್ಯ ಸಂಸ್ಕೃತಿ ಸ್ತ್ರೀಯರನ್ನು ವೈಭವೀಕರಿಸಲ್ಪಟ್ಟಿದ್ದು, 'ಆದರ್ಶ'ದ ಚೌಕಟ್ಟನ್ನು ಹಾಕಲಾಯಿತು. ಪುರುಷನಿಗೆ ಅನುಕೂಲವಾಗುವ ರೀತಿಯಲ್ಲಿ ಪ್ರೀತಿ-ಪ್ರೇಮ, ಭಯ-ಭಕ್ತಿ, ವಿನಯ-ವಿಧೇಯತೆ, ತ್ಯಾಗ ಮತ್ತು ಸತಿ-ಸಾಧ್ವಿ ಎಂಬ ಹೊಗಳಿಕೆಯೊಂದಿಗೆ ಗೃಹಿಣಿ ಪಟ್ಟವನ್ನು ಕಟ್ಟಿ ಸನಾತನವಾದಿ ಪುರುಷ ವ್ಯವಸ್ಥೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿತು.

ಹೀಗೆ ಸ್ತ್ರೀಯನ್ನು ಸ್ತ್ರೀತ್ವ-ಪಾತಿವ್ರತ್ಯಗಳಂತಹ ಮೌಲ್ಯದ ಮುಸುಕನ್ನು ಹೊದಿಸಿ, ಅವಳಿರುವ ಸ್ಥಿತಿಯಲ್ಲಿಯೇ ಉಳಿಸುವ ಪ್ರಬಲ ಪ್ರಯತ್ನಗಳು ನಡೆದವು. ವಿಧವಾ ವಿವಾಹ, ಸತಿ ಪದ್ಧತಿಯಂಥ

ಕಾನೂನು ಜಾರಿ ಮಾಡಿದಾಗ್ಯೂ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಬಂಧನಗಳಲ್ಲಿ ಸಿಲುಕಿದ ಶಿಕ್ಷಿತಳಲ್ಲದ ದುರ್ಬಲ ಮನಸ್ಸಿನ ಮಹಿಳೆ, ಕಾನೂನನ್ನು ಆಶ್ರಯಿಸುವಷ್ಟು ಸಶಕ್ತಳಾಗಿರಲಿಲ್ಲ. ಇಲ್ಲಿಯ ಸ್ತ್ರೀ 'ಭಾರತೀಯ ಆದರ್ಶ ನಾರಿ'ಯಾಗಿ ಒಳ್ಳೆಯ ಪತ್ನಿಯಾಗಿ ಸುಧಾರಣೆಯನ್ನು ಕಾಣಲು ಬಯಸಿದ್ದಳೇ ವಿನಃ ಪತಿಯನ್ನು ತ್ಯಜಿಸಿ ಸ್ವತಂತ್ರಳಾಗಿ ಬದುಕುವಷ್ಟು ಅವಳ ಬೌದ್ಧಿಕ ಮಟ್ಟ ಸದೃಢವಾಗಿ ರೂಪುಗೊಂಡಿರಲಿಲ್ಲ. ಜಾಗೃತರಾದ ಸ್ತ್ರೀಯರು ಕೂಡ ಆದರ್ಶ ನಾರಿಯರಾಗಿ ಬಾಳುವ ಕನಸನ್ನೇ ಭಾರತೀಯ ಸಮಾಜ ರೂಪಿಸಿತ್ತು. ಅಂತಹ ಸೀಮಿತ ಮಟ್ಟದ ಶಿಕ್ಷಣವನ್ನು ಪಡೆದ ಮಹಿಳೆ ಹೊರಬದುಕಿನ ಸಂಪರ್ಕದಲ್ಲಿ ಎಚ್ಚೆತ್ತಿದರೂ 'ಆದರ್ಶ ಸ್ತ್ರೀ' ಸಮಾಜದ ಸ್ಥಾನಮಾನಗಳು ಅವಳ ಅಂತರಾಳದಲ್ಲಿ ಹುದುಗಿ ಶೂನ್ಯವಾಗಿಸಿದ್ದವು. ಹೀಗಾಗಿ ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಮಹಿಳೆಯ ವಾಸ್ತವಿಕ ಬದುಕನ್ನು ತೆರೆದಿಡಲು ಮೊದಲು ಆಸಕ್ತಿ ತಳೆದವರು ಪುರುಷರು. ಅವರ ಸಾಹಿತ್ಯಾಭಿವ್ಯಕ್ತಿ ಸ್ತ್ರೀಪರ ಕಾಳಜಿ, ಕಳಕಳಿ ಕಂಡುಬಂದರೂ ಅದು ಅನುಕಂಪದ ಛಾಯೆ ಮಾತ್ರ. ಆದಾಗ್ಯೂ ಅವರ ವೈದಿಕ ಸನಾತನ ಮನೋಭಾವ ಮತ್ತು ಪುರುಷ ಪ್ರಧಾನ ವ್ಯವಸ್ಥೆಯ ಒಪ್ಪಿತ ಮೌಲ್ಯಗಳನ್ನು ಬಿಡದೆ, ಪಾಶ್ಚಿಮಾತ್ಯ ಶಿಕ್ಷಣ ಮತ್ತು ಸಂಸ್ಕೃತಿಯ ಪ್ರಭಾವ ಮಹಿಳೆಯ ಕಠೋರ ವಾಸ್ತವ ಬದುಕನ್ನು ತೆರೆದಿಡಲು ಪ್ರಯತ್ನಿಸಿದೆ.

ಈ ಮೂಲಕ ಹೊಸಗನ್ನಡ ಸಾಹಿತ್ಯ ಮಹಿಳಾಪರ ಚಿಂತನೆ ಮೊಟ್ಟ ಮೊದಲ ಬಾರಿಗೆ ಸ್ತ್ರೀ ಸಂವೇದನೆಯನ್ನು ಒಳಗೊಂಡಿದೆ. ಅವಳ ಬದುಕನ್ನು ಸ್ತ್ರೀಪರ ದೃಷ್ಟಿಯಿಂದ ನೋಡಲಾಗಿದ್ದರಿಂದ ಸ್ತ್ರೀ ಶೋಷಣೆಯ ಹಲವಾರು ಮುಖಗಳು ಇಲ್ಲಿ ತೆರೆದಿಡಲಾಗಿದೆ. ಇಂತಹ ಸಮಸ್ಯೆಗಳನ್ನು ಕೌಟುಂಬಿಕ, ವೈವಾಹಿಕ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಹಿನ್ನೆಲೆಯಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

### ೬.೧. ಕೌಟುಂಬಿಕ ಸಮಸ್ಯೆ

ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಗೆ ಹೇಳಿಕೊಳ್ಳುವ ಸ್ಥಾನಮಾನವಿರಲಿಲ್ಲ. ಪುರುಷ ಪ್ರಧಾನ ಮೌಲ್ಯಗಳೊಳಗೆ ಸತ್ವಹೀನ ಬದುಕನ್ನು ಬಾಳಬೇಕಾಗಿತ್ತು. ಅವಳ ಆಸೆ, ಆಕಾಂಕ್ಷೆ ಮತ್ತು ಅಭಿಲಾಷೆಗಳೆಲ್ಲವೂ ಪುರುಷನ ದೌರ್ಜನ್ಯಕ್ಕೆ ಒಳಗಾಗಿ ದಮನಗೊಂಡಿದ್ದವು. ವಿವಾಹ ಮತ್ತು ಕುಟುಂಬ ಎಂಬ ಎರಡು ಸಾಮಾಜಿಕ ಸಂಸ್ಥೆಗಳು ಅವಳನ್ನು ಮತ್ತಷ್ಟು ಬಂಧಿಸಲ್ಪಟ್ಟವು. ವಿವಾಹ ಎಂಬ ಸಂಸ್ಥೆ ಹೆಣ್ಣನ್ನು ಕುಟುಂಬದ ನಾಲ್ಕು ಗೋಡೆಗಳಿಗೆ ಸೀಮಿತಗೊಳಿಸಿ ಅವಳ ಶ್ರಮವನ್ನು ಅನುತ್ಪಾದಕವೆಂದು ಪರಿಗಣಿಸಿತು. ಹಾಗೆ ನೋಡಿದರೆ ವೇದ ಕಾಲದ ಸಮಾಜದ ಸ್ತ್ರೀ ಉತ್ತಮ ಸ್ಥಾನಮಾನ ಪಡೆದಿದ್ದಳು. ನಂತರ ಅವಳ ಮೇಲೆ ನಿರ್ಬಂಧಗಳನ್ನು ಹೇರಿ

ಮೂಲೆಗುಂಪಾಗಿಸಿದರು. ಆಧುನಿಕ ನಾಗರಿಕತೆಯಲ್ಲೂ ಹೆಣ್ಣು ಭ್ರೂಣಾವಸ್ಥೆಯಿಂದಲೇ ಶೋಷಣೆಗೆ ಒಳಗಾಗಿದ್ದಾಳೆ.

ಲೇಖಕಿ ನಂಜನಗೂಡು ತಿರುಮಲಾಂಬಾ "ಆಟ-ಪಾಠ ಓದು-ಬರಹಗಳಲ್ಲೆ ಕಾಲ ಕಳೆಯುವುದಕ್ಕೆ ನಾವೇನು ಹುಡುಗರೇ?"[೨] ಎಂದು ಪ್ರಶ್ನಿಸುವುದಷ್ಟು ಸಂಪ್ರದಾಯಶೀಲಳು. ಇದನ್ನು ಪ್ರತಿಬಿಂಬಿಸುವಂತಿರುವ 'ನಿಸರ್ಗ' ಕಾದಂಬರಿಯ ಸುಂದರಾಬಾಯಿ, ರತ್ನವ್ವ, ಹೆಣ್ಣು ಮಕ್ಕಳು ಕುಟುಂಬದ ಚೌಕಟ್ಟಿನಲ್ಲಿ ಹೇಗೆ ನಡೆಯಬೇಕೆಂಬುದನ್ನು ಸೂಚ್ಯವಾಗಿ ಹೇಳುತ್ತಾರೆ. ಬಾಲ್ಯದಲ್ಲಿ ಮದುವೆ ಮಾಡಿಕೊಟ್ಟ ತಾಯಿ ರತ್ನವ್ವ ಮಗಳನ್ನು ಕುರಿತು "ಯಾವ ಆಟ ಇಕ್ಕೇದಾ.... ದೊಡ್ಡಾಕಿ ಆದಳು.... ಮದುವಿ ಆಯ್ತು, ನಾಳಿ ಒಳಗಾದರ ಗಂಡನ ಮನಿಗಿ ಹೋಗಾಕಿ. ಇನ್ನ ಆಟ ಅಂದರs ಜರಾ ತಿಳಿಬಾರದು? ಅಡಗಿ ಹಂಬಲ ಮಾಡಲಾಕ ಕಲಿಬೇಕ... ಅಡಗಿ ಮನ್ಯಾಗ ಇರಬೇಕ... ಎಲ್ಲಾ ಬಿಟ್ಟ ನಾಲ್ಕು ಹುಡುಗರ ಸಂತಿ ನರಸ್ಕೊಂಡು ಹಗಲಿ ರಾತ್ರಿ ಆಡದಾಗs ಇರತಾಳ....."[೩] ಎಂದು ಸಿಡುಕಿನ ಮಾತುಗಳಾಡಿದರೆ ಮಗಳು ಗಂಡನ ಮನೆಯಲ್ಲಿ ಹೇಗೆ ನಡೆಯಬೇಕೆಂಬುದನ್ನು ಕುರಿತು "ಈಗ್ಯಾನನೀ ಸಣ್ಣಾಕಿ ಅಲ್ಲ, ಹರಿವತ್ತ ನಿನ್ನಾ ಎಬ್ಬಿಸಬೇಕು. ಹಿಂಗ್ಯಾನ ಇಲ್ಲ. ಅತ್ತಿ ಎಬ್ಬಿಸುವಂಕ್ಕಿಂತ ಮೊದಲು ಎದ್ದ ಬೀಸಕ್ಕ ಹಾಕಬೇಕ..."[೪] ಎಂದು ಬುದ್ಧಿ ಹೇಳುವುದರ ಹಿಂದೆ ಪ್ರಧಾನತೆಯ ನೀತಿ ಇದೆ. ಇದು ಕುಟುಂಬದಲ್ಲಿ ಹೆಣ್ಣಿಗಿದ್ದ ಸ್ಥಾನಮಾನದ ವಾಸ್ತವ ಚಿತ್ರಣ.

ವಿವಾಹ ಎಂಬುದು ಕೌಟುಂಬಿಕ ಸಮಾಜದಲ್ಲಿ ಬಂಧಿಸುವ ಒಂದು ಸಾಧನ. ಇಲ್ಲಿ ಮದುವೆಯಾಗುವ ಹೆಣ್ಣು ಸ್ವತಂತ್ರಳಲ್ಲ. ಹಿರಿಯರು ತೋರಿದ ವರನಿಗೆ ಮಾಲೆ ಹಾಕಬೇಕು. ಇಲ್ಲಿಯ ಬಹುತೇಕ ವಿವಾಹಗಳು ಪುರುಷನ ಸಮ್ಮತಿಯ ಮೇಲೆ ನೆರವೇರಿದೆ. ಸ್ತ್ರೀಯ ಒಪ್ಪಿಗೆ ಇಲ್ಲದಿದ್ದರೂ ಅದನ್ನು ಗಣನೆಗೆ ತೆಗೆದುಕೊಳ್ಳುತ್ತಿರಲಿಲ್ಲ. ಇದಕ್ಕೆ 'ಕಾನೂರು ಹೆಗ್ಗಡಿತಿ' ಕಾದಂಬರಿಯ ಸೀತೆ ಮತ್ತು ಗಂಗೆಯ ಮದುವೆ ನಿದರ್ಶನ. ಸೀತೆ ಹೂವಯ್ಯನನ್ನು ಪ್ರೀತಿಸಿದ ವಿಷಯ ತಾಯಿ ಗೌರಮ್ಮಳಿಗೆ ತಿಳಿದಿದ್ದರೂ, ತನ್ನ ಗಂಡನ ಮುಂದೆ ನಿವೇದಿಸುವ ಧೈರ್ಯ ಮಾಡದೆ ಪುರುಷ ಪ್ರಧಾನ ವ್ಯವಸ್ಥೆಯ ಒಳಗೆ ಅಸಹಾಯಕಳಾಗುತ್ತಾಳೆ.

ಪುರುಷ ಪ್ರಧಾನ ಸಮಾಜದಲ್ಲಿ ಕುಟುಂಬದ ಒಡೆಯ ಪುರುಷ. ಈ ಕುಟುಂಬದ ಅಡಿಯಲ್ಲಿ ಬರುವ ಸ್ತ್ರೀಯರೆಲ್ಲರೂ ಗುಲಾಮರಂತೆ ದುಡಿಯುವ ಆಳುಗಳಷ್ಟೇ. ಅವರಿಗೆ ಅವರದೇ ಆದ ಆಸೆ-ಅಭಿಲಾಷೆ. ವ್ಯಕ್ತಿ ಸ್ವಾತಂತ್ರ್ಯಕ್ಕೆ ಎಡೆಯಿಲ್ಲ. ತಾನು ಏನು ಮಾಡಿದರೂ ಪುರುಷನ ಅನುಮತಿ ಇಲ್ಲದೆ ಮಾಡುವಂತಿಲ್ಲ. ಮರಳಿ ಮಣ್ಣಿಗೆ ಕಾದಂಬರಿಯ ರಾಮೈತಾಳರು "ಎರಡನೆಯ ಮದುವೆಗೆ ಸಿದ್ಧತೆ ನಡೆಸುವವನಾದರು ಸ್ತ್ರೀಯರಿಗೆ ಹೇಳಿ ಪ್ರಯೋಜನವೇನು?

ಎಂಬ ಮನೋಭಾವದವರು. ತಂಗಿ ಗಂಗೆಯಿಂದ ಪ್ರಶ್ನಿಸಿದ್ದಕ್ಕೆ ರಾಮೈತಾಳರು 'ಸರಸ್ವತಿ ಸುಮ್ಮನೆ ಹೇಳಿದ್ದಕ್ಕೆ ಎದುರು ಮಾತನಾಡಬೇಕು"[೫] ಎನ್ನುವಲ್ಲಿ ಪುರುಷನ ಅಧಿಕಾರವಿದೆ. ಹೀಗೆ ಕುಟುಂಬದ ಚೌಕಟ್ಟಿನ ಒಳ-ಹೊರ ವ್ಯವಹಾರಗಳಿಗೆ ಅಂತಿಮ ನಿರ್ಣಯ ಪುರುಷನದು. ಅವನ ನಿರ್ಣಯದ ವಿರುದ್ಧ ಸ್ತ್ರೀ ವಾದಿಸುವಂತಿಲ್ಲ. ಹಾಗೆಯೇ 'ಮಾಡಿದುಣ್ಣೋ ಮಹಾರಾಯ', ಕಾದಂಬರಿಯ ಸೀತೆ, 'ಸುಬ್ಬಣ್ಣ' ಕಾದಂಬರಿಯ ಲಲಿತ ಹಾಗೂ 'ನಿಸರ್ಗ' ಕಾದಂಬರಿಯ ತಾರಾ ಈ ಎಲ್ಲಾ ಹೆಣ್ಣುಗಳು ಅತ್ತೆಯರ ಕೋಪಕ್ಕೆ ಗುರಿಯಾಗಿವೆ. ದಿನವಿಡೀ ದುಡಿದರೂ ನಿಂದೆ, ಬೈಗುಳ, ಹೊಡೆತಗಳಿಂದ ತಪ್ಪಿಸಿಕೊಂಡವರಲ್ಲ, 'ನಿರ್ಭಾಗ್ಯ ವನಿತೆ' ಕಾದಂಬರಿಯ ಉಪೇಂದ್ರನ ಹೆಂಡತಿ ಮದುವೆ ವಯಸ್ಸಿನ ಮಗನಿದ್ದಾಗಲೂ ಗಂಡನ ಎದುರು ನಿಂತು ಒಮ್ಮೆಯೂ ಮಾತನಾಡಿದವಳಲ್ಲ. 'ನಿಸರ್ಗ' ಕಾದಂಬರಿಯ ತಾರಾ ತನ್ನ ತವರಿನ ಆಸ್ತಿಯ ಹಿನ್ನೆಲೆಗಾಗಿಯೇ ಅತ್ತೆ ಚಿಮ್ಮವ್ವಳಿಂದ ಕಡೆಗಣಿಸಲ್ಪಟ್ಟವಳು. 'ಸರಸಮ್ಮನ ಸಮಾಧಿ' ಕಾದಂಬರಿಯ ಭಾಗೀರಥಿ ಪಾತ್ರ ಇದೆ ನೆಲೆಯಲ್ಲಿ ನಿಲ್ಲುವಂಥದ್ದು.

## ೬.೨. ವಿಷಮ ದಾಂಪತ್ಯ ಸಮಸ್ಯೆ

'ಸರಸ ಜನನ ವಿರಸ ಮರಣ ಸಮರಸವೇ ಜೀವನ' ಎಂಬ ಕವಿವಾಣೀಯಂತೆ ಸತಿ-ಪತಿಯರಿಬ್ಬರ ಜೀವನ ದೈಹಿಕ ಮತ್ತು ಮಾನಸಿಕವಾಗಿ ನೆಮ್ಮದಿಯಾಗಿದ್ದಾಗ ಮಾತ್ರ ಅವರ ದಾಂಪತ್ಯ ಸುಖಮಯವಾಗಲು ಸಾಧ್ಯ. ದಾಂಪತ್ಯದಲ್ಲಿ ವಿರಸತೆ ಉಂಟಾದಾಗ ವಿಷಮ ದಾಂಪತ್ಯವೆನಿಸಿಕೊಳ್ಳುವುದು ಸಾಮಾನ್ಯ. ಈ ನೆಲೆಯಲ್ಲಿ 'ಸರಸಮ್ಮನ ಸಮಾಧಿ' ಕಾದಂಬರಿಯ ಮಧ್ಯಮ ವಯಸ್ಸಿನ ಜಾನಕಿ ತನ್ನ ಮೂವತ್ತೈದು ವರ್ಷಗಳಲ್ಲಿ ಅನುಭವಿಸಿದ ವಿರಸವನ್ನು ಗೆಳತಿ ಸೀತೆಯೊಂದಿಗೆ ತೋಡಿಕೊಳ್ಳುವಾಗ "ಈ ಮನೆಯಲ್ಲಿ ಇಷ್ಟು ವರ್ಷಗಳು ನಾನು ಕಳೆದದ್ದು ಅಂತಿಯಾ, ಅದು ಹೀಗೆ ರಕ್ತಸುರಿಸಿದ್ದು ಅಂತಿಟ್ಟುಕೋ! ಐದು ಮಕ್ಕಳನ್ನು ಹಡೆದ ಹೊಟ್ಟೆಯಿದು. ವರ್ಷ ಮೂವತ್ತೈದು ಮೀರಿತು. ಈ ಕುಂಕುಮದ ಗತಿ ಇದು ಇದ್ದರೂ ಇಷ್ಟೇ ಇಲ್ಲದಿದ್ದರೂ ಇಷ್ಟೇ"[೬] ಎಂದು ನಿಟ್ಟುಸಿರು ಬಿಡುವ ಜಾನಕಿಗೆ ಲೈಂಗಿಕತೆಯ ಕೊರಗಿಲ್ಲ. ಆದರೆ, ಮಾನಸಿಕ ನೆಮ್ಮದಿಗಾಗಿ ಹಂಬಲಿಸಿ ವಿಫಲಳಾಗಿದ್ದಾಳೆ. ಇಲ್ಲಿ ಜಾನಕಿಗೆ ಲೈಂಗಿಕ ಸಂತೃಪ್ತಿಯಾದರೂ ಇದೆ. 'ಮರಳಿ ಮಣ್ಣಿಗೆ' ಕಾದಂಬರಿಯ ಪಾರ್ವತಿಗೆ ಅದು ಕೂಡ ಇಲ್ಲ. ಕಾದಂಬರಿಕಾರರು ಗುರುತಿಸುವಂತೆ "ಹೊಟ್ಟೆಯಲ್ಲಿ ತುಂಬಿದ ತನ್ನೆಲ್ಲ ಪ್ರೀತಿ-ಮಮತೆಗಳನ್ನು ಅವಳು ಯಾರ ಮೇಲೆ ತಳೆಯುವುದು? ಐತಾಳರೋ ಹಗಲು ಮನೆಯಲ್ಲಿರುವುದು ಕಡಿಮೆ. ಇದ್ದರೂ ಹೆಂಡತಿಯೊಡನೆ ಪಟ್ಟಾಂಗ ಹೊಡೆಯುವ ಹೆಣ್ಮರುಳರೇ! ಇನ್ನು ರಾತ್ರಿ ಹಗಲೆಲ್ಲಾ ದುಡಿದ ಆ ಜೀವಕ್ಕೆ ಕರೆಯುವ ಮೊದಲೇ ನಿದ್ರೆ ತುಂಬುತ್ತದೆ. ಆಗಲೂ ಯಜಮಾನರೊಡನೆ ನಯ-

ಭಯವಿಲ್ಲದೇ ಮಾತನಾಡುವಂತಿಲ್ಲ."[೭] ಇಂತಹ ನೀರಸ ಬದುಕನ್ನು ಸಹ್ಯ ಮಾಡಿಕೊಂಡವಳು ಪಾರ್ವತಿ. ಇದೇ ನೆರಳಿನಲ್ಲಿಯೇ ಸಾಗಿದ ಮಾಡಿದುಣ್ಣೋ ಮಹಾರಾಯ ಕಾದಂಬರಿ ಸೀತೆಯದು ದುರಂತ ಪಾತ್ರ.

ಈ ಮೂರು(ಜಾನಕಿ, ಪಾರ್ವತಿ ಮತ್ತು ಸೀತೆ) ಜನ ಸ್ತ್ರೀಯರು ಅಶಿಕ್ಷಿತರು, ಸಂಪ್ರದಾಯ ಮನಸ್ಕರಾಗಿದ್ದು ಧರ್ಮದ ಚೌಕಟ್ಟುಗಳನ್ನು ಮೀರಿ ನಡೆಯಲು ಇಚ್ಛಿಸಿದವರಲ್ಲ. ಅಂತೆಯೇ ತಮಗಾದ ನೋವನ್ನು ತಮ್ಮಲ್ಲಿಯೇ ಇರಿಸಿಕೊಂಡಿದ್ದಾರೆ. 'ಸುಶೀಲೆ' ಮತ್ತು 'ಪ್ರಿಯಂವದಾ' ಕಾದಂಬರಿಗಳ ಸುಶೀಲೆ, ಪ್ರಿಯಂವದಾ ವಿದ್ಯಾವಂತೆಯರಾಗಿಯೂ ಸತೀತ್ವವನ್ನು ಅಪ್ಪಿಕೊಂಡು ಬದುಕಿದವರು. ಸುಶೀಲೆಯ ಪತಿ ವಿನೋದ ವೇಶ್ಯೆಯ ಸಂಗ ಮಾಡಿದನು. ಹೆಂಡತಿಯನ್ನು ಇಲ್ಲದ ಸಂಶಯಗಳಿಂದ ಹೊಡೆತ, ಬಡಿತಗಳಿಂದ ಹಿಂಸಿಸಿದಾಗಲೂ ಸುಶೀಲೆ ಎದುರು ನುಡಿದವಳಲ್ಲ. ಕಣ್ಣಿಗೆ ಕಾಣುವ ದೇವನೆಂದರೆ 'ಪತಿ' ಎಂದು ಭಾವಿಸಿದವಳು. ಆದರೆ 'ಸರಸಮ್ಮನ ಸಮಾಧಿ' ಕಾದಂಬರಿಯ ಸುನಾಲಿನಿ, ಭಾಗೀರಥಿ, ವಿದ್ಯಾವಂತೆಯಾಗಿ ವೈಚಾರಿಕ ನಿಲುವನ್ನು ಅಪ್ಪಿಕೊಂಡು ಬದುಕಿದ್ದಾರೆ. ಅಂತೆಯೇ ಪುರುಷನಿಂದ ಸಿಗಬೇಕಾದ ಸುಖ-ಸಂತೋಷಗಳು ಸಿಗದಿದ್ದಾಗ ಸಹಜವಾಗಿಯೇ ಸಿಡಿದೇಳುತ್ತಾರೆ. ಸದಾ ವ್ಯಾಪಾರ-ವಹಿವಾಟುಗಳಲ್ಲಿ ಮುಳುಗಿದ್ದ ಅಣ್ಣಪ್ಪಯ್ಯ ಪ್ರೀತಿ, ಪ್ರೇಮಕ್ಕಾಗಿ ಅಷ್ಟು ತಲೆ ಕೆಡಿಸಿಕೊಂಡವನಲ್ಲ. ಆದರೆ ಆಧುನಿಕ ಪ್ರಜ್ಞೆಯುಳ್ಳ ಸುನಾಲಿನಿ ಸ್ವಾಭಿಮಾನಿಯಾಗಿದ್ದು ತನ್ನತನವನ್ನು ಮಾರಿಕೊಂಡು ಜೀವನ ನಡೆಯಿಸಲು ಸಿದ್ಧಳಿಲ್ಲ. ಹಾಗೆಯೇ 'ನಿಸರ್ಗ' ಕಾದಂಬರಿಯ ಇಂದಿರೆಯ ಪಾತ್ರ. ಬಾಲ್ಯದಲ್ಲಿಯೇ ಅನಂತನನ್ನು ಕೈ ಹಿಡಿದ ಇಂದಿರೆ; ಜೀವನ ಪೂರ್ತಿ ಬಾಳಿ ಆತನ ದುಶ್ಚಟಗಳನ್ನು ತಿಳಿದಿದ್ದರು ಇಂದಿರೆ ತನ್ನ ನೋವನ್ನು ಹೊರಹಾಕಲಾಗದ ಸಂದಿಗ್ಧತೆಯಲ್ಲಿ ಬದುಕುತ್ತಾಳೆ. ಹೀಗಾಗಿ ಹೆಣ್ಣಿನ ಜೀವನ ಯಾತಕ್ಕೂ ಬೇಡವಾದುದು. ಅದಾಗ್ಯೂ ತನ್ನೆಲ್ಲಾ ಐಹಿಕ ಸುಖವನ್ನು ಬದಿಗೊತ್ತಿ ಬದುಕು ಸಾಗಿಸುತ್ತಾಳೆ. ಇವೆಲ್ಲಕ್ಕೂ ಹೆಚ್ಚಾಗಿ 'ಸರಸಮ್ಮನ ಸಮಾಧಿ' ಕಾದಂಬರಿಯ ಚಿತ್ರಣ ಕಣ್ಣಿಗೆ ಕಟ್ಟುವಂತಿದೆ. ದಾಂಪತ್ಯದಲ್ಲಿ ಸುಖ ಕಾಣದೆ, ಸುಖ ದಾಂಪತ್ಯಕ್ಕಾಗಿ ಸರಸಮ್ಮಳಿಗೆ ಮೊರೆ ಹೋದರೆ ಸ್ವತಃ ಸರಸಮ್ಮಳೇ ವಿಷಮ ದಾಂಪತ್ಯವನ್ನು ಅನುಭವಿಸಿದವಳು. ತನ್ನನ್ನು ರೋಗಿಷ್ಠ ಗಂಡನೊಂದಿಗೆ ಭಸ್ಮಗೊಳಿಸಿದ ಸಮಾಜದ ವಿರುದ್ಧ ಸಿಡಿಯುತ್ತಾಳೆ. ತಾನು ನಿಜ ಜೀವನದಲ್ಲಿ ಅನುಭವಿಸದ ಲೈಂಗಿಕ ಸುಖಕ್ಕಾಗಿ ಪರಿತಪಿಸುವ ಪ್ರೇತ ಸರಸಮ್ಮಳ ವಾಸ್ತವ ಚಿತ್ರಣವನ್ನು ನೀಡುತ್ತದೆ.

### ೬.೩. ವರದಕ್ಷಿಣೆ ಸಮಸ್ಯೆ

ಸ್ವಾತಂತ್ರ್ಯಪೂರ್ವ ಕನ್ನಡ ಕಾದಂಬರಿಗಳಲ್ಲಿ ವರದಕ್ಷಿಣೆ ಪದ್ಧತಿ ಅಷ್ಟೊಂದು ಸಮಸ್ಯೆಯಾಗಿ ಕಾಡದೇ ಇದ್ದರೂ, ಸ್ತ್ರೀಯನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದಾಗ ಸಮಸ್ಯೆಯಾಗಿ ಪರಿಣಮಿಸಿದೆ.

ಗುಲ್ವಾಡಿ ವೆಂಕಟರಾಯರ ಮೊದಲ ಸಾಮಾಜಿಕ ಕೃತಿ 'ಇಂದಿರಾಬಾಯಿ' ಹಾಗೂ ಆರ್.ಕಲ್ಯಾಣಮ್ಮ ನವರ 'ನಿರ್ಭಾಗ್ಯ ವನಿತೆ' ಕಾದಂಬರಿಗಳಲ್ಲಿ ವರದಕ್ಷಿಣೆ ಪದ್ಧತಿಯ ಸ್ಪಷ್ಟ ಚಿತ್ರಣವಿದೆ. 'ಇಂದಿರಾಬಾಯಿ' ಕಾದಂಬರಿಯ ಭೀಮರಾಯ ಹಾಗೂ ತ್ರ್ಯಯಂಭಕರಾಯ ತಮ್ಮ ಮಕ್ಕಳ ಮದುವೆಯ ವಿಷಯ ಮಾತನಾಡುವಾಗ ಶ್ರೀಮಂತ ಮನೆತನದವರಾದ ಇವರಿಗೆ ಎಲ್ಲವೂ ಗೌಣವಾಗಿ ಪರಿಣಮಿಸಿದರೆ ವರದಕ್ಷಿಣೆ ಪ್ರಧಾನ ವಿಷಯವಾಗುತ್ತದೆ.

ತ್ರಯಂಬಕ ರಾಯ: "...ಮಿಕ್ಕೆದೆಲ್ಲವು ಅಲ್ಪ ವಿಷಯಗಳೇ ತಾನೆ?(ವರದಕ್ಷಿಣೆ ಎನ್ನುವಷ್ಟರಲ್ಲಿ ಸ್ಪಷ್ಟತೆ ಬರುತ್ತದೆ.)

ಭೀಮರಾಯ: ಅದೇನು ದೊಡ್ಡಮಾತು? ನನ್ನ ಶಕ್ತಿ ಮೀರಿ ನಾನು, ತಮ್ಮ ಶಕ್ತಿ ಮೀರಿ ನಡೆದುಕೊಳ್ಳದೆ ಇರಲಾರೆದುದ್ದೇ."[೮]

ಎಂಬ ಪ್ರಸ್ತಾಪವನ್ನು ನೋಡಿದಾಗ ವರದಕ್ಷಿಣೆ ಕೊಡುವಿಕೆಗೆ ಶ್ರೀಮಂತ ಬ್ರಾಹ್ಮಣ, ಪುರೋಹಿತ ಮನೆತನಗಳಲ್ಲಿ ಸಹಮತವಿದ್ದಂತೆ ಕಾಣುತ್ತದೆ. ಅಷ್ಟೇ ಅಲ್ಲ, ವರದಕ್ಷಿಣೆ ಕೊಡುವುದು ಮತ್ತು ತೆಗೆದುಕೊಳ್ಳುವುದು ಅವರಿಗೆ ಪ್ರತಿಷ್ಠೆಯ ವಿಷಯವೂ ಆಗಿತ್ತು. ಇಲ್ಲಿ ವರದಕ್ಷಿಣೆ ಹೆಚ್ಚಾಗಿ ಬೆಂಬಲಿಸಿದ್ದು, ಶ್ರೀಮಂತ ವರ್ಗ. ಇದಕ್ಕೆ ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಕಾದಂಬರಿಯೇ ಸಾಕ್ಷಿ. ಆದರೆ ಈ ಪದ್ಧತಿ ಬಡಬ್ರಾಹ್ಮಣ ಮನೆತನದ ಕನ್ಯಾಪಿತೃಗಳನ್ನು ಮಾತ್ರ ಹೆಚ್ಚಾಗಿ ಕಾಡದೆ ಇಂತಹ ಸ್ಥಿತಿಯನ್ನು ಆರ್.ಕಲ್ಯಾಣಮ್ಮನವರ 'ನಿರ್ಭಾಗ್ಯ ವನಿತೆ' ಕಾದಂಬರಿ ಚಿತ್ರಿಸುತ್ತದೆ. ಇಂದಿರೆಯ ತಂದೆ ಸತೀಶ, ತಾಯಿಯ ಮಾತನ್ನು ಅಲ್ಲಗೆಳೆಯಲಿಕ್ಕಾಗದೇ ತಂಗಿಯ ಮಗ ನಾರಾಯಣನಿಗೆ ಕೊಟ್ಟು ಮದುವೆ ನೆರವೇರಿಸಲು ಒಪ್ಪಿಕೊಂಡಾಗ ಉಪೇಂದ್ರನ ತಂಗಿ ಕಾಳೀ ಮಣಿಯ "...ಸಾವಿರ ರೂಪಾಯಿಗೆ ಉಡಿದಾರವೂ, ೧೦೦೦ ರೂಪಾಯಿ ವರದಕ್ಷಿಣೆಯೂ ಕೊಟ್ಟ ಹೊರತು ವಿವಾಹವಾಗುವುದು ದುರ್ಲಭವೆಂದು ಖಂಡಿತವಾಗಿ ಬರೆದುಬಿಡು"[೯] ಎನ್ನುವಲ್ಲಿ ವರದಕ್ಷಿಣೆ ಎಂಬ ಪಿಶಾಚಿಯಿಂದಾಗಿ ರಕ್ತ ಸಂಬಂಧದ ಕಳ್ಳು-ಬಳ್ಳಿ, ಪ್ರೀತಿ-ಪ್ರೇಮಗಳು ಇಲ್ಲಿ ಗೌಣವಾಗುತ್ತವೆ. ಸಂಬಂಧವನ್ನು ಮರೆತು ದಕ್ಷಿಣೆಗಾಗಿ ಪರದಾಡುವುದನ್ನು ಕಾಣುತ್ತೇವೆ.

### ೬.೪. ಬಂಜೆತನ

ಕುಟುಂಬದಲ್ಲಿ ಸ್ತ್ರೀಗೆ ತಕ್ಕಷ್ಟು ಸ್ಥಾನಮಾನ ನೀಡಲಾಗಿರುವುದು. ಅವನ ತಾಯ್ತನಕ್ಕಾಗಿ ಇಲ್ಲವೇ ವಂಶೋದ್ಧಾರಕನನ್ನು ನೀಡುವವಳು ಎಂಬುದಕ್ಕಾಗಿ ಸಂತಾನ ಫಲವಿಲ್ಲದ ಸ್ತ್ರೀ "ಬಂಜೆ'ಯಾಗಿ ಸಮಾಜದ ನಿಂದನೆಗೆ ಗುರಿಯಾಗಿದ್ದು, ಅವಳ ಬಾಳು ಮನೆಯ ಮುಂದಿನ ನಾಯಿಗಿಂತಲೂ ಕೀಳಾಗಿದೆ."[೧೦] ಈ ಮೂಲಕ ತನ್ನ ನೋವನ್ನು ತೋಡಿಕೊಳ್ಳುವ ಜನಪದ

ಮಹಿಳೆ ಇಡೀ ಸ್ತ್ರೀ ಸಮಾಜದ ಬಂಜೆಯರ ಬದುಕಿನ ಚಿತ್ರಣ ನೀಡುತ್ತಾಳೆ. ಸಾಮಾಜಿಕ ನೆಲೆಯಲ್ಲಿ ವಿಚಾರ ಮಾಡಿದಾಗ ಬಂಜೆತನ ಎಂಬುದು ಹೆಣ್ಣಿಗೆ ಮಾತ್ರ ಸೀಮಿತವಾಗದೇ ಹೆಣ್ಣು ಗಂಡಿನ ಜೈವಿಕ ಬದುಕಿಗೆ ಸಂಬಂಧಿಸಿದೆ. ಆದರೂ ಸಹ ಇಲ್ಲಿ ಪುರುಷ ತನ್ನ ತಪ್ಪಿನ ಬಗೆಗೆ ಅರಿವುಳ್ಳವನಾಗಿದ್ದರೂ ಆ ತಪ್ಪನ್ನು ಮುಚ್ಚಿಕೊಳ್ಳುವುದಕ್ಕಾಗಿ ಹೆಣ್ಣನ್ನು ಶೋಷಿಸುವ ಅನಿವಾರ್ಯತೆಗಿಳಿದಿದ್ದಾನೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯ ಅಂಶಗಳನ್ನು ಸೂಕ್ಷ್ಮವಾಗಿ ಗ್ರಹಿಸಿದ ಲೇಖಕಿ ಶ್ರೀಮತಿ ಬಿ.ಎನ್.ಸುಮಿತ್ರಾಬಾಯಿ ಈ ಜಟ್ಟಮ್ಮರಂಥ ದೃಢಕಾಯದ ಆರೋಗ್ಯಪೂರ್ಣ ಪತ್ನಿಯಿದ್ದು, ಗಂಡು ಸಂತಾನದ ನೆಪದಿಂದ ಇನ್ನೊಂದು ಹೆಣ್ಣನ್ನು ಮದುವೆಯಾಗಲು ಗುಹ್ಯ ರೋಗಿ ಭರಮಯ್ಯ ಹೆಗ್ಗಡೆ ಪಡುವ ಪಾಡಿನ ಹಿಂದೆ ಹೆಣ್ಣಿನ ಬಗೆಗಿನ ಅಪನಂಬಿಕೆಗಿಂತ ಹೆಚ್ಚಾಗಿ ತನ್ನ ಪೌರುಷವನ್ನು ಸಾಬೀತುಪಡಿಸುವ ಹಪಾಹಪಿಯೇ ತೋರುತ್ತದೆ."[೧೧] ಹೀಗೆ ತನ್ನ ತಪ್ಪನ್ನು ಮುಚ್ಚಿಕೊಳ್ಳಲು ಹೆಣ್ಣನ್ನು ಹೊಣೆಯಾಗಿಸಿದ್ದಾನೆ.

ಸ್ವಾತಂತ್ರ್ಯ ಪೂರ್ವದ ಸ್ತ್ರೀ ಸಂಪ್ರದಾಯ ಹಾಗೂ ಧರ್ಮದಲ್ಲಿ ನಂಬಿಕೆಯುಳ್ಳವಳಾಗಿ ಅನಕ್ಷರಸ್ಥಳಾಗಿರುವ ಕಾರಣವಾಗಿಯೇ ಪುರುಷನ ಅಧಿಕಾರವನ್ನು ಮೌನವಾಗಿಯೇ ಒಪ್ಪಿಕೊಂಡಿದ್ದಾಳೆ. ಮಕ್ಕಳಾಗದ ಸ್ತ್ರೀ ಎಲ್ಲವೂ ತನ್ನ ಕರ್ಮದ ಫಲ ಎಂದು ಭಾವಿಸುವುದುಂಟು. ಆದರೆ ಈ ಸಮಸ್ಯೆಗೆ ಪುರುಷನನ್ನು ಗುರಿ ಮಾಡುವುದಿಲ್ಲ. 'ಮರಳಿ ಮಣ್ಣಿಗೆ' ಕಾದಂಬರಿಯ ಪಾರ್ವತಿಗೆ ನ್ಯಾಯವಾಗಿ ಸಿಗಬೇಕಾದ ಲೈಂಗಿಕ ಸುಖ ಸಿಕ್ಕಿರಲಿಲ್ಲ ಎಂಬ ಅಂಶ ಕಾದಂಬರಿಯಲ್ಲಿದೆ. ಹೀಗಿದ್ದರೂ ಪಾರ್ವತಿ "ಅಯ್ಯೋ ನನ್ನ ಹಣೆಯಲ್ಲಿ ದೇವರು ಪುತ್ರ ಸಂತಾನ ಬರೆಯದೇ ಹೋದನೆ ಎಂದು ಕೊರಗಿದ್ದಾಳೆ."[೧೨] ಹೀಗೆ ಬಂಜೆತನದ ಸಮಸ್ಯೆಯನ್ನು ಸ್ತ್ರೀಯು ಅನುಭವಿಸಿದ್ದಾಳೆ.

### ೬.೫. ವಿವಾಹದ ಸಮಸ್ಯೆ

ಭಾರತೀಯ ಸಂಸ್ಕೃತಿಯಲ್ಲಿ ವಿವಾಹ ಪದ್ಧತಿಯನ್ನು ನೋಡುತ್ತಿರುವುದು ವೇದ ಕಾಲದಿಂದಲೆ. ವೇದ ಕಾಲದ ಪ್ರತಿಯೊಬ್ಬರೂ ಧಾರ್ಮಿಕ ಕಾರ್ಯಚರಣೆಯಲ್ಲಿ ತೊಡಗಬೇಕಾದರೆ ವಿವಾಹ ಅಗತ್ಯವಿತ್ತು. ವಿವಾಹವಾದ ದಂಪತಿಗಳು ಮಾತ್ರ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸಬೇಕಾಗಿತ್ತು. ಪತ್ನಿಯಿಲ್ಲದ ಪುರುಷನಿಂದ ನಡೆಯುವ ಧಾರ್ಮಿಕ ಆಚರಣೆ ಅಪೂರ್ಣವೆಂದು ಭಾವಿಸಲಾಗಿತ್ತು. ಈ ಕಾರಣ ವೇದಕಾಲೀನ ಸಮಯದಲ್ಲಿ ಸ್ತ್ರೀ-ಪುರುಷರು ಸಮಾನ ಸ್ಥಾನ ಹೊಂದಿದ್ದರು. ಯಜ್ಞಯಾಗದ ಕ್ರಿಯೆಗಳಲ್ಲಿ ಭಾಗವಹಿಸಿ ಪತಿ-ಪತ್ನಿಯರು ವೇದ, ಮಂತ್ರಗಳನ್ನು ಪಠಿಸ ಬೇಕಾದ್ದರಿಂದ ಸ್ತ್ರೀಯರಿಗೂ ಶಿಕ್ಷಣ ಅಗತ್ಯವಿತ್ತು. ಇದರಿಂದ ಅಕ್ಷರ ಜ್ಞಾನವನ್ನಲ್ಲದೆ ಎಚ್ಚೆತ್ತ ಸ್ತ್ರೀ ತನಗೆ ಬೇಕಾದ ವರನನ್ನು ಮದುವೆಯಾಗುವ ಸ್ವಾತಂತ್ರ್ಯ ಪಡೆದಿದ್ದಳು. ಹೀಗೆ ವೇದಕಾಲೀನ ಸ್ತ್ರೀಗೆ ವಿವಾಹ ಸಮಸ್ಯೆಯಾಗಿರಲಿಲ್ಲ.

ಕಾಲಾನಂತರದಲ್ಲಿ ಶೀಲ, ಪಾತಿವ್ರತ್ಯ ಎಂಬ ಕಾಲ್ಪನಿಕತೆಗಳನ್ನು ಸೃಷ್ಟಿಸಿದ ಧರ್ಮ, ಸ್ತ್ರೀಯರನ್ನು ಮಾತ್ರ ಕಟ್ಟಳೆಗಳಿಂದ ಬಂಧಿಸಿತು. ತದನಂತರ ಪರ ಪುರುಷರ ಆಕ್ರಮಣ ನೀತಿಯಿಂದಾಗಿ, ಸ್ತ್ರೀಯನ್ನು ರಕ್ಷಿಸುವುದು, ದೊಡ್ಡ ಹೊರೆಯಾಯಿತು. ಈ ಕಾರಣಗಳಿಂದಾಗಿ ನಾಲ್ಕು ಗೋಡೆಗಳೊಳಗೆ ಬಂಧಿಯಾಗಿ ಶಿಕ್ಷಣದಿಂದ ವಂಚಿತಳಾದಳು. ಇಂದಿನ ಆಧುನಿಕ ಸಂದರ್ಭದಲ್ಲಿಯೂ 'ವಿವಾಹ' ಮತ್ತು 'ಲೈಂಗಿಕತೆ' ಸಮಸ್ಯೆಯಾಗಿ ಪರಿಣಮಿಸಿದೆ. ಸ್ತ್ರೀ ಪುರುಷರಿಬ್ಬರ ಸಮಾನ ಹಿತಾಸಕ್ತಿಯ ವಿವಾಹ ಕಾಯ್ದೆಗಳು ಜಾರಿಯಾಗಿದ್ದರೂ ಪುರುಷ ಸಮಾಜದ ಮುಂದೆ ನಿಸ್ಸಹಾಯಕವಾಗಿದೆ. ಸ್ವಾತಂತ್ರ್ಯ ಪೂರ್ವ ಕನ್ನಡ ಕಾದಂಬರಿಗೆ ಸಂಬಂಧಿಸಿದಂತೆ 'ವಿವಾಹ' ಎನ್ನುವುದು ಸ್ತ್ರೀಯರಿಗೆ ಸಮಸ್ಯೆಗಳನ್ನೊಡ್ಡಿದೆ. ಸ್ತ್ರೀವಾದ ಮತ್ತು ಸ್ತ್ರೀ ಸಂವೇದನೆಯ ಹಿನ್ನೆಲೆಯಲ್ಲಿ ನೋಡಿದಾಗ, ಬಾಲ್ಯವಿವಾಹ, ಪ್ರೌಢವಿವಾಹ, ಪ್ರೇಮವಿವಾಹ, ಸಂಪ್ರದಾಯಿಕವಿವಾಹ, ಬಹುಪತ್ನಿತ್ವ ಹಾಗೂ ವಿಧವಾ ಪುನರ್ ವಿವಾಹಗಳು ಸ್ತ್ರೀಯನ್ನು ಸಮಸ್ಯೆಯಲ್ಲಿ ಸಿಲುಕಿಸಿವೆ. ಹೀಗಾಗಿ ಸ್ತ್ರೀಯರು ವೈವಾಹಿಕ ಬಂಧನಗಳಿಗೆ ಒಳಗಾಗಿ ಶೋಷಣೆಗೆ ಒಳಗಾಗಿದ್ದಾರೆ. ಇಂತಹ ಸಮಸ್ಯೆಗಳಿಗೆ ಕಾದಂಬರಿಕಾರರ ಧೋರಣೆ ಹಾಗೂ ಸ್ತ್ರೀಪರ ದೃಷ್ಟಿಯ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮತ್ತು ವ್ಯಾಖ್ಯಾನಿಸಲು ಪ್ರಯತ್ನಿಸಲಾಗಿದೆ.

### ೬.೬. ಬಾಲ್ಯವಿವಾಹದ ಸಮಸ್ಯೆ

ಮದುವೆ ಎಂಬುದರ ಅರ್ಥವನ್ನು ಅರಿಯದ ಹಾಲುಗಲ್ಲದ ಹಸುಳೆಗಳನ್ನು ಹಸೆಮಣೆಗೆ ತಳ್ಳುವ ಕೀಳು ಪದ್ಧತಿಯೇ ಬಾಲ್ಯವಿವಾಹ, ೧೦ನೇ ಶತಮಾನದಲ್ಲಿಯ ಮುಸ್ಲಿಂ ಆಕ್ರಮಣ ನೀತಿ ಮತ್ತು ಧರ್ಮಶಾಸ್ತ್ರಗಳ ಪ್ರಭಾವ ಇವೆರಡರ ದುಷ್ಪರಿಣಾಮಗಳ ಮಧ್ಯೆ ತೊಳಲಾಡಿದ ಭಾರತೀಯ ಸಮಾಜ ತಮ್ಮ ಮಕ್ಕಳ ಶೀಲ, ಪಾವಿತ್ರ್ಯವನ್ನು ಕಾಪಾಡುವ ಮತ್ತು ಅವರ ಪುರೋಭಿವೃದ್ಧಿಯ ಅನಿವಾರ್ಯತೆಯಿಂದಾಗಿ ಬಾಲ್ಯ ವಿವಾಹವನ್ನು ಆಹ್ವಾನಿಸಿತು. ಇದು ಎಂತಹ ಕೀಳು ಮಟ್ಟಕ್ಕೆ ಇಳಿಯಿತೆಂದರೆ ತೊಟ್ಟಿಲಲ್ಲಿ ಹಾಲುಣ್ಣುವ ಎಳೆ ಮಕ್ಕಳನ್ನು ಸಹ ವಿವಾಹ ಬಂಧನಕ್ಕೆ ಬಲಿಯಾಗಿಸಿತು. ಬಾಲ್ಯವಿವಾಹದ ಹೆಣ್ಣನ್ನು ಮಾನವನ ಮೂಲಭೂತ ಬೇಡಿಕೆಯಾದ ಶಿಕ್ಷಣದಿಂದ ವಂಚಿತಳನ್ನಾಗಿ ಮಾಡಿದ ಸಂಪ್ರದಾಯಿಕ ಸಮಾಜ ಹೆಣ್ಣಿನ ಬೇಕು ಬೇಡಗಳೆಲ್ಲವನ್ನೂ ಚಿಗುರುವಿಕೆಯ ಹಂತದಲ್ಲಿಯೇ ಚಿವುಟು ಹಾಕಿತು. ಇದನ್ನು ಹೆಚ್ಚಾಗಿ ನವೋದಯ ಪೂರ್ವ ಮತ್ತು ನವೋದಯ ಕಾದಂಬರಿಗಳನ್ನು ಪರಿಶೀಲಿಸಿದಾಗ "ಹೆಣ್ಣು, ಮಕ್ಕಳನ್ನು ಪಡೆದ ತಾಯಂದಿರು ಅಳಿಯಂದಿರ ಅನ್ವೇಷಣೆಯಲ್ಲಿ ತೊಡಗಿರುವುದನ್ನು, ಮದುವೆಯೇ ಮಹಿಳೆಗೆ ಸರ್ವಸ್ವ ಮದುವೆಯಾಗದ ಮಹಿಳೆ ಸಮಾಜದ ದೃಷ್ಟಿಯಲ್ಲಿ ಕೀಳು"[೧೩] ಎಂಬ ದೃಷ್ಟಿಕೋನದಲ್ಲಿಯೇ ರಚಿತವಾದವುಗಳು ಎಂಬುದನ್ನು ಸರೋಜಿನಿ ಶಿಂತ್ರಿಯವರು ಗುರುತಿಸಿದ್ದಾರೆ. ಅವರ ಹೇಳಿಕೆಯನ್ನು

ಸೂಕ್ಷ್ಮವಾಗಿ ಗ್ರಹಿಸಿದಾಗ ಹೆಣ್ಣು-ಮಕ್ಕಳ ಮದುವೆಯನ್ನು ಇನ್ನು ಬಾಲೆಯರಾಗಿರುವಾಗಲೇ ನೆರವೇರಿಸಲು ಹಾತೊರೆದವರಲ್ಲಿ ಹೆಚ್ಚಿನ ಸಂಖ್ಯೆ ತಾಯಿಯರದ್ದು.

ಕನ್ನಡದ ಮೊಟ್ಟ ಮೊದಲ ಸಾಮಾಜಿಕ ಕಾದಂಬರಿ 'ಇಂದಿರಾಬಾಯಿ'ಯ ಅಬಲೆ ಇಂದಿರಾಬಾಯಿ, 'ನಿರ್ಭಾಗ್ಯ ವನಿತೆ' ಕಾದಂಬರಿಯ ಇಂದಿರೆ, 'ನಭಾ' ಕಾದಂಬರಿಯಲ್ಲಿನ ನಭಾ ಎಲ್ಲವೂ ದುರಾದೃಷ್ಟ ಪಾತ್ರಗಳು. ಏಳು-ಎಂಟರ ಎಳೆಯ ವಯಸ್ಸಿನಲ್ಲಿ 'ಗಂಡ' ಎಂದರೇನು? ಎಂಬುದರ ಕಲ್ಪನೆಯನ್ನು ಕಲ್ಪಿಸಿಕೊಳ್ಳುವ ಮುನ್ನ, ತಂದೆ-ತಾಯಿಗಳು ತೋರಿಸಿದವರನ್ನು ಮದುವೆಯಾದವರು. ಇದಕ್ಕೆ 'ಕನ್ಯಾಬಲಿ' ಕಾದಂಬರಿಯ ಮಾಲತಿ ಹೊರತಾಗಿ ಉಳಿಯಲಾರಳು. ದುರಂತವೆಂದರೆ ಇವರು ವೈಧವ್ಯದಲ್ಲಿ ಬಾಳಿದ್ದಾರೆ 'ನಿರ್ಭಾಗ್ಯ ವನಿತೆ' ಕಾದಂಬರಿಯ ಸತೀಶನ ತಾಯಿ ಪುರುಷ ಪ್ರಧಾನ ನೆಲೆಯಲ್ಲಿಯೇ ಹೆಜ್ಜೆ ಇಟ್ಟಿದ್ದಾಳೆ. ಇಂದಿರೆಯ ಮದುವೆ ವಿಚಾರದಲ್ಲಿ ತಂದೆ ಸತೀಶ ಗೊಂದಲದಲ್ಲಿ ಸಿಕ್ಕು ತೊಳಲಾಡುತ್ತಾನೆ. ಒಂದೆಡೆ ಬಾಲ್ಯವಿವಾಹಕ್ಕೆ ಒಪ್ಪದ ಮನಸ್ಸು ಇನ್ನೊಂದೆಡೆಗೆ ತಂಗಿಯ ಮಗ ಕುರೂಪಿ ಮತ್ತು ದಡ್ಡನಿಗೆ ಕೊಡಲು ಎಳ್ಳಷ್ಟು ಮನಸ್ಸಿಲ್ಲ. "ಇಂದಿರೆಗೆ ಒಂಬತ್ತು ವರ್ಷ ತುಂಬಿ ಹತ್ತನೆಯ ವರ್ಷವು ಮೊದಲಾಗುತ್ತಿದೆಯಲ್ಲ. ಇನ್ನು ವಿವಾಹವಿಲ್ಲದೆ ನಿಂತಿರುವಳು. ನಿಮ್ಮಂಥವರ ಮಧ್ಯದಲ್ಲಿ ಇದ್ದರೆ ನಮ್ಮ ಜಾತಿಯೂ ಕುಲವೂ ಹೋಗುವುವು"[೧೪] ಎನ್ನುವಾಗ ದೊಡ್ಡ ಅನಾಹುತವೇ ನಡೆದು ಹೋಯಿತೆನೋ! ಎಂಬಂತೆ ತೋರ್ಪಡಿಸಿಕೊಂಡಿದ್ದಾರೆ. 'ವಿರಾಗಿಣಿ' ಕಾದಂಬರಿಯ ತುಂಗೆ, ಇಂದಿರಾ ಕಾದಂಬರಿಯ ದೇವಯಾನಿ, ಕನ್ಯಾಬಲಿ ಕಾದಂಬರಿಯ ಮಾಲತಿ ಹಾಗೂ 'ಮರಳಿ ಮಣ್ಣಿಗೆ' ಕಾದಂಬರಿಯ ಸರಸ್ವತಿ ಎಲ್ಲಾ ಪಾತ್ರಗಳು ಚಿಕ್ಕ ವಯಸ್ಸಿನಲ್ಲಿಯೇ ಮದುವೆಯಾಗಿ ಇಡೀ ಜೀವನವನ್ನು ವೈಧವ್ಯದ ಪಟ್ಟದಲ್ಲಿಯೇ ಜೀವಿಸಬೇಕಾದ ದುರಂತಕ್ಕೆ ಈಡಾಗಿದ್ದಾರೆ. ಇಲ್ಲಿ ಶೋಷಣೆಗೆ ಒಳಗಾಗಿದ್ದ ಸ್ತ್ರೀಯರು ಯಾರನ್ನೂ ದೂಷಿಸಲು ಇಚ್ಛಿಸುವುದಿಲ್ಲ. ಬದಲಾಗಿ ತಮ್ಮ ದೈವವನ್ನು ಹಳಿದುಕೊಳ್ಳುತ್ತಾರೆ. ಬಾಲ್ಯ ವಿವಾಹದ ದುಷ್ಪರಿಣಾಮಗಳಿಂದ ಸ್ತ್ರೀ ವಿದ್ಯಾಭ್ಯಾಸ ದಿಂದ ವಂಚಿತಳಾಗಿ ವಿಧವೆ ಬಾಳುವೆ ನಡೆಸುವುದು, ಚಿಕ್ಕಂದಿನಲ್ಲೆ ಗೃಹ ಕೃತ್ಯಕ್ಕೆ ಬಲಿಯಾಗಿ ನಾಲ್ಕು ಗೋಡೆಗಳಿಗೆ ಮಾತ್ರ ಸೀಮಿತಗೊಳ್ಳುವುದು ಎಂಬ ಅಂಶ ಮನಗಾಣಬಹುದು.

### ೬.೭. ವಿಧವಾ ವಿವಾಹದ ಸಮಸ್ಯೆ

'ಇಂದಿರಾಬಾಯಿ' ರೋಗಗ್ರಸ್ತ ಸಮಾಜದ ಒಳ ಮುಖವನ್ನು ಬಿಚ್ಚಿಡುತ್ತದೆ. ಇಲ್ಲಿಯ ಇಂದಿರಾಬಾಯಿ ಬಾಲವಿಧವೆ. ಸ್ವಂತ ತಂದೆ ತಾಯಿಗಳು ವಿಧಿಸುವ ನಿರ್ಬಂಧನೆಗಳಿಂದ ಬೇಸತ್ತು ಮನೆಯಿಂದ ಪಲಾಯನಗೊಳ್ಳುತ್ತಾಳೆ. ಅಂದಿನ ದಿನಗಳಲ್ಲಿ ಇದೊಂದು ಸಾಹಸದ ಕೆಲಸ. ಅಮೃತರಾಯನ ಆಶ್ರಯದಲ್ಲಿದ್ದು ಮದ್ರಾಸಿನ ವಿಧವಾ ಗೃಹದಲ್ಲಿ ಮೆಟ್ರಿಕ್ಯುಲೇಶನ್

ಪಾಸು ಮಾಡಿದ ಇಂದಿರಾಬಾಯಿ ಪ್ರಗತಿಪರ ವಿಚಾರವಂತಳು. ಅಮೃತರಾಯನ ಆಶ್ರಯದಲ್ಲಿಯೇ ಬೆಳೆದ ಭಾಸ್ಕರನನ್ನು ಮೆಚ್ಚಿ ಮದುವೆಯಾಗಲು ನಿರ್ಧರಿಸುತ್ತಾಳೆ. ಅಂತೆಯೇ ತನ್ನನ್ನು ನೋಡ ಬಂದ ತಾಯಿಗೆ ಮೃತ ಸುಂದರರಾಯನ ಮಗ ಭಾಸ್ಕರರಾಯನನ್ನು ತಾನು ಮದುವೆಯಾಗುತ್ತೇನೆ ಎಂದು ಹೇಳುವ ಇಂದಿರಾಬಾಯಿಯಲ್ಲಿ ದಿಟ್ಟತನವಿದೆ. ಆದರೆ ತಾಯಿ ಅಂಬಾಬಾಯಿ ತಂದೆ ಭೀಮರಾಯರಿಬ್ಬರೂ ವಿರೋಧಿಸುತ್ತಾರೆ. ಈ ವಿರೋಧಗಳ ಮಧ್ಯೆಯೂ ಕಲೆಕ್ಟರ್ ಭಾಸ್ಕರರಾಯ ನೊಂದಿಗೆ ವಿಧವೆ ಇಂದಿರಾಬಾಯಿಯ ಮದುವೆ ಅದ್ದೂರಿಯಿಂದ ನೆರವೇರುತ್ತದೆ. 'ಇಂದಿರೆ' ಕಾದಂಬರಿಯಲ್ಲಿ ವಿಧವಾ ವಿವಾಹ ಸಮಸ್ಯೆಯಾಗಿ ತೋರಿಲ್ಲ. ಕಾರಣ ಇಲ್ಲಿ ಸುಧಾರಕ ಪಂಥಗಳ ಪ್ರಭಾವ ಹೆಚ್ಚಾಗಿದ್ದು, ಸುಶಿಕ್ಷಿತ ಸ್ತ್ರೀ ಪುರುಷರ ಸಂಖ್ಯೆ ಹೆಚ್ಚಿನದು. ಸುಧಾರಕ ಪಂಥದ ಸುಬ್ಬರಾಯರ ಮಗಳಾದ ದೇವಯಾನಿ ಬಾಲವಿಧವೆಯೇನೋ ನಿಜ. ಆದರೆ ಅವಳಿಗೆ ವಿಧವಾ ಅವಸ್ಥೆ ಸಮಸ್ಯೆಯಾಗಿ ಕಾಡಿಲ್ಲ. ಹೀಗಾಗಿಯೇ ಅವಳು ವಿಧವೆಯಾಗಿಯೂ ಹೆಚ್ಚಿನ ವಿದ್ಯಾಭ್ಯಾಸ ಮಾಡುತ್ತಾಳೆ.

ಧರ್ಮದ ಕಲ್ಪನೆಯನ್ನು ಸೃಷ್ಟಿಸಿ, ವಿಧವೆಯನ್ನು ನಿರ್ಬಂಧಿಸಿರುವ ಸಾರಸ್ವತ ಬ್ರಾಹ್ಮಣ ಸಮಾಜ, ವಿಧುರರನ್ನೂ ಮುಕ್ತಗೊಳಿಸಿದ್ದು ವಿಪರ್ಯಾಸವೇ ಸರಿ. 'ನಿರ್ಭಾಗ್ಯ ವನಿತೆ' ಕಾದಂಬರಿಯ ಶಚೀಂದ್ರ ಮತ್ತು ಸುಂದರೇಶನ ಪ್ರಯತ್ನದಿಂದಾಗಿ ವಿಧವೆ ಇಂದಿರೆ ಮತ್ತು ವಿಧುರ ಸುಂದರೇಶನ ಮದುವೆ ಸರಳತೆಯಲ್ಲಿ ನೆರವೇರುತ್ತದೆ. ೧೯೨೦ರಲ್ಲಿಯೇ ಪ್ರಕಟವಾದ 'ನಭಾ' ಕಾದಂಬರಿ ಈ ಮೇಲಿನ ಎರಡು ಕಾದಂಬರಿಗಳಿಗಿಂತ ಭಿನ್ನವಾಗಿದೆ. ಇಲ್ಲಿಯ ಬಾಲ ವಿಧವೆ 'ನಭಾ' ವೈರಾಗ್ಯ ಜೀವನ ನಡೆಸುವ ನಿರ್ಧಾರ ಕೈಗೊಳ್ಳುತ್ತಾಳೆ. ರಾಜಶೇಖರ ಮದುವೆಗಾಗಿ ಒತ್ತಾಯಿಸಿದಾಗ ನಭಾ ವಿರೋಧಿಸುತ್ತಾಳೆ. ಈ ಕಾದಂಬರಿಯ ಲೇಖಕಿ ನಂಜನಗೂಡು ತಿರುಮಲಾಂಬಾ ಅವರು ವೈಧವ್ಯವನ್ನು ಸಮಸ್ಯೆಯಾಗಿ ಸ್ವೀಕರಿಸಿದಂತಿಲ್ಲ. ಅಂತೆಯೇ ತಾನು ಪುನರ್ ವಿವಾಹವಾಗದೆ ಇರುವುದನ್ನು ಸಮರ್ಥಿಸಿಕೊಂಡಿದ್ದಕ್ಕೆ 'ನಭಾ'ಳ ಪಾತ್ರ ಸಾಕ್ಷಿಯಾಗಿ ನಿಲ್ಲುತ್ತದೆ. 'ಮಾಡಿದುಣ್ಣೋ ಮಹಾರಾಯ' ಕಾದಂಬರಿಯ ತಿಮ್ಮಮ್ಮ, ವೆಂಕಮ್ಮ, ಕಾವೇರಿ, ಮರಳಿ ಮಣ್ಣಿಗೆ ಕಾದಂಬರಿಯ ಸರಸ್ವತಿ, ಬಾಲವಿಧವೆಯರಾಗಿಯೇ ಬಾಳಿದ್ದಾರೆ. ಮೇಲ್ವರ್ಗದ ಬ್ರಾಹ್ಮಣ ವಿಧವೆಯರಿಗೆ ಹೊರತಾಗಿ ಬಾಳಿದವರು ಮಧ್ಯಮ ಮತ್ತು ಕೆಳವರ್ಗದ ವಿಧವೆಯರು. ಇವರು ನಿಸರ್ಗದತ್ತವಾದ ದೈಹಿಕ ಕಾಮನೆಗಳನ್ನು ತೀರಿಸಿಕೊಳ್ಳುವುದಕ್ಕಾಗಿಯೇ ಪುನರ್ ವಿವಾಹವಾಗುವರು ಎಂಬ ಅಂಶ ಮೇಲ್ನೋಟಕ್ಕೆ ನಿಜವಾಗಿ ಕಂಡರೂ, ಇದರ ಹಿಂದೆ ಬಲವಾಗಿ ಕಾಡುತ್ತಿರುವ ಬಡತನವೆಂಬ ಭೂತದೊಂದಿಗೆ ಅಧಿಕಾರಸ್ಥರ ಲೈಂಗಿಕ ಕಿರುಕುಳವಿದೆ. ಇಂತಹ ಕಿರುಕುಳಗಳ ಪರಿಹಾರಕ್ಕಾಗಿ ವಿಧವಾ ವಿವಾಹ ಅವರಿಗೆ ಅನಿವಾರ್ಯವಾಗಿತ್ತು. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಮಧ್ಯಮ ವರ್ಗದ ನಾಗತ್ತೆ ಬಡತನದ ನಿವಾರಣೆಗಾಗಿ ಶ್ರೀಮಂತರನ್ನು ಓಲೈಸುವ ಅನಿವಾರ್ಯತೆಗೆ

ಇಳಿಯುತ್ತಾಳೆ. ಸೊಸೆ ವಿಧವೆ ನಾಗಕ್ಕಳನ್ನು ಮೋಸದಿಂದ ವೆಂಕಟಪ್ಪನಿಗೆ ಬಲಿಯಾಗಿಸುವುದಲ್ಲದೆ ತಾನೂ ಬಲಿಯಾಗುತ್ತಾಳೆ. ಕೆಳವರ್ಗದ ಅಕ್ಕಣಿ ವಿಧವೆ ಚೀಂಕ್ರನನ್ನು ದ್ವೇಷಿಸಿ ದೂರಿಕರಿಸಿಯೂ ರಂಗಪ್ಪಗೌಡರ ಒತ್ತಾಯಕ್ಕೆ ಮಣಿದು ದೇಹವನ್ನೊಪ್ಪಿಸುತ್ತಾಳೆ. ಹೀಗೆ ಒಟ್ಟಾರೆ ವಿಧವೆಯರು ಸಮಸ್ಯಾತ್ಮಕ ಜೀವನ ಸಾಗಿಸಿದ್ದಾರೆ.

**೬.೮. ಬಹುಪತ್ನಿತ್ವದ ವಿವಾಹ.**

'ಮಾಡಿದುಣ್ಣೋ ಮಹಾರಾಯ' ಕಾದಂಬರಿಯ ಸದಾಶಿವ ದೀಕ್ಷಿತರು ಎರಡನೆಯ ಮದುವೆಯಾದದ್ದು ಎರಡು ತಿಂಗಳ ಮಗುವಿನ ಪಾಲನೆ, ಪೋಷಣೆ ಮತ್ತು ಗೃಹ ಕೆಲಸಗಳನ್ನು ನಿಭಾಯಿಸುವುದಕ್ಕಾಗಿ ಮಾತ್ರ. ಸದಾಶಿವ ದೀಕ್ಷಿತರು ಒಂಬತ್ತು ವರ್ಷದ ತಿಮ್ಮಮ್ಮಳನ್ನು ಮದುವೆಯಾದಂತೆ 'ನಿರ್ಭಾಗ್ಯ ವನಿತೆ' ಕಾದಂಬರಿಯ ವಿಧುರ ಸತೀಶ ಇನ್ನೂ ಋತುಮತಿಯಾಗದ ಲಲಿತೆಯನ್ನು ಮದುವೆಯಾಗುತ್ತಾನೆ. 'ಮರಳಿ ಮಣ್ಣಿಗೆ' ಕಾದಂಬರಿಯ ರಾಮ–ಐತಾಳರು ಹೆಂಡತಿ ಬಂಜೆಯೆಂಬುದನ್ನು ಮುಂದೆ ಮಾಡಿ ಎರಡನೇ ಮದುವೆ ಸಿದ್ಧತೆ ನಡೆಸುವುದು ಪ್ರಶ್ನಾತೀತ. ಮನೆಯ ಸಂಸಾರವನ್ನು ಹೊತ್ತು ನಿಭಾಯಿಸುವ ಹೆಂಡತಿ ಪಾರ್ವತಿಗೆ ಸುಳಿವು ಸಹ ಕೊಟ್ಟವರಲ್ಲ. ಮಧ್ಯಮವರ್ಗದಲ್ಲಿ ಮತ್ತು ಕೆಳವರ್ಗದವರಲ್ಲಿ ಬಹುಪತ್ನಿತ್ವ ಪದ್ಧತಿ ಸಾಮಾನ್ಯವಾಗಿ ಪ್ರಚಲಿತವಿತ್ತು. ಇಲ್ಲಿಯ ಶ್ರೀಮಂತ ವಿಧುರರು ಹೆಚ್ಚು ಹೆಚ್ಚು ವಧುದಕ್ಷಿಣೆ ನೀಡಿ ಬೇಕಾದಷ್ಟು ಸ್ತ್ರೀಯರನ್ನು ಮದುವೆಯಾಗುತ್ತಿದ್ದರು. 'ಕಾನೂರು ಹೆಗ್ಗಡಿತಿ' ಕಾದಂಬರಿಯ ಚಂದ್ರಯ್ಯಗೌಡರು ಇದಕ್ಕೆ ನಿದರ್ಶನ. ಜಮೀನ್ದಾರಿಕೆಯ ವ್ಯವಸ್ಥೆಯ ಅಡಿಯಲ್ಲಿ ಚಂದ್ರಯ್ಯ ಗೌಡನಿಗೆ ಮೂರನೇ ಪತ್ನಿಯಾದ ಸುಬ್ಬಮ್ಮ ನಿರ್ಜೀವ ವಸ್ತುವಾಗುತ್ತಾಳೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಭರಮೈ ಹೆಗಡೆಯ ಎರಡನೆಯ ಮದುವೆ ವಿಷಯ ಕುರಿತು ಮುಕುಂದಯ್ಯ ಗುತ್ತಿಯ ನಡುವೆ ಸಂವಾದ ನಡೆದಾಗ

ಮುಕುಂದಯ್ಯ "ಅವರಿಗೆ ಯಾರೋ ಹೆಣ್ಣು ಕೊಡೋರು? ಕುದ್ದು ಕುದ್ದು ಕಾಯಿಲೆ ಬೇರೆ ಹಿಡಿದಿದೆಯಂತೆ....

ಗುತ್ತಿ: ಏನಯ್ಯ, ಹೆಣ್ಣು ಕೊಡೋರಿಗೇನು ಬರಗಾಲ? ದುಡ್ಡೊಂದಿದ್ರೆ ಕೈ ತುಂಬಾ ತೆರ ಕೊಟ್ಟರೆ ದಮ್ಮಯ್ಯ ಅಂತ ಕೊಡ್ತಾರೆ."[೧೫]

ಎಂಬುದು ಅಂದಿನ ವಾಸ್ತವ ಸಂಗತಿಯೂ ಕೂಡಾ ಹೌದು. ಹೀಗೆ ಹೆಣ್ಣನ್ನು ನಿರ್ಜೀವ ವಸ್ತುವಿನಂತೆ ಭಾವಿಸಲಾಗಿದೆ. ಬಹುಪತ್ನಿತ್ವ ಪದ್ಧತಿ ಕೇವಲ ಸ್ತ್ರೀಯರನ್ನು ಮಾತ್ರ ಸಮಸ್ಯೆಯಾಗಿ ಕಾಡಿದೆ. ಎರಡನೆಯ ಮದುವೆಯಾಗುವ ಗಂಡನಿಗೆ ಸಂತಸದ ಕ್ಷಣವಾದರೆ, ಮೊದಲ ಹೆಂಡತಿಗೆ ದುಃಖದ ಕ್ಷಣಗಳಾಗಿದ್ದವು.

## ೬.೯. ಸ್ತ್ರೀ ಶಿಕ್ಷಣ ಸಮಸ್ಯೆ

ವೇದಕಾಲೀನ ಯುಗದಿಂದ ಹಿಡಿದು ಇಂದಿನ ಆಧುನಿಕ ಸಂದರ್ಭದವರೆಗೆ ಸ್ತ್ರೀಯನ್ನು ವೈಚಾರಿಕ ನೆಲೆಯಲ್ಲಿ ಗುರುತಿಸಿಕೊಳ್ಳುವಾಗ ಹೆಣ್ಣು ಶಕ್ತಿ ಸ್ವರೂಪಿಣಿಯಾಗಿ, ಕುಟುಂಬ ವಾತ್ಸಲ್ಯೆಯಾಗಿ ಚಿತ್ರಿಸಲ್ಪಟ್ಟ ಸಂದರ್ಭಗಳೇ ಹೆಚ್ಚು. ವೇದಕಾಲೀನ ಸಂದರ್ಭದಲ್ಲಿ ಸ್ತ್ರೀಯರು ಶಿಕ್ಷಣ ಪಡೆಯುವಲ್ಲಿ ಉದಾರತೆಯಿದೆ. ಪ್ರಾಚೀನ ಭಾರತೀಯ ಸಂಸ್ಕೃತಿಯ ಆರಂಭದ ಶತಕಗಳನ್ನು ವೀಕ್ಷಿಸಿದಾಗ ಪುರುಷರಂತೆ ಸ್ತ್ರೀಯರಿಗೂ ಪ್ರಧಾನ್ಯತೆಯಿತ್ತು. ವೇದಕಾಲದ ಅಪಾಲಾ, ಘೋಷ, ಗೋಧಾ, ಶಾಶ್ವತಿ, ಇವರೆಲ್ಲರೂ ಬ್ರಹ್ಮವಾದಿನಿಯಾಗಿದ್ದರು. ವೇದವನ್ನು ಮೊದಲುಗೊಂಡು ತರ್ಕ, ಶಾಸ್ತ್ರಾದಿ ಗಳನ್ನು ಅಭ್ಯಾಸ ಮಾಡಿ ವಿಧೂಷಿಯರೆನಿಸಿಕೊಂಡ ಮೈತ್ರೇಯಿ ಮತ್ತು ಗಾರ್ಗಿಯರ ಹೆಸರು ಚಿರಂತನವಾಗಿ ಉಳಿದಿದೆ. ವೇದಕಾಲದ ಸಂದರ್ಭದಲ್ಲಿ ಪತ್ನಿಯು ಪತಿಯೊಂದಿಗೆ ಯಜ್ಞಯಾಗಾದಿಗಳನ್ನು ನೆರವೇರಿಸಬೇಕಾಗಿದ್ದು ಮಂತ್ರೋಚ್ಚಾರಣೆ ಮಾಡಬೇಕಾಗಿದ್ದರಿಂದ ಸ್ತ್ರೀಯರು, ಅವಶ್ಯವಾಗಿ ವಿದ್ಯಾಭ್ಯಾಸ ಮಾಡಬೇಕೆಂದು ಒತ್ತಾಯಿಸಲಾಗುತ್ತಿತ್ತು. ನಂತರದ ದಿನಗಳಲ್ಲಿ ಮಹಿಳೆಗೆ ಶಿಕ್ಷಣದಿಂದ ವಂಚಿತಳಾಗತೊಡಗಿದಳು. ಮತ್ತು ಪಾಶ್ಚಿಮಾತ್ಯರ ಆಗಮನದಿಂದಾಗಿ ಶಿಕ್ಷಣದ ಪ್ರಜ್ಞೆ ಎಚ್ಚರಿಸಿತು. ಬಂಗಾಲದ ರಾಜಾರಾಮ ಮೋಹನರಾಯ, ಕಲ್ಕತ್ತಾದ ಬ್ಯಾನರ್ಜಿ, ಮದ್ರಾಸಿನ ವಿರೇಶಲಿಂಗ ಪಂತಲು, ವಿದ್ಯಾಸಾಗರ ಮುಂತಾದ ಸಮಾಜ ಸುಧಾರಕರು ಸ್ತ್ರೀ ಶಿಕ್ಷಣಕ್ಕಾಗಿ ಶ್ರಮಿಸಿದ್ದಾರೆ.

ಹತ್ತೊಂಬತ್ತನೆಯ ಶತಮಾನ ಸಾಮಾಜಿಕ ಸಂಕ್ರಮಣಾವಸ್ಥೆಯ ವಿಶಿಷ್ಟ ಕಾಲ. ಹಳೆಯದರಿಂದ ಹೊಸದರತ್ತ ಹೆಜ್ಜೆ ಒಂದೆಡೆ ಮಡುಗಟ್ಟಿ ನಿಂತ ಪರಂಪರಾಗತ ಮೌಲ್ಯಗಳ ಒತ್ತಡ ಮತ್ತು ಇನ್ನೊಂದಡೆ ಪಾಶ್ಚಿಮಾತ್ಯ ಸಂಸ್ಕೃತಿಯ ಗಾಳಿ ಬಲವಾಗಿ ಬೀಸುತ್ತಿತ್ತು. ಪಾಶ್ಚಾತ್ಯ ಸಂಸ್ಕೃತಿಯ ತಂಗಾಳಿಗೆ ಮೈಸೋತು ಸವಿಯುವ ಆಸೆ ಒಂದೆಡೆಯಾದರೆ ಭಾರತೀಯ ಹಿಂದೂ ಸಂಸ್ಕೃತಿಯನ್ನು ಅಪ್ಪಿಕೊಂಡ ಮನಸ್ಸು ಇನ್ನೊಂದೆಡೆ. ಈ ಎರಡರ ನಡುವೆ ಸಿಕ್ಕಿಕೊಂಡ ಸಮಾಜದ ಸ್ಥಿತಿ ಡೋಲಾಯಮಾನವಾದುದು. ಎಲ್ಲೆಲ್ಲೂ ಸಂಪ್ರದಾಯ ಮನೋಭಾವದ ಗೊಡ್ಡು ಪಂಡಿತರೇ ಈ ಸಮಾಜದಲ್ಲಿ ತುಂಬಿಕೊಂಡಿರುವಾಗ ಸ್ತ್ರೀಯರಿಗೆ ಶಿಕ್ಷಣ ಪಡೆಯಲು ಅನುಕೂಲ ಪರಿಸ್ಥಿತಿಗಳೇನು ಇರಲಿಲ್ಲ. ಇಂಥ ಸಂದರ್ಭದಲ್ಲಿ ಸ್ತ್ರೀ ಶಿಕ್ಷಣದ ಅಗತ್ಯವನ್ನು ಎತ್ತಿ ಹೇಳುವ ಕಾದಂಬರಿಗಳು ಹುಟ್ಟಿಕೊಂಡವು.

ಈ ನೆಲೆಯಲ್ಲಿ ಬಂದ 'ಮಾತೃ ನಂದಿನಿ' ಕಾದಂಬರಿಯ ನಂದಿನಿ "ವಿದ್ಯೆಯಿಂದ ಕೇಡೆಂದಿಗೂ ಉಂಟಾಗದು; ಬಾಲ್ಯದಿಂದ ಮಕ್ಕಳಿಗೆ ಒಳ್ಳೆಯ ವಿದ್ಯಾಭ್ಯಾಸ ಮಾಡಿಸಿದರೆ ಅವರಿಂದ ಅನಂತ ಸುಖವುಂಟು"[೧೬] ಎನ್ನುವಳು. ಇಲ್ಲಿ ವಿದ್ಯೆ ಎಂದರೆ ಕೇವಲ ಓದು

ಬರಹವಲ್ಲ. ಅದು ವ್ಯಕ್ತಿಯ ಬುದ್ಧಿ, ಮನಸ್ಸನ್ನು ವೃದ್ಧಿಗೊಳಿಸುವಂಥದ್ದು. ಅದರಂತೆ ಅಕ್ಷರ ವಿದ್ಯೆಯನ್ನು ಬಲ್ಲ ನಂದಿನಿ ವಿದ್ಯೆಯಿಂದಾಗುವ ಪ್ರಯೋಜನವನ್ನು ಹೇಳುತ್ತಾ ಇನ್ನೂ ಮೂಢ ಸಂಪ್ರದಾಯಬದ್ಧರಾದ ಪಂಡಿತರನ್ನು ತಲೆತಗ್ಗಿಸುವಂತೆ ಮಾಡಿದ್ದಾಳೆ. ಸ್ತ್ರೀ ಶಿಕ್ಷಣದ ಕುರಿತು ಕಾಳಜಿ-ಕಳಕಳಿಯುಳ್ಳದೆಂದು ಹೇಳುವ ಮೊದಲ ಕಾದಂಬರಿ 'ಇಂದಿರಾಬಾಯಿ' ಬಾಲ ವಿಧವೆ ಇಂದಿರಾಬಾಯಿ ಓದಿನಲ್ಲಿ ಆಸಕ್ತಿ ಉಳ್ಳವಳಾದರೆ ಅವಳ ತಾಯಿ ಅಂಬಾಬಾಯಿ ನೀತಿ ಪುಸ್ತಕಗಳ ಓದಿನಿಂದ ಜಾತಿ ಕೆಡುವುದೆಂದೇ ಭಾವಿಸಿ ಮಗಳನ್ನು ಹೀನಾಯವಾಗಿ ಕಾಣುತ್ತಾಳೆ. ಸುಶೀಲೆ ಕಾದಂಬರಿಯ ಸುಶೀಲೆ 'ನಿರ್ಭಾಗ್ಯ ವನಿತೆ' ಕಾದಂಬರಿಯ ಇಂದಿರೆ ಮತ್ತು 'ಸರಸಮ್ಮನ ಸಮಾಧಿ' ಕಾದಂಬರಿಯ ಸುನಾಲಿನಿ ಓದಿನ ಗೀಳಿನಿಂದಾಗಿಯೇ ನಿಂದನೆಗೆ ಒಳಗಾಗಿದ್ದಾರೆ. 'ಸುಶೀಲೆ' ಕಾದಂಬರಿಯ 'ಸುಶೀಲೆ' ವಿರಾಮ ಕಾಲದಲ್ಲಿ ಓದುವ ಆಸಕ್ತಿ ಬೆಳೆಸಿಕೊಂಡವಳು. ಆದರೆ ಆ ಓದು ಗಿರಿಯಮ್ಮನಂಥವರಿಗೆ ಕೆಟ್ಟದಾಗಿಯೇ ಕಾಣಿಸಿದೆ. ಒಳ್ಳೆಯ ಓದು! ಒಳ್ಳೆಯ ಓದು!! ವಿರಾಮ ದೊರೆತು, ಹೊತ್ತು ಹೋಗದಿದ್ದರೆ ಹಾಳು ಪುಸ್ತಕವನ್ನೆ ಓದಬೇಕೆ ಎನ್ನುವಳಲ್ಲದೆ "ಹಾಳು ಸುಶೀಲೆ ಯಾವಾಗ ನೋಡಿದರೂ ಪುಸ್ತಕವನ್ನು ಹಿಡಿದೇ ಇರುವಳು. ಹೆಂಗಸು....ಗೆ ಓದೆಂದರೇನು"[೧೯] ಎಂದು ಜರಿಯುತ್ತಾಳೆ. ನಿರ್ಭಾಗ್ಯ ವನಿತೆ ಕಾದಂಬರಿಯಲ್ಲಿ ಬರುವ ಇಂದಿರೆಯ ಓದನ್ನು ಖಂಡಿಸುವ ಸಂಪ್ರದಾಯಬದ್ಧಳಾದ ಅಜ್ಜಿ "ಯಾವ ಮಿಂಡನಿಗೆ ಪತ್ರ ಬರೆಯುವುದಿದೆ, ನಾರಾಯಣ-ಕೃಷ್ಣ ಎಂದು ಹೇಳಿಕೊಂಡಿರದೆ ಓದೇತಕ್ಕೆ"[೨೦] ಎಂದು ಅಲ್ಲಗಳೆದಿದ್ದಾಳೆ. ಹೀಗೆ ಹಲವು ಸಂದರ್ಭಗಳಲ್ಲಿ ಹೆಣ್ಣಿನ ಶಿಕ್ಷಣದ ಬಗೆಗೆ ಸೂಚಿಸಿದ ಅಸಮ್ಮತಿ, ಟೀಕೆ, ವಿರೋಧಗಳು ಅಂದಿನ ಸಮಸ್ಯೆಯೂ ಹೌದು.

ಆದರೂ ಕಾದಂಬರಿಕಾರರು ಸ್ತ್ರೀ ಶಿಕ್ಷಣದ ಬಗೆಗಿನ ಒಲವು, ನಿಲುವುಗಳು ಸ್ವಲ್ಪ ಮಟ್ಟಿಗಾದರೂ ಸ್ತ್ರೀ ಶಿಕ್ಷಣವನ್ನು ಪ್ರೋತ್ಸಾಹಿಸಿವೆ. ಸ್ತ್ರೀ ಶಿಕ್ಷಣದ ಕಾಳಜಿ, ಕಳಕಳಿಯನ್ನು ಒಳಗೊಂಡಂತೆ 'ಇಂದಿರಾಬಾಯಿ', 'ನಭಾ', 'ಇಂದಿರೆ', 'ಸುಶೀಲೆ', 'ನಿರ್ಭಾಗ್ಯ ವನಿತೆ', 'ಸರಸಮ್ಮನ ಸಮಾಧಿ', ಮರಳಿ ಮಣ್ಣಿಗೆ ಕಾದಂಬರಿಗಳನ್ನು ನೋಡಬಹುದು. ಒಂದೆಡೆ ಸ್ತ್ರೀ ಶಿಕ್ಷಣದಪರ ಧ್ವನಿಯುಳ್ಳ ಉದಾರವಾದಿಗಳು, ಸಮಾಜ ಸುಧಾರಕರು, ಇನ್ನೊಂದೆಡೆ ಅವಳ ಓದನ್ನು ನಿರಾಕರಿಸುವ ಸಂಪ್ರದಾಯವಾದಿಗಳು. ಇವರಿಬ್ಬರ ನಡುವೆ ಸ್ತ್ರೀ ಶಿಕ್ಷಣ ತಲೆ ಎತ್ತಿಕೊಂಡಿದೆ. 'ಇಂದಿರಾಬಾಯಿ' ಕಾದಂಬರಿಯ ಇಂದಿರಾಬಾಯಿ ತಾಯಿಯ ಕಿರುಕುಳವನ್ನು ಸಹಿಸಲಾಗದೆ ಮನೆಯನ್ನು ತ್ಯಜಿಸಿ ಅಮೃತರಾಯ-ಜಲಜಾಕ್ಷಿಯ ಆಶ್ರಯ ಪಡೆದವಳು. ಅವರ ಪ್ರೋತ್ಸಾಹದಿಂದಾಗಿ ಸತಾರಾದಲ್ಲಿದ್ದು ಮೆಟ್ರಿಕ್ಯಲೇಶನ್ ಪಾಸು ಮಾಡುತ್ತಾಳೆ. ಇಂದಿರೆ ಮನೆಯವರ ಪ್ರೋತ್ಸಾಹದಿಂದಾಗಿಯೇ ಮಾಧ್ಯಮಿಕ ಹಂತದವರೆಗೆ ವಿದ್ಯಾಭ್ಯಾಸ ಮಾಡಿದವಳು ಮತ್ತು

ಹಿರಿಯರ ಒಪ್ಪಿಗೆಯಿಂದ ಓದನ್ನು ಕಲಿತುದಲ್ಲದೆ ಕಾಲೇಜು ಮೆಟ್ಟಲನ್ನು ಹತ್ತಿ ಇಳಿದ 'ಇಂದಿರೆ' ಕಾದಂಬರಿಯ ವಿಧವೆ ದೇವದಾಸಿ, 'ಮರಳಿ ಮಣ್ಣಿಗೆ' ಕಾದಂಬರಿಯ ನಾಗವೇಣಿ, ದಿಟ್ಟ ಹೆಜ್ಜೆ ಇಟ್ಟವರಂತೆ ಗೋಚರಿಸುತ್ತಾರೆ.

ಶಿಕ್ಷಣದ ಉಚ್ಛ್ರಾಯ ಸ್ಥಿತಿಯಲ್ಲಿಯೂ ಹೆಣ್ಣು ಮಕ್ಕಳು ಓದು ಬರಹ ಕಲಿಯುವುದನ್ನು ವಿರೋಧಿಸಿದೆ. ಪುರುಷನ ಓದುಬರಹಕ್ಕೆ ಮುಕ್ತವಾದ ಸ್ವತಂತ್ರ್ಯಾಪೇಕ್ಷೆಗೆ ಸಮ್ಮತಿ ನೀಡುವ ಧರ್ಮ ಸ್ತ್ರೀ ವಿಷಯದಲ್ಲಿ ಬಿಗಿ ಧೋರಣೆ ತಳೆದಿದೆ. ಸ್ವತಃ ಲೇಖಕಿಯರಲ್ಲೇ ಸ್ತ್ರೀ ಶಿಕ್ಷಣದ ಬಗೆಗೆ ದ್ವಂದ್ವವಿದೆ. ಗಂಡು–ಹೆಣ್ಣು ಎಂಬ ಭಾವವನ್ನು ಬಾಲ್ಯದಿಂದಲೇ ಕಲ್ಪಿಸುತ್ತಾ ಬಂದಿರುವ ವೈದಿಕವ್ಯವಸ್ಥೆಯ ನೀಚತನ, ದುಷ್ಟತನವನ್ನು ಶ್ರದ್ಧೆಯಿಂದ ಭಕ್ತಿಯಿಂದ ಸ್ವೀಕರಿಸುವ ಅಂಧಾನುಕರಣೆಯ ಮೌಢ್ಯತೆಗಳನ್ನು ಕಾದಂಬರಿಗಳು ಬಿಚ್ಚಿಡುತ್ತವೆ.

'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಅಣ್ಣಂದಿರಾದ ರಾಮಯ್ಯ, ಹೂವಯ್ಯರಿಬ್ಬರು ಅಟ್ಟದ ಮೇಲೆ ಓದಿಕೊಳ್ಳುವುದನ್ನು ನೋಡುತ್ತ ಮೈಮರೆತಿರುವ ಮಗಳು ಪುಟ್ಟಮ್ಮಳನ್ನು ಸ್ವತಃ ತಂದೆಯೇ ಗದರಿಸುತ್ತಾನೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಬಾಲಕ ಮುಕುಂದಯ್ಯ, "ಚೆನ್ನಿಗೆ ನಮ್ಮ ಮನೆಗೆ ಬರೆಯೊಕೆ ಕಳ್ಸಿ"[೧೮] ಎಂದಾಗ ಮಾವ ವೆಂಕಣ್ಣಾ "ಹೌದು ಕಣೋ ಅವಳುನ್ನೂ ಬರಾವು ಕಲ್ತು ಮಣಿಗಾರಿಕೆ ಮಾಡೋದೊಂದು ಬಾಕಿ"[೧೯] ಎಂದು ಹಾಸ್ಯಭರಿತ ನಗುವಿನಲ್ಲಿಯೇ ಶಿಕ್ಷಣವನ್ನು ಲೇವಡಿ ಮಾಡಿದ್ದಾರೆ. 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಪಾಶ್ಚಾತ್ಯ ಶಿಕ್ಷಣದ ತಂಗಾಳಿ ಸೋಂಕಿನಿಂದ ಪ್ರಭಾವಿತನಾದ ರಾಮೈತಾಳರ ಮಗನನ್ನು ಇಂಗ್ಲಿಷ್ ಓದಲು ಸಮ್ಮತಿಸಿದನಾದರೂ ಸೊಸೆಯು ಓದುವುದನ್ನು ಮಾತ್ರ ಅಲ್ಲಗಳೆಯುತ್ತಾ "ಹೆಣ್ಣು ಮಕ್ಕಳಿಗೆ ಯಾವ ಮಣ್ಣಿಗೆ ಇಂಗ್ಲೀಷು"[೨೦] ಎನ್ನುವ ತುಚ್ಚೀಕರಣದ ಹೇಳಿಕೆ ಹೆಣ್ಣನ್ನು ಶಿಕ್ಷಣ ವಂಚಿತಳನ್ನಾಗಿ ಮಾಡಿದೆ.

## ೬.೧೦. ವೈಧವ್ಯ ಸಮಸ್ಯೆ

ವೈಧವ್ಯ ಎಂಬುದು ಹೆಣ್ಣಿನ ಮೇಲೆ ವಿಧಿಸುವ ದೊಡ್ಡ ಶಾಪ. 'ಇಂದಿರಾಬಾಯಿ', ಕಾದಂಬರಿಯ ಇಂದಿರಾಬಾಯಿ, 'ನಭಾ' ಕಾದಂಬರಿಯ ನಭಾ ಹಾಗೂ 'ನಿರ್ಭಾಗ್ಯ ವನಿತೆ' ಕಾದಂಬರಿಯ ಇಂದಿರೆ ಬಾಲ ವಿಧವೆಯರಾಗಿ ಅನುಭವಿಸಿದ ನೋವು, ಯಾತನೆಗಳಿಂದಾಗಿ ಜೀವಂತ ಪಾತ್ರಗಳಂತೆ ಕಂಗೊಳಿಸುತ್ತವೆ. ಇಲ್ಲಿಯ ಇಂದಿರಾಬಾಯಿ, ನಭಾ, ಇಂದಿರೆ ಈ ಮೂವರು ಬಾಲ್ಯವಿವಾಹವಾಗಿ ಬುದ್ಧಿ ತಿಳಿಯುವ ಮುನ್ನವೇ ಪತಿಯಂದಿರು ಸ್ವರ್ಗಸ್ಥರಾದಾಗ ವಿಧವೆಯರ ಬಾಳು ಸಾಗಿಸುವಂತಾಗುತ್ತದೆ. ಇಲ್ಲಿ ಶೋಷಣೆಗೆ ಒಳಗಾದವಳು ಹೆಣ್ಣಾದರೆ

ಶೋಷಿಸುವವಳು ಹೆಣ್ಣೇ. ಆದರೆ ಇದಕ್ಕೆ ವಿರೋಧ ಎಂಬಂತೆಯೇ ವಿಧವೆ ಮಗಳ ಮೇಲೆ ತಂದೆಯ ಅನುಕಂಪವಿದೆ. ಕಾಳಜಿ ಕಳ ಕಳಿಯಿದೆ. ಅಣ್ಣ-ತಮ್ಮಂದಿರಂತೆ ಅವಳ ನೋವನ್ನು ಕಂಡು ದುಃಖಿಸುವವರಿದ್ದಾರೆ. ಆದರೆ ಸ್ವಂತ ತಾಯಿ, ಚಿಕ್ಕಮ್ಮ ಮಾತ್ರ ಸಂಪ್ರದಾಯಿಕ ಪ್ರತಿನಿಧಿಗಳಾಗಿ ವಿಧವೆ ಮಗಳಂದಿರನ್ನು ನಿರ್ಧಯವಾಗಿ ಶೋಷಣೆ ಮಾಡಿದ್ದಾರೆ.

'ಇಂದಿರಾಬಾಯಿ' ಕಾದಂಬರಿಯ ಅಂಬಾಬಾಯಿ ಮಗಳ ಗಂಡ ತೀರಿದಂದಿನಿಂದಲೇ ಇಂದಿರಾಬಾಯಿಗೆ ಹಣೆಯ ಕುಂಕುಮ ಅಳಿಸುವುದರೊಂದಿಗೆ ಶೋಷಕರ ಪ್ರತೀಕವಾಗಿ ಪರಿಣಮಿಸುತ್ತಾಳೆ. "ಈ ಹೊತ್ತು ತಲೆಯನ್ನು ಬಾಚಿಕೊಂಡಳೆಂತಲೂ, ನಾಳೆ ಕಪ್ಪು ಸೀರೆಯುಟ್ಟಳೆಂತಲೂ, ಇನ್ನೊಂದು ದಿವಸ ಕುಪ್ಪಸ ತೊಟ್ಟಳೆಂತಲೂ"[೨೧] ಹಿಂಸಿಸುವ ತಾಯಿ ಅಂಬಾಬಾಯಿಗೆ ವಿಧವೆ ಮಗಳು ಮಾಡಿದ್ದೆಲ್ಲವೂ, ಮುಟ್ಟಿದೆಲ್ಲವೂ ಮೈಲಿಗೆಯಾಗುತ್ತದೆ.

ವಿವಾಹದ ಅರ್ಥವನ್ನು ಅರಿಯದ ಬಾಲಕಿಯರು ಹಸೆಮಣೆ ಏರಿದ ತಪ್ಪಿಗೆ ವಿಧವೆಯರಾಗಿ ತನ್ನೆಲ್ಲಾ ಬೇಕು ಬೇಡಗಳನ್ನು ತ್ಯಜಿಸಿ, ಸ್ವರ್ಗಸ್ಥನಾದ ಪತಿಯ ಹೆಸರಿನಲ್ಲಿ ಭಜನೆ, ಆರಾಧನೆಗಳಲ್ಲಿ ಮೋಕ್ಷವನ್ನು ಕಾಣಬೇಕಾಗುತ್ತದೆ. ಇಲ್ಲಿಯ ಕಾದಂಬರಿಗಳು ವಿಧವೆ ಬದುಕುತ್ತಿರುವ ಸಮಾಜದ ಕ್ರೂರ ಮುಖವನ್ನು ಬಿಚ್ಚಿಸುವಲ್ಲಿ ಯಶಸ್ವಿಯಾಗಿವೆ. 'ನಭಾ' ಮತ್ತು 'ನಿರ್ಭಾಗ್ಯ ವನಿತೆ' ಕಾದಂಬರಿಗಳಲ್ಲಿ ಬಾಲೆಯೊಬ್ಬಳು ವಿಧವೆಯಾದುದಕ್ಕೆ ಅಪವಿತ್ರ, ಅಮಂಗಲೆ, ಮೈಲಿಗೆಯಾದವಳಾಗಿ ಹಿಂಸೆಗೆ ಒಳಗಾಗಿದ್ದಾಳೆ. ಹಾಸಿಗೆ ಹಿಡಿದ ನಭಾಳ ತಾಯಿ ರೋಗಿ, ಮಗಳ ಪತಿ ತೀರಿದನೆಂದು ತಿಳಿಯುತ್ತಲೇ "ನಿರ್ಭಾಗ್ಯ ಹೊರಡು, ಇನ್ನು ನೀನು ಭೂಮಿಯಲ್ಲಿದ್ದು ಫಲವಿಲ್ಲ"[೨೨] ಎಂದು ಉದ್ಗರಿಸುವ ಹೃದಯಸ್ಪರ್ಶಿ ಸನ್ನಿವೇಶದಲ್ಲಿ ವಿಧವೆಯ ಜ್ವಲಂತ ಸಮಸ್ಯೆಯ ಧ್ವನಿ ಇದೆ. ನಭಾ ಅನಾಥಳಾಗಿ ಚಿಕ್ಕಮ್ಮಳ ಮನೆ ಸೇರಿದಾಗ ಚಿಕ್ಕಮ್ಮ ಶರಾವತಿ ಮಾರಿಯಾಗಿ ಕಾಡುತ್ತಾಳೆ. "ನಿಮ್ಮ ಆಚಾರವು ಹಾಳಗಲಿ! ದೇವರು ನಮಗೇಕೆ ಇಂತಹ ಬುದ್ಧಿಯನ್ನು ಕೊಟ್ಟನೊ? ಗಂಡನಿಲ್ಲದವಳಿಗೆ ಹಾಳು ಮೈಲಿಗೆ ಕೂದಲು ಬೇರೆ ಕೇಡು"[೨೩] ಎಂಬ ಚಿಕ್ಕಮ್ಮಳ ಬೈಗುಳದ ಹಿಂದೆ ಸ್ವಾರ್ಥ ಸಾಧನೆಯ ಉದ್ದೇಶವಿದೆ.

'ಮರಳಿ ಮಣ್ಣಿಗೆ' ಕಾದಂಬರಿಯ ಸರಸ್ವತಿ, 'ಮಾಡಿದುಣ್ಣೋ ಮಹಾರಾಯ' ಕಾದಂಬರಿಯ ವೆಂಕಮ್ಮ, ತಿಮ್ಮಮ್ಮ, ಬಾಲ ವಿಧವೆಯರಾಗಿಯೂ ಅಪವಾದ ಎಂಬಂತೆ ಒಪ್ಪತ್ತಿನ ಊಟ ಮಾಡಿ ಶಿವನಾಮ ಸ್ಮರಣೆಯಲ್ಲಿ ಸಂಸಾರಿಕ ಸುಖ-ದುಃಖದಲ್ಲಿ ಬೆರೆತು ಜೀವನ ಸಾಗಿಸಿದ್ದಾರೆ. ಮೇಲ್ವರ್ಗದ ವಿಧವೆಯರನ್ನು ಪರಿಪರಿಯಾಗಿ ಕಾಡಿದ ವಿಧವಾ ಸಮಸ್ಯೆ, ಮಧ್ಯಮ ಮತ್ತು ಕೆಳವರ್ಗದ ವಿಧವೆಯರ ಬಗೆಗೆ ಉದಾರತೆಯಿದೆ. ಗಂಡ ತೀರಿಕೊಂಡ ವಿಧವೆ ಕೂಡಿಕೆ ಇಲ್ಲವೆ ಸೀರುಡಿಕೆ ಪದ್ಧತಿಯ ಮೂಲಕ ಮರುಮದುವೆಯಾಗುವ ಅವಕಾಶವಿದೆ. 'ಮಲೆಗಳಲ್ಲಿ ಮದುಮಗಳು'

ಕಾದಂಬರಿಯ ನಾಗತ್ತೆಯ ಸೊಸೆ ನಾಗಕ್ಕ ಸೀರುಡುಕೆಯಾಗುವ ಮನಸಿಲ್ಲದಿದ್ದಾಗ್ಯೂ ಅತ್ತೆಯ ಮೋಸ ಜಾಲಕ್ಕೆ ಬಲಿಯಾಗಿ ವೆಂಕಟಪ್ಪನಾಯಕನೊಂದಿಗೆ ಸೀರುಡಿಕೆಯಾಗುತ್ತಾಳೆ. ಆದರೆ 'ಕಾನೂರು ಹೆಗ್ಗಡಿತಿ' ಕಾದಂಬರಿಯ ವಿಧವೆ ಸುಬ್ಬಮ್ಮ ಇಂತಹ ಅವಕಾಶಗಳಿಂದ ವಂಚಿತಳಾಗಿದ್ದಾಳೆ.

### ೬.೧೧. ದತ್ತು ತೆಗೆದುಕೊಳ್ಳುವ ಸಮಸ್ಯೆ

ವಂಶೋದ್ಧಾರಕನನ್ನು ನೀಡಲಾಗದ ಮಹಿಳೆ ಬಂಜೆಯಾಗಿ ಅವಮಾನಿತಳಾದಾಗ, ಆ ಸಮಸ್ಯೆಗೆ ಪರಿಹಾರವನ್ನು ದತ್ತು ಮಕ್ಕಳನ್ನು ಸ್ವೀಕರಿಸುವುದರ ಮುಖಾಂತರ ಕಂಡುಕೊಂಡಿದ್ದಾರೆ. 'ಇಂದಿರಾಬಾಯಿ' ಕಾದಂಬರಿಯ ಜಲಜಾಕ್ಷಿ, 'ಇಂದಿರೆ' ಕಾದಂಬರಿಯ ವಿಧವೆ ದೇವಯಾನಿ, ಮರಳಿ ಮಣ್ಣಿಗೆ ಕಾದಂಬರಿಯ ಪಾರ್ವತಿ, 'ಬೆಟ್ಟದ ಜೀವ' ಕಾದಂಬರಿಯ ಶಂಕರಿ, ತಾಯ್ತನವನ್ನು ತುಂಬಿಕೊಳ್ಳಲು ಹಂಬಲಿಸಿದವರು. ಆದರೆ ಇಲ್ಲಿಯ 'ಬೆಟ್ಟದ ಜೀವ' ಕಾದಂಬರಿಯ ಶಂಕರಿ ಮಕ್ಕಳಿದ್ದೂ ಇಲ್ಲದಂತಾಗುತ್ತಾಳೆ. ಒಬ್ಬ ಮಗಳು ಹೆರಿಗೆಯಲ್ಲಿ ಸತ್ತರೆ ಇನ್ನೊಬ್ಬ ಮಗ ಮನೆಬಿಟ್ಟು ಹೋದವನು. ಹೀಗೆ ತಮ್ಮ ಆಶ್ರಯಿತ ನಾರಾಯಣನ ಮಕ್ಕಳನ್ನು ಮುದ್ದಿಸುವುದರಲ್ಲಿಯೇ ತಾಯ್ತನವನ್ನು ತುಂಬಿಕೊಳ್ಳುತ್ತಾಳೆ.

'ಮರಳಿ ಮಣ್ಣಿಗೆ' ಕಾದಂಬರಿಯ ಪಾರ್ವತಿ ಇಲ್ಲದ ಮಕ್ಕಳಿಗಾಗಿ ಕೊರಗಿದವಳು. ಇವಳಿಗೆ ಜೀವಕ್ಕೆ ಜೀವವಾಗಿ ಸ್ಪಂದಿಸಿದ ಅತ್ತಿಗೆ ವಿಧವೆ ಸರಸ್ವತಿ ಹೇಳುವಂತೆ ಈಗ ನಿನ್ನ ಕರುಳೇ ಹೆರಬೇಕೆಂದೆನು, ಹೋಗಲಿ ದತ್ತ ಮಾಡಿಕೊಂಡರೆ ಏನು ತಪ್ಪು ಎಂಬ ಈ ಮಾತಿಗೆ ಪಾರ್ವತಿಯ ಸಮ್ಮತಿ ಇದೆ. ಆದರೆ ಪುರುಷ ಪ್ರಧಾನ ಸಮಾಜದ ಪ್ರತಿನಿಧಿಯಾದ ಗಂಡ ರಾಮೈತಾಳರದು ವಿರೋಧದ ನೆಲೆ. ತನ್ನ ರಕ್ತ ಹಂಚಿಕೊಂಡೇ ಹುಟ್ಟಬೇಕೆಂಬ ಮನೋಭಾವ ರಾಮೈತಾಳರದು. 'ಇಂದಿರಾಬಾಯಿ' ಕಾದಂಬರಿಯ ಜಲಜಾಕ್ಷಿ ಮತ್ತು 'ಇಂದಿರೆ' ಕಾದಂಬರಿಯ ದೇವಯಾನಿ ಸುಧಾರಕ ಪಂಥದವರಾಗಿ ತೋರುತ್ತಾರೆ. ಜಲಜಾಕ್ಷಿಗೆ ಮಕ್ಕಳಾಗದೆ ಇದ್ದರೂ ಮಕ್ಕಳಿಗಾಗಿ ಕೊರಗದೆ ತಮ್ಮ ಆಶ್ರಯಿತ ಬಾಲಕ ಭಾಸ್ಕರನನ್ನು ಮಗನೆಂದು ಸ್ವೀಕರಿಸುವ ಹಂಬಲವುಳ್ಳವಳು. ಇದೆ ನೆಲೆಯಲ್ಲಿ ವಿಧವೆ ದೇವಯಾನಿ ಪ್ರಿಯಕರನ ಮಗ ರಮಾಕಾಂತನನ್ನು ಕಂಡ ತಕ್ಷಣದಿಂದಲೇ ಮಗನನ್ನಾಗಿ ಸ್ವೀಕರಿಸುತ್ತಾಳೆ. ಹೀಗೆ ಮಕ್ಕಳಿಲ್ಲದ ಸ್ತ್ರೀಯರು ಬೇರೊಬ್ಬರ ಮಕ್ಕಳನ್ನು ತಮ್ಮ ಮಕ್ಕಳೆಂದು ಸ್ವೀಕರಿಸಿ ತಾಯ್ತನದ ಸುಖವನ್ನು ಅನುಭವಿಸಿದ್ದಾರೆ.

ತಿರುಮಲಾಂಬಾ ಹಾಗೂ ಕಲ್ಯಾಣಮ್ಮನವರ ಕಾದಂಬರಿಗಳಲ್ಲಿಯೂ ಹೆಚ್ಚಾಗಿ ಸ್ತ್ರೀ ಸಮಸ್ಯೆಗಳ ಅನಾವರಣಗೊಂಡಿರುವುದು ಕಾಣುತ್ತೇವೆ. ಅವರ 'ನಿರ್ಭಾಗ್ಯ ವನಿತೆ' ಕಾದಂಬರಿಯಲ್ಲಿ ವಿಧವಾ ಸಮಸ್ಯೆ, ವಿಧವಾ ವಿವಾಹ ಪ್ರತಿಪಾದನೆಯ ಧೋರಣೆಯುಳ್ಳ ಅಂಶ ಕಾಣಬಹುದು. ಮತ್ತು 'ಪ್ರಿಯಂವದೆ' ಕಾದಂಬರಿಯಲ್ಲಿ ವರದಕ್ಷಿಣೆ ಸಮಸ್ಯೆಯುಳ್ಳ ಅಂಶ, 'ಸುಖಲತಾ'

ಕಾದಂಬರಿಯಲ್ಲಿ ವಿಲೋಮ ವಿವಾಹದಿಂದ ಆಗುವ ಸಮಸ್ಯೆಗಳು, ವಸುಂಧರಾ ಕಾದಂಬರಿಯಲ್ಲಿ ವರ್ಗತಾರತಮ್ಯ ಈ ರೀತಿ ಹಲವಾರು ಸ್ತ್ರೀ ಸಮಸ್ಯೆಗಳು ಅವರ ಕಾದಂಬರಿಗಳಲ್ಲಿ ನೋಡಬಹುದು.

೧. ಬಾಲ್ಯ ವಿವಾಹ, ೨. ವಿಧವಾ ಸಮಸ್ಯೆ, ೩. ವರದಕ್ಷಿಣೆ, ೪. ಸ್ತ್ರೀ ಶಿಕ್ಷಣ, ಆಧುನಿಕ ಮನೋಭಾವದ ಸ್ತ್ರೀಪರ ಕಾಳಜಿ, ೫. ಪತ್ನಿ ಧರ್ಮ ಪ್ರತಿಪಾದನೆ, ೬. ಹೆಣ್ಣಿನ ಅಸಹಾಯಕತೆಯ ಚಿತ್ರಣ, ೭. ಪುರುಷ ಪ್ರಧಾನ ವ್ಯವಸ್ಥೆಯಲ್ಲಿಯೇ ಸ್ತ್ರೀಪರ ಕಾಳಜಿ, ೮. ವೈಚಾರಿಕತೆ, ೯. ಮಾನವೀಯ ಸಂಬಂಧಗಳ ಸಂವೇದನೆಯ ವಿಭಿನ್ನ ನೆಲೆ, ೧೦. ಸ್ತ್ರೀ ಪಾತ್ರ ಚಿತ್ರಣ.

## ಬಾಲ್ಯ ವಿವಾಹ

ಆ ಕಾಲದ ಸಂಪ್ರದಾಯದಂತೆ ತಮ್ಮ ಅತ್ಯಂತ ಕಿರಿ ವಯಸ್ಸಿನಲ್ಲೇ ವಿವಾಹವಾಗಿ, ಅತಿ ಶೀಘ್ರದಲ್ಲೇ ಬಾಲ್ಯ ವೈಧವ್ಯಕ್ಕೀಡಾದ ತಿರುಮಲಾಂಬಾ ಅವರು –ಬಾಲ್ಯವಿವಾಹದಿಂದ ಒದಗುವ ಎರಡುಗಳನ್ನು ಸ್ವತಃ ಅನುಭವಿಸಿದವರು. ಅಂತೆಯೇ ಬಾಲ್ಯವಿವಾಹ ನಿಷೇಧವನ್ನು ಬಲವಾಗಿ ಪ್ರತಿಪಾದಿಸುವುದರ ಜೊತೆಗೆ, ತಂದೆ ತಾಯಿಯರು ತಮ್ಮ ಮಕ್ಕಳ ಎಳೆತನದಲ್ಲೆ ಇಂಥವನ ಹೆಂಡತಿ ಅಥವಾ ಇಂಥವಳ ಗಂಡ ಎಂಬ ದೃಷ್ಟಿಯಲ್ಲಿ ಮಕ್ಕಳನ್ನು ಬೆಳೆಸಬಾರದೆಂಬ ಕಾಳಜಿಯನ್ನು ವಿದ್ಯುಲ್ಲತಾ  ಕಾದಂಬರಿಯಲ್ಲಿ ಪ್ರತಿಪಾದಿಸಿದ್ದಾರೆ.

ಮಾತೃನಂದಿನಿ ಕಾದಂಬರಿಯಲ್ಲಿ "ಬಾಲ್ಯದಲ್ಲಿ ಮದುವೆ ಮಾಡುವುದರಿಂದ ಹೆಣ್ಣು ಮಕ್ಕಳು ನಮ್ಮ ಅಧೀನದಲ್ಲಿರುತ್ತಾರೆ. ಅಲ್ಲದೆ ಅವರಿಗೆ ಪೂರ್ವಾಚಾರದಲ್ಲಿ ನಂಬಿಕೆಯೂ, ಹಿರಿಯರಲ್ಲಿ, ಗುರುಜನರಲ್ಲಿ ಮತ್ತು ದೇವರಲ್ಲಿ ಭಯ–ಭಕ್ತಿ ಗೌರವಗಳು ನೆಲೆಗೊಂಡು, ಮನೆಯವರಿಗೆ ಅನುಕೂಲೆಯಾಗಿರುವರು. ಬುದ್ಧಿ ಬಂಧ ಬಳಿಕ ಮಾಡಬೇಕೆಂದರೆ, ಅವರು ನಮ್ಮ ಇಚ್ಛೆಯಂತೆ ನಡೆಯಲೊಲ್ಲರು. ಸ್ವಾತಂತ್ರ್ಯದಿಂದ ತಮ್ಮ ಇಚ್ಛಿತ ಪುರುಷನನ್ನೇ ಹುಡುಕಿಕೊಂಡು ದಾಂಧಲೆಯನ್ನುಂಟು ಮಾಡುವರು. ಅಂಥವರು ನಮ್ಮ ಕಟ್ಟಳೆಗಳಿಗೆ ಒಳಪಡುವರೆಂಬುದು ಕನಸಿನಲ್ಲಿಯಾದರೂ ನಂಬಲಾಗದ ವಿಚಾರ! ಇದಕ್ಕೆಂದೇ ನಮ್ಮವರು, ಬಾಲ್ಯವಿವಾಹವನ್ನೇ ರೂಢಿಯಾಗಿಟ್ಟು, ಅದರಂತೆ ನಡೆಸುತ್ತ ಬಂದಿರುವರು. ಹೇಗೂ ನಮ್ಮ ಹಿರಿಯರು ನಡೆದಂತೆ ನಡೆಯಬೇಕಲ್ಲದೆ ಬೇರೆ ದಾರಿಗೆ ಹೋಗಬಾರದು"[೨೪] ಎಂಬ ಮಾತುಗಳು ಪುರುಷಪ್ರಧಾನ ಚಿಂತನೆಯ ಫಲದಿಂದೆಂಬಂತೆ ಮೂಡಿವೆ. ಎಳೆಯಂದಿನಲ್ಲೇ ಹೆಣ್ಣು ಮಕ್ಕಳನ್ನು ವಿವಾಹ ಬಂಧನಕ್ಕೊಳಪಡಿಸಿದರೆ ಏನೆಲ್ಲಾ ಪ್ರಯೋಜನಗಳಾಗುವುವು ಎಂಬ ಬಗೆಗಿನ ಪಟ್ಟಿ ದೊಡ್ಡದೇ ಇದೆ. ಆದರೆ ಈ ಕಾದಂಬರಿಯ ನಾಗೇಶರಾಯ ಪ್ರಗತಿಪರ ಧೋರಣೆಯುಳ್ಳವನು. ಮೇಲಿನ ಮಾತಿಗೆ, "ನಿಜ ನಿಜ! ತಂದೆ ತಾಯಿಯರು ಕುರುಡರಾಗಿದ್ದರೆ,

ಮಕ್ಕಳು ಕಣ್ಣು ಚೆನ್ನಾಗಿದ್ದರೂ; ಕಣ್ಮುಚ್ಚಿಕೊಂಡು ಕುರುಡರಂತಿರಬೇಕು. ಏಕೆಂದರೆ ರೂಢಿ ವಿಚಾರ!"[೨೫] ಎಂದು ಗೇಲಿ ಮಾಡುತ್ತಾನೆ.

ಇದೇ ಕಾದಂಬರಿಯ ಇನ್ನೊಂದು ಸಂದರ್ಭದಲ್ಲಿ ಬಾಲ್ಯದಲ್ಲೇ ಮದುವೆಯಾಗದಿರುವ ಬಗ್ಗೆ ಗಣೇಶ, ವಿಶ್ವನಾಥರು ನಂದಿನಿಯನ್ನು ಛೇಡಿಸಿದಾಗ, "ಮಹಾಶಯರೇ! ಪುರುಷರ ಇಹ-ಪರ ಸುಖಕ್ಕೂ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಕ್ಕೂ, ಆಧಾರ ಪಾತ್ರೆಯರಾಗಿ, ಅನುವರ್ತಿಸಬೇಕಾಗಿರುವ ಸ್ತ್ರೀವರ್ಗವನ್ನು, ಸರಿಯಾಗಿ ವಿದ್ಯಾಬುದ್ಧಿಗಳಿಂದ ಧರ್ಮ ಮಾರ್ಗದಲ್ಲಿ ದೃಢಪಡಿಸಲೊಲ್ಲದೆ, ಅವರನ್ನು ವಿವಿಧ ನಿರ್ಬಂಧಗಳಿಗೆ ಗುರಿ ಮಾಡಿ ಅವರ ಸ್ವಭಾವಸಿದ್ಧವಾಗಿರುವ ಬುದ್ಧಿ, ಗಾಂಭೀರ್ಯ, ಊಹಾಪೋಹ ವಿಚಾರಗಳೇ ಮೊದಲಾದ ಗುಣಗಳನ್ನು ಮಣ್ಣುಪಾಲು ಮಾಡಿ ಕೇವಲ ನಿರ್ದಯರಾಗಿ ಅವರನ್ನು ಪಶುಜೀವಿಗಳೆಂಬ ಅಪವಾದಕ್ಕೆಡೆಯಾಗಿತ್ತು. ನಿರಂತರವೂ ನರಳಿಸುತ್ತಿರುವ ಪುರುಷರೆಂಬ ಕಟುಕರಾದ ನಿಮ್ಮವರ ಕಲ್ಲೆದೆ ಕರಗಿ ನೀರಾಗಿ ಸುರಿವುದಕ್ಕೆ ಮೊದಲು, ತಾಯಿ, ಅಕ್ಕ-ತಂಗಿಯರೆಂಬ ಸದ್ಭಾವನೆಯಿಂದ ಸ್ತ್ರೀ ಸಂತಾನವನ್ನು ಸಂಭಾವಿಸುವಂತಾಗಲಿಕ್ಕೆ ಮೊದಲು, ನಮ್ಮ ದೇಶಮಾತೆ ಹೇಗೆ ಅಭ್ಯುದಿತೆಯಾಗಬೇಕು? ಎಂದು ನಿರ್ಭಾವುಕಳಾಗಿ ಹೇಳುವ ಮಾತುಗಳು ಗಮನಾರ್ಹ."[೨೬] ಅಲ್ಲದೆ, "ನೀವು ನಿಮ್ಮ ಮಕ್ಕಳನ್ನು ಬಾಲ್ಯ ವಿವಾಹವೆಂಬ ಕಟ್ಟಳೆಯಲ್ಲಿ ಕೆಡಹುವ ಪ್ರಯತ್ನಕ್ಕೆ ನಿಂತು, ವಯೋ-ವಿದ್ಯಾ-ಗುಣಶೀಲಗಳಲ್ಲಿ ಪರಸ್ಪರ ಹೊಂದಿಸಲಾಗದ ಸಂಬಂಧವೆಂಬ ಆಳವಾದ ಬಾವಿಗೆ ತಳ್ಳಿ, ಅವರನ್ನು ನೀವಾಗಿ ಕೆಡಿಸುತ್ತಿರುವಿರಿ!... ಮನೋ ಬುದ್ಧ್ಯಾದಿ ಪ್ರತ್ಸಂಗಗಳೂ ಚೆನ್ನಾಗಿ ಬೆಳೆದು ದೃಢವಾಗುವುದಕ್ಕೆ ಮೊದಲೇ ಅವರನ್ನು ಗಂಭೀರ ಸಂಸಾರ ಚಕ್ರವೇಗಕ್ಕೆ ಗುರಿ ಮಾಡಿಟ್ಟು, ಅವರು ಅಶಕ್ತಿ, ಅಧೈರ್ಯಗಳಿಂದುಂಟಾಗುವ ಬಗೆ ಬಗೆಯ ರೋಗ-ಶೋಕ ಸಂತಾಪಗಳಿಂದ ಕಂದಿ ಕುಂದುವುದನ್ನು ನೋಡಿಯೂ ಸುಮ್ಮನಿರುವಿರಿ. ಇದು, ನಿಮ್ಮ ತಪ್ಪೆಂದು ತಿಳಿದೂ ತಿಳಿಯದವರಂತೆ ಅವರವರ ಅದೃಷ್ಟಾಯತ್ತವೆಂದೂ, ಎಲ್ಲವೂ ದೇವೇಚ್ಛೆಯೆಂದೂ ನಿರ್ವಿಕಾರವಾಗಿ ಹೇಳುತ್ತಿರುವಿರಿ. ಆ ನಿಮ್ಮ ಬುದ್ಧಿ ತಿಳಿಯದ ಹುಡುಗಿಯರು, ತಾವಾಗಿ ಬಂದು, 'ತಮ್ಮನ್ನು ಸಂಸಾರ ಚಕ್ರಗತಿಗೆ ಈಗಾಗಲೇ ಬಲಿಯಾಗಿ ಒಪ್ಪಿಸಿ ಬಿಡಬೇಕೆಂದು' ನಿಮ್ಮನ್ನು ಕಾಡಲಿಲ್ಲವಷ್ಟೆ?"[೨೭] ಎಂದು ತರಾಟೆ ತೆಗೆದುಕೊಳ್ಳುವ ಮಾತುಗಳು ಬಾಲ್ಯವಿವಾಹದ ಬಗೆಗಿನ ಪ್ರತಿಕೂಲ ಪರಿಣಾಮವನ್ನು ಪ್ರತಿಪಾದಿಸುವಂತಿವೆ. ಈ ಬಗೆಯ ಬರವಣಿಗೆ ಸುಮಾರು ಹದಿಮೂರು ಪುಟಗಳನ್ನು ತುಂಬಿದ್ದು, ಹರಿತವಾಗಿದೆ. ಭಾಷಣ ಮಾದರಿಯ ಈ ದೀರ್ಘ ಬರೆಹ ಅತಿಯೆನಿಸಿದರೂ, ಬಾಲ್ಯ ವಿವಾಹ ನಿಷೇಧದ ಬಗೆಗಿನ ಲೇಖಕಿಯ ಕಳಕಳಿಯ ಹಿನ್ನೆಲೆಯಲ್ಲಿ ಗಮನಾರ್ಹ.

## ವಿಧವಾ ವಿವಾಹ

"ವೈಧವ್ಯ ಪೂರ್ವಾರ್ಜಿತ ಕರ್ಮಫಲ. ಹಿಂದಿನ ಜನ್ಮದಲ್ಲಿ ಅಶ್ರದ್ಧೆ, ಅತ್ಯಾಸೆ, ಪತಿದ್ರೋಹ, ವಂಚನೆ, ವಕ್ರತೆಗಳ ಫಲವಾಗಿ ಈ ಜನ್ಮದಲ್ಲಿ ವಿಧವೆಯರಾಗುತ್ತೇವೆ. ಕರ್ಮಫಲವಾದ ಇದನ್ನು ನಿಸ್ಸಾರವೆಂದಾಗಲಿ, ತುಚ್ಛವೆಂದಾಗಲಿ ಭಾವಿಸಲಾರೆ. ಹನ್ನೆರಡು ವರ್ಷಗಳ ಬಹುದೀರ್ಘ ಕಾಲವನ್ನು ವಿಚಾರ, ವಿಮರ್ಶೆ ಮತ್ತು ಅಭ್ಯಾಸಗಳಲ್ಲಿಯೇ ಕಳೆದು ವಿತಂತು ಸ್ತ್ರೀಯಾದ ನಾನು ಈ ಜನ್ಮಧಾರಣವು ಅಸಾರವೆಂದಾಗಲೀ, ನಮ್ಮ ಇಹ ಜೀವನವು ತುಚ್ಛವೆಂದಾಗಲಿ ಅಥವಾ ಭೂಭಾರ ಭೂತವಾದು ದೆಂದಾಗಲಿ ಕನಸು ಮನಸ್ಸಿನಲ್ಲಿಯಾದರೂ ಭಾವಿಸಲಾರೆನು"[೨೮] ಎಂಬ ತಿರುಮಲಾಂಬಾ ಅವರ ಮಾತುಗಳು ಮನನೀಯವಾಗಿವೆ.

ಬಾಲ್ಯ ವಿವಾಹ ಮಾಡಬೇಡಿರೆಂದು ತಂದೆ-ತಾಯಿಯರಿಗೆ ಸಲಹೆ ಸೂಚನೆಯನ್ನು(ಪಾತ್ರಗಳ ಮೂಲಕ) ಕೊಡುವ ಲೇಖಕಿ ವೈಧವ್ಯವನ್ನು ಕರ್ಮಫಲ ಎಂದುಕೊಳ್ಳುವುದು ಬೆರಗುಂಟು ಮಾಡುತ್ತದೆ. ಆದರೆ ಅದನ್ನು ನಿಸ್ಸಾರ ಎಂದು ವ್ಯರ್ಥ ಕಾಲಹರಣ ಮಾಡದೇ ಜೀವನೋತ್ಸಾಹ ತುಂಬಿಕೊಳ್ಳುವ ತೀರ್ಮಾನಕ್ಕೆ ಬರುವ, ಅಂದುಕೊಂಡಂತೆ ಬದುಕುವ ಮತ್ತು ಬದುಕಿದಂತೆ ಬರೆಯುವ ಜೀವನ್ಮುಖಿ ಧೋರಣೆ ಸ್ವಾಗತಾರ್ಹವಾದುದು.

ವೈಧವ್ಯಕ್ಕೀಡಾದ ಮಹಿಳೆ ಏನು ಮಾಡಬೇಕು? ಅವಳ ಮುಂದಿನ ಜೀವನದ ಗತಿ ಏನು? ಮರು ವಿವಾಹವೇ? ಎಂಬ ಪ್ರಶ್ನೆ ಮೂಡುವುದು ಸಹಜ. ತಿರುಮಲಾಂಬಾ ಅವರು ವಿಧವಾ ವಿವಾಹವನ್ನೆಂದೂ ಸಮರ್ಥಿಸಿಲ್ಲ. ಸ್ತ್ರೀಗೆ ಶಿಕ್ಷಣದ ಅಗತ್ಯವನ್ನು ಪ್ರತಿಪಾದಿಸುವ ಅವರು, ತಮಗೆ ಒಪ್ಪಿತವಾದ ಮೌಲ್ಯಗಳನ್ನು ವೈದಿಕ ಪರಂಪರೆಯ ಆಧಾರದೊಡನೆ ನಿರೂಪಿಸುವ, ನೊಂದ ಮಹಿಳೆಯರು ಪಾರಮಾರ್ಥಿಕ ತಿಳುವಳಿಕೆಯೊಡನೆ ನೆಮ್ಮದಿ ಕಂಡುಕೊಳ್ಳಬಹುದೆಂಬ ಅಭಿಪ್ರಾಯ ವುಳ್ಳವರು. ಸಾಧ್ಯವಾದರೆ ಅಸಹಾಯಕರಾಗಿರುವ, ವೈಧವ್ಯದಿಂದ ನೊಂದು-ಬೆಂದವರಿಗೆ ಆಸರೆಯಾಗಿ ನಿಲ್ಲಬಹುದೆಂಬ ಅಭಿಮತದವರು. ಅದಕ್ಕಾಗಿಯೇ ತಾವು ಅಭಿವ್ಯಕ್ತಿ ಮಾಧ್ಯಮ-ಕಾದಂಬರಿ, ನಾಟಕ, ಲೇಖನದ ದಾರಿ ಹಿಡಿದರು. ನೊಂದ ಮಹಿಳೆಯರನ್ನು ತಮ್ಮದೇ ರೀತಿಯಲ್ಲಿ ಸಂತೈಸಿದರು.

ತಿರುಮಲಾಂಬಾ ಅವರ ಈ ಧೋರಣೆ ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಬಗೆ ಹೀಗಿದೆ.

ಸತೀಹಿತೈಷಿಣೀ ಗ್ರಂಥಮಾಲೆಯ ಚೊಚ್ಚಲ ಕೃತಿ ಸುಶೀಲೆ, ಇದನ್ನು ಅರ್ಪಿಸಿರುವುದು ಗತಿಸಿದ ತಮ್ಮ ಪತಿಗೆ,

"ಪತಿದೇವ ಪರಂದೈವಂ। ಪತಿ ಸೇವಾ ಕುಲವಧೂ ಶರಣಮ್।
ಸತ್ಯುರ್ನಾನ್ಯತ್ ಪರಮಿಹ। ಪತಿಪದಮೇಕಂಸ್ಮರೇನಿತ್ಯಂ॥"[೨೯]

ಈ ರೀತಿ ಪತಿ ಪಾರಾಯಣ ಮನೋಭಾವ ಅವರ ಲೇಖನ, ಕೃತಿಗಳಲ್ಲಿ ಅಲ್ಲಲ್ಲಿ ವ್ಯಕ್ತಗೊಂಡಿದೆ. ವಿಧವಾ ವಿವಾಹವನ್ನು ಕುರಿತಾದ ತಿರುಮಲಾಂಬಾ ವರ ಸ್ಪಷ್ಟ ನಿಲುವು ವ್ಯಕ್ತವಾಗಿರುವುದ ನಭಾ ಕಾದಂಬರಿಯಲ್ಲಿ. ಈ ಕೃತಿಯಲ್ಲಿ ಬರುವ ಅನೇಕ ಪಾತ್ರಗಳು ಪ್ರಚಲಿತ ಸಮಸ್ಯೆ, ವಿದ್ಯಮಾನ, ಪರಿಹಾರ ಕುರಿತು ಆಗಾಗ ಚರ್ಚಿಸುತ್ತವೆ. ಅಂತಹ ಒಂದು ಸಂದರ್ಭ: "ದಾನವನ್ನು ಅಂಗೀಕರಿಸಿದವನು ಮತ್ತೊಬ್ಬರಿಗೆ ದಾನ ಮಾಡದೆ ಮೃತನಾದರೆ, ಆ ಸ್ವತ್ತಿಗೂ ಆ ಸ್ವತ್ತಿನಲ್ಲಾಗುವ ಫಲಕ್ಕೂ ಅಧಿಕಾರಿ ಯಾರು? ವಿಧಿವತ್ತಾಗಿ ತಾಯಿತಂದೆಗಳು ಅವಾತನ ಹಸ್ತದಲ್ಲಿ ತಮ್ಮ ಮಗಳನ್ನು ಒಪ್ಪಿಸುವರೋ ಅಂದೇ ಮಗಳ ಮೇಲಿನ ಅಧಿಕಾರ ಕಳೆದು ಹೋಗುವುದು. ದಾನ ಪರಿಗ್ರಾಹಿಯಿಂದ ಅದನ್ನು ಮತ್ತಾರಾದರೂ ಪಡೆಯದೆ ತಾಯಿ ತಂದೆಗಳಿಂದ ಪಡೆಯಲಾಗದು. ದಾನವನ್ನು ಸ್ವೀಕರಿಸಿದವನು ಮೃತನಾದರೆ, ದಾನವಾದ ವಸ್ತುವು ಇಚ್ಛಿತ ವಸ್ತುವಿನೊಡನೆ ಸೇರಲರ್ಹವಾಗಲಾರದು. ದಾನವಾಗಿ ಹೋಗುವ ವಸ್ತುವಿಗೆ ದಾನಕ್ಕೆ ಹೋಗುವ ಅಧಿಕಾರವೆಷ್ಟೋ ಅಷ್ಟೇ ವಿನಾ, ಆರಿಗೆ, ಆವಾಗ, ಹೇಗೆ ದಾನವಾಗಬೇಕೆಂಬ ಅಧಿಕಾರವಾಗಲೀ, ಇಷ್ಟವಿಲ್ಲದವನಲ್ಲಿ ನಿಲ್ಲದೆ, ಇಷ್ಟವಿದ್ದೆಡೆಗೆ ಹೋಗುವ ಅಧಿಕಾರವಾಗಲೀ ಇಲ್ಲ."[೩೦] ವಿಧವಾ ವಿವಾಹವನ್ನು ಕುರಿತಂತೆ ನಭೆ ಆಡುವ ಈ ಮಾತುಗಳು ಸ್ವತಃ ಲೇಖಕಿಯ ಮನೋಭಾವವನ್ನು ತೆರೆದಿಟ್ಟಿವೆ.

ನಭಾದ ಇನ್ನೊಂದು ಸನ್ನಿವೇಶ: ರಮಾಮಣಿ, ನಿರಂಜನ, ನಭಾ ಇವರ ಮಧ್ಯೆ(ಅಷ್ಟಮ ಪರಿಚ್ಛೇದ) ಚರ್ಚೆ ನಡೆಯುತ್ತಿದ್ದಾಗ, ಹಾಗಾದರೆ ಈಗ ಈ ಭರತ ಖಂಡದಲ್ಲಿ ವಿಧವಾ ವಿವಾಹ ಪದ್ಧತಿಯನ್ನು ತರುತ್ತಿರುವವರು ಹುಚ್ಚರೋ ಎಂಬ ನಿರಂಜನನ ಪ್ರಶ್ನೆಗೆ ನಭೆ, "ನಾನು ಹಾಗೆ ಹೇಳಲಾರೆನು; ಅದು ಅವರ ಇಚ್ಛೆ, ಮಾಡಿಕೊಳ್ಳುವ ಅಪೇಕ್ಷೆ. ಈ ಪದ್ಧತಿಯಂತು ಸದ್ಯಕ್ಕೆ ಹಿತಕರವಾದುದಲ್ಲ ಎಂದು ನಾನು ನಂಬಿರುವೆನು. ದೇಶದ ಅಭ್ಯುದಯವನ್ನೇ ಬಯಸುತ್ತಿರುವ ನಾವು ಒಂದು ಧ್ಯೇಯವನ್ನು ಮುಂದಿಟ್ಟೇ ಜನರನ್ನು ಎಚ್ಚರಿಸಬೇಕು. ಈ ಧ್ಯೇಯವು ಉಚ್ಚತರವಾದು ದಾಗಿರಬೇಕೆ ಹೊರತು, ಹೀನ ತರವಾದುದಾಗಿದ್ದರೆ ಜನರ ಮಾನಸಿಕ ಉನ್ನತಿಯಾಗಲೀ, ಪ್ರಯತ್ನದ ಸಾರ್ಥಕತೆಯಾಗಲೀ ಆಗಲಾರದು. ಹಾಗಿಲ್ಲದೆ ಇಂದು ವಿಧವಾ ವಿವಾಹವನ್ನು ಅನುಮೋದಿಸುವವರು ಇನ್ನು ಹತ್ತಾರು ವರ್ಷಗಳಲ್ಲಿಯೇ ಸಧವಾ ವಿವಾಹವನ್ನು ಕೂಡ ಅನುಮೋಧಿಸುವರು. ಇದರಿಂದ ಇಹಸುಖ ಪ್ರಾಪ್ತಿಯಿಲ್ಲದ ಸಧವೆಗೂ, ವಿಧವೆಗೂ ತಾರತಮ್ಯವಿಲ್ಲದಂತಾಗುವುದರಲ್ಲಿ ಸಂಶಯವಿಲ್ಲ. ಹಾಗಾಗುವುದರಿಂದ ಸೋಡಾ(ಡೈವರ್ಸ್) ಪದ್ಧತಿಯೂ ಬರಬೇಕಾಗುವುದು. ಆಗ ಭರತ ವರ್ಷದ ಭಾರತೀಯರ ಸ್ಥಿತಿಗತಿಗಳೇನಾಗುವುದೆಂಬುದನ್ನು ಈಗ ಹೇಗಿರುವುದೆಂಬುದನ್ನು ಸ್ವಲ್ಪ ವಿಚಾರ ಮಾಡಿ ಈಗಲೇ ಎಚ್ಚರಗೊಳ್ಳುವುದು ಒಳ್ಳೆಯದು"[೩೧] ಎನ್ನುತ್ತಾಳೆ.

ಮೇಲೆ ಉಲ್ಲೇಖಿಸಿದ ಎರಡೂ ನಿದರ್ಶನಗಳಿಂದ ವಿಧವೆಗೆ ದಾನವಾಗಿ ಹೋಗಿರುವ ವಸ್ತು ಮರುವಿವಾಹವಾಗಲು ಹಕ್ಕು ಇಲ್ಲ. ಹಾಗೊಂದು ವೇಳೆ ಉಲ್ಲಂಘಿಸಿ ಮರುವಿವಾಹವಾದರೂ ದೇಶದ ಅಭ್ಯುದಯವೇ ಕುಂಟಿತವಾದೀತು. ಅಲ್ಲದೇ ಸಧವಾ ವಿವಾಹವೂ, ವಿಚ್ಛೇದನ(ಸೋಡಾ ಚೀಟಿ) ಪದ್ಧತಿಯೂ ಜಾರಿಗೆ ಬಂದರೆ ದೇಶದ ಜನ ಜೀವನವೇನಾಗಬಹುದೆಂಬ ಆತಂಕ ವ್ಯಕ್ತವಾಗಿದೆ. ತಿರುಮಲಾಂಬಾ ಅವರು ವಿಧವೆಯ ಮನಸ್ಸಿನ ಚಿತ್ರಣ, ಆಘಾತಗಳನ್ನು ಕೊಡುತ್ತಲೇ ವಿಧವೆ ವಿವಾಹವಾಗುವುದಕ್ಕಿಂತಲೂ ಅವಳು ಜೀವಿಸಲು ಅಗತ್ಯವಾದ ಒಂದು ಪರಿಸರದ ನಿರ್ಮಾಣದ ಕಡೆಯೇ ಹೆಚ್ಚು ಗಮನ ಹರಿಸುತ್ತಾರೆ. ತಿರುಮಲಾಂಬಾರಿಗೆ ವಿಧವಾ ಸಮಸ್ಯೆ ಒಂದು ಸಾಮಾಜಿಕ ಸಮಸ್ಯೆಯಾಗಿಲ್ಲ; ವೈಯಕ್ತಿ ಜೀವನದ  ದುರಂತವಾಗಿ, ಹಿಂದಿನ ಜನ್ಮದ ಕರ್ಮಫಲವಾಗಿ ಕಾಣುತ್ತದೆ. ಹಾಗಾಗಿ ಈ ಸಮಸ್ಯೆಯನ್ನು ಬಿಡಿಸುವ ಉದ್ದೇಶ ಅವರಿಗಿದ್ದಂತಿಲ್ಲ. ಬದಲಾಗಿ ಪಾಲಿಗೆ ಬಂದ ಪೂರ್ವ ಕರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸಬೇಕೆಂಬುದು ಅವರ ಇಂಗಿತ. ಆರ್ಯ ಕುಲಾಂಗನೆಯರು ಸಧವೆಯರಾಗಿರಲಿ, ವಿಧವೆಯರಾಗಿರಲಿ ತಮ್ಮ ಸತೀತ್ವವನ್ನು ಉಳಿಸಿಕೊಳ್ಳಬೇಕೆಂದೇ ಅವರು ಪ್ರತಿಪಾದಿಸುತ್ತಾರೆ. ವಿಧವೆಯರು ಸುಬ್ರಹ್ಮಚರ್ಯೆಯನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು. ಇಹದ ಸೌಖ್ಯವನ್ನು ತ್ಯಜಿಸಿ, ಪರದ ಸದ್ಗತಿಗೆ ಪ್ರಯತ್ನಿಸಬೇಕು. ವಿಧವಾ ವಿವಾಹ ದೇಶದ ಧರ್ಮ ಜಾಗೃತಿ ನಷ್ಟವಾಗಲು ಕಾರಣವಾಗುತ್ತದೆಂಬ ಧೋರಣೆಯುಳ್ಳವರಾಗಿದ್ದಾರೆ.

### ತಿರುಮಲಾಂಬಾ ಅವರು ಪ್ರತಿಪಾದಿಸುವ ಸಾಂಪ್ರದಾಯಿಕ ಸ್ತ್ರೀ ಶಿಕ್ಷಣ ಪದ್ಧತಿ

ಆರ್ಯಧರ್ಮದ ಪುನರುತ್ಥಾನಕ್ಕೆ ಪೂರಕವಾದ ಸಾಂಪ್ರದಾಯಿಕ ಶಿಕ್ಷಣ ನೀತಿಯ ಪ್ರತಿಪಾದಕರಂತೆ ತಿರುಮಲಾಂಬಾ ಕಾಣುತ್ತಾರೆ. ನಿದರ್ಶನವಾಗಿ ಪೂರ್ಣಕಲಾ ಕಾದಂಬರಿಯನ್ನು ಗಮನಿಸಬಹುದು. ಈ ಕೃತಿಯಲ್ಲಿ ಪಾಶ್ಚಾತ್ಯ ಮಾದರಿಯ ಶಿಕ್ಷಣ, ನೀತಿ ಹಾಗೂ ಪಾಶ್ಚಾತ್ಯರನ್ನು ಅನುಕರಿಸುವ ಯುವಕರು ತೀವ್ರ ಟೀಕೆಗೆ ಗುರಿಯಾಗುತ್ತಾರೆ. ಅಪ್ಪಟ ಆರ್ಯ ಧರ್ಮಾನುಯಾಯಿಯಾದ ಕುಮುದಮಿತ್ರನು "ಟೊಪ್ಪಿಗೆ, ಮುಖ ಕ್ಷೌರ, ಬೀಡಿ, ಬ್ರಾಂದಿ, ಮುಂಜುಟ್ಟು, ಕುತ್ತಿಗೆಗೆ ನೇಣು ಇಷ್ಟರಿಂದಲೇ ನೀನು ಆಂಗ್ಲ ಸರದಾರ ಶ್ರೇಷ್ಠರೆನ್ನಿಸಿದೆಯಾದರೆ, ನಾಟಕದ ವೇಷಧಾರಿಗಳು ಕೂಡ ಚಕ್ರೇಶ್ವರರಾಗಿ ಹೋಗುವರು"[೩೨] ಎಂದು ಬೃಹತ್ಸೇನನನ್ನು ಟೀಕಿಸುತ್ತಾನೆ. ಅಲ್ಲದೇ "ನಿನ್ನನ್ನು ಉದ್ಧರಿಸುವವರು ಆ ಗುರುಗಳಲ್ಲದೆ ಮತ್ತವ ಚುಟ್ಟಾಸಾಬರೂ ಬರುವುದಿಲ್ಲ. ಚೆನ್ನಾಗಿ ನಂಬು"[೩೩] ಎಂಬ ತಿಳುವಳಿಕೆಯನ್ನು ನೀಡುತ್ತಾನೆ. ಈ ಬಗೆಯ ಆಧುನಿಕತೆಯನ್ನು ಕಂಡರೆ ತಿರುಮಲಾಂಬಾ ಅವರಿಗಾಗದು.

### ವರದಕ್ಷಿಣೆ ವಿರೋಧಿ ನಿಲುವು

ಕಳೆದ ಶತಮಾನದ ಆರಂಭದಲ್ಲಿ ವರದಕ್ಷಿಣೆ ಪಿಡುಗು ಈಗಿನಷ್ಟು ಬಿಗಡಾಯಿಸದಿದ್ದರೂ ತಿರುಮಲಾಂಬಾ ಅದನ್ನು ತೀವ್ರವಾಗಿ ಖಂಡಿಸಿದ್ದಾರೆ. ವರದಕ್ಷಿಣೆ ಕೊಡುವುದೂ, ತೆಗೆದುಕೊಳ್ಳುವುದೂ

ಅಪರಾಧ. ಇದೊಂದು ಸನ್ನಿಪಾತ ರೋಗ. ಹೆಣ್ಣು ಮಕ್ಕಳು ಹಠ ತೊಟ್ಟು ಈ ಪದ್ಧತಿಯನ್ನು ವಿರೋಧಿಸಬೇಕು ಎಂಬ ನಿಲುವು ಅವರದು. ಹಾಗೆ ವಿರೋಧಿಸುವ ವಿನೂತನ ಕ್ರಮವನ್ನು ಕಾದಂಬರಿಕಾರ್ತಿ ಪ್ರತಿಪಾದಿಸಿರುವುದಕ್ಕೆ ನಿದರ್ಶನ ಮಾತೃನಂದಿನಿಯ ಆದರ್ಶ ಪಾತ್ರ ಅಚಲಚಂದ್ರ ತನಗೆ ಒಂದು ಲಕ್ಷ ರೂ. ವರದಕ್ಷಿಣೆ ಬೇಕೆಂದು ಬೇಡುವುದು; ಅದೇ ಸಂದರ್ಭದ "ಹಣಕ್ಕಾಗಿ ಹೆಣಗಾಡಿ ಸಾಯುತ್ತ, ತಮ್ಮ ತಮ್ಮ ಮಕ್ಕಳನ್ನೇ ಮಾರುತ್ತಿರುವ ಈ ಕಾಲದ ಮಹಾರಾಜರ ಕಯಾಲುಗಳಿಗೆ ಬೇಡಿಗಳನ್ನು ತೊಡಿಸಲಿಕ್ಕೂ ಲಜ್ಜಾಭಯಗಳಿಲ್ಲದೆ, ಹಲ್ಕಿರಿದು, ವರದಕ್ಷಿಣೆ ಕೊಟ್ಟರೆ ನಿಮ್ಮ ಮಗಳನ್ನು ನಮ್ಮ ಮಗನಿಗೆ ಕೊಳ್ಳುವೆವೆಂದಾಡುವವರ ನಾಲಿಗೆಗೆ ಕರಗಿಸಿದ ಸೀಸವನ್ನು ಸುರಿಲಿಕ್ಕೂ ತಗಲುವ ವೆಚ್ಚಕ್ಕಾಗಿ ಹಣದ ಅಗತ್ಯವಿದೆ"[೩೪] ಎಂಬ ಮಾತುಗಳಲ್ಲಿನ ವ್ಯಂಗ್ಯ ಗಮನಾರ್ಹ.

**ಬಾಲ್ಯವಿವಾಹ ಮತ್ತು ವಿಧವಾ ಸಮಸ್ಯೆ**

ತಿರುಮಲಾಂಬಾ ಅವರಂತೆ ಕಲ್ಯಾಣಮ್ಮನವರೂ ಸಹ ವಿಧವಾ ಸಮಸ್ಯೆಯನ್ನು ಕುರಿತು ತುಂಬಾ ಗಂಭೀರ ಚಿಂತನೆ ನಡೆಸಿದ್ದಾರೆ. ಇವರ 'ನಿರ್ಭಾಗ್ಯವನಿತೆ' ಅಥವಾ 'ಇಂದಿರೆ' ಕೃತಿಯ ಉದ್ದೇಶವೇ ವಿಧವಾ ಸಮಸ್ಯೆಯನ್ನು ವಿಶ್ಲೇಷಿಸುವುದಾಗಿದೆ. ಈ ಕಾದಂಬರಿಯ ಮುನ್ನುಡಿಯಲ್ಲಿ, ಅನೇಕ ದಿನಗಳಿಂದ ನಮ್ಮ ದೇಶದ ವಿಧವೆಯರ ಪರಿತಾಪ ಸ್ಥಿತಿಯನ್ನು ನೋಡಿ ನೋಡಿ ಅವರಿಗೆ ನನ್ನಿಂದಾದ ಯಾವ ಉಪಕಾರವನ್ನೂ ಮಾಡಲಾಸಮರ್ಥೆಯಾಗಿದ್ದೆನು. ಅವುಗಳನ್ನು ಕಣ್ಣಾರೆ ಕಂಡಂದಿನಿಂದ ಇವುಗಳನ್ನು ಒಂದು ಚಿಕ್ಕ ಕಥೆಯಾಗಿ ಬರೆಯಬೇಕೆಂಬ ಅಭಿಲಾಷೆ ಯುಂಟಾದರೂ ಅವರ ಶೋಚನೀಯವಾದ ದುಃಸ್ಥಿತಿಯು ಮನಸ್ಸಿಗೆ ತೋರಿದಾಗಲೆಲ್ಲಾ ಚಿತ್ತಭ್ರಮಣೆಯುಂಟಾಗಿ ಲೇಖನಿಯು ಮುಂದೆ ಸಾಗದೆ ನಿಲ್ಲುತ್ತಿದ್ದುದರಿಂದ ಬರೆಯಲು ಸಾಗದೆ ಕೊನೆಗೆ ಬರೆದೇ ತೀರಬೇಕೆಂಬ ದೃಢ ಮನಸ್ಸಿನಿಂದ ಒಂದು ಬಗೆಯಾಗಿ ಪೂರ್ಣಗೊಳಿಸಿದೆನು ಎಂದಿರುವ ಮಾತುಗಳು ಗಮನಾರ್ಹ.

ಈ ಲೇಖಕಿ ತಮ್ಮ ಸಮಕಾಲೀನ ಸಮಾಜದ ಆಗುಹೋಗುಗಳನ್ನು ತುಂಬಾ ಎಚ್ಚರಿಕೆಯಿಂದ ಗಮನಿಸುವವರು. ಯಾವುದೇ ಸಮಸ್ಯೆಯ ಕಾರಣ, ಪರಿಣಾಮ, ಪರಿಹಾರಗಳನ್ನು ತುಂಬಾ ವಸ್ತುನಿಷ್ಠವಾಗಿ ವಿಶ್ಲೇಷಣೆಗೆ ಒಳಪಡಿಸುವ ಮನೋಭಾವದವರು. ಕಲ್ಯಾಣಮ್ಮನವರ ಈ ಬಗೆಯ ಸೂಕ್ಷ್ಮ ಅವಲೋಕನಕ್ಕೆ ನಿದರ್ಶನವಾಗಿ ಅವರ 'ಇಂದಿರೆ' ಮತ್ತು 'ನಿರ್ಭಾಗ್ಯ ವನಿತೆ' ಕಾದಂಬರಿಯಲ್ಲಿ ಬಾಲ ವೈಧವ್ಯವನ್ನು ಕುರಿತಂತೆ ಮೂರು ಹಂತಗಳಲ್ಲಿ ಕಾರಣ, ಸ್ಥಿತಿಗತಿ, ಪರಿಹಾರದಲ್ಲಿ ವಿಶ್ಲೇಷಿರುವುದು ಕಾಣಬಹುದು.

ಇಂದಿರೆ ಸುಲಕ್ಷಣವಾದ ೯ ವರ್ಷದ ಹುಡುಗಿ. ತನ್ನ ತಾಯಿಯ ಸಹೋದರನ ಮಗ ಸುಂದರೇಶನ ಜೊತೆ ಆಡಿ ಬೆಳೆದವಳು. ಇಂದಿರೆಯ ತಾಯಿ ಸ್ವರ್ಣಳಿಗೆ ಮಗಳನ್ನು ಸುಂದರೇಶನಿಗೆ

ಕೊಡುವ ಬಯಕೆ. ಆದರೆ ಇಂದಿರೆಯ ತಂದೆ ಸತೀಶನ ತಾಯಿ ಅಂದರೆ ಅವಳ ಅಜ್ಜಿಯ ಕೌಟುಂಬಿಕ ರಾಜಕಾರಣದಿಂದ ೧೬ ವರ್ಷದ ನಾರಾಯಣ, ಮದುವೆಯಾಗಲು ಯಾರೂ ಒಪ್ಪದಿರುವ ಮೂರ್ಖ, ದಡ್ಡನಿಗೆ ಮದುವೆ ಮಾಡಿಕೊಡಬೇಕಾಗುತ್ತದೆ. ಸತೀಶ ಬಿ.ಎ. ಬಿ.ಎಲ್, ಓದಿ, ಡೆಪ್ಯುಟಿ ಕಲೆಕ್ಟರ್ ಆಗಿದ್ದರೂ, ತನ್ನ ಮಗಳನ್ನು ನಾರಾಯಣನಿಗೆ ಕೊಡುವುದಕ್ಕಿಂತ ಸುಂದರೇಶನಿಗೇ ಮದುವೆ ಮಾಡಿಕೊಡುವುದು ಖಚಿತ ಎಂದು ಮನಗಂಡಿದ್ದರೂ ಕೇವಲ ವೃದ್ಧ ತಾಯಿಯ ಮನಸ್ಸಾಮಾಧಾನಕ್ಕಾಗಿ, ಆಹಾ ನನ್ನ ವಿದ್ಯಾನುಭವವು ನಮ್ಮ ಸಮಾಜ ಪರಿಷ್ಕರಣ ಉದ್ದೇಶವು, ದೇಶಾಭಿವೃದ್ಧಿಯ ವಿಷಯದಲ್ಲಿ ಇರತಕ್ಕ ಅಭಿರುಚಿಯೂ, ಇತರರಿಗೆ ಬೋಧಿಸುತ್ತಿದ್ದ ಬೋಧನೆಯೂ, ನನ್ನ ಬುದ್ಧಿಯೂ, ಏನಾದವು? ಎಲ್ಲಿ ಹೋಯಿತು? ನನ್ನ ಮಾತೃವಾತ್ಸಲ್ಯವನ್ನು ತೋರಿಸುವುದಕ್ಕೆ ತಕ್ಕ ಸಮಯವು ಇದೇನೋ ಎಂದು ಪರಿತಪಿಸುತ್ತಲೇ, ತನ್ನ ಹೆಂಡತಿ(ಸ್ವರ್ಣ) ಮತ್ತು ಮಗ(ಶಚೀಂದ್ರ)ನ ವಿರೋಧದ ನಡುವೆಯೂ ವಿವಾಹ ಮಾಡಿಸುವುದೂ, ಸತೀಶ ವಿದ್ಯಾವಂತ, ಸಮಾಜದಲ್ಲಿ ಗಣ್ಯ ಸ್ಥಾನದಲ್ಲಿದ್ದೂ, ತಾಯಿಯ ಮೇಲಿನ ಭಾವುಕ ಪ್ರೀತಿಯಿಂದ, ಮಗಳ ಭವಿಷ್ಯವನ್ನೇ ಕತ್ತಲಿಗೆಸೆಯುವುದು ಮೊದಲಾದ ಸನ್ನಿವೇಶ ನಿರ್ಮಾನ ಮಾಡಿರುವುದು "ಬಾಲ್ಯ ವಿವಾಹ, ಬಾಲ ವೈಧವ್ಯ ಪೂರ್ವಜನ್ಮದ ಕರ್ಮಫಲವಲ್ಲ; ಹಿರಿಯರ ಮೂರ್ಖ ನಿರ್ಧಾರದ ಫಲ"[೩೫] ಎಂಬ ಕಾದಂಬರಿಕಾರ್ತಿಯ ಧೋರಣೆಯ ಪ್ರತಿಪಾದನೆಗಾಗಿ. ಏಕೆಂದರೆ, ಮದುವೆ ಎಂದರೇನೆಂದು ಅರಿಯದೆ ಇಂದಿರೆ, ತನ್ನ ವಿವಾಹವಾದ ಕೆಲವೇ ದಿನಗಳಲ್ಲಿ ವೈಧವ್ಯಕ್ಕೀಡಾಗಬೇಕಾಗುತ್ತದೆ, ಆಕಸ್ಮಿಕ ಕಾಯಿಲೆಯಿಂದ ಅವಳ ಪತಿ ನಾರಾಯಣನ ಸಾವಿನಿಂದ. ಹೀಗೆ ಬಾಲ್ಯವಿವಾಹ, ವೈಧವ್ಯಗಳಿಗೆ ಕಾರಣಗಳನ್ನು ಮೊದಲ ಹಂತದಲ್ಲಿ ಚಿತ್ರಿಸುತ್ತಾರೆ.

**ವಿಧವೆಯ ಸಮಸ್ಯೆ**

ತನ್ನ ಪತಿ ಎನಿಸಿಕೊಂಡವನು ಗತಿಸಿದಾಗ ಹೇಗೆ ಪ್ರತಿಕ್ರಯಿಸಬೇಕೆಂದೇ ತಿಳಿಯದ ಬಾಲಕಿ ಇಂದಿರಾ, ಅವರಿವರ ಕುಹಕ ಮಾತು, ನೋಟಗಳಿಗೀಡಾಗುವುದು ತಾಯಿಯ ಮನೋವ್ಯಥೆಗೆ ಕಾರಣವಾಗುತ್ತದೆ. ಈ ಭಾಗದಲ್ಲಿ ಇಂದಿರೆ ಮತ್ತು ಅವಳ ತಾಯಿ ನಡುವಣ ಸಂಭಾಷಣೆ, ವಿಧವೆ ಹೂ ಮುಡಿದುಕೊಳ್ಳುವ, ಮುಡಿಯಬಾರದ ಬಗೆಗೆ, ನಾರಾಯಣ ಸತ್ತ ಕಾರಣದಿಂದ ಅಲಂಕಾರ ಮಾಡಿಕೊಳ್ಳಕೂಡದು, ತಲೆಗೂದಲನ್ನು ತೆಗೆಸಿಬಿಡುವುದು ಇತ್ಯಾದಿ, "ಇನ್ನು ಆಭರಣಗಳನ್ನು ಧರಿಸಿಕೊಳ್ಳದಂತೆ! ಹಾಗಾದರೆ ನಾನು ನಮ್ಮ ಅಜ್ಜಿಯಂತಿರಬೇಕೆ?"[೩೬] ಎಂದು ಕೇಳುವ ಸನ್ನಿವೇಶ ಮನಕಲಕುವಂತಿದೆ. ನಂತರ ತನ್ನ ಮಗಳ ಬಗೆಗಿನ ಕೊರಗಿನಲ್ಲೇ ಇಂದಿರೆಯ ತಾಯಿ ಸಾಯುತ್ತಾಳೆ. ಆಕೆಯ ಶ್ರಾದ್ಧ ಮುಗಿದ ದಿವಸಗಳಿಂದ ರಾಶಿ ರಾಶಿಯಾಗಿ ಬರತಕ್ಕ ಹೆಣ್ಣುಗಳ ಜಾತಕಗಳನ್ನು ನೋಡಿದ ೪೫ ವರ್ಷದ ಸತೀಶ ೧೪ ವರ್ಷ ವಯಸ್ಸುಳ್ಳ

ಹೆಣ್ಣನ್ನು ಲಗ್ನ ಮಾಡಿಕೊಳ್ಳುವುದಾಗಿ ನಿಶ್ಚಯಿಸಿ ಲಗ್ನವನ್ನು ಮಾಡಿಕೊಳ್ಳುತ್ತಾನೆ. ತನ್ನ ತಂದೆ ಸತೀಶನ ಈ ನಿರ್ಧಾರ ಮಗ ಶಚೀಂದ್ರನಲ್ಲಿ ತೀವ್ರ ವ್ಯಥೆಗೆ ಕಾರಣವಾಗುತ್ತದೆ. ಈ ಸಂದರ್ಭದಲ್ಲಿ ಅವನು, "ಆಹಾ ಪುರುಷನ ಕಾಠಿಣ್ಯವೆಂತಹುದು? ಪುರುಷನನ್ನೇ ಸ್ಪರ್ಶಿಸಿ ಅರಿಯದ ಕೇವಲ ಬಾಲೆಯರಾದ ಅಬಲೆಯರು ಪತಿ ವಿಯೋಗ ಹೊಂದಿದರೆ ಮತ್ತೊಬ್ಬನನ್ನು ವರಿಸಕೂಡದಂತೆ. ಜೀವಿತ ಕಾಲವನ್ನೆಲ್ಲಾ ಚಿಂತಿಸಿ ಕಂಡ ಕಂಡವರಿಂದ ತಿರಸ್ಕರಿಸಲ್ಪಟ್ಟು ಕಾಲವನ್ನು ಕಳೆಯಬೇಕಂತೆ, ಏತಕ್ಕಗಿ ಹೀಗಿರಬೇಕು, ಸ್ವಾರ್ಥವನ್ನುದ್ದೇಶಿಸಿ ಮತಿಹೀನತೆಯಿಂದಲೂ, ಪರವಿಶ್ವಾಸದಿಂದಲೂ ಯಾವುದನ್ನು ಲಕ್ಷ್ಯ ಮಾಡದೆ ಪುರುಷನ ದೇಹ ಸೌಖ್ಯವನ್ನು ಸ್ತ್ರೀಯ ಸಮ್ಮತವನ್ನು ಲೆಕ್ಕಿಸದೆ ಮಾರಿಗೆ ಬಲಿಕೊಡಲು ಕನ್ಯೆಯನ್ನರ್ಪಿಸುವಂತೆ ಎಲ್ಲರ ತೃಪ್ತಿಗಾಗಿ ಅಬಲೆಯರನ್ನ ಗುರಿಮಾಡಿ ನಾಲ್ಕು ದಿನಗಳು ಸ್ವಪ್ನದಂತೆಯೂ, ಹುಡುಗರ ಬೊಂಬೆಯಾಟದಂತೆಯೂ, ಪುಷ್ಪಹಾರಗಳನ್ನು ಧರಿಸಿಕೊಂಡು ಸಭಾಮಧ್ಯದಲ್ಲಿ ಕುಳಿತಿದ್ದಕ್ಕೆ ಈ ಶಿಕ್ಷೆಯಂತೆ ಮತ್ತು ತನ್ನ ಯೌವ್ವನ ಕಾಲದಲ್ಲಿ ವಿವಾಹಿತನಾಗಿ ಸುಖವನ್ನನುಭವಿಸಿ ಮಕ್ಕಳನ್ನು ಪಡೆದು ಇರತಕ್ಕ ಪುರುಷನೋರ್ವನು ತನ್ನ ವಯೋಧಿಕ ಕಾಲದಲ್ಲಿ ವಿಧುರನಾದರೆ ಅವನು ಮಾತ್ರ ಬಾಲಪ್ರಾಯದ ಕನ್ಯೆಯನ್ನು ವರಿಸಬಹುದಂತೆ! ಏನನ್ಯಾಯ? ವೃದ್ಧ ಕಾಲದ ಆದರಣೆಗೋಸ್ಕರ ವಿವಾಹವಾಗುವ ಪುರುಷರು ಜೀವಿತ ಕಾಲವೆಲ್ಲಾ ಅದರವಿಲ್ಲದೆ ತಪ್ಪಿಸುತ್ತಿರುವ ಅಬಲೆಯರ ವಿಷಯವನ್ನು ಏತಕ್ಕೆ ಯೋಚಿಸ ಕೊಡದು? ಈ ವಿಧಿಯನ್ನು ಸಹಿಸುವವರಾರು? ಎಲ್ಲಾ ವಿಧಿಯ ವಿಚಿತ್ರ"[೩೭] ಎಂಬುದಾಗಿ ಪ್ರಲಾಪಿಸುವ ಸನ್ನಿವೇಶ ಪುರುಷಶಾಹಿ ಕ್ರೌರ್ಯದ ಅನಾವರಣವನ್ನು ಗುರುತಿಸಬಹುದು.

ಬಾಲ ವೈಧವ್ಯದ ಇನ್ನೊಂದು ಮುಖದ ಚಿತ್ರಣ ಮುಂದೆ ಕಾಣಿಸುತ್ತದೆ. ಇಂದಿರೆಯ ಮಲತಾಯಿ ಲೀಲೆ ಹಾಗೂ ಅವರ ತಾಯಿ ಶಂಕರಿಯರ ಕಿರುಕುಳ, ಚುಚ್ಚುಮಾತು, ಸತೀಶನ ಅಸಹಾಯಕತೆ, ಕಾಮಪಾಲನ ಕಾಟ ಮೊದಲಾದವುಗಳಿಂದ ಇಂದಿರೆ, ಲಂಕಾಪಟ್ಟಣದಲ್ಲಿ ರಾಕ್ಷಸರ ಮಧ್ಯೆ ಸಿಕ್ಕಿದ್ದ ಸೀತಾದೇವಿಯಂತೆ ಪರಿತಪಿಸುವ ಚಿತ್ರಣ ಇದೆ. ಇಂದಿರೆ, ಸುಂದರೇಶನಿಗೆ ಬರೆಯುವ ಸುದೀರ್ಘ ಪತ್ರದಲ್ಲಿ ಅಂದಿನ ಸಮಾಜದಲ್ಲಿ ಬಾಲ ವಿಧವೆಯರು ತಮ್ಮದಲ್ಲದ ತಪ್ಪಿಗೆ ಅನುಭವಿಸಲೇಬೇಕಾದ ಯಾತನಾಮಯ ಬದುಕಿನ ಚಿತ್ರಣವಿದೆ. ಈ ಪತ್ರದಲ್ಲಿ ".....ಈ ಹಾಳು ದೂಷಣೆಗೋಸ್ಕರವಾಗಿಯಾದರೂ ಕುರುಡನೋ, ಕುಂಟನೋ, ಕುರೂಪಿಯೋ, ದುಷ್ಟನೋ ಆದ ಪತಿ ಇದ್ದೇ ತೀರಬೇಕು ಎಂದು ತಿಳಿಯುವುದಿಲ್ಲವೇ. ಇಷ್ಟೊಂದು ಕಷ್ಟಗಳನ್ನು ಅವರಿಗೆ ಏರ್ಪಡಿಸುವುದಕ್ಕಿಂತಲೂ ಅವರನ್ನ ಶವದೊಂದಿಗೆ ಭಸ್ಮ ಮಾಡಿದರೆ ವಿಧವೆಯರ ಕಷ್ಟವು ಬಹುಮಟ್ಟಿಗೆ ಕಮ್ಮಿಯಾಗುವುದು. ಈ ವಿಷಯವನ್ನು ಸಹಗಮನ ಪದ್ಧತಿಯನ್ನು ನಿಲ್ಲಿಸಿದ ಲಾಡ್ ವಿಲಿಯಂ ಬೆಂಟಿಂಕ್ ಪ್ರಭುವು ತಿಳಿದಿದ್ದರೆ ಸಹಗಮನವನ್ನು ನಿಲ್ಲಿಸುತ್ತಲೇ ಇರಲಿಲ್ಲ"[೩೮] ಹಾಗೂ "ಸಾಧಾರಣವಾಗಿ ಅಬಲೆಯರು ಕಷ್ಟಪಟ್ಟರೆ ದ್ರೌಪತಿ, ಸೀತೆ, ಸಾವಿತ್ರಿ, ದಮಯಂತಿ,

ಚಂದ್ರಮತಿ ಮೊದಲಾದವರಂತೆ ಎಂದು ಹೇಳುವುದುಂಟು. ನನ್ನ ಕಷ್ಟದಂಥಾ ಕಷ್ಟವನ್ನು ದ್ರೌಪದಿಯನುಭವಿಸಿದಳೆ? ಮಾನಭಂಗ ಉಂಟಾಗುವ ಕಾಲದಲ್ಲಿ ಕೃಷ್ಣಪರಮಾತ್ಮನು ಅಕ್ಷಯ ವಸ್ತ್ರವನ್ನಿತ್ತು ಕಾಪಾಡಿದನು. ಮಿಕ್ಕ ವೇಳೆಯಲೆಲ್ಲಾ ಪತಿಯೊಂದಿಗೆ ವಾಸವಾಗಿದ್ದಳು. ಸೀತೆ, ದಮಯಂತಿ ಮೊದಲಾದವರು ಪತಿಯರನ್ನಗಲಿ ಸ್ವಲ್ಪ ದಿನಗಳಿದ್ದರೇ ಹೊರತು ನನ್ನಂತೆ ಕಂಡವರಿಂದಲೆಲ್ಲಾ ಮಾತುಗಳನ್ನು ಕೇಳಿ ಪತಿಯನ್ನಗಲಿದ್ದರೇನು? ಅವರ ಕಷ್ಟವು ನನ್ನ ಕಷ್ಟದಂತಹ ತೀರ ಕಷ್ಟವೂ ಅಲ್ಲ..."[೩೯] ಎಂಬ ಸಾಲುಗಳು, ಸುಧಾರಣೆ ಚಳುವಳಿಗಳ ಧ್ಯೇಯ ಹಾಗೂ ಮಹಿಳೆಯರಲ್ಲಿ ಮೂಡುತ್ತಿದ್ದ ಕಾನೂನಿನ ಜಾಗೃತಿಯನ್ನ ಸೂಚಿಸುತ್ತದೆ. ಅಲ್ಲದೆ ಸನಾತನ ಸ್ತ್ರೀ ಮಾದರಿಗಳ ಮೂಲಕ ಹೆಣ್ಣು ಮಕ್ಕಳ ಮೇಲೆ ಹೇರುತ್ತಿದ್ದ ಸತೀತ್ವ ಮೌಲ್ಯಗಳನ್ನು ವಿಶ್ಲೇಷಿಸುವಷ್ಟು ಚಿಂತನಾ ಸಾಮರ್ಥ್ಯ ಮಹಿಳೆಯರಲ್ಲಿ ಬೆಳೆಯುತ್ತಿರುವುದನ್ನು ಸೂಚಿಸುವಂತಿದೆ.

ಅಲ್ಲದೇ, ಹಿಂದೂ ವಿಧವೆಯರ ಶೋಚನೀಯವಾದ ಸ್ಥಿತಿಯು ಇಂದಿರೆಯ ಪತ್ರದಿಂದಲೇ ಬಹುಮಟ್ಟಿಗೆ ವ್ಯಕ್ತವಾಗುವುದಾದ್ದರಿಂದ ಪುನಃ ಆ ವಿಷಯವನ್ನು ಬರೆಯತಕ್ಕ ಅವಶ್ಯಕವೇ ಇಲ್ಲ ಎಂಬ ನಿರೂಪಕಿಯ ಮಾತುಗಳೇ ಲೇಖಕಿಯ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ.

ಸುಂದರೇಶನ ಪತ್ನಿ ಮತ್ತು ಮಗುವಿನ ಆಕಸ್ಮಿಕ ಮರಣದ ನಂತರ ಬರೆದ ಇಂದಿರೆಯ ಪತ್ರದಲ್ಲಿ, "....ಆದರೆ ನನ್ನಂತಹ ಕಷ್ಟವು ನಿನಗಿರಲಾರದು. ನೀನು ನನ್ನಂಥಾ ಹೆಂಗಸಾಗಿ ಹುಟ್ಟದೇ ಪುರುಷನಾಗಿ ಹುಟ್ಟಿರುವೆ, ನನ್ನಂತೆ ದುಃಖ ಸಾಗರದಲ್ಲಿ ತೇಲದೇ, ಬೇರೆ ವಿವಾಹವನ್ನಾದರೂ ಮಾಡಿಕೊಳ್ಳಬಹುದೆಂದು ವಿಧಿ ಇರುವುದು, ಪರರಿಂದ ದೂಷಿಸಲ್ಪಡದೆ ಸುಖವಾಗಿರಬಹುದು, ಸೌಂದರ್ಯವಂತನೂ, ವಿದ್ಯಾವಂತನೂ, ನೀತಿವಂತನೂ, ಯೌವ್ವನವಂತನೂ ಆದ ನಿನ್ನನ್ನು ವರಿಸಲು ಅನೇಕ ಕನ್ನಿಕೆಯರು ಕಾದು ನಿಂತಿರುವರು. ಸುಂದರೇಶ, ವಿಧುರರಾದರೂ ವಿಧವೆಯರನ್ನು ವರಿಸಬಹುದೆಂಬುವ ವಿಧಿಯಿದ್ದರೆ..."[೪೦] ಎಂಬ ಸಾಲುಗಳಲ್ಲಿ ವೈಧವ್ಯ ಸಮಸ್ಯೆಯ ಪರಿಹಾರವಾಗಿ ಪುನರ್ ವಿವಾಹವನ್ನು ಸ್ತ್ರೀ ಅಭಿಪ್ರಾಯದ ಮೂಲಕವೇ ಸೂಚಿಸಿರುವುದು ಗಮನಾರ್ಹ.

ಇಂದಿರೆಯ ಪತ್ರದಿಂದ ಪ್ರೇರಿತರಾದ ಸುಂದರೇಶ–ಶಚೀಂದ್ರರು ಆಕೆಗೆ ಪುನರ್ ವಿವಾಹ ಮಾಡಿಸಿ ಅವಳ ದುಃಖ ನಿವಾರಣೆ ಮಾಡಬೇಕೆಂದು ಸಂಕಲ್ಪಿಸುತ್ತಾರೆ. ಸುಂದರೇಶನೇ (ವಿಧವೆ)ಇಂದಿರೆಯನ್ನು ಮದುವೆ ಮಾಡಿಕೊಳ್ಳಲು ನಿರ್ಧರಿಸುತ್ತಾನೆ. ಮಲತಾಯಿಯ ಕಿರುಕುಳದಿಂದ ಬೇಸತ್ತಿದ್ದ ಇಂದಿರೆಯನ್ನು ಉಪಾಯದಿಂದ ಮದರಾಸಿಗೆ ಕರೆಸಿಕೊಂಡ ಸುಂದರೇಶ, ಶಚೀಂದ್ರರು ವಿವಾಹದ ಏರ್ಪಾಡನ್ನು ನಿಂತ ನಿಲುವಿನಲ್ಲೇ ಮಾಡದೇ, ಸಾಕಷ್ಟು ಚಿಂತನೆ ನಡೆಸುತ್ತಾರೆ. ಶಾಸ್ತ್ರಾಧಾರಗಳನ್ನು ಶೋಧಿಸುತ್ತಾರೆ. ಈ ಹಿನ್ನೆಲೆಯಲ್ಲಿ ಸುಂದರೇಶನ ಈ ಮಾತುಗಳು ಗಮನಾರ್ಹ.

"...ಯಾರ ಕಾರ್ಯವನ್ನು ದೀರ್ಘವಾಗಿ ಯೋಚಿಸಿ, ನೋಡಿ, ಆಧಾರಗಳ ಮೇಲೆ ಮಾಡಬೇಕು, ಮಾಡಬಹುದೆಂದು ಆಧಾರಗಳ ಮೂಲಕ ನಂಬಿಕೆಯಿಟ್ಟಿದ್ದರೆ ಪುನಃ ಅದರಿಂದೇನು ಕಷ್ಟ ಬಂದರೂ ಬಿಡದೇ ಮಾಡಿಯೇ ತೀರಬೇಕು. ಇಲ್ಲಿ ನೋಡು! ಜಿ.ಸುಬ್ರಹ್ಮಣ್ಯ ಅಯ್ಯರ್, ಚಂದ್ರವಾರ್ಕರ್, ವೀರೇಶ ಲಿಂಗಂ ಪಂತಲು ಇನ್ನೂ ಅನೇಕಾನೇಕ ಮಹಾಪುರುಷರು, ನಿರ್ಭಾಗ್ಯರಾದ ವಿಧವೆಯರ ದುಃಖ ಸ್ಥಿತಿಯನ್ನು ಕಂಡು ಮರುಗಿ, ಅನೇಕ ಆಧಾರಗಳನ್ನು, ಶಾಸ್ತ್ರಗಳನ್ನು, ವಿಧಿಗಳನ್ನು ಪರಿಶೋಧಿಸಿ, ದೀರ್ಘವಾಗಿ ವಿಚಾರಿಸಿರುವರು. ಮ.ರಾ.ಜಿ.ಸುಬ್ರಹ್ಮಣ್ಯ ಅಯ್ಯರ್ ಅವರು ಅನೇಕರೊಂದಿಗೆ ಕಲೆತು ಯೋಚಿಸಿಯೇ ವಿಧವೆಯಾದ ತನ್ನ ಪುತ್ರಿಗೆ ಪುನರ್ವಿವಾಹವನ್ನು ಮಾಡಿರುವರು. ಎಲ್ಲರೂ ಅವರಿಗೆ ಬಹಿಷ್ಕಾರ ಹಾಕಿದರು. ಅನೇಕ ವಿಧವಾದ ಸಂಸಾರ ತಾಪತ್ರಯಗಳನ್ನು, ಜನನಿಂದನೆಯನ್ನು ಸಹಿಸಿ, ತಾನು ಮಾಡಿದ ಕಾರ್ಯವು ಶಾಸ್ತ್ರಸಮ್ಮತವೂ, ದೈವ ಸಮ್ಮತವೂ ಆದದ್ದೆಂದು ತಿಳಿದು ಧೈರ್ಯದಿಂದಲೂ, ಉತ್ಸಾಹದಿಂದಲೂ ಇದ್ದರಲ್ಲವೆ? ಇನ್ನೆಷ್ಟು ಜನ ಮಹನೀಯರು ಈ ರೀತಿ ಇಲ್ಲ. ಅವರಂತಲ್ಲವೇ ನಾವಿರಬೇಕು?"[೬೧] ಎನ್ನುತ್ತಾನೆ. ಅಲ್ಲದೆ, ಅವರೆಲ್ಲಾ ಹುಡುಕಿ ತಿಳಿದುಕೊಂಡ ಶಾಸ್ತ್ರಾಧಾರಗಳ ಬಗ್ಗೆ ಶಚೀಂದ್ರ ಕೇಳಿದಾಗ, ವಿವಾಹ ವಿಧಿಗಳನ್ನು ಬೋಧಿಸುವ ಆರ್ಯಧರ್ಮ ಶಾಸ್ತ್ರ ಎನ್ನುವ ಹೆಸರುಳ್ಳ ೧೮೯೨ನೆಯ ಇಸವಿಯಲ್ಲಿ ದಿವಾನ್ ಬಹದ್ದೂರ್ ರಘುನಾಥನಾಯರು ಪ್ರಚುರಪಡಿಸಿದ ಪುಸ್ತಕವನ್ನು ತಂದು ಅದರ ಹನ್ನೊಂದನೆಯ ಅಧ್ಯಾಯದಲ್ಲಿರುವ ವಿಷಯವನ್ನು ತೋರಿಸುತ್ತಾನೆ. ಅದರಲ್ಲಿ 'ತನ್ನನ್ನು ದಾನವಾಗಿ ಪಡೆದ ಪತಿಯು ಕಾಲವಾಗುವಾಗ ಪುರುಷ ಸಂಭೋಗ ಹೊಂದದ ಸ್ತ್ರೀಯು ವೇದ ಮಂತ್ರಗಳಿಲ್ಲದೆ ಪುನರ್ವಿವಾಹವಾಗಬಹುದು ಎಂದು ಬರೆದು ಋಗ್ವೇದದಿಂದ ಮೊದಲುಗೊಂಡು, ಶೃತಿ, ಸ್ಮೃತಿ ಮೊದಲಾದ ಇತಿಹಾಸ ಪುರಾಣಗಳಲ್ಲಿನ ಅನುಮತಿಗಳಲ್ಲಿ ೨೦ ಶ್ಲೋಕಗಳವರೆಗೂ ಪುಸ್ತಕದ ಹೆಸರು, ಕಾಂಡ, ಅಧ್ಯಾಯ, ವಾಕ್ಯ, ಪುಟ ಮೊದಲಾದ ಲೆಕ್ಕಗಳೊಂದಿಗೆ ವಿವರಿಸಲ್ಪಟ್ಟಿದ್ದವು ಇತ್ಯಾದಿ ದಾಖಲೆಗಳನ್ನು ಕಂಡು ಹರ್ಷಿಸುತ್ತಾರಲ್ಲದೇ, ಇಷ್ಟೆಲ್ಲಾ ಶಾಸ್ತ್ರ ಸಮ್ಮತಿ ಇದ್ದೂ ವಿಧವಾ ವಿವಾಹವನ್ನು ಅಶಾಸ್ತ್ರೀಯವೆಂದು ಹೇಳುವುದಕ್ಕೆ ಪುನಃ ಚಿಂತನೆ ಮಾಡುತ್ತಾರೆ. ಅಲ್ಲಿಂದ ಸಹಗಮನ ಪದ್ಧತಿ, ಅದರ ನಿಷೇಧ ಮೊದಲಾದ ಸಂಗತಿಗಳೂ ಚರ್ಚೆಗೊಳಪಡುತ್ತವೆ. "...ಆಂಗ್ಲರ ಪ್ರಭುತ್ವದಲ್ಲಿ ಸಹಗಮನ ಪದ್ಧತಿಯೂ ನಿಲ್ಲಿಸಲ್ಪಟ್ಟಿತು. ಅದೇ ನಮ್ಮ ಸ್ತ್ರೀಯರು ಈ ದುರ್ಗತಿಯನ್ನು ಹೊಂದಲು ಮೂಲ ಕಾರಣವಾಯಿತು. ಗತಿಸಿದ ಪತಿಯೊಂದಿಗೆ ಏಕ ಚಿತೆಯಲ್ಲಿ ಜೀವದೊಂದಿಗಿರುವವರನ್ನು ದಹಿಸುವುದನ್ನು ನೋಡಿ ಸಹಿಸದ ಡಾಲ್ ಹೌಸಿ ಪ್ರಭುವು ಹಾಗೆ ಸಹಗಮನದಿಂದ ವಿರೋಧಿಸಲ್ಪಟ್ಟ ವಿಧವೆಯರು ಈಗ ಅನುಭವಿಸುತ್ತಿರುವ ಕಷ್ಟ ಪರಂಪರೆಗಳನ್ನು ಕಣ್ಣಾರೆ ಕಂಡಿದ್ದರೆ ಆ ಪದ್ಧತಿಯನ್ನು ಎಂದೂ

ತಡೆಯುತ್ತಿರಲಿಲ್ಲ. ಯಾರ ಅಧಿಕಾರಕ್ಕೂ ಜಗ್ಗದ ನಮ್ಮ ಹಿಂದೂಗಳನ್ನು ಹೊಡೆದು, ಗತಿಯಲ್ಲದೆ ವಿಧವೆಯರ ಸಂಕಟಗಳನ್ನು ಪರಿಹರಿಸಲು ಮತ್ತೊಬ್ಬ ಡಾಲ್‌ಹೌಸಿ ಪ್ರಭುವು ಎಂದು ಬರುವನೋ? ಈ ಕಾರಣಗಳಿಂದಲೇ ಶಾಸ್ತ್ರದಲ್ಲಿದ್ದರೂ ಅನುಷ್ಠಾನದಲ್ಲಿ ಉಂಟಾಗದಿರುವುದು"[೪೨] ಎಂದುಕೊಂಡು ಹಿಂದಿನ ಶಾಸ್ತ್ರಾಧಾರಗಳೂ, ಸಮಕಾಲೀನ ಚಾರಿತ್ರಿಕ ಕಾರಣಗಳನ್ನು ಕುರಿತು ಚರ್ಚಿಸಿ ಅಷ್ಟಕ್ಕೇ ಸಾಕಾಗದೇ, ಜನಜಾಗೃತಿ ಮೂಡಿಸುವ ಸಲುವಾಗಿ ಆಯಾ ಮತಾಚಾರ್ಯರನ್ನು, ವಿದ್ವಾಂಸರನ್ನು ಸಂಪರ್ಕಿಸಿ, ವಿಧವಾ ವಿವಾಹಕ್ಕೆ ಸಮ್ಮತಿ ಪಡೆಯಲು ಪ್ರಯತ್ನಿಸಲು ತೀರ್ಮಾನಿಸುತ್ತಾರೆ. ಈ ಸಂದರ್ಭದಲ್ಲಿ ಪಂಡಿತ ಮತ್ತು ಸುಂದರೇಶರ ನಡುವೆ ಚರ್ಚೆಯ ಭಾಗಗಳು ಗಮನಾರ್ಹ. ಪಂಡಿತರೊಡನೆ ಚರ್ಚಿಸಿ ವಿಧವಾ ವಿವಾಹ ಶಾಸ್ತ್ರಸಮ್ಮತವಾದುದೆಂದರಿತು, ಅಷ್ಟಕ್ಕೂ ಸುಮ್ಮನಾಗದೇ, ಶ್ರೀಮದ್ಭಗವತ್ಪಾದ ಶಂಕರಾಚಾರ್ಯರನ್ನು ಕಾಣಲು ನಿರ್ಧರಿಸಿ, ಅವರು ದೇಶಸಂಚಾರದಲ್ಲಿರುವುದನ್ನರಿತು, ತಾನೂ ಸಹ ಅವರು ಹೋಗಿರುವ ಉತ್ತರ ದೇಶದ ಕಡೆಗೆ ಹೋಗಿ, ಅಲ್ಲಿ ಅವರೊಡನೆ ಚರ್ಚಿಸಿ, ಚಿಂತಿಸಿ ಕೊನೆಗೆ ಆಚಾರ್ಯರಿಂದ ಅಪ್ಪಣೆ ಪಡೆದು ಹಿಂತಿರುಗಿ, "ಕೆಲವು ಜನಪ್ರಮುಖರಾದ ವಿದ್ವಾಂಸರನ್ನು ಒಟ್ಟುಗೂಡಿಸಿ ಶಾಸ್ತ್ರಿಗಳೂ, ಸ್ವಾಮಿಗಳೂ ಹೇಳಿದ ವಿಷಯಗಳನ್ನು ಅವರುಗಳಿಗೆ ಅರಿಕೆ ಮಾಡಿ, ಸಮೂಹದವರ ಅಭಿಪ್ರಾಯವೂ ಸಮ್ಮತವೂ ಪ್ರಾಮುಖ್ಯವೆಂತಲೂ, ಅದೊಂದು ಮಾತ್ರವಿದ್ದರೆ ಲಕ್ಷೋಪಲಕ್ಷ ಸಂಖ್ಯೆಯುಳ್ಳ ಅರಿಯದ ಬಾಲಕಿಯರನ್ನು ದುಃಖಸಾಗರದಿಂದ ಪಾರು ಮಾಡಬಹುದೆಂತಲೂ, ಉಪನ್ಯಾಸ ಮಾಡುವುದಾಗಿ ಉದ್ದೇಶಿಸಿ ತಾನು ಇದ್ದ ಸ್ಥಳದಲ್ಲಿಯೇ ಮೊದಲು ಉಪನ್ಯಾಸ ಮಾಡಬೇಕೆಂದು ತೀರ್ಮಾನಿಸಿ,"[೪೩] ಅದೇ ರೀತಿ ಜನರನ್ನುದ್ದೇಶಿಸಿ ವಿಧವಾ ಸಮಸ್ಯೆ, ಶಾಸ್ತ್ರಾಧಾರ, ಬದಲಾವಣೆಯ ಅಗತ್ಯ ಮೊದಲಾದ ಸಂಗತಿಗಳನ್ನು ಸಕಾರಣವಾಗಿ ವಿವರಿಸಿದರೂ ಜನರಲ್ಲಿ ಮಾತ್ರ ಯಾವ ಬದಲಾವಣೆಯನ್ನು ಕಾಣದೆ ಖಿನ್ನನಾಗಿ ಊರಿಗೆ ಬಂದು, ಶಚೀಂದ್ರನನ್ನು ಕಂಡಾಗ ಅಲ್ಲಿ ಅವನೂ ಈ ವಿಧಿಯೂ ಮೆಯಿನ್ ದೊರೆಯಿಂದ ರಚಿಸಲ್ಪಟ್ಟ ಹಿಂದೂ ಲಾ ನಲ್ಲಿರುವುದಾಗಿ ಹೇಳಿ ಹಿಂದೂ ಲಾ ೧೧೦, ೧೧೧ನೇ ಪುಟಗಳಲ್ಲಿರುವ ವಿಷಯವನ್ನು ಓದಿ ತೋರಿಸಿದನು. ನಂತರ ಜನಸಮೂಹದ ಅನುಮತಿ ಪಡೆಯಲಾಗದ್ದರಿಂದ "ತಮ್ಮ ಸ್ವತಂತ್ರಗಳನ್ನು ಸರ್ಕಾರದ ವಶಕ್ಕೊಪ್ಪಿಸಲು ಮನಸ್ಸಿಲ್ಲದಿದ್ದರೂ, ಬೇರೆ ಮಾರ್ಗವಿಲ್ಲದೆ ಹಾಗೆ ಮಾಡಲು ಸಮ್ಮತಿಸಿದರು. ಇಬ್ಬರೂ ಕಾಲ ವಿಳಂಬ ಮಾಡದೇ ಕಲ್ಕತ್ತೆಗೆ ಹೋಗಿ ಅಲ್ಲಿರತಕ್ಕ ಬ್ರಹ್ಮ ಸಮಾಜವನ್ನು ಸೇರಿ, ಅವರ ಮತವನ್ನಂಗೀಕರಿಸಿ, ಇಂದಿರೆಯೂ ಸುಂದರೇಶನೂ ವಿವಾಹ ಮಾಡಿಕೊಂಡರು."[೪೪] ನಂತರ ಶಚೀಂದ್ರ ಹಾಗೂ ಸುಂದರೇಶ, ಇಂದಿರೆಯರು ಅನಾಥರ ಕಷ್ಟ ನಿವಾರಣೆಯೇ ತಮ್ಮ ಕರ್ತವ್ಯವೆಂದು ತಿಳಿದು ಅದರಂತೆ ನಡೆದುಕೊಳ್ಳ ತೊಡಗುತ್ತಾರೆ.

ಹೀಗೆ ಕಲ್ಯಾಣಮ್ಮನವರು ತಮ್ಮ ಸಮಾಜದ ಪ್ರಮುಖ ಸಮಸ್ಯೆಯೊಂದಕ್ಕೆ ಸ್ಪಂದಿಸುವುದು ಕೇವಲ ಮೇಲ್ತೋರಿಕೆಯ ಅನುಕಂಪ, ನೀತಿಬೋಧೆ ಮಾಡುವ ಮೂಲಕವಲ್ಲ, ಸಮಸ್ಯೆಯ ಮೂಲಕಾರಣ, ಪರಿಣಾಮ, ಪರಿಹಾರದ ವಿಶ್ಲೇಷಣೆಗೆ ಸಾಕಷ್ಟು ಪೂರ್ವತಯಾರಿ ಮಾಡಿಕೊಂಡು ಆಧಾರಸಹಿತವಾಗಿ ವಿಶ್ಲೇಷಿಸಿರುವುದು ಮೇಲಿನ ವಿವರಗಳಿಂದ ವೇದ್ಯವಾಗುತ್ತದೆ. ಅಲ್ಲದೆ ಅವರ ತಾಳ್ಮೆ, ಪ್ರಾಮಾಣಿಕ ಪ್ರಯತ್ನ ಮೆಚ್ಚುಗೆ ಗಳಿಸುತ್ತದೆ. ಒಂದು ಸಮಸ್ಯೆಗಳ ಕಡೆಗೂ ಗಮನಹರಿಸಿರುವುದು, ಪುರಾತನ ನೂತನ-ಶಾಸ್ತ್ರ-ಕಾನೂನಿನ ಬಗೆಗಿನ ಚರ್ಚೆ ಮೊದಲಾದವು ಕಲ್ಯಾಣಮ್ಮನವರು ಪ್ರಯತ್ನವಾದಿ! ಎಂಬುದನ್ನು ಸಾಬೀತುಪಡಿಸುತ್ತವೆ. ಸ್ತ್ರೀ ಬದುಕಿದ್ದರೆ ಪತಿಯ ಜೊತೆ ಮಾತ್ರ ಬದುಕಿರಬೇಕು, ಪತಿ ಸತ್ತ ಮೇಲೆ ಜೀವಂತ ಶವವಾಗಿ ಬದುಕುವುದಕ್ಕಿಂತ 'ಜೀವಂತವಾಗಿಯೇ ಚಿತೆಗೇರುವುದು ಮೇಲು' ಎಂಬ ಭಾವನೆಗೆಡೆ ಮಾಡಿಕೊಡುವಂತಹ ಸಾಮಾಜಿಕ ಪರಿಸರದಲ್ಲಿದ್ದ ಕಲ್ಯಾಣಮ್ಮನವರು, ಸಹಗಮನ ಪದ್ಧತಿ ನಿಷೇಧ ಕಾಯ್ದೆಯ ಪರಿಣಾಮವಾಗಿ ಸರಿಯಾಗಿಯೇ ಮನಗಾಣಿಸಿದ್ದಾರೆ. ಪತಿ ಸತ್ತ ಮೇಲೆ ಸತಿ ಅನುಭವಿಸುವ ಕಷ್ಟಪರಂಪರೆಗಳಿಗೆ ಕಾರಣರಾದ ಸನಾತನ ಹಿಂದೂಗಳ ಮೇಲೆ ಆಕ್ರೋಶಭರಿತ ಮಾತುಗಳನ್ನೇ ಆಡಿಸಿದ್ದಾರೆ. ಇಂಥ ಸಂದರ್ಭಗಳು ಕಲ್ಯಾಣಮ್ಮನವರ ಪ್ರಗತಿಪರ ಧೋರಣೆಗೆ ಸಾಕ್ಷಿಯಾಗುತ್ತದೆ.

ಅಲ್ಲದೆ ಕೆಲವು ವೇದಗಳಲ್ಲಿ, ರಾಮಾಯಣ, ಮಹಾಭಾರತದಂತಹ ಪುರಾಣ-ಕಾವ್ಯಗಳಲ್ಲಿ ವಿಧವಾ ವಿವಾಹಕ್ಕೆ ಸಮ್ಮತಿ ಸೂಚಿಸುವ ಹಲವು ನಿದರ್ಶನಗಳನ್ನು ಕಲ್ಯಾಣಮ್ಮನವರು (ತಮ್ಮ ಪಾತ್ರಗಳ ಮೂಲಕ) ನೀಡುತ್ತಾರೆ. ಇಷ್ಟೆಲ್ಲಾ ಆಧಾರಗಳಿಂದ ವಿಧವಾ ವಿವಾಹ ಶಾಸ್ತ್ರ ಸಮ್ಮತವೆಂದು ಮನಗಂಡ ಮೇಲೆ, ಇಂಡಿಯನ್ ಪೀನಲ್ ಕೋಡ್‌ನಲ್ಲಿ ವಿಧವಾ ವಿವಾಹದ ಬಗ್ಗೆ ೧೧೦-೧೧೧ನೇ ವಿಧಿಯ ಕಾನೂನಿನ ರೀತಿ ಬ್ರಹ್ಮ ಸಮಾಜದಲ್ಲಿ (ಬಾಲ)ವಿಧವೆ ಮತ್ತು ವಿಧುರ ಸುಂದರೇಶನ ವಿವಾಹ ನೆರವೇರುತ್ತದೆ. ಹೀಗೆ ಕೆಲವು ನಿರ್ಬಂಧಗಳೊಂದಿಗೆ (ಉಲ್ಲೇಖ ೨೬ರಂತೆ) ಮರುವಿವಾಹವನ್ನು ಸಮರ್ಥಿಸಿರುವುದು ಗಮನಾರ್ಹ.

**ವರದಕ್ಷಿಣ ಪದ್ಧತಿ**

ನಮ್ಮ ಸಮಾಜದಲ್ಲಿ ಎಷ್ಟೇ ಸುಧಾರಣೆಗಳೆಂಬ ಬಿರುಗಾಳಿ-ಮಳೆ ಜಡಿದರೂ, ಜಗ್ಗದ ಪರ್ವತದಂತೆ ಉಳಿದಿರುವ ಸಮಸ್ಯೆಗಳಲ್ಲಿ ವರದಕ್ಷಿಣೆಯೂ ಒಂದು ಎಂಬುದು ಲೇಖಕಿಯ ಅಭಿಪ್ರಾಯ. "ವಿವಾಹ ಸ್ತ್ರೀ-ಪುರುಷರಿಗೊಂದು ಸ್ನೇಹ ಶಾಸನವಾಗಬೇಕೇ ಹೊರತು ವ್ಯವಹಾರದ ಸಂಕೋಲೆಯಾಗಬಾರದು...(Love is not lover's sake and duty is for duty's sake-Swamy Vivekananda) ದೇಶೀಯ ಈ ವರದಕ್ಷಿಣೆಯಿಂದ ಬಿಡುಗಡೆಯಾಗಿ ತನ್ಮೂಲಕ ಭಾರತ ಮಾತೆಯ ಪುತ್ರಿಯರ ಕಣ್ಣನ್ನೊರೆಸಿದರೆ ಅದರಿಂದಲೇ ನನ್ನ ಉದ್ದೇಶವು

ಸಫಲವಾಯಿತೆಂದೂ, ಶ್ರಮವು ಸಾರ್ಥಕವಾಯಿತೆಂದೂ, ನೆನೆದು ಆನಂದಿಸುವೆನಲ್ಲದೇ ಅದೇ ನನ್ನ ಭಾಗ್ಯ ಎಂದು ತಿಳಿದಿರುವೆನು. ಪ್ರತಿಯೊಬ್ಬರೂ ಈ ವಿಷಯವನ್ನು ಅನುಷ್ಠಾನಕ್ಕೆ ತರಬೇಕಾಗಿ ಪ್ರಾರ್ಥಿಸುವೆನು"[೪೫] ಎಂಬ ನುಡಿಗಳು ಈ ಸಮಸ್ಯೆಯ ಬಗೆಗಿನ ಕಲ್ಯಾಣಮ್ಮನವರ ಚಿಂತನೆ ಎಷ್ಟು ಗಂಭೀರವಾದುದೆಂಬುದರ ಕಡೆಗೆ ಬೆಳಕು ಚೆಲ್ಲುತ್ತವೆ. ಪ್ರಿಯಂವದ ಕಾದಂಬರಿಯ ಕೇಂದ್ರವಸ್ತು ವರದಕ್ಷಿಣೆ ಎಂಬುದೂ ಗಮನಾರ್ಹ. ಈ ಕಾದಂಬರಿಯಲ್ಲಿ ಈ ಬಗೆಯ ಪ್ರಾರ್ಥನಾರೂಪದ ವಾಕ್ಯಗಳು ಸಾಕಷ್ಟಿವೆ.

ವರದಕ್ಷಿಣೆ ನಿರ್ಮೂಲನೆಗೆ ಕಾರಣ–ಪರಿಣಾಮಗಳನ್ನು ಕುರಿತು ಕಲ್ಯಾಣಮ್ಮನವರ ಆಲೋಚನೆಯೆಂದರೆ ಇದರ ನಿರ್ಮೂಲನೆಗೆ ಪುರುಷರಷ್ಟೇ ಪರಿವರ್ತಿತರಾದರೆ ಸಾಲದು, ಸ್ತ್ರೀಯರೂ ವಿದ್ಯಾವಂತರಾಗಿ, ವಿವೇಚನಾಶೀಲರಾಗಬೇಕು ಎಂಬುದು. ಸ್ತ್ರೀ ಉತ್ತಮ ಶಿಕ್ಷಣ ಕೊಡಿಸುವುದರಿಂದ ಅವರು ವಿವೇಕಿಗಳಾಗುತ್ತಾರೆ. ವಿದ್ಯಾವಂತರಾದ ಹೆಣ್ಣು ಮಕ್ಕಳನ್ನು ಸಮಾಜ ನೋಡುವ ದೃಷ್ಟಿಕೋನವೂ ಬದಲಾಗಬೇಕು ಎಂಬ ಆಶಯವುಳ್ಳವರಾಗಿದ್ದಾರೆ.

ವರದಕ್ಷಿಣೆ ಸಮಸ್ಯೆಗೆ ಪುರುಷರಿಗಿಂತ ಸ್ತ್ರೀಯರೇ ಮೂಲ ಕಾರಣ ಎಂಬುದು ಇವರ ಧೋರಣೆ. ಹಾಗಾಗಿ, ಕೇವಲ ೯ ವರ್ಷದ ಹುಡುಗಿ(ಪ್ರಿಯಂವದಾ)ಯನ್ನು ಪೂರ್ತಿ ಮಾಡಿಕೊಟ್ಟರೂ ಹುಡುಗಿಗೆ ೧೬ ವರ್ಷಗಳಾದರೂ ಕನ್ಯಾ ಶುಲ್ಕವನ್ನು ಪೂರ್ತಿ ಪಾವತಿಸದ ಕಾರಣ ತವರು ಮನೆಯಲ್ಲೆ ಉಳಿಯಬೇಕಾಗಿದ್ದು, ಕಷ್ಟಗಳನ್ನೆದುರಿಸುವಂತಾದುದಕ್ಕೆ ಅತ್ತೆಯೇ ಕಾರಣಳಾಗುವಂತೆ ಚಿತ್ರಿಸಲಾಗಿದೆ. ಪತ್ನಿ ಮತ್ತು ತಾಯಿ ಇಬ್ಬರ ನಡುವೆ ಸಿಕ್ಕ ಪುರುಷನೂ ಸುಖವಾಗಿರಲಾರ ಎಂಬುದನ್ನು, "ಒಂದು ಕಡೆ ದೇವತಾ ಸ್ವರೂಪವಾದ ಹೆತ್ತ ಮಾತಾಪಿತೃಗಳು ನಿರ್ಬಂಧಿಸುತ್ತಿರಲು, ಮತ್ತೊಂದು ಕಡೆ ಅಗ್ನಿಸಾಕ್ಷಿಯಾಗಿ ಕೈಹಿಡಿದ ಧರ್ಮಪತ್ನಿಯು ಸುಖ ಸಂತೋಷಗಳಿಗೆ ತಿಲಾಂಜಲಿಯನ್ನಿತ್ತು ಕಣ್ಣೀರು ಸುರಿಸುತ್ತಿರಲು, ಇವರುಗಳ ಮಧ್ಯೆ ಧರ್ಮಸಂಕಟಕ್ಕೆ ಸಿಕ್ಕಿ ತೊಳಲುತ್ತಿರುವ ಮನುಷ್ಯನ ಸ್ಥಿತಿಯನ್ನು ವರ್ಣಿಸಲು ಯಾರಿಂದ ತಾನೆ ಸಾಧ್ಯವು? ಒಬ್ಬರನ್ನೊಬ್ಬರು ತೃಪ್ತಿಗೊಳಿಸಲು ಇತರರನ್ನು ಹಿಂಸಿಸುವುದು ಯಾವ ನ್ಯಾಯವೊ?"[೪೬] ಎಂಬ ಮಾತುಗಳ ಮೂಲಕ ವ್ಯಕ್ತಪಡಿಸುತ್ತಾರೆ.

ಪುರುಷರು ಪ್ರಗತಿಪರ ಧೋರಣೆಯವರಾಗಿದ್ದರೂ ಮನೆಯ ಅವಿದ್ಯಾವಂತ ಹೆಂಗಸರ ಒತ್ತಾಯಕ್ಕೆ ಮಣಿದು ಕನ್ಯಾಶುಲ್ಕ ತೆರುತ್ತಾರೆಂಬ ಧೋರಣೆಯನ್ನು ಈ ಮಾತುಗಳಲ್ಲಿ ಬಿಂಬಿಸುತ್ತಾರೆ. "ಪುರುಷರು ಸಭೆಯಲ್ಲಿ ನಿಂತು ಧೈರ್ಯದಿಂದ ವರದಕ್ಷಿಣೆ ತೆಗೆದುಕೊಳ್ಳಕೂಡದೆಂದೂ ಬಾಲ್ಯವಿವಾಹ ಮಾಡಕೂಡದೆಂದೂ ಸ್ತ್ರೀಯರಿಗೆ ಸ್ವಾತಂತ್ರ್ಯವನ್ನೂ ಕೊಡಬೇಕೆಂದೂ ಉಪನ್ಯಾಸ ಮಾಡುವನು. ಅದೇ ಪುರುಷನು ಮನೆಗೆ ಬಂದರೆ ಕನ್ಯೆಗೆ ವಯಸ್ಸಾಗಿ ಹೋಗುವುದೆಂದೂ, ಹೆಚ್ಚು ಹಣವನ್ನು

ಕೊಟ್ಟಾದರೂ ಜಾಗ್ರತೆಯಾಗಿ ವಿವಾಹವನ್ನು ನೆರವೇರಿಸಬೇಕೆಂದೂ, ಹೆಂಡತಿ ಪೀಡಿಸಿ ಕಾಡಿಸುವಳು. ಆಗ ಅವನು ಏನು ಮಾಡಿಯಾನು? ಮನೆಯ ಹೆಂಗಸಿನ ಮನಸ್ಸಿನಂತೆ ನಡೆಯದಿದ್ದರೆ ಸುಖವು ಕುದುರೆಯ ಕೊಂದಾಗುವುದು....”[೪೭] ಇತ್ಯಾದಿ. ಹೀಗೆ ವಿವರಿಸುತ್ತಾ ಹೆಂಗಸರಿಗೆ ಒಳ್ಳೆಯ ಶಿಕ್ಷಣ ಕೊಟ್ಟರೆ ಈ ರೀತಿ ಆಗಲಾರದೆಂದೂ ಪ್ರತಿಪಾದಿಸುವ ಚಿತ್ರಣವಿದೆ.

ಅಲ್ಲದೆ ಪುರುಷರಿಗಿಂತ ಸ್ತ್ರೀಯರು ವಿದ್ಯಾವತಿರಾಗಿ ಪುರುಷರ ಮನಸ್ಸಿನಂತೆ ನಡೆಯಲು ಪ್ರಯತ್ನಿಸದ ಹೊರತು ಈ ದುರಾಚಾರಗಳು ನಿರ್ಮೂಲವಾಗುವುದು ಅಸಂಭವವು ಎಂಬಂತಹ ವಿವರಗಳಿಂದಲೂ ವರದಕ್ಷಿಣೆ ಪಿಡುಗು ಈ ಸಮಾಜದಲ್ಲಿರಲು ಹೆಂಗಸರೇ ಕಾರಣ ಎಂಬ ಅವರ ತಿಳುವಳಿಕೆಯನ್ನು ಸಮರ್ಥಿಸುವಂತಿದೆ.

ಯುವಕರೂ ಸಹ ವಿದ್ಯಾವಂತರಾಗಿ, ವಿವೇಕಿಗಳಾಗಿ ತಂದೆ–ತಾಯಿಯರು ಕನ್ಯಾಶುಲ್ಕವನ್ನು ಅಪೇಕ್ಷಿಸಿದರೂ ಪಡೆಯಬಾರದೆಂಬುದನ್ನು ನಮ್ಮ ತಾಯಿಯ ಹಣಕ್ಕೋಸ್ಕರವಲ್ಲದೇ ನಿನ್ನನ್ನು ನಿರಾಕರಿಸಿದಳು, ನಾನು ಹಣಕ್ಕಾಸೆಪಟ್ಟಿದ್ದರೆ ನಿನ್ನನ್ನು ಆದರಿಸುತ್ತಿದ್ದೇನೇ? ನನ್ನಂತಹ ವಿದ್ಯವಂತರೆಲ್ಲರೂ ತಮ್ಮ ಮಾತಾ ಪಿತೃಗಳು ಅಪೇಕ್ಷಿಸಿದರೂ ಮತ್ತು ಅಪೇಕ್ಷಿಸದಿದ್ದರೂ ಬಹು ಮೇಲಾಗುವುದಿಲ್ಲವೇ? ಎಂಬ ಸತ್ಯೇಂದ್ರನ ಮಾತುಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಈ ಕಾದಂಬರಿಯಲ್ಲಿ ಕೊನೆಗೆ ಪ್ರಿಯಂವದೆ ಸತ್ಯೇಂದ್ರರು ಒಂದು ಕಪಟ ನಾಟಕವನ್ನಾಡಿ ಧನ ಪಿಶಾಚಿಯಾದ ಅತ್ತೆ(ಸತ್ಯೇಂದ್ರನ ತಾಯಿ) ಅನ್ನಪೂರ್ಣಮ್ಮಳನ್ನು ಬದಲಾಯಿಸುವ ಸನ್ನಿವೇಶವೂ ನಾಟಕೀಯವಾಗಿ ಚಿತ್ರಣಗೊಂಡಿದೆ.

ಒಟ್ಟಾರೆ ಈ ಸಾಮಾಜಿಕ ಪಿಡುಗು ನಮ್ಮ ಸಮಾಜದಿಂದ ತೊಲಗಬೇಕಾದರೆ, ಸ್ತ್ರೀಯರು ವಿದ್ಯಾವಂತರಾಗಬೇಕು, ಹಿರಿಯರ ಅಪೇಕ್ಷೆಯಂತೆ ವರದಕ್ಷಿಣೆ ಪಡೆಯದಂತೆ, ಪಡೆದರೂ ಹಿರಿಯರ ಮನಪರಿವರ್ತನೆಯಾಗುವಂತೆ ಯುವಕ–ಯುವತಿಯರು ನಡೆದುಕೊಳ್ಳಬೇಕು. ಆ ಮೂಲಕ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಬೇಕೆಂಬುದು ಇವರ ಆಶಯ. ಈ ಸಮಸ್ಯೆಯ ವಿಶ್ಲೇಷಣೆಯಲ್ಲಿ ಕಲ್ಯಾಣಮ್ಮನವರು ಪುರುಷ ಪಕ್ಷಪಾತಿಯಂತೆ ಕಾಣುವುದು ಬೆರಗಿನ ಸಂಗತಿ.

## ಸ್ತ್ರೀ ಶಿಕ್ಷಣ ಸಮಸ್ಯೆ

ವಿದ್ಯಾವಂತ ಹೆಣ್ಣು ಮಕ್ಕಳನ್ನು ಸಮಾಜ(ಮುಖ್ಯವಾಗಿ ಅತ್ತೆಯಂದಿರು) ನೋಡುವ ದೃಷ್ಟಿಕೋನ ಬದಲಾಗಬೇಕೆಂಬುದು ಕಲ್ಯಾಣಮ್ಮನವರ ಆಶಯ. “...ಸ್ತ್ರೀಯರ ವಿದ್ಯಾಭಿವೃದ್ಧಿಯೂ ದಿನೇ ದಿನೇ ಹೆಚ್ಚುತ್ತಿರುವುದರಿಂದ ಭಾರತ ರಮಣೀಯರು ವಿದ್ಯಾವತಿಯರಾಗಿ ತಮ್ಮ ಸ್ಥಿತಿಗತಿಗಳನ್ನು ಪಾಶ್ಚಾತ್ಯರೊಂದಿಗೆ ಹೋಲಿಸಿ, ತಮ್ಮ ಕೇವಲ ಹೀನ ಸ್ಥಿತಿಗೆ ನೊಂದು..... ದೇಶೋದ್ಧಾರಕ್ಕಾಗಿ

ಪ್ರಯತ್ನಪಡುತ್ತಿರುವರು. ಹೀಗೆ ವಿದ್ಯಾವತಿಯರಾದ ಬಾಲಕಿಯರು ಸೊಸೆಯರಾದರೆ ಪೂರ್ವಕಾಲದ ಅತ್ತೆಯರಿಗೆ ಇವರ ನಾಗರಿಕ ನುಡಿಗಳು ರುಚಿಸುವುದೇ? ಯಾವ ಯಾವ ಕಾಲಕ್ಕೆ ಹೇಗೆ ಹೇಗೆ ನಡೆದುಕೊಳ್ಳಬೇಕೋ ಅದರಂತೆ ನಡೆಯಲೆಂದು ಸುಮ್ಮನಿರುವುದು ಮೇಲು, ಸುಮ್ಮನೆ ಅದನ್ನು ಖಂಡಿಸಿದರೆ ಅವರು ಕೇಳುವರೆ? ಸರ್ವಶಕ್ತನಾದ ಭಗವಂತನೇ ಇಂಥಾ ಅತ್ತೆಯರಿಗೆ ಬುದ್ಧಿ ಕಲಿಸುವನು. ಆದರೂ ವಿದ್ಯಾವತಿಯರಾದ ರಮಣೀಯರು ಸೊಸೆಯರಾಗಿದ್ದು ತಾವೇ ಅತ್ತೆಯರಾಗುವುದರಿಂದ ತಮಗೆ ದೊರಕುವ ಸೊಸೆಯರನ್ನು ಈ ರೀತಿ ಹಿಂಸೆಗೆ ಆಳಾಗದಂತೆ ಮಾಡಿ ಅದರ ಮೇಲೆ ವಿಶ್ವಾಸವುಳ್ಳವರಾಗಿರಬಹುದೆಂದು ನಂಬಬಹುದಾಗಿರುವುದು"[೪೮] ಎಂಬ ಮಾತುಗಳು ಹೆಣ್ಣು ಮಕ್ಕಳಿಗೆ ವಿದ್ಯೆ ಎಷ್ಟು ಮುಖ್ಯ ಎಂಬುದರ ಕಡೆಗೆ ಬೆಳಕು ಚೆಲ್ಲುತ್ತವೆ. ಅಲ್ಲದೆ ಈ ಹಿಂದೆ ವಿವರಿಸಲಾದ ವೈಧವ್ಯ, ವರದಕ್ಷಿಣೆ ಮೊದಲಾದ ಸಮಸ್ಯೆಗಳ ನಿವಾರಣೆಗೂ ವಿದ್ಯಾಭ್ಯಾಸದ ಅಗತ್ಯತೆಯನ್ನು ಅನುಮೋದಿಸುತ್ತಾರೆ. ಪ್ರಚಲಿತ ಸಾಮಾಜಿಕ ಸಮಸ್ಯೆಗಳು ಬಿಗಡಾಯಿಸಲು, ನಮ್ಮ(ಹಿಂದೂ) ಸಮಾಜದಲ್ಲಿ ಸ್ತ್ರೀಯರು ಅವಿದ್ಯಾವಂತೆಯ ರಾಗಿರುವುದೇ ಕಾರಣ. ಸ್ತ್ರೀಗೆ ಆಧುನಿಕ ಶಿಕ್ಷಣವನ್ನು ಕೊಡಬೇಕು. ಆಗ ವಿವೇಚನಾಯುಕ್ತ ಆಲೋಚನೆ ಮಾಡುವ ಶಕ್ತಿ ಬರುತ್ತದೆ, ಆಗ ಸಾಮಾಜಿಕ ಸಮಸ್ಯೆ ನಿವಾರಣೆಯಾಗುತ್ತದೆ ಎಂಬ ಧೋರಣೆ ಇವರದು.

**ಪತ್ನಿ ಧರ್ಮ ಪ್ರತಿಪಾದನೆ**

ತಿರುಮಲಾಂಬಾ ಅವರ ಕಾದಂಬರಿಗಳಲ್ಲಿ ಪ್ರತಿಪಾದಿತವಾದಷ್ಟು ಸತೀತ್ವದ ಮೌಲ್ಯಗಳು ಇವರ ಕಾದಂಬರಿಗಳಲ್ಲಿ ಇಲ್ಲ. ಸುಖಲತಾ ಕಾದಂಬರಿಯ ಕೆಲವು ಪಾತ್ರಗಳ ಮೂಲಕ ಈ ಕುರಿತು ಚರ್ಚಿಸಿರುವುದು ಕಂಡುಬರುತ್ತದೆ. ಸುಖಲತಾದ ಅನಸೂಯ(ನಾಯಕಿ ಸುಖಲತೆ ಈ ಹೆಸರಿನಿಂದ ಆಶ್ರಯದಲ್ಲಿರುತ್ತಾಳೆ) ಮತ್ತು ಸರ್ದಾರ ಸಿಂಹರ ನಡುವಣ ಸಂಭಾಷಣೆಯ ಸನ್ನಿವೇಶ–ಸರ್ದಾರ್ ಸಿಂಹ. ಪತ್ನಿ ಧರ್ಮದ ಬಗ್ಗೆ ಅನಸೂಯಳನ್ನು ಕೇಳಿದಾಗ, ಅವಳು "ದರಿದ್ರರಾಗಿ ವನದಲ್ಲಿ ಪರ್ಣಶಾಲೆಯಲ್ಲಿ ಪತಿಯೊಡನೆ ವಾಸಮಾಡಿದರೂ, ಕಂದಮೂಲ ಗಳನ್ನುಂಡರೂ, ಕಷ್ಟಪಟ್ಟರೂ ಅದೇ ಸ್ವರ್ಗಸುಖವೆಂದು ಭಾವಿಸುವುದು ಅವಳ ಪ್ರಥಮ ಧರ್ಮವು. ರಮ್ಯವಾದ ಮಂದಿರದಲ್ಲಿ ಸುಂದರವಾದ ನಂದನವನದ ಮಂದ ಮಾರುತವು ಬೀಸಲು ರಾಜಭೋಜನವುಂಡು ಪತಿಹೀನೆಯಾಗಿ ಕಾಲಕಳೆಯುವುದಕ್ಕಿಂತ ಮೇಲೆ ಹೇಳಿದಂತೆ ಕಷ್ಟಪಡಲು ನಮ್ಮ ಭಾರತ ರಮಣಿಯರು ಸಂತೋಷದಿಂದೊಪ್ಪುವರು. ಪ್ರಿಯಮಧುರ ಆನಂದಕರವಾದ ಸಂಭಾಷಣೆಗಳಿಂದ ಪತಿಯ ಮನಕ್ಕಾನಂದವುಂಟು ಮಾಡುತ್ತಾ ಆತನ ಕಷ್ಟ ಸುಖಗಳನ್ನು ತನ್ನವೆಂದು ಭಾವಿಸಿ ನಡೆಯುವುದು ಆರ್ಯರಮಣಿಯರಿಗೆ ಹೊಸದಲ್ಲ. ಪತಿಯ

ಕೋಪವು ವಜ್ರಾಘಾತದಂತೆಯೂ, ತಿರಸ್ಕಾರವು ಅಗ್ನಿಯಂತೆಯೂ, ಆತನ ಪ್ರಸನ್ನವದನವು ಚಂದ್ರಬಿಂಬದಂತೆ ಯಾವಳಿಗೆ ತೋರುವುದೋ ಅವಳೇ ಆರ್ಯಂಗನೆಯರಲಿ ಶ್ರೇಷ್ಠಳು. ಮನಶ್ಶುದ್ಧಿಯಿಂದ ಪ್ರೇಮ ರಸಭರಿತವಾದ ಮುಖದಿಂದ ಸುಖಸುಖಗಳಲ್ಲಿ ಪತಿಸೇವೆ ಮಾಡುವುದು ಹಿಂದೂ ರಮಣಿಯ ಧರ್ಮವು"[೪೯] ಎಂಬುದಾಗಿ ವಿವರಿಸುತ್ತಾಳೆ. ಅಲ್ಲದೆ ಭಕ್ತ ಮೀರಾ, ವಸುಂಧರಾ ಮೊದಲಾದ ಪಾತ್ರಗಳ ಮೂಲಕವೂ ಸತೀತ್ವ ಮೌಲ್ಯ ಪ್ರತಿಪಾದನೆ ಮಾಡಿರುವುದು ವೇದ್ಯ. ಒಟ್ಟಾರೆ ಕುಟುಂಬ, ಸಮಾಜ ಸೌಖ್ಯಕ್ಕಾಗಿ ಸ್ತ್ರೀಗೆ ವಿದ್ಯಾಭ್ಯಾಸದ ಅಗತ್ಯವಿದೆ ಎಂದು ಹೇಳಿದರೂ ಆಕೆ ಸಾಮಾಜಿಕವಾಗಿ ಎಷ್ಟೇ ಉನ್ನತ ಸ್ಥಿತಿಗೇರಿದರೂ, ಪತಿಸೇವೆ ಪ್ರಮುಖವಾದುದು ಎಂದು ಹೇಳುತ್ತಾರೆ.

### ಹೆಣ್ಣಿನ ಅಸಹಾಯಕತೆಯ ಚಿತ್ರಣ

ಇಂದಿರೆ ಹಾಗೂ ಪ್ರಿಯಂವದೆಯರಂಥ ಗಟ್ಟಿ ಸ್ತ್ರೀ ಪಾತ್ರಗಳಿಗಿಂತ ಭಿನ್ನವೂ, ಅಸಹಾಯಕವೂ ಆದ ಪಾತ್ರ ವಸುಂಧರೆಯದು. ವಸುಂಧರೆ ಪ್ರಸಿದ್ಧ ಜಮೀನ್ದಾರನ ಮಗಳು, ಶ್ರೀಮಂತೆ, ತಂದೆ-ತಾಯಿ ತೋರಿಸಿದ ಎಲ್ಲಾ ವರಗಳನ್ನು ನಿರಾಕರಿಸಿ, ತನ್ನ ಮನಸ್ಸಿಗೆ ಹಿಡಿಸಿದ ಶ್ರೀಪತಿ-ಬಡವನಾದರೂ-ಗುಣವಂತನೆಂದು ಭಾವಿಸಿ ಅವನನ್ನು ವಿವಾಹವಾಗುತ್ತಾಳೆ. "ಭಾರತ ರಮಣೀಯರು ಪತಿಗಾಗಿ ಎಷ್ಟು ಕಷ್ಟು ಪಡುತ್ತಾರೋ ಅಷ್ಟೆಲ್ಲಾ ಕಷ್ಟಪಟ್ಟರೂ, ಏನೆಲ್ಲಾ ತ್ಯಾಗ ಮಾಡಿದರೂ ಪತಿ ಪ್ರೇಮ ವಂಚಿತೆಯಾಗುತ್ತಾಳೆ. ಶ್ರೀಪತಿ ಮೊದ ಮೊದಲು ತನ್ನ ಪತ್ನಿಯನ್ನು ವಿಶ್ವಾಸದಿಂದ ಕಾಣುತ್ತಿದ್ದವನು ಕೊನೆಗೆ ತನ್ನ ಸಹೋದರ ಸಹೋದರಿಯರ ದರಿದ್ರಾವಸ್ಥೆಯು ಚೆನ್ನಾಗಿ ಮನಸ್ಸಿಗೆ ತಟ್ಟಲು, ಶ್ರೀಮಂತಳಾದ ತನ್ನ ಹೆಂಡತಿಯ ಸಕಲೈಶ್ವರ್ಯವನ್ನು ತಾನೊಬ್ಬ ಮಾತ್ರ ಅನುಭವಿಸಲು ಒಪ್ಪದೆ, ಪತ್ನಿಯನ್ನು ನಿರ್ಲಕ್ಷಿಸುತ್ತಾನೆ. ಅವನ ಬಂಧುಗಳಾದರೋ, ಸುಖವಾಗಿರುವವರನ್ನು ಕಂಡರೆ ಅವರನ್ನು ನಿರ್ಮೂಲವಾಗಿ ನಾಶ ಮಾಡಲು ಪ್ರಯತ್ನ ಪಡುವರು. ಆದರೆ, ಶ್ರೀಪತಿಯು ಮೂಢನಾಗಿರಲಿಲ್ಲ. ವಸುಂಧರೆಯ ಕಟಾಕ್ಷವನ್ನು ಹೊಂದಲು ಅಪೇಕ್ಷಿಸಿದರೂ ತನ್ನ ಸಹೋದರರ ದಾರಿದ್ರ್ಯ ಸ್ಥಿತಿಯನ್ನು ನೆನೆದು ಧರ್ಮಸಂಕಟದಲ್ಲಿ ಸಿಕ್ಕಿ ಬಿದ್ದನು. ಪತ್ನಿಗಾಗಿ ಆನಂದ ಸಾಗರದಲ್ಲಿ ತೇಲಬೇಕು. ಸಹೋದರರಿಗಾಗಿ ದುಃಖ ಸಮುದ್ರದಲ್ಲಿ ಮುಳುಗಬೇಕು? ಏಕಕಾಲದಲ್ಲಿ ಸುಖ, ಐಶ್ವರ್ಯ, ದಾರಿದ್ರ್ಯ-ದುಃಖಗಳನ್ನು ಒಬ್ಬನು ಅನುಭವಿಸುವುದು ಸಾಧ್ಯವೇ?"[೫೦] ಎಂಬ ನಿರೂಪಕಿಯ ವಿವರಣೆ ಗಮನಾರ್ಹ.

ಕೊನೆಗೆ ಶ್ರೀಪತಿಯ ಸಹೋದರರು ಅವನಿಗೆ ಬೇರೆ ಹೆಣ್ಣನ್ನು ನೋಡಿ ಮದುವೆ ಮಾಡಬೇಕೆಂದಿರುವುದನ್ನು ತಿಳಿದುಕೊಂಡ ವಸುಂಧರೆ ಉತ್ತಮ ಸ್ತ್ರೀಯರು ಪತಿಯನ್ನು ತಿರಸ್ಕರಿಸಲಾರರು. ಹತ್ತು ಮದುವೆ ಮಾಡಿಕೊಂಡರು ಮನಸ್ಸು ಬದಲಾಯಿಸದು ಎಂದು ನೀತಿ

ವಾಕ್ಯವಿದೆ. ಆ ಯುಗಧರ್ಮವು ಹಾಗಿದ್ದಿತು. ಈ ಯುಗದಲ್ಲಿ ಈ ನಾಗರೀಕ ಕಾಲದಲ್ಲಿ ತಮ್ಮಂಥಾ ಗುಣಜ್ಞರು ಜ್ಯೇಷ್ಠ ಪತ್ನಿಯು ಜೀವಿಸಿರುವಾಗ ಎರಡನೇ ವಿವಾಹಕ್ಕೆ ಸಮ್ಮತಿಸು ವಿರೆನ್ನುವುದನ್ನು ನಂಬುವುದು ಸಾಧ್ಯ. ಪ್ರಿಯನೇ– ತಮಗೆ ನನ್ನಲ್ಲಿ ವಿಶ್ವಾಸವಿದ್ದರೂ ಇಲ್ಲದಿದ್ದರೂ ನಾನೇನೋ ತಮ್ಮನ್ನು ಆತ್ಮೀಯವಾಗಿ ಪ್ರೀತಿಸುತ್ತಿದ್ದೆನು. ದೇವರಾಗಿ ಪೂಜಿಸಿದೆನು. ಆದರೆ ನನಗೆ ಅದೃಷ್ಟವಿಲ್ಲ. ನನಗೆ ಈ ಪ್ರಪಂಚ ಸುಖದಲ್ಲಿ ವಿರಕ್ತಿಯುಂಟಾಯಿತು. ತಮಗೆ ತಮ್ಮ ಸಹೋದರ ಸಹೋದರಿಯರಿಂದ ಶೀಘ್ರದಲ್ಲಿಯೇ ಬೇರೊಂದು ವಿವಾಹವು ಮಾಡಲ್ಪಡುವುದು. ಅವಳ ಸುಖಕ್ಕೆ ತಡೆಯಾಗಿ ನಾನಿರಲಾಗಲೆಂದು ತಿಳಿದು ಈ ಶರೀರವನ್ನು ತಮ್ಮ ಪಾದ ಮೂಲದಲ್ಲಿ ವಿಸರ್ಜಿಸುವೆನು....... ತಮಗೂ, ಧರ್ಮಕ್ಕೂ, ದೈವಕ್ಕೂ ಕೋಟಿ ಕೋಟಿ ನಮಸ್ಕಾರಗಳು ಎಂಬುದಾಗಿ ಪತ್ರ ಬರೆದಿಟ್ಟು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ವಸುಂಧರೆಯ ಪತ್ರವನ್ನೋದಿದ ಮೇಲೆ ಶ್ರೀಪತಿಗೆ ಮನ ಪರಿವರ್ತನೆಯಾಗಿ, ತನ್ನ ಪತ್ನಿಯ ಗುಣಶೀಲಗಳನ್ನು ಹಾಡಿಹೊಗಳಿ, "ಮಹನೀಯರುಗಳಿರಾ! ಪತಿ ಪತ್ನಿಯರು ಮನಸ್ಸೊಪ್ಪಿ ಬಾಳಿದರೆ ಸುಖವುಂಟು; ಧರ್ಮ ಮಾರ್ಗವು ವ್ಯಕ್ತವಾಗುವುದು. ಸತ್ಯವು ನಿತ್ಯವಾಗುವುದು. ಸಂತೋಷವುಂಟಾಗುವುದು. ಇಬ್ಬರಲ್ಲೊಬ್ಬರ ಮನವು ಬೇರ್ಪಟ್ಟರೂ ನನ್ನಂತೆ ಅವಸ್ಥೆಪಡಬೇಕಾಗುವುದು."[೫೧] ಮನುಷ್ಯರಿಗೆ ತಕ್ಕಂತೆ ನಡೆಯಲು ಪ್ರಯತ್ನ ಪಡುವವರೆಲ್ಲಾ ನನ್ನಂಥಾ ಹುಚ್ಚರಾಗುವರು... ಇತ್ಯಾದಿಯಾಗಿ ಬಡಬಡಿಸಿ ಕೊನೆಗೆ ತಾನೂ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ.

೧೯೧೭ರಲ್ಲಿ ರಚಿತವಾದ ಈ ಕೃತಿಯಲ್ಲಿ ವರ್ಗ ಸಂಘರ್ಷದ ಹೊಳಹು ಕಂಡುಬಂದರೂ ಲೇಖಕಿಯ ಉದ್ದೇಶ ವರ್ಗ ಸಂಘರ್ಷವನ್ನು ವಿಶ್ಲೇಷಿಸುವುದಾಗಿಲ್ಲ ಎನ್ನಿಸುತ್ತದೆ. ಅದಕ್ಕಿಂತ ಹೆಚ್ಚಾಗಿ ದಾಂಪತ್ಯ ಜೀವನ ಸುಖ, ನೆಮ್ಮದಿಯಿಂದ ಕೂಡಿರಬೇಕಾದರೆ, ವಿದ್ಯೆ, ಹಣ, ಬಾಳ ಸಂಗಾತಿಯ ಆಯ್ಕೆ ಸ್ವಾತಂತ್ರ್ಯ.... ಮೊದಲಾದ ಪ್ರಗತಿಪರ ಅನುಕೂಲಗಳಿದ್ದರೆ ಸಾಲದು. ಗಂಡ–ಹೆಂಡತಿಯರಿಬ್ಬರೂ ಪರಸ್ಪರ ಸಮರಸದಿಂದಿರಬೇಕು. ಇಲ್ಲದಿದ್ದಲ್ಲಿ ವಿರಸವೇ ಗತಿ. ಆ ವಿರಸದಿಂದ ಜೀವ ವಿರೋಧಿ ನಿಲುವು ರೂಪುಗೊಂಡು ಎಂತಹ ಅನಾಹುತವಾಗುತ್ತದೆ ಎಂಬುದನ್ನು ನಿರೂಪಿಸುವ ಉದ್ದೇಶವಿದ್ದಂತಿದೆ. ಹಾಗಾಗಿಯೇ ವಸುಂದರೆ–ಶ್ರೀಪತಿಯರ ದಾಂಪತ್ಯ ಜೀವನ ಹದಗೆಡಲು ಮೇಲ್ನೋಟಕ್ಕೆ ಸಾಮಾಜಿಕ ಕಾರಣ (ಬಡವ–ಶ್ರೀಮಂತ)ವನ್ನು ಕೊಡಬಹು ದಾದರೂ ಅವರಿಬ್ಬರ ಮನೋಭಾವವನ್ನು ಲೇಖಕಿ ಕಟ್ಟಿಕೊಟ್ಟಿರುವುದನ್ನು ಗಮನಿಸಿದರೆ, ಮನೋ ವ್ಯಾಪಾರವಾದ ಪ್ರೀತಿಯ ಕೊರತೆಯೇ ಕಾರಣವಾಗಿರುವುದು ಎಂದು ಗುರುತಿಸಬಹುದು. ಆ ಕಾಲಘಟ್ಟದಲ್ಲಿ ಕೇವಲ ಸ್ತ್ರೀ ಸಂಬಂಧಿತ ಸಮಸ್ಯೆ–ಬಾಲ್ಯವಿವಾಹ, ವೈಧವ್ಯ, ವರದಕ್ಷಿಣೆ ಇತ್ಯಾದಿಗಳನ್ನೇ ಕೇಂದ್ರವಾಗಿಟ್ಟುಕೊಂಡು ಕೃತಿ ರಚಿಸುವುದು ಸಾಮಾನ್ಯವಾಗಿತ್ತು. ಆದರೆ ಆಗಿನ

ಕಾಲಕ್ಕೆ ವಿಶೇಷವೂ ವಿಭಿನ್ನವೂ ಆದ ವಸ್ತುವನ್ನೊಳಗೊಂಡಂತೆ ಈ ಕೃತಿ ರಚಿಸಿರುವುದು ಕಲ್ಯಾಣಮ್ಮನವರ ಹೆಗ್ಗಳಿಕೆಯಾಗಿದೆ.

**ಪುರುಷ ಪ್ರಧಾನ ಸಂಸ್ಕೃತಿಯ ಚೌಕಟ್ಟಿನ ಮಿತಿಯಲ್ಲೆ ವ್ಯಕ್ತವಾದ ಸ್ತ್ರೀಪರತೆ**

ಲೇಖಕಿಯ ಈ ದೋರಣೆ ಅಭಿವ್ಯಕ್ತಗೊಂಡಿರುವುದು ಇಂದಿರೆ, ಪ್ರಿಯಂವದೆ, ಭಕ್ತೆಮೀರಾ, ಸುಖಲತ, ಪದ್ಮಲತ ಮೊದಲಾದ ಪಾತ್ರಗಳ ಮೂಲಕ. ಇಂದಿರಾ, ಪ್ರಿಯಂವದೆಯರು ತಮಗೊದಗಿದ ಕಷ್ಟಪರಂಪರೆಗಳಿಂದ ಅಸಹಾಯಕರಾಗಿ ಮೂಲೆ ಗುಂಪಾಗಬಹುದಾದ ಸನ್ನಿವೇಶದಲ್ಲಿ ಸಿಲುಕಿಕೊಂಡಿದ್ದರೂ, ಸಕಾಲದಲ್ಲಿ ಎಚ್ಚೆತ್ತುಕೊಂಡು ತಮ್ಮ ಬದುಕನ್ನು ಸುಖಾಂತ್ಯಗೊಳಿಸಿಕೊಳ್ಳುವುದು, ಯಾವ ಪಿತೃ ಪ್ರಧಾನ ವ್ಯವಸ್ಥೆಯಿಂದ ತಮ್ಮ ಬದುಕು ಸಂಕಷ್ಟಕ್ಕೀಡಾಗಿತ್ತೋ ಅದನ್ನು ಧಿಕ್ಕರಿಸದೆ ವ್ಯವಸ್ಥೆ ವಿಧಿಸಿದ ಕಟ್ಟಳೆಗಳಲ್ಲಿ ಸ್ವಲ್ಪ ರಿಯಾಯಿತಿ ಪಡೆದು ಚೇತರಿಸಿಕೊಳ್ಳುತ್ತಾರೆ. ಈ ಅಭಿಪ್ರಾಯಕ್ಕೆ ಪೂರಕವಾದ ಅನೇಕ ಅಂಶಗಳನ್ನು ಈ ಮೊದಲೇ ವಿವರಿಸಲಾಗಿದೆ.

ಅಂತೆಯೇ ಇಲ್ಲಿನ ಸ್ತ್ರೀಪರತೆ ಪಿತೃ ಪ್ರಧಾನ ಸಮಾಜವನ್ನು ಧಿಕ್ಕರಿಸಿ 'ತನ್ನತನದ ನಿಜವನ್ನು ಕಂಡುಕೊಳ್ಳುವಂತಹುದಲ್ಲ. ಬದಲಿಗೆ ಸಾಧ್ಯವಾದಷ್ಟೂ ಸಹನೆ, ತ್ಯಾಗ, ಜಾಣತನಗಳಿಂದ ವ್ಯವಸ್ಥೆಯ ಜೊತೆ ಹೊಂದಿಕೊಂಡು ಹೋಗಬೇಕು. ಆ ಮೂಲಕ ಕುಟುಂಬ, ಸಮಾಜದ ಸ್ವಾಸ್ಥ್ಯ ಕಾಪಾಡ ಬೇಕು ಎಂಬ ನಿಲುವು ಕಂಡುಬರುತ್ತದೆ.

**ಪ್ರಭುತ್ವದಲ್ಲಿ ಮೆರೆದ ಸ್ತ್ರೀ ಚೇತನಗಳ ಚಿತ್ರಣ**

ಕಲ್ಯಾಣಮ್ಮನವರು ಸಾಮಾಜಿಕ ಕಾದಂಬರಿಗಳಲ್ಲಿ ಮಾತ್ರವಲ್ಲದೆ ತಮ್ಮ ಚಾರಿತ್ರಿಕ ಕಾದಂಬರಿ ಮಾಧವಿ(೧೯೫೯)ಯಲ್ಲೂ ಸ್ತ್ರೀ ಪ್ರಧಾನ ಚಿಂತನೆಯನ್ನು ಮುಂದುವರೆಸಿದ್ದಾರೆ. ಇದು ಇತಿಹಾಸದ ಒಂದು ಎಳೆಯನ್ನು ಆಧರಿಸಿ ರಚಿತವಾದದ್ದು.

ಈ ಕಾದಂಬರಿ ರಚಿತವಾದ ಕಾಲಘಟ್ಟ ಹಾಗೂ ಧೋರಣೆಯ ದೃಷ್ಟಿಯಿಂದ ಕಲ್ಯಾಣಮ್ಮನವರ ಮೇಲೆ ಪ್ರಗತಿಶೀಲಪಂಥದ ಪ್ರಭಾವವಾಗಿದ್ದಿರಬೇಕು ಎಂಬ ಅಭಿಪ್ರಾಯ ಮೂಡುತ್ತದೆ. ಪ್ರಗತಿಶೀಲದಲ್ಲಿ ವಿಶ್ಲೇಷಿಸಲ್ಪಟ್ಟ ಸಾಮಾಜಿಕ ಸಮಸ್ಯೆಗಳಲ್ಲಿ ವೇಶ್ಯಾಸಮಸ್ಯೆಯು ಒಂದು. ಚಾರಿತ್ರಿಕ ಕಥಾ ಭಿತ್ತಿಯುಳ್ಳ ಈ ಕಾದಂಬರಿಯಲ್ಲೂ ಕಲ್ಯಾಣಮ್ಮನವರು ವೇಶ್ಯಾಸಮಸ್ಯೆಯ ಬಗೆಗೆ– ಆಳವಾದ ಚರ್ಚೆ, ವಾದ, ಮಂಡನೆ ಮಾಡದಿದ್ದಾಗ್ಯೂ –ಗಮನ ಕೇಂದ್ರೀಕರಿಸಿದ್ದಾರೆನಿಸುತ್ತದೆ.

ಈ ಕೃತಿಯ ಮಾಧವಿ ಉಳಿದೆಲ್ಲಾ ಸ್ತ್ರೀ ಪಾತ್ರಗಳಿಗಿಂತ ಗಟ್ಟಿ ವ್ಯಕ್ತಿತ್ವದವಳು ಮತ್ತು ಗಣಿಕೆಯರ ಪ್ರತಿನಿಧಿಯಾಗಿ ರಾಜ ಸಭೆಯಲ್ಲಿ ಒಂದು ಸ್ಥಾನ ಗಳಿಸಿರುವವಳು. ತಮ್ಮ ಕಥೆಗಳಲ್ಲಿ

ವೇಶ್ಯಾ ಬದುಕನ್ನು ಚಿತ್ರಿಸುವಾಗ ಮಡಿವಂತಿಕೆ ತೋರಿರುವ ಕಲ್ಯಾಣಮ್ಮನವರು ವೇಶ್ಯೆಯೊಬ್ಬಳನ್ನು ಕಾದಂಬರಿಯ ಮುಖ್ಯ ಪಾತ್ರವನ್ನಾಗಿ ಚಿತ್ರಿಸಿರುವುದು, ಅವಳಿಗಿದ್ದ ಸ್ಥಾನಮಾನಗಳನ್ನು ವಿವರಿಸಿರುವುದು, ಅವಳ ಹೆಸರನ್ನೇ ಕಾದಂಬರಿಗೆ ಶೀರ್ಷಿಕೆಯನ್ನಾಗಿಸಿರುವುದು ಬಹುಶಃ ಅವರ ಚಿಂತನೆಯಲ್ಲಿ ಉಂಟಾದ ಬದಲಾವಣೆಯ ದಿಕ್ಕನ್ನು ಸೂಚಿಸುತ್ತದೆ.

**ವೈಚಾರಿಕತೆಯ ಹೊಳಹು**

ಕಲ್ಯಾಣಮ್ಮನವರು ತಮ್ಮ ಕೃತಿಗಳ ಪ್ರಸ್ತಾವನೆಗಳಲ್ಲಿ ತಮ್ಮ ಕೃತಿಯ ಉದ್ದೇಶ ಧೋರಣೆಗಳನ್ನು ಸ್ಪಷ್ಟಪಡಿಸಿದರೂ, ಆನುಷಂಗಿಕವಾಗಿ ಸಮಕಾಲೀನ ವಿದ್ಯಮಾನಗಳನ್ನು ಕುರಿತು ಅವರು ಚಿತ್ರಿಸಿರುವ ಪಾತ್ರಗಳು ಚರ್ಚಿಸುತ್ತವೆ, ಪ್ರತಿಕ್ರಿಯಿಸುತ್ತವೆ. ಅಂತಹ ಕೆಲವು ಸನ್ನಿವೇಶಗಳು ಈ ಕೆಳಕಂಡಂತಿವೆ. 'ಇಂದಿರೆ'/'ನಿರ್ಭಾಗ್ಯವನಿತೆ' ಕಾದಂಬರಿಯ ಶಚೀಂದ್ರ-ಮದರಾಸಿನಲ್ಲಿ ಬಿ.ಎ. ಓದಿದವ, ಅಲ್ಲಿನ ಆಚಾರ ಪರಿಷ್ಕರಣ ಸಂಘದ ಒಡನಾಡಿ. ಭರತಖಂಡ, ಭಾರತೀಯರು ಹೀನ ಸ್ಥಿತಿ ತಲುಪಿದ್ದಾರೆಂದು ನಂಬಿದವ. ಅದಕ್ಕೆ ಕಾರಣ 'ನಮ್ಮ ಹಿಂದೂಗಳ ಮೌಢ್ಯವನ್ನು ನಾವು ತಿದ್ದಿ ಸರಿಪಡಿಸದ ಹೊರತು ಅಭಿವೃದ್ಧಿ ಹೊಂದುವುದು ಅಸಾಧ್ಯ ಎಂಬ ಮನೋಭಾವದವನು. ಸ್ತ್ರೀ ವಿದ್ಯಾಭ್ಯಾಸ, ಬಾಲ್ಯವಿವಾಹ ಖಂಡನೆ, ವರದಕ್ಷಿಣೆ ನಿರ್ಮೂಲನೆ ಮೊದಲಾದ ಪ್ರಗತಿಪರ ಆಶಯಗಳನ್ನು ಹೊಂದಿದವನು-ಗೊಡ್ಡು ಬ್ರಾಹ್ಮಣ್ಯವನ್ನು ಖಂಡಿಸುವುದು ಹೀಗೆ;(ವೇದ ಬ್ರಾಹ್ಮಣರಿಗೆ ಅನ್ನ ಹಾಕಿದರೆ ಪುಣ್ಯ ಪ್ರಾಪ್ತಿಯಾಗುತ್ತದೆಂಬ ತಂದೆ ಸತೀಶನ ಮಾತಿಗೆ)- "…. ಅರ್ಧರ್ಧವಾಗಿ ವೇದವನ್ನು ಅಭ್ಯಸಿಸಿ, ಉತ್ಪತ್ತಿಯಿಲ್ಲದೆ, ವಿವಾಹಕ್ಕೆ ಒಳ್ಳೆಯ ಲಗ್ನವನ್ನು ಕೂಡ ನಿರ್ಧರಿಸಲು ಅಸಮರ್ಥರಾಗಿದ್ದಾರೆ. ಅಷ್ಟೈಶ್ವರ್ಯವಂತರಾಗಿ ಲಕ್ಷ್ಮೀನಾರಾಯಣನಂತೆ ಬಾಳುವರು ಎನ್ನುವರು, ವಿವಾಹದ ಮೂರನೇ ತಿಂಗಳಲ್ಲಿಯೇ ಯಮಾಲಯವನ್ನೈದುವನು ಎಂದೂ …..ಇಂಥಾ ಪಾಷಂಡಿಗಳಿಗೆ ಅನ್ನವಿಡುವಷ್ಟು ಮಹಾಪಾತಕವು ಮತ್ಯಾವುದೂ ಇಲ್ಲ. ಹಾಗೆ ಬೇಕಾದರೆ ಅನ್ನವಿಡಬೇಕೆಂಬುದು ನಿನ್ನ ಇಷ್ಟವಾದರೆ ಒಳ್ಳೇ ಯೋಗ್ಯರಾದ ಬ್ರಾಹ್ಮಣರನ್ನು ಕರೆಸಿ ಅನ್ನವಿಡೋಣ. ಕುರುಡರು, ಕುಂಟರು, ರೋಗಿಷ್ಟರು, ವೃದ್ಧರು, ಬಾಲರು ಇವರುಗಳಿಗೆಲ್ಲಾ ಅನ್ನವಿಡೋಣ"[೫೨] ಎನ್ನುತ್ತಾನೆ.

ವಿಧವಾ ವಿವಾಹಕ್ಕೆ ಶಾಸ್ತ್ರಾಧಾರಗಳನ್ನು ಹುಡುಕುವಾಗ ಮತ್ತು ದೊರೆತ ಆಧಾರದ ಮೇಲೆ ಶಾಸ್ತ್ರಸಮ್ಮತಿ ಇರುವುದನ್ನು ಕಂಡುಕೊಂಡ ನಂತರ-ಇಷ್ಟೆಲ್ಲಾ ಸ್ತ್ರೀಪರ ನಿಲುವುಗಳಿದ್ದರೂ, ಸಹಗಮನ, ವಿಧವಾ ಸಮಸ್ಯೆ ಮೊದಲಾದವು ಇನ್ನೂ ಈ ಸಮಾಜದಲ್ಲಿ ಇರುವುದರ ಬಗೆಗಿನ ವಿಶ್ಲೇಷಣೆಗಳು (ಶಚೀಂದ್ರ ಮತ್ತು ಸುಂದರೇಶರ ನಡುವೆ ನಡೆಯುವ ಸಂಭಾಷಣೆ) ಗಮನಾರ್ಹ. ಮತ್ತು ಪ್ರಗತಿಪರ ಬದಲಾವಣೆಗಳ ಅನುಷ್ಠಾನದಲ್ಲಿ- ಅವು ಜನಹಿತವಾಗಿದ್ದಾಗ್ಯೂ-ಅನುಷ್ಠಾನ

ಗೊಳಿಸಲು ಹೊರಟವರು ನಿಂದನೆ ಮತ್ತು ಅಪಮಾನಗಳಿಗೆ ಈಡಾಗುತ್ತಾರೆಂಬ ಧೋರಣೆಯನ್ನು ಸತೀಶನ ಮಾತುಗಳಲ್ಲಿ ಕಾಣಬಹುದು. ಆ ಮೂಲಕ ಸಮಾಜ ಸುಧಾರಣಾ ಕಾರ್ಯದಲ್ಲಿ ನಿಂದನೆಗೆ ಒಳಗಾದರೂ ಆ ಕಾರ್ಯವನ್ನು ನಿಲ್ಲಿಸಬಾರದು ಎಂಬುದನ್ನು ಲೇಖಕಿ ಸೂಚ್ಯವಾಗಿ ಚಿತ್ರಿಸಿದ್ದಾರೆ.

ಇಂದಿರೆಯ ವಿವಾಹ ಬಾಲ್ಯದಲ್ಲಿಯೇ ನಡೆದು, ಆಕೆ ವಿಧವೆಯಾಗಿ ಪರಿತಾಪದ ಬದುಕು ನಡೆಸುವಂತಾದುದೂ ಹಾಗೂ ಪ್ರಿಯಂವದೆ ಬಾಲ್ಯದಲ್ಲಿಯೇ ವಿವಾಹವಾಗಿ ನೋವುಣ್ಣುವುದು ಸನಾತನ(ಮೌಢ್ಯ) ಮೌಲ್ಯದ ಫಲವಾಗಿಯೇ ಎಂಬುದನ್ನು ಕಾದಂಬರಿಕಾರ್ತಿ ಸ್ಪಷ್ಟವಾಗಿ ಮನಗಾಣಿಸಿದ್ದಾರೆ. ಇಂದಿರೆಯ ಬವಣೆಯ ಚಿತ್ರಣ ಈ ಹಿಂದೆಯೇ ವಿವರಿಸಲ್ಪಟ್ಟಿದೆ. ಪ್ರಿಯಂವದೆಯ ತಾಯಿ, "ನಿನ್ನ ತಂದೆಯು ಗತಿಸಿದ ವರ್ಷದಲ್ಲಿ ಕನ್ಯಾದಾನ ಮಾಡಿದರೆ ಅವರಿಗೆ ಸ್ವರ್ಗ ಪ್ರಾಪ್ತಿಯುಂಟಾಗುವುದೆಂದು ವಿಪ್ರೋತ್ತಮರು ಹೇಳಿದ್ದರಿಂದ ಅವರ ಮಾತುಗಳನ್ನು ನಂಬಿ ಚೆನ್ನಾಗಿ ವಿಚಾರಿಸದೆ ವಿವಾಹ ಮಾಡಿ ಕೊಟ್ಟೆನು"[೨೩] ಎಂಬುದಾಗಿ ನುಡಿಯುವ ಮಾತುಗಳಿಂದ ಈ ಮೌಲ್ಯಗಳು ಅದೆಷ್ಟು ಅನರ್ಥಕಾರಿ ಎಂಬುದು ಗೊತ್ತಗುತ್ತದೆ. ಹೀಗೆ ಕಲ್ಯಾಣಮ್ಮನವರ ಕಾದಂಬರಿಗಳಲ್ಲಿ ವೈಚಾರಿಕತೆ ಮಿಂಚಿರುವುದನ್ನು ಮನಗಾಣಬಹುದು. ಕೃತಿ ರಚಿತ ಕಾಲ ಹಾಗೂ ಮಹಿಳಾ ಅಧ್ಯಯನದ ದೃಷ್ಟಿಯಿಂದ ಈ ಸಂಗತಿ ಮಹತ್ವದ್ದು.

ಪಿತೃ ಪ್ರಧಾನ ಚಿಂತನೆಗೆ ತೀವ್ರ ಪ್ರತಿರೋಧ ಇವರ ಕೃತಿಗಳಲ್ಲಿಲ್ಲ. ಹಾಗೆಂದು ವ್ಯವಸ್ಥೆ ವಿಧಿಸಿದ ಎಲ್ಲಾ ಕಟ್ಟುಪಾಡುಗಳನ್ನು ಅನುಸರಿಸುವುದೂ ಇಲ್ಲ. ಆದರೆ, ಆ ಚಿಂತನೆ (ಪುರುಷ ಪ್ರಧಾನ) ಏಕ ಮುಖವಾಗಿದೆ. ಹೆಣ್ಣಿಗೆ ಅನ್ಯಾಯ ಬಗೆದಿದೆ ಎಂಬ ವೈಚಾರಿಕ ಪ್ರಜ್ಞೆ ಇವರ ಕೆಲವು ಪಾತ್ರಗಳಲ್ಲಿದೆ. ಈ ಪ್ರಜ್ಞೆ ಪ್ರತಿರೋಧದ ನೆಲೆಯಲ್ಲಿ ಕಾರ್ಯ ನಿರ್ವಹಿಸದೇ ಓಲೈಸುವ, ಒಪ್ಪಿಗೆ ಪಡೆಯುವ ಮೂಲಕ ಬದಲಾವಣೆಗೆ ಪ್ರಯತ್ನಿಸುತ್ತದೆ. ಈ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಚಿಂತನೆ, ವಿವೇಕ, ವೈಚಾರಿಕತೆ ಜನರಲ್ಲಿ-ಅದರಲ್ಲೂ ಸ್ತ್ರೀಯರಲ್ಲಿ-ಮೂಡಲು ಶಿಕ್ಷಣ ಪಡೆಯಬೇಕೆಂಬುದು ಕಲ್ಯಾಣಮ್ಮನವರ ಆಶಯವಾಗಿದೆ.

**ಮಾನವೀಯ ಸಂಬಂಧಗಳ ಸಂವೇದನೆಯ ವಿಭಿನ್ನ ನೆಲೆ**

ಕಲ್ಯಾಣಮ್ಮನವರ ಕೃತಿಗಳೆಲ್ಲವೂ ಸ್ತ್ರೀ ಕೇಂದ್ರಿತವಾಗಿದ್ದು, ಸ್ತ್ರೀಪರ ಧೋರಣೆಯುಳ್ಳವು. ಹಾಗಾಗಿ(ಈ ಮೊದಲೇ ಚರ್ಚಿಸಿರುವಂತೆ) ಬದಲಾಗುತ್ತಿರುವ ಹೊಸ ಸಮಾಜಕ್ಕನುಗುಣವಾಗಿ ಸ್ತ್ರೀ-ಶಿಕ್ಷಣ ಪಡೆದು, ತಾಳ್ಮೆ-ಜಾಣ್ಮೆಯಿಂದ ಕುಟುಂಬ, ಸಮಾಜ, ದೇಶದ ಪ್ರಗತಿಯಲ್ಲಿ ನೆರವಾಗಬೇಕೆಂಬ ಆಶಯದ ಪ್ರತಿಪಾದನೆ ಎಲ್ಲಾ ಕೃತಿಗಳಲ್ಲೂ ಕಂಡು ಬರುವುದು ಸರಿಯಷ್ಟೆ. ಹಾಗೆಂದೇ ವಿಧವಾವಿವಾಹ, ವರದಕ್ಷಿಣೆ ನಿರ್ಮೂಲನೆ ಮೊದಲಾದ ಪ್ರಗತಿಪರ ಪರಿಹಾರ

ಪ್ರತಿಪಾದಿತವಾಗಿದ್ದರೂ ಅದಕ್ಕೆ ಸ್ತ್ರೀ ಜಾಗೃತಿ ಕಾರಣವಾಗಿದ್ದರೂ, ಸ್ತ್ರೀಗೆ ಎಂಥ ಉತ್ತಮ ಸ್ಥಾನ ಲಭಿಸಿದರೂ ಆಕೆ ಸತೀತ್ವದ ಮಿತಿಯೊಳಗೇ ಇರಬೇಕೆಂಬ ಧೋರಣೆ ಕಲ್ಯಾಣಮ್ಮನವರದು. ಪ್ರಿಯಂವದೆ, ವಸುಂಧರಾ, ಸುಖಲತಾ, ಮೀರಾ ಮೊದಲಾದ ಪಾತ್ರಗಳ ಮೂಲಕ ಲೇಖಕಿ ತಮ್ಮ ಈ ಚಿಂತನೆಯನ್ನು ಬಿಂಬಿಸಿದ್ದಾರೆ.

ಈ ಹಿನ್ನೆಲೆಯಿಂದ ಇವರ ಕಾದಂಬರಿಗಳಲ್ಲಿ ಗಂಡು–ಹೆಣ್ಣು, ಅತ್ತೆ–ಅಳಿಯ, ತಾಯಿ–ಮಗಳು, ಅತ್ತೆ–ಸೊಸೆ ಮೊದಲಾದ ಸಂಬಂಧಗಳು ಅನಾವರಣಗೊಂಡಿರುವ ಬಗೆಯನ್ನು ವಿಶ್ಲೇಷಿಸಬಹುದು.

ವರದಕ್ಷಿಣೆ ಕೊಡದ ಕಾರಣದಿಂದ ತವರಿನಲ್ಲಿಯೇ ಉಳಿದ ಪ್ರಿಯಂವದೆ ತನ್ನ ತಾಯಿಗೆ ತನ್ನನ್ನು ತವರಿನಲ್ಲಿಯೇ ಬಿಟ್ಟ ವಿಷಯವನ್ನು ಕುರಿತು ಅಳಿಯನೊಂದಿಗೆ ಮಾತನಾಡುವಂತೆ ಕೇಳಿದಾಗ ಆಕೆ, "ನಮ್ಮ ಜಾತಿಯಲ್ಲಿ ಅಳಿಯನ ಸಂಗಡ ಮಾತನಾಡಕೂಡದು. ಯಾವ ಕೆಲಸವನ್ನಾಗಲಿ ಹೆತ್ತವರ ಅನುಮತಿಯಂತೆಯೇ ಮಾಡಬೇಕು"[೫೪] ಎನ್ನುತ್ತಾಳೆ. ಈ ಮಾತುಗಳು ಪಿತೃಪ್ರಧಾನ ವ್ಯವಸ್ಥೆ ಹೆಣ್ಣಿಗೆ–ಆಕೆ ಯಾವ ಸ್ಥಾನದಲ್ಲೇ ಇರಲಿ, ಹಾಕಿದ ನಿರ್ಬಂಧದ ಬಗ್ಗೆ ಚಿಂತಿಸುವಂತೆ ಮಾಡುತ್ತವೆ.

ಅತ್ತೆ–ಅಳಿಯನ ಸಂಬಂಧ ಹೀಗಿದ್ದರೆ, ಅತ್ತೆ–ಸೊಸೆಯ ಸಂಬಂಧ ಹೇಗಿರಬೇಕು? ಅತ್ತೆ, (ಜೈವಿಕವಾಗಿ) ಹೆಣ್ಣಾಗಿದ್ದರೂ, ಪುರುಷ ಪ್ರಧಾನ ವ್ಯವಸ್ಥೆಯ 'ಅಧಿಕಾರಶಾಹಿ ಪ್ರತಿನಿಧಿ' ಎಂದರೆ ಸಮಂಜಸವಾದೀತು. ಈ ಕುರಿತ ಕಲ್ಯಾಣಮ್ಮನವರ ಚಿಂತನೆ ಹೀಗಿದೆ. ನಮ್ಮ ಹಿಂದೂ ದೇಶದಲ್ಲಿ ಅತ್ತೆಯರು ಸೊಸೆಯರನ್ನು ಅತಿ ಕೇವಲವಾಗಿ ನಡೆಸುತ್ತಿರುವ ವಿಷಯವು ಎಲ್ಲರಿಗೂ ತಿಳಿದೇ ಇರುವುದು. ನಮ್ಮ ಹಿಂದೂ ಶಾಸ್ತ್ರ ಪ್ರಕಾರವಾಗಿ ಸೊಸೆಯೆನ್ನುವ ನಾಮವನ್ನು ಧರಿಸಿರುವ ಪ್ರತಿಯೊಬ್ಬರೂ ಅತ್ತೆಯೆನ್ನುವ ಪಟ್ಟವನ್ನು ಧರಿಸಿದವಳ ಆಜ್ಞೆಗೆ ಹೆದರಿ ನಡೆಯತಕ್ಕದ್ದು ಅತ್ಯಾವಶ್ಯಕವೇಯಾದರೂ ಅತ್ತೆಯರು ಕೇವಲ ಅಲ್ಪ ದೋಷಗಳನ್ನೆಲ್ಲಾ ಬೆಟ್ಟದಷ್ಟಾಗಿ ಭಾವಿಸಿ ಅಧಿಕಾರವನ್ನು ನಡೆಸುವುದರಿಂದ ತಮಗಿರುವ ಮರ್ಯಾದೆಯನ್ನು ಸಂಪೂರ್ಣವಾಗಿ ಕಳೆದುಕೊಳ್ಳುವರು. ಮೇಲಿನ ಮಾತುಗಳ ಮೂಲಕ ಕೌಟುಂಬಿಕ ಸಂಬಂಧಗಳ ನಿರ್ವಹಣೆಯ ಕುರಿತಂತೆ ಲೇಖಕಿಯ ಮನೋಭಾವವನ್ನು ಗುರುತಿಸಬಹುದು.

## ಸ್ತ್ರೀ ಪಾತ್ರ ಚಿತ್ರಣ

ಕಲ್ಯಾಣಮ್ಮನವರ ಎಲ್ಲಾ ಕಾದಂಬರಿಗಳೂ ಸ್ತ್ರೀಪಾತ್ರ ಪ್ರಧಾನವಾಗಿದ್ದು ಒಂದೊಂದು ಕೃತಿಯಲ್ಲೂ ವಿಭಿನ್ನ ಮಾದರಿಯ ಸ್ತ್ರೀ ಚಿತ್ರಣವನ್ನು ರೂಪಿಸಿದ್ದಾರೆ(ಇಂದಿರೆ–ಬಾಲವಿಧವೆ, ಪ್ರಿಯಂವದೆ–

ಸನಾತನ ಮೌಲ್ಯದ ಕಟ್ಟುಪಾಡು ಹಾಗೂ ವರದಕ್ಷಿಣೆ ಪಿಡುಗಿಗೆ ಬಲಿಯಾದವಳು. ಸುಖಲತೆ– ಅರಸನ ಮಗಳಾದರೂ, ಮಲತಾಯಿಯ ಹಿಂಸೆಯಿಂದ ನಲುಗಿದವಳು, ಮೀರಾ–ತಾನು ನಂಬಿದ ಭಕ್ತಿಯ ಪ್ರತಿಪಾದಕಿಯಾಗಿ– ಅಚಲವೆನಿಸಿದರೂ, ಪಿತೃಪ್ರಧಾನ ವ್ಯವಸ್ಥೆಯ ಕೈಗೊಂಬೆ, ವಸುಂಧರಾ– ಸಂಗಾತಿ ಆಯ್ಕೆಯಲ್ಲಿ ಸ್ವತಂತ್ರೆ, ಶ್ರೀಮಂತೆ ಆದರೆ ಪ್ರೇಮವಂಚಿಕೆ, ಮಾಧವಿ– ತನ್ನತನವನ್ನು ಮೆರೆದ ಗಟ್ಟಿ ಸ್ತ್ರೀಪಾತ್ರ ಅವರ ಕೃತಿಗಳಲ್ಲಿ ತಲೆಬರೆಹದಿಂದ ಹಿಡಿದು ಎಲ್ಲಾ ಸ್ತ್ರೀಮಯ. ತಮ್ಮ ಧೋರಣೆಗಳ ಪ್ರತಿಪಾದನೆ, ಆಚರಣೆ, ಅನುಷ್ಠಾನ ಎಲ್ಲ ಸ್ತ್ರೀ ಪಾತ್ರಗಳ ಮೂಲಕವೇ. ಈ ಪ್ರಧಾನ ಕಥಾಭಿತ್ತಿಗೆ ಪೋಷಕವಾಗಿ ಪುರುಷ ಪಾತ್ರಗಳು ಬರುತ್ತವೆ. ಇಂದಿರೆ, ಸತೀಶ, ಶಚೀಂದ್ರ, ಸುಂದರೇಶ, ಕಾಮಪಾಲ ಹಾಗೂ ಪ್ರಿಯಂವದೆ ಸತ್ಯೇಂದ್ರ, ವಸುಂಧರಾದ ಶ್ರೀಪತಿ ಪಂಡಿತ, ಸುಖಲತಾದ ಸರ್ದಾರ್ ಸಿಂಹ, ಭಕ್ತೆ ಮೀರಾದ ಭೋಜರಾಜ, ಮೊದಲಾದ ಪಾತ್ರಗಳನ್ನು ಈ ನಿಟ್ಟಿನಲ್ಲಿ ಹೆಸರಿಸಬಹುದು.

ಕನ್ನಡದ ಮೊದಲ ಕಾದಂಬರಿಕಾರ್ತಿಯರಿಬ್ಬರ ದೃಷ್ಟಿ–ಧೋರಣೆಗಳನ್ನು ಈ ರೀತಿ ಕ್ರೋಢೀಕರಿಸಬಹುದು. ಈ ಲೇಖಕಿಯರಿಬ್ಬರೂ ಸಮಾನ ಸಾಮಾಜಿಕ ಪರಿಸರ ಮತ್ತು ಸಾಂಸ್ಕೃತಿಕ ಹಿನ್ನೆಲೆಯಿಂದ ಬಂದವರು. ಆದ್ದರಿಂದಲೇ ಇವರ ಕೃತಿಗಳು ಬಹುತೇಕ ಒಂದು ನಿರ್ದಿಷ್ಟವರ್ಗದ ಮಹಿಳಾ ಸಮಸ್ಯೆಗಳನ್ನಷ್ಟೇ ಕೇಂದ್ರವಾಗಿರಿಸಿಕೊಂಡಿವೆ. ತಿರುಮಲಾಂಬಾ ಅವರು ಆರ್ಯ ಸಮಾಜದ ಧ್ಯೇಯ–ಧೋರಣೆಗಳ ಪ್ರತಿಪಾದಕಿ. ಕಲ್ಯಾಣಮ್ಮನವರು ಬ್ರಹ್ಮ ಸಮಾಜದ ಸುಧಾರಣಾವಾದದ ಕಡೆ ಒಲವುಳ್ಳವರು. ತಿರುಮಲಾಂಬಾ ಅವರು ಪಾಶ್ಚಾತ್ಯ ಶಿಕ್ಷಣ, ಚಿಂತನೆಗಳ ಫಲವಾಗಿ ಸಮಾಜ ಹಾಳಾಗುತ್ತದೆಂದು ಆತಂಕಿತರಾಗುತ್ತಾರೆ. ಆದ್ದರಿಂದ ಆಧುನಿಕ ಕಾಲದ ಯುವ ಜನತೆಗೆ, ಅದರಲ್ಲೂ ಸ್ತ್ರೀಯರಿಗೆ ಸನಾತನ ಶಿಕ್ಷಣದ ಅಗತ್ಯತೆಯನ್ನು ಕುರಿತು ಒತ್ತಾಯಿಸುತ್ತಾರೆ. ಆದರೆ ಕಲ್ಯಾಣಮ್ಮನವರು ಆಧುನಿಕ ಕಾಲದ ಮೌಲ್ಯಗಳಿಗೆ ಎಲ್ಲರೂ ಹೊಂದಿಕೊಳ್ಳಬೇಕೆಂದು ಪ್ರತಿಪಾದಿಸುತ್ತಾರೆ. ವೈಧವ್ಯಪ್ರಾಪ್ತಿ ಹಾಗೂ ಅದರಿಂದ ಉಂಟಾಗಬಹುದಾದ ಕಷ್ಟಗಳಿಗೆ ಪೂರ್ವಕರ್ಮ ಕಾರಣವೆಂಬುದು ತಿರುಮಲಾಂಬಾ ಅವರ ಅಭಿಪ್ರಾಯ; ಪುರಾತನ ಪದ್ಧತಿಗಳನ್ನು ಅನುಕರಿಸುವ ದಡ್ಡ, ಅವಿವೇಕದ ಹಿರಿಯರು ಕೈಗೊಳ್ಳುವ ಮೂರ್ಖ ನಿರ್ಧಾರಗಳು ಕಾರಣ ಎಂಬುದು ಕಲ್ಯಾನಮ್ಮನವರ ವಾದ. ತಿರುಮಲಾಂಬಾ ಅವರು ವಿಧವಾ ವಿವಾಹ ವಿರೋಧಿ; ಕಲ್ಯಾಣಮ್ಮನವರು ವಿಧವಾ ಸಮಸ್ಯೆಗೆ ಪರ್ಯಾಯವಾಗಿ ವಿಧವಾ ವಿವಾಹವನ್ನೆ ಸಮರ್ಥಿಸಿ, ಸಾಧಿಸಿದ್ದಾರೆ.

ಹೀಗೆ ಒಂದೇ ಕಾಲ ಸಂದರ್ಭದ ಒಂದೇ ವರ್ಗವನ್ನು ಪ್ರತಿನಿಧಿಸುವ, ಒಂದೇ ಬಗೆಯ ಸಾಮಾಜಿಕ ಸಮಸ್ಯೆಗೆ ತುತ್ತಾಗಿದ್ದ ಈ ಲೇಖಕಿಯರಿಬ್ಬರೂ ಸಂಪ್ರದಾಯದ ಶ್ರದ್ಧಾವಂತ ಮನಸ್ಸಿನ ತಲ್ಲಣ ಹಾಗೂ ಸಮಾಜದ ಜವಾಬ್ದಾರಿ ಮತ್ತು ಮಹಿಳಾ ಸಾಮಾಜಿಕ ಅಸ್ಥಿರತೆಯ

ಹುಡುಕಾಟದಲ್ಲಿ ಸಮಸ್ಯೆಯ ಗ್ರಹಿಕೆಯ ನೆಲೆಯಲ್ಲಿ ಸಮಾನ ಮನಸ್ಕರಾಗಿ, ಕಾರಣ-ಪರಿಣಾಮ-ಪರಿಹಾರಗಳನ್ನು ವಿಶ್ಲೇಷಿಸುವಾಗ ಭಿನ್ನಧೋರಣೆಯುಳ್ಳವರಾಗಿ ಕಂಡುಬರುತ್ತಾರೆ.

ಒಟ್ಟಾರೆಯಾಗಿ ಈ ಮೇಲೆ ಚರ್ಚಿಸಲಾದ ವಿಷಯಗಳು ಸ್ತ್ರೀ ಜೀವನದಲ್ಲಿ ಬಹುದೊಡ್ಡ ಸಮಸ್ಯೆಯನ್ನು ಸೃಷ್ಟಿಸಿವೆ. ಈ ಸಮಸ್ಯೆಗಳಿಂದಾಗಿಯೇ ಅವಳು ಮುಕ್ತವಾಗಿ ಜೀವಿಸಲಾಗದೆ ಕೊರಗಿದ್ದಾಳೆ. ಅವಳ ಶೋಷಣೆಗೆ ಮೂಲವಾದ ಕೌಟುಂಬಿಕ, ವೈವಾಹಿಕ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಕಾರಣಗಳಿಂದಾಗಿ ಪರಂಪರೆಯ ಬೇರುಗಳು ಮತ್ತಷ್ಟು ಗಟ್ಟಿಗೊಂಡಿವೆ. ಈ ಎಲ್ಲಾ ಕಾರಣಗಳನ್ನು ಸಮಾಜಶಾಸ್ತ್ರೀಯ ಹಾಗೂ ಸ್ತ್ರೀ ಸಂವೇದನೆಯ ವೈಚಾರಿಕ ಮಿತಿಯಲ್ಲಿ ವಾಸ್ತವ ಜೀವನವನ್ನು ತೆರೆದಿಟ್ಟಿವೆ. ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ಒಳಗೆ ಸ್ತ್ರೀ ಗುಲಾಮಳಾಗಿದ್ದಳು. ಸ್ವತಃ ಕಾದಂಬರಿಕಾರ್ತಿಯರು ಕೆಲವೇ ಕೆಲವು ಸೀಮಿತ ಕ್ಷೇತ್ರಗಳಿಗೆ ಮೀಸಲಿರಿಸಿ ಸ್ತ್ರೀ ಸುಧಾರಣೆ ಬಯಸಿದ್ದನ್ನು ಕಾಣುತ್ತೇವೆ. ಅಂತೆಯೇ ಒಂದು ಕುಟುಂಬಕ್ಕೆ ಒಬ್ಬನೇ ಯಜಮಾನ ಎಂಬ ಸಂಪ್ರದಾಯಿಕ ಪುರುಷ ಧೋರಣೆ ಉಳ್ಳವರಾಗಿ ತೋರುತ್ತಾರೆ. ಸಂಪ್ರದಾಯ, ನಂಬಿಕೆ, ಧರ್ಮ, ವ್ರತಾಚರಣೆಗಳಲ್ಲಿ ಬಲವಾದ ನಂಬಿಕೆಯುಳ್ಳ ಸ್ತ್ರೀಗೆ 'ಗಂಡ ಕಣ್ಣಿಗೆ ಕಾಣುವ ದೇವರು' ಆದರೆ, ಕಾದಂಬರಿಕಾರ್ತಿಯರಿಗಿಂತ ಒಂದು ಹೆಜ್ಜೆ ಮುಂದಿಟ್ಟ ಕಾದಂಬರಿಕಾರರು ಸ್ತ್ರೀ ಬಗೆಗೆ ಕಾಳಜಿ, ಕಳಕಳಿ ಅನುಕಂಪವುಳ್ಳವರು. ಅನುಭವಿಸುವ ನೋವು, ಯಾತನೆಗಳನ್ನು ಮಾನವೀಯ ನೆಲೆಯಲ್ಲಿ ಗುರುತಿಸಿದ್ದಾರೆ. ಆದರೆ ಸನಾತನ ವೈದಿಕ ಸಮಾಜದ ಛಾಯೆ ಅವರಲ್ಲಿ ಇನ್ನು ಇರುವುದರಿಂದಲೇ ಸ್ತ್ರೀಯನ್ನು ಸಮಸ್ಯೆಯಿಂದ ಪಾರುಗೊಳಿಸಲು ಪ್ರಯತ್ನಿಸಲಿಲ್ಲವೇನೊ? ಹೀಗಾಗಿ ಸ್ತ್ರೀ ಪುರುಷನನ್ನು ಅವಲಂಬಿಸಿಯೇ ಬದುಕಬೇಕಾಗಿರುವುದರಿಂದ ಇಲ್ಲವೆ ಪುರುಷನ ಹಿಡಿತದಲ್ಲಿಯೇ ಬದುಕನ್ನು ನೂಕಬೇಕಾಗಿದ್ದರಿಂದ ಅವನ ಕೃಪೆಗೆ ಪಾತ್ರಳಾಗುವುದರಲ್ಲಿ ಜೀವನದ ಸಾರ್ಥಕತೆಯನ್ನು ಕಂಡಿದ್ದಾಳೆ.

ಇಂತಹ ಹಲವು ಸ್ತ್ರೀ ಪಾತ್ರಗಳನ್ನು ಇಲ್ಲಿಯ ಕಾದಂಬರಿಯಲ್ಲಿ ಕಾಣುತ್ತೇವೆ. ಇವರ್ಯಾರು ಸ್ವತಂತ್ರವಾದ ಆಸೆ, ಅಭಿಲಾಷೆ ಉಳ್ಳವರಲ್ಲ. ಅವೆಲ್ಲವನ್ನೂ ಪರರ ಸುಖಕ್ಕಾಗಿ ಹೃದಯದಾಳದಲ್ಲಿ ಅದುಮಿಟ್ಟುಕೊಂಡಿದ್ದಾರೆ. ಆದರೆ ಕೆಲ ವಿದ್ಯಾವಂತ, ವಿಚಾರವಂತ ಸ್ತ್ರೀಯರು ಪುರುಷ ಧೋರಣೆಯನ್ನು ವಿರೋಧಿಸಿ, ಪುರುಷ ಪ್ರಧಾನ ಮೌಲ್ಯಗಳಲ್ಲಿಯ ದೋಷಗಳನ್ನು ಬಹುನಯವಾಗಿ ಹೊರಗೆಳಾದಾಗಲೂ ಕೂಡಾ ಆತನಿಂದ ಸ್ವತಂತ್ರವಾಗಿ ಬಾಳಲಾಗಿಲ್ಲ.

ಒಟ್ಟಾರೆಯಾಗಿ ಸ್ತ್ರೀ ಸಮಾಜ ಪುರುಷನ ಆದೇಶ ಪಾಲನೆಯ ಅನಿವಾರ್ಯತೆಯಲ್ಲಿ ಬದುಕು ಸಾಗಿಸಿದೆ. ಈ ನೆಲೆಯಲ್ಲಿ ಸ್ವಾತಂತ್ರ್ಯಪೂರ್ವದ ಸ್ತ್ರೀಯರು ಧರ್ಮ, ಆಚರಣೆ, ಜೀವನ ಶ್ರದ್ಧೆಯಿಂದಾದ ನೈಜ ಬದುಕನ್ನು ಅಪ್ಪಿಕೊಂಡಿದ್ದಾರೆ. ಇಲ್ಲಿಯ ಹೆಚ್ಚಿನ ಕಾದಂಬರಿಕಾರರು

ಸ್ತ್ರೀಯನ್ನು ನೋಡುವ ದೃಷ್ಟಿಕೋನ ಬೇರೆಯಾದರೂ ಅವರೆಲ್ಲರ ಗುರಿ ಮಾತ್ರ ಒಂದೇ. ಅವಳಿಗೆ ಸಮಸ್ಯೆಯಾಗಿ ಪರಿಣಮಿಸಿರುವ ಸಂಪ್ರದಾಯ, ಆಚರಣೆಗಳ ಬೇರುಗಳನ್ನು ಕತ್ತರಿಸಿದರು. ಸ್ತ್ರೀಯು ತಮ್ಮಂತೆಯೇ ಒಂದು ಜೀವ ಎಂದು ಪರಿಗಣಿಸಿದವರಾದರೂ ಒಂದು ಸೀಮಿತ ನೆಲೆಯಲ್ಲಿ ಆದರ್ಶ ಸ್ತ್ರೀಯಾಗಿ ಬಾಳಬೇಕೆಂಬ ಪುರುಷ ಧೋರಣೆಯುಳ್ಳವರಾಗಿಯೇ ತೋರಿದ್ದಾರೆ.

**ಕೊನೆ ಟಿಪ್ಪಣಿಗಳು**

೧. ನಾಯಕ ವಿನಯಾ ಜಿ., **'ಕನ್ನಡದಲ್ಲಿ ಮಹಿಳಾ ಸಾಹಿತ್ಯದ ವಿಕಾಸ ಘಟ್ಟಗಳು'**, ೧೯೯೬, ಪು.೭೪.

೨. ಅದೇ, ಪು.೮೭.

೩. ಮಿರ್ಜಿ ಅಣ್ಣರಾಯ, **'ನಿಸರ್ಗ'**, ಪು.೧೨.

೪. ಅದೇ, ಪು.೪

೫. ಶಿವರಾಮ ಕಾರಂತ, **'ಮರಳಿಮಣ್ಣಿಗೆ'**, ಪು.೪೬.

೬. ಶಿವರಾಮ ಕಾರಂತ, **'ಸರಸಮ್ಮನ ಸಮಾಧಿ'**, ಪು.೧.

೭. ಅದೇ, ಪು.೧೮.

೮. ಗುಲ್ವಾಡಿ ವೆಂಕಟರಾಯ, **'ಇಂದಿರಾಬಾಯಿ'**, ಪು.೯೫.

೯. ಕಲ್ಯಾಣಮ್ಮ ಆರ್., **'ನಿರ್ಭಾಗ್ಯ ವನಿತೆ'**, ಪು.೨೮೦.

೧೦. ಹಲಸಂಗಿ ಗೆಳೆಯರು, **'ಹಲಸಂಗಿ ಹಾಡು'**, ಪು.೭೧.

೧೧. ಸುಮಿತ್ರಾಬಾಯಿ ಬಿ.ಎನ್., **'ಕುವೆಂಪು ಅವರ ಕಾದಂಬರಿಗಳಲ್ಲಿ ಸ್ತ್ರೀತ್ವದ ಪ್ರತೀಕ'**, ಶತಮಾನದ ವಿಮರ್ಶೆ, ಪು.೨೬೨.

೧೨. ಶಿಂತ್ರಿ ಸರೋಜಿನಿ, **'ಸ್ತ್ರೀ ವಿಮೋಚನಾವಾದಿ ಮೇರಿ ಮಾಲಸ್ಟನ್ ಕ್ರಾಫ್ಟ್‌ನ ಕೆಲವು ವಿಚಾರಗಳು'**, ಮಹಿಳಾ ಅಧ್ಯಯನ, ಪು.೬೩.

೧೩. ಕಲ್ಯಾಣಮ್ಮ ಆರ್., **'ನಿರ್ಭಾಗ್ಯ ವನಿತೆ'**, ಕಲ್ಯಾಣ ಸರಸ್ವತಿ, ಪು.೯೭೪.

೧೪. ಗುಲ್ವಾಡಿ ವೆಂಕಟರಾಯ, **'ಇಂದಿರಾಬಾಯಿ'**, ಪು.೨೨೪.

೧೫. ಕುವೆಂಪು, **'ಮಲೆಗಳಲ್ಲಿ ಮದುಮಗಳು'**, ಪು.೧೨೯.

೧೬. ತಿರುಮಲಾಂಬಾ, **'ಮಾತೃ ನಂದಿನಿ'**, ಪು.೩೪.

೧೭. ಅದೇ, **'ಸುಶೀಲೆ'**, ಪು.೨೬.

೧೮. ಕುವೆಂಪು, **'ಮಲೆಗಳಲ್ಲಿ ಮದುಮಗಳು'**, ಪು.೭೦.

೧೯. ಅದೇ, ಪು.೭೦.

೨೦. ಶಿವರಾಮಕಾರಂತ, **'ಮರಳಿ ಮಣ್ಣಿಗೆ'**, ಪು.೧೯೭.

೨೧. ಗುಲ್ವಾಡಿ ವೆಂಕಟರಾಯ, **'ಇಂದಿರಾಬಾಯಿ'**, ಪು.೧೬೪.

೨೨. ತಿರುಮಲಾಂಬಾ, **'ನಭಾ'**, ಪು.೧೨.

೨೩. ಅದೇ, ಪು.೨೪.

೨೪. ತಿರುಮಲಾಂಬಾ, **'ಮಾತೃನಂದಿನಿ'**, ೨೨೪

೨೫. ಅದೇ, ಪು.೨೨೪

೨೬. ಕಲ್ಯಾಣಮ್ಮ ಆರ್., **'ನಿರ್ಭಾಗ್ಯ ವನಿತೆ'**, ಪು.೯

೨೭. ಅದೇ, ಪು.೩೦೦

೨೬. ಶಿವರಾಮಕಾರಂತ, **'ಮರಳಿಮಣ್ಣಿಗೆ'**, ಪು.೧೭.

೨೭. ತಿರುಮಲಾಂಬಾ, **'ಮಾತೃನಂದಿನಿ ಕಾದಂಬರಿ'**, ಪು.೨೮

೨೮. ಬಿ.ಎನ್.ಸುಮಿತ್ರಾಬಾಯಿ(ಸಂ), **'ಕಲ್ಯಾಣ ಸರಸ್ವತಿ'**, ಪು.೩೨೬

೨೯. ಅದೇ, ಪು.೩೩೧

೩೦. ಅದೇ ಪು.೩೩೩

೩೧. ಅದೇ ಪು.೩೩೪

೩೨. ಅದೇ, ಪು.೩೩೪

೩೩. ಅದೇ, ಪು.೩೪೧

೩೪. ಅದೇ, ಪು.೩೪೨

೩೫. ಅದೇ, ಪು.೩೪೩

೩೬. ಅದೇ, ಪು.೩೪೩

೩೭. ಆರ್.ಕಲ್ಯಾಣಮ್ಮ, **'ಪ್ರಿಯಂವದ'**, ಪೀಠಿಕೆ

೩೮. ಅದೇ, ಪು.೩೯-೪೦

೩೯. ಬಿ.ಎನ್.ಸುಮಿತ್ರಾಬಾಯಿ(ಸಂ), **'ಕಲ್ಯಾಣ ಸರಸ್ವತಿ'**, ಪು.೨೨

೪೦. ಅದೇ, ಪು.೩೩

೪೧. ಅದೇ, ಪು.೧೯

೪೨. ಅದೇ, ಪು.೨೫

೪೩. ಆರ್.ಕಲ್ಯಾಣಮ್ಮ, **'ಸುಖಲತಾ'**, ಪು.೫೦

೪೪. ಅದೇ, ಪು.೧೮೩

೪೫. ಅದೇ, ಪು.೧೮೬

೪೬. ಅದೇ, ಪು.೧೮೮

೪೭. ಬಿ.ಎನ್.ಸುಮಿತ್ರಾಬಾಯಿ(ಸಂ), **'ಕಲ್ಯಾಣ ಸರಸ್ವತಿ'**, ಪು.೧೮೭

೪೮. ಅದೇ, ಪು.೧೮೯

೪೯. ಅದೇ, ಪು.೨೦೩

೫೦. ಅದೇ, ಪು.೨೦೫

೫೧. ಅದೇ, ಪು.೨೧೦

೫೨. ಅದೇ, ಪು.೨೧೫

೫೩. ಅದೇ, ಪು.೨೨೦

೫೩. ಅದೇ, ಪು.೨೨೫

## ಅಧ್ಯಾಯ ಏಳು

# ಕಾದಂಬರಿಗಳಲ್ಲಿ ಸ್ತ್ರೀ ಜೀವನ ಚಿತ್ರಣ

೭.೧. ಸಾಮಾಜಿಕ ನೆಲೆ

೭.೨. ಕೌಟುಂಬಿಕ ನೆಲೆ

೭.೩. ಧಾರ್ಮಿಕ ನೆಲೆ

## ಅಧ್ಯಾಯ ಏಳು

# ಕಾದಂಬರಿಗಳಲ್ಲಿ ಸ್ತ್ರೀ ಜೀವನ ಚಿತ್ರಣ

ಆಧುನಿಕ ಕನ್ನಡ ಸಾಹಿತ್ಯದ ಮೊದಲ ಘಟ್ಟದಲ್ಲಿ ಕಾದಂಬರಿ ಪ್ರಕಾರ ಅತ್ಯಂತ ಜನಪ್ರಿಯ ಮಾಧ್ಯಮವಾಗಿತ್ತು. ಕನ್ನಡದಲ್ಲಿ ಕಾದಂಬರಿ ಸಾಹಿತ್ಯವು ರಚನೆಯಾದದ್ದು ಪಾಶ್ಚಾತ್ಯ ಪ್ರಭಾವದಿಂದಲೇ. ಆಧುನಿಕ ಜೀವನ ಸಮಸ್ಯೆಗಳನ್ನು ಕುರಿತು ಸಾಮಾಜಿಕ ಜಾಗೃತಿಯನ್ನುಂಟು ಮಾಡಲು ಕನ್ನಡದ ಲೇಖಕರ ಕಾದಂಬರಿಯನ್ನು ಆಯ್ಕೆ ಮಾಡಿಕೊಂಡರು. ಮೊದಮೊದಲು ಪೌರಾಣಿಕ ಮತ್ತು ಐತಿಹಾಸಿಕ ವಸ್ತುವನ್ನಾಧರಿಸಿ ಕಾದಂಬರಿಗಳನ್ನು ರಚಿಸಿದರು. ಅನಂತರ ಸಾಮಾಜಿಕ ವಸ್ತುವಿನ ಕಡೆಗೆ ಅವರು ದೃಷ್ಟಿ ಹರಿಸಿದರು. ಇದರಿಂದಾಗಿ ಸಮಕಾಲೀನ ಜೀವನದ ಚಿತ್ರಣ ಕನ್ನಡ ಕಾದಂಬರಿಗಳಲ್ಲಿ ಪ್ರವೇಶ ಪಡೆಯಿತು.

ಸ್ವಾತಂತ್ರ್ಯಪೂರ್ವ ಕನ್ನಡ ಕಾದಂಬರಿಗಳಲ್ಲಿ ದಾಖಲುಗೊಂಡಿರುವ ಸ್ತ್ರೀ ಜೀವನದ ವಿವಿಧ ಮುಖಗಳನ್ನು ಪರಿಚಯಿಸುವುದು ಇಲ್ಲಿ ಮುಖ್ಯವಾಗಿದೆ. ನಮ್ಮ ನಡುವೆ ಪುರುಷ ಪ್ರಧಾನ ಸಮಾಜವಿದ್ದರೂ ಈ ಸಮಾಜ ಸ್ತ್ರೀಯನ್ನು ನಡೆಸಿಕೊಂಡಿರುವ ರೀತಿಯನ್ನು ತಿಳಿಯಲು ಕನ್ನಡ ಕಾದಂಬರಿಗಳು ನೆರವಾಗಬಲ್ಲವು. ಪುರುಷನಿಂದ ಕಡೆಗಣಿಸಲ್ಪಟ್ಟಿದ್ದರೂ ಒಟ್ಟಾರೆ ಜೀವನದಲ್ಲಿ ಪುರುಷನಿಗೆ ಹೆಗಲಾಗಿ ನಿಂತು, ಪುರುಷನ ಮಹತ್ಕಾರ್ಯಗಳಲ್ಲಿ ಸಹಾಯಕಳಾಗುವವಳು ಮಹಿಳೆಯೇ. ಆಕೆ ಸಾಮಾನ್ಯ ನೆಲೆಯಲ್ಲಿ ಪುರುಷಾವಲಂಬಿಯಾಗಿ ಕಂಡಲ್ಲಿ ಜೀವಿತದ ಸಂದಿಗ್ಧ ಪರಿಸ್ಥಿತಿಗಳಲ್ಲಿ ತನ್ನ ವೈಶಿಷ್ಟ್ಯತೆಯನ್ನು ತೋರಿಸಬಲ್ಲವಳಾಗಿದ್ದಾಳೆಂಬುದನ್ನು ಕಾದಂಬರಿಕಾರರು ತಮ್ಮ ಕೃತಿಗಳಲ್ಲಿ ಪ್ರಸ್ತಾಪಿಸಿದ್ದಾರೆ. ಈ ದೃಷ್ಟಿಯಿಂದ ಸ್ವಾತಂತ್ರ್ಯ ಪೂರ್ವ ಕನ್ನಡ ಕಾದಂಬರಿಗಳಲ್ಲಿನ ಸ್ತ್ರೀ ಜೀವನದ ವಿವಿಧ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

೧. ಸಾಮಾಜಿಕ ನೆಲೆ

೨. ಕೌಟುಂಬಿಕ ನೆಲೆ

೩. ಧಾರ್ಮಿಕ ನೆಲೆ

ಸ್ತ್ರೀಯನ್ನು ಚಿತ್ರಿಸಿರುವ ಬಗೆಯನ್ನು ಕುರಿತು ಹಾಗೂ ಸ್ತ್ರೀ ಜೀವನದ ವಿವಿಧ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

**೭.೧. ಸಾಮಾಜಿಕ ನೆಲೆ**

ಮಹಿಳೆಯನ್ನು ಮೂಲಭೂತವಾಗಿ ಈ ಸಮಾಜ ನೋಡುವುದೇ ಎರಡು ಪ್ರಮುಖ ಪಾತ್ರಗಳಲ್ಲಿ. ಒಂದು ಹೆಂಡತಿಯಾಗಿ, ಮತ್ತೊಂದು ತಾಯಿಯಾಗಿ. ಸ್ತ್ರೀಯ ಜೈವಿಕ ರಚನೆಯ ಕಾರಣದಿಂದಾಗಿ ಆಕೆ ಮಕ್ಕಳನ್ನು ಹೇರುವ, ಹೊರುವ ಕೆಲಸಗಳನ್ನು ಮಾಡುತ್ತಾಳೆ. ಇವೇ ಕಾರಣವನ್ನು ಮುಂದಿಟ್ಟು, ಆಕೆಯನ್ನು ಸಕ್ರಿಯವಾಗಿ ಸಾಮಾಜಿಕ ಜೀವನದಿಂದಲೇ ದೂರವಿಡುವುದು ಸಂಸ್ಕೃತಿ ನಿರ್ಮಿತ ಒಂದು ಪರಿಸ್ಥಿತಿ. "ಅನೇಕ ಸಮುದಾಯಗಳಲ್ಲಿ ಸ್ತ್ರೀಯರು ದೈಹಿಕವಾಗಿ ಅತ್ಯಂತ ಕಷ್ಟಕರವಾದಂಥ ಕೆಲಸಗಳನ್ನು ನಿರ್ವಹಿಸುತ್ತಿದ್ದರೂ ಅವರಿಗೆ ದುರ್ಬಲರು, ಶಕ್ತಿ ಹೀನರು, ಮೃದು ಮುಂತಾದ ಪಟ್ಟಗಳನ್ನು ಕಟ್ಟಿ, ಅವರನ್ನು ಎರಡನೇ ದರ್ಜೆ ಪ್ರಜೆಗಳಂತೆ ನಡೆಸಿಕೊಂಡು ಬರುತ್ತಾರೆ."[೧] ಲಿಂಗಾಧಾರಿತ ಸಾಮಾಜಿಕರಣ ವ್ಯವಸ್ಥೆಯನ್ನು ಸಮಾಜದಲ್ಲಿರುವ ಎಲ್ಲಾ ಸಂಸ್ಥೆಗಳಲ್ಲೂ ಕಾಣಬಹುದು.

**೭.೧.೧. ಜಾತಿ ವ್ಯವಸ್ಥೆ**

ಭಾರತೀಯ ಸಮಾಜದಲ್ಲಿ ತೀವ್ರ ಸ್ವರೂಪದ ಅಸಮಾನತೆಗಳನ್ನು ಸೃಷ್ಟಿಸಿರುವ ವ್ಯವಸ್ಥೆಯೆಂದರೆ ಜಾತಿ. ಜಾತಿ ಎನ್ನುವುದು ಒಂದು ಶ್ರೇಣೀಕೃತ ವ್ಯವಸ್ಥೆ. ಮೊಟ್ಟ ಮೊದಲು ಸಮಾಜದ ಬೆಳವಣಿಗೆಯಲ್ಲಿ ಸ್ತ್ರೀ ಪುರುಷ ಎನ್ನದೇ ಕಾಯಕದಲ್ಲಿ ನಿರತರಾಗಿದ್ದರು. ದಿನಗಳು ಉರುಳಿದಂತೆ ವರ್ಣ, ವರ್ಗಗಳು ಸೃಷ್ಟಿಯಾಗಿ ಗಟ್ಟಿಗೊಳ್ಳುತ್ತಾ ಕ್ರಿಯೆಯ ಆಧಾರ ಮೇಲೆ ಜಾತಿಗಳಾಗಿ ವಿಂಗಡಿಸಲ್ಪಟ್ಟವು. ಜಾತಿ ವ್ಯವಸ್ಥೆಯಿಂದಾಗಿ ಆಯಾ ಜಾತಿಯ ಸ್ತ್ರೀಯ ಬದುಕು ಮತ್ತಷ್ಟು ದುಸ್ತರವಾಯಿತು. ಈ ಜಾತಿ ಬೇಧದಿಂದ ಸ್ಪೃಶ್ಯ ಸ್ತ್ರೀಯರಿಗೆ ಸಮಸ್ಯೆಯಾಗಲಿಲ್ಲ. ಆದರೆ ಆರ್ಥಿಕವಾಗಿ ಜರ್ಜಿತರಾದ ಅಸ್ಪೃಶ್ಯರಾದ ವೈಶ್ಯ ಹಾಗೂ ಸ್ತ್ರೀಯರಿಗೆ ಅಘೋರವಾದ ಸಮಸ್ಯೆಯಾಗಿ ಕಾಡಿದೆ. 'ಕಾನೂನು ಹೆಗ್ಗಡಿತಿ' ಕಾದಂಬರಿಯ ಗೌಡರ ಮಗಳಾದ ಪುಟ್ಟ ಮಗಳು ಲಕ್ಷ್ಮೀ ಜಾತಿ ಎಂದರೇನು? ಎಂಬುದನ್ನರಿಯದ ಮುಗ್ಧ ಹಸುಳೆ. ತಮ್ಮ ಮನೆಯ ಜೀತದ ಆಳು ಹೊಲೆಯನ ಮಗುವನ್ನು ಎತ್ತಿಕೊಳ್ಳಲು ಆಶಿಸಿದಾಗ, ಮಗುವನ್ನು ಕೊಟ್ಟರೆ ಎಲ್ಲಿ ದೊಡ್ಡ

ಪ್ರಮಾದವಾದೀತೋ ಎಂದು ಹೆದರಿಕೊಳ್ಳುವುದು ಜಾತಿ ಎಂಬುದರ ಪರಿಣಾಮವಾಗಿಯೇ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಹೆಗಡೆಯವರು ಇದಕ್ಕೆ ಸಾಕ್ಷಿಯಾಗುತ್ತಾರೆ. ಆದರೆ ಬದುಕಿಗಾಗಿ ಜಮೀನ್ದಾರರನ್ನು ನೆಚ್ಚಿಕೊಂಡ ದಲಿತರಿಗೆ ಸ್ವಾತಂತ್ರ್ಯವೆಂಬುದು ಇರಲಿಲ್ಲ. ಕುವೆಂಪು ದಲಿತರನ್ನು ಕಂಡು ಗ್ರಹಿಸಿರುವಂತೆ "ಒಡೆಯರ ಆಸ್ತಿಯಾಗಿದ್ದ ಅವರನ್ನು ಯಾರಿಗೆ ಕೊಡಬೇಕು, ಎಲ್ಲಿಗೆ ಕೊಡಬೇಕು ಎಂಬುದನ್ನು ತಾಯಿ-ತಂದೆಗಳು ನಿರ್ಧರಿಸಲು ಸಾಧ್ಯವೇ? ತಮ್ಮ ಜಾನುವಾರುಗಳನ್ನು ಬೀಕರ ಮಾಡುವ ಹಕ್ಕು ಎಂತೋ ಅಂತೆಯೇ ಬೇಡರು, ಹೊಲೆಯರು, ಮಾದಿಗರು, ಮೊದಲಾದವರು ತಮ್ಮ ಹೆಣ್ಣು, ಗಂಡು ಜೀತದಾಳುಗಳನ್ನು ಇಡುವ, ಕೊಡುವ, ಬಿಡುವ ಹಕ್ಕು ಅವರದೇ ತಾನೇ?"[೨] ಜಮೀನ್ದಾರಿ ಪದ್ಧತಿ ಜಾರಿಯಲ್ಲಿದ್ದ ಅಂದಿನ ದಿನಗಳಲ್ಲಿ ಜಾತಿಯಿಂದ ಕೀಳಾದ ಹೆಣ್ಣು ಮಕ್ಕಳು ಗೌಡರು ತೋರಿಸಿದವನನ್ನು ಮಾತ್ರ ಮದುವೆಯಾಗಬೇಕಿತ್ತು.

ಇಂತಹ ಕಟ್ಟುನಿಟ್ಟಿನ ಜಾತಿ ವ್ಯವಸ್ಥೆಯಲ್ಲಿ ದುಡಿಮೆಯನ್ನೆ ನಂಬಿದ್ದ ಸ್ತ್ರೀ, ಮತ್ತೋರ್ವ ಸ್ತ್ರೀಯನ್ನು ಕಂಡ ರೀತಿ ಮೆಚ್ಚುವಂಥದ್ದು. 'ಮರಳಿ ಮಣ್ಣಿಗೆ' ಕಾದಂಬರಿಯ ಸರಸ್ವತಿ, ಪಾರ್ವತಿ ಮತ್ತು ನಾಗವೇಣಿಯರು ಬ್ರಾಹ್ಮಣ ಸ್ತ್ರೀಯರಾದರೂ ಕೂಡ ಹೊಟ್ಟೆ ಪಾಡಿಗಾಗಿ ಭೂಮಿಯನ್ನು ನೆಚ್ಚಿಕೊಂಡು ಬದುಕಿದವರು. ಅಂತೆಯೇ ಹೊಲಗದ್ದೆಗಳಲ್ಲಿ ದುಡಿಯುವಾಗ ಶೂದ್ರ ಸ್ತ್ರೀಯರನ್ನು ಬಹು ಆತ್ಮೀಯತೆಯಿಂದ ಕಂಡಿದ್ದಾರೆ. ಹೊಲೆಯ ಸೂರನ ಹೆಂಡತಿ ಬಚ್ಚಿ ಬ್ರಾಹ್ಮಣ ಸ್ತ್ರೀ ನಾಗವೇಣಿಯ ಜೊತೆಗೆ ಮುಕ್ತವಾಗಿ ಮಾತಿನಲ್ಲಿ ತೊಡಗಿರುವಾಗ ತಾನೂ ಶೂದ್ರಳೆನ್ನುವ ಕಲ್ಪನೆಯೇ ಬರದು. ಅಷ್ಟೇ ಅಲ್ಲಾ ನಾಗವೇಣಿಯ ಚಿಂತಾಜನಕ ಸ್ಥಿತಿಗಾಗಿ ಮರಗುತ್ತಾಳೆ."[೩] ಈ ತೆರನಾದ ಅಂಶಗಳನ್ನು 'ಕಾನೂರು ಹೆಗ್ಗಡತಿ' ಕಾದಂಬರಿಯ ನಾಗಮ್ಮ ಸುಬ್ಬಮ್ಮರಲ್ಲಿ ಕಾಣುತ್ತೇವೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಜಟ್ಟಮ್ಮ, ದೇವಮ್ಮ, ಚಿನ್ನಮ್ಮ ಅವರೊಂದಿಗೆ ಬಿಲ್ಲ ಜನಾಂಗದ ಪಿಂಚಲು, ಅಕ್ಕಣ್ಣಿ, ಧ್ಯೇಯಿ ಮತ್ತು ಶೂದ್ರರಾದ ಸೆಸಿ, ಗಿಡ್ಡಿ, ಸಿದ್ದಿ, 'ಜೋಮನ ದುಡಿ' ಕಾದಂಬರಿಯ ಬೆಳ್ಳಿ ಮುಂತಾದವರು ಜಾತಿ ಬೇಧವನ್ನು ಮರೆತು ಬೆರೆಯುತ್ತಿದ್ದರು. ಇನ್ನು ಒಂದು ಹೆಜ್ಜೆ ಮುಂದುವರೆದು ಹೇಳುವುದಾದರೆ ಒಕ್ಕಲಿಗರ ಸುಬ್ಬಣ್ಣ, ಹೆಗಡೆಯ ಮಗಳು ಚಿನ್ನಮ್ಮ ಹಾಗೂ ಮುಕುಂದಯ್ಯ ಒಂದುಗೂಡಿಸುವಲ್ಲಿ ಪಿಂಚಲು ಮತ್ತು ಐತನ ಕಾರ್ಯ ಶ್ಲಾಘನೀಯವಾದುದು.

ಒಟ್ಟಾರೆ ಸ್ವಾತಂತ್ರ್ಯ ಪೂರ್ವದ ಸಮಾಜ ಜಾತಿಯತೆಯ ಬೇರುಗಳಿಂದ ಗಟ್ಟಿಗೊಂಡಂತಿದ್ದರೂ ಸ್ತ್ರೀಯರ ಸಂಬಂಧಗಳ ವಿಷಯದಲ್ಲಿ ಸ್ವಲ್ಪಮಟ್ಟಿಗೆ ಸಡಿಲವಾಗಿತ್ತು. ಕಾರಣ ಸ್ತ್ರೀಯರು ಒಟ್ಟಾಗಿ ದುಡಿಯುವ ಸಮಯದಲ್ಲಿ ಜಾತಿ ಎಂಬುದು ಅಷ್ಟಾಗಿ ಕಾಡಲಿಲ್ಲವೆಂಬುದು ಸಮಾಧಾನ ತರುವ ಸಂಗತಿ.

## ೭.೧.೨. ಲಿಂಗಬೇಧ

"ಹೆಣ್ಣು ಮಗು ತಾಯಿಯ ಗರ್ಭದಲ್ಲಿರುವಾಗಲೇ ಲಿಂಗಭೇದ ತಾರತಮ್ಯಕ್ಕೆ ಒಳಗಾಗುತ್ತದೆ. ಸಾಮಾನ್ಯವಾಗಿ ಹೆಣ್ಣು, ಗಂಡು ಎಂಬ ಭೇದಭಾವ ಸೃಷ್ಟಿಯಾಗುವುದು ಕುಟುಂಬದ ಒಳಗಡೆಯೇ."[೪] ಹೆಣ್ಣಾಗಿ ಹುಟ್ಟಿದ್ದಕ್ಕೆ ಎದೆ ಹಾಲಿನಿಂದಲೂ ವಂಚಿತಳಾಗುವ ಹೀನಾಯ ಸ್ಥಿತಿಗೆ ಸಿಲುಕಿ ಒದ್ದಾಡುವಂತಾಗಿದೆ. ಬಿ.ಎನ್.ಸುಮಿತ್ರಾಬಾಯಿ ಗ್ರಹಿಸಿರುವಂತೆ "ಸ್ತ್ರೀ ಮತ್ತು ಪುರುಷರು ಕೆಲವು ವಿಷಯಗಳಲ್ಲಿ ಭಿನ್ನವಾದರೂ ಜ್ಞಾನ ಬುದ್ಧಿ ಮುಂತಾದವುಗಳು ಮಾತ್ರ ಇಬ್ಬರಿಗೂ ಸಮಾನವಾಗಿಯೇ ಇರುವುವು. ಆದ್ದರಿಂದ ಜ್ಞಾನಾಭಿವೃದ್ಧಿಯೂ ಪುರುಷರಿಗೆ ಹೇಗೋ ಸ್ತ್ರೀಯರಿಗೂ ಹಾಗೆಯೇ ಪರಮ ಪ್ರಯೋಜನಕಾರಿ ಎನ್ನುವುದರಲ್ಲಿ ಸಂದೇಹವಿಲ್ಲ."[೫] ಈ ಹೇಳಿಕೆಯನ್ನು ಅರಿತುಕೊಂಡರೆ ಲಿಂಗಭೇದದ ಸಮಸ್ಯೆಯೇ ಕಾಣಿಸದು. ಆದರೆ ಇದಕ್ಕೆ ವಿರುದ್ಧವಾಗಿ ಹೆಣ್ಣನ್ನು ಮಗುವಾಗಿದ್ದಾಗಿನಿಂದಲೇ ಮಾನಸಿಕವಾಗಿ, ಬೌದ್ಧಿಕವಾಗಿ ಶಕ್ತಿಗುಂದಿಸುವ ತಂದೆ-ತಾಯಿಗಳ ಸಂಖ್ಯೆ ಹೆಚ್ಚಾಗಿದೆ.

'ಇಂದಿರಾಬಾಯಿ' ಕಾದಂಬರಿಯ ಅಂಬಾಬಾಯಿ ಮತ್ತು ಭೀಮರಾಯ ಸಂತಾನಕ್ಕಾಗಿ ಅಂಗಲಾಚಿದವರು, ಎಷ್ಟೋ ವರ್ಷಗಳ ನಂತರ ಜನಿಸಿದ ಮಗು ಗಂಡು ಎಂದಾಗ ಖುಷಿಯಾದ ಭೀಮರಾಯ ಹೆಣ್ಣು ಮಗುವನ್ನು ನೋಡುತ್ತಲೇ ಅಸಂತುಷ್ಟನಾಗುವುದು ಲಿಂಗಭೇದ ನೀತಿಯೇ ಸರಿ ಹಾಗೂ 'ಇಂದಿರಾಬಾಯಿ' ಕಾದಂಬರಿಯ ಇಂದಿರಾಬಾಯಿ ಓದಿಗೆ ತಂದೆ-ತಾಯಿಗಳೇ ಅಡ್ಡಿಯಾದರು. 'ಮರಳಿ ಮಣ್ಣಿಗೆ' ಕಾದಂಬರಿಯ ನಾಗವೇಣಿ ೧೦ನೇ ತರಗತಿವರೆಗೆ ಇಂಗ್ಲಿಷ್ ಮಾಧ್ಯಮದಲ್ಲಿ ಓದಿ ಪಾಸಾದವಳು. ಇಂಥವಳನ್ನು ಸೊಸೆಯನ್ನಾಗಿ ತಂದುಕೊಂಡ ರಾಮೈತಾಳರು "ಹೆಣ್ಣು ಮಕ್ಕಳಿಗೆ ಯಾವ ಮಣ್ಣಿಗೆ ಇಂಗ್ಲಿಷ್"[೬] ಎಂದು ವಿರೋಧಿಸುತ್ತಲೇ ತನ್ನ ಮಗ ಲಚ್ಚನಿಗೆ ಇಂಗ್ಲಿಷಿನಲ್ಲಿಯೇ ಓದನ್ನು ಮುಂದುವರೆಸಲು ಪ್ರೋತ್ಸಾಹಿಸುವುದು ನಾಗವೇಣಿ ಹೆಣ್ಣು ಎಂಬ ಕಾರಣಕ್ಕಾಗಿಯೇ 'ಸರಸಮ್ಮನ ಸಮಾಧಿ' ಕಾದಂಬರಿಯ ಸುನಾಲಿನಿ ಇಂಗ್ಲಿಷ್ ಕಲಿತವಳು ಎಂಬ ಕಾರಣಕ್ಕಾಗಿ ಗಂಡ ಮತ್ತು ಅತ್ತೆಯ ತಿರಸ್ಕಾರಕ್ಕೆ ಕಾರಣಳಾಗುತ್ತಾಳೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯ ಪುಟ್ಟಮ್ಮ ಓದಿನಿಂದ ವಂಚಿತಳಾದರೆ ಸೀತೆ ಸ್ವಲ್ಪಮಟ್ಟಿಗೆ ಅಕ್ಷರಜ್ಞಾನ ಪಡೆದಿರುವುದು ಒಕ್ಕಲಿಗರ ಮನೆತನದಲ್ಲಿ ಇತಿಹಾಸವೇ ಸರಿ.

ಮದುವೆಯ ವಿಚಾರದಲ್ಲಂತೂ ಹೆಣ್ಣು ಮಕ್ಕಳು ಬಾಯಿ ಬಿಡುವಂತೆಯೇ ಇರಲಿಲ್ಲ. 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಅಣ್ಣ ರಾಮೈತಾಳರ ಲಿಂಗಭೇಧದ ನೀತಿಗಾಗಿ ತಂಗಿ ಸರಸ್ವತಿಗೆ ಹೇಳುತ್ತಾನೆ 'ನನಗೇಕೆ ಹೆಣ್ಣು ಹೆಂಗಸಿಗೆ' ಎಂದು ಸಮಾಧಾನ ಪಡುವಂತಾಗುತ್ತದೆ. ಕಾನೂನು ಹೆಗ್ಗಡಿತಿ ಕಾದಂಬರಿಯ ವಿಧವೆ ನಾಗಮ್ಮ ಇಡೀ ಮನೆತನಕ್ಕೆ ಒಡೆಯಳಾದರೂ

ಆಸ್ತಿಯ ಹಂಚಿಕೆಯ ವಿಷಯದಲ್ಲಿ ಅವಳಿಗೆ ಒಂದು ಮಾತನ್ನು ಕೇಳದೆ ಇರುವುದು ಲಿಂಗ ಭೇದದ ತಾರತಮ್ಯತೆಯಾಗಿದೆ.

### ೭.೧.೩. ಅನೈತಿಕ ಸಂಬಂಧ

"ಆರಂಭದಲ್ಲಿ ಆದಿ ಮಾನವ ಮುಕ್ತವಾದ ಲೈಂಗಿಕ ಪ್ರವೃತ್ತಿಯಲ್ಲಿ ತೊಡಗಿರುತ್ತಿದ್ದನು. ಈ ಪ್ರವೃತ್ತಿ ಕ್ರಮೇಣ, ಲಜ್ಜೆ, ಸಂಕೋಚದ ಮನೋಭಾವನೆಯ ಬೆಳವಣಿಗೆಯಿಂದಾಗಿ ವಿವಾಹದಂಥ ಸಂಸ್ಕೃತಿಯ ಕಟ್ಟಳೆಗೆ ಒಳಗಾಯಿತು."[೭] ಹೀಗೆ ಮಾನವ ಸಹಜವಾದ ಕಾಮ ಮತ್ತು ಲೈಂಗಿಕ ಅಪೇಕ್ಷೆಗೆ ಅಡೆತಡೆಗಳಾದವು. ಮಾನವ ನಿಸರ್ಗದತ್ತ ಮೂಲ ಪ್ರವೃತ್ತಿಯಾದ ಕಾಮ ಮತ್ತು ಲೈಂಗಿಕ ತೃಷೆಯು ಸಾಮಾಜಿಕ, ಧಾರ್ಮಿಕ ನಿರ್ಬಂಧನೆಗಳನ್ನು ಮೀರಿ ಈಡೇರಿಸಿಕೊಳ್ಳುವುದನ್ನು ಅನೈತಿಕ ಸಂಬಂಧವೆಂದು ಕರೆಯಲಾಗಿದೆ. ಒಂದು ಗಂಡು-ಹೆಣ್ಣು ವಿವಾಹದಂಥ ಸಂಸ್ಕಾರಗಳನ್ನು ಮೀರಿ ಒಂದಾಗಿ ಸುಖಪಡುವುದನ್ನು ಅನೈತಿಕ ಲೈಂಗಿಕ ಸಂಬಂಧವೆಂದು ಕರೆಯಲಾದರೂ, ಅನಿವಾರ್ಯತೆಗೆ ಬಲಿಯಾಗುವ ಸಂದರ್ಭಗಳೇ ಹೆಚ್ಚು. ಇದರ ಹಿಂದೆ ಅಡಗಿರುವ ನಿಲುವೆಂದರೆ ಅದುಮಿಟ್ಟ ಭಾವನೆಗಳ ಸ್ಫೋಟವೇ ಇದರ ಜಾತಕ ಶಕ್ತಿ ಎಂಬುದು ಮನಃಶಾಸ್ತ್ರಜ್ಞರ ಅಭಿಪ್ರಾಯ.

ಸ್ವಾತಂತ್ರ್ಯಪೂರ್ವದ ಕನ್ನಡ ಕಾದಂಬರಿಗಳನ್ನು ಪರಿಶೀಲಿಸಿದಾಗ ಲೈಂಗಿಕ ಸಮಸ್ಯೆಯನ್ನು 'ಶೀಲ' ಎಂಬ ಒಡಲಲ್ಲಿ ಬಂಧಿಸಿದೆ. ಇಲ್ಲಿಯ ಮೇಲ್ವರ್ಗ(ಬ್ರಾಹ್ಮಣದ) ಸ್ತ್ರೀಯರಿಗೆ ಶೀಲ ಎಂಬುದು ಪ್ರಶ್ನೆಯಾಗಿ ಕಾಡಿದೆಯಾದರೂ ಗೌಪ್ಯ ಸಂಬಂಧಗಳನ್ನು ಇಟ್ಟುಕೊಂಡಿದ್ದಾರೆಂಬುದನ್ನು ಅಲ್ಲಗಳೆಯಲಾಗದು. ಆದರೆ ಮಧ್ಯಮ ಮತ್ತು ಕೆಳವರ್ಗದ ಸ್ತ್ರೀಯರು ಇದಕ್ಕೆ ಹೊರತಾಗಿದ್ದಾರೆ. ಮಾನವ ಮೂಲ ಪ್ರವೃತ್ತಿಯಾದ ಲೈಂಗಿಕ ಬಯಕೆಯನ್ನು ಈಡೇರಿಸಿಕೊಳ್ಳುವಾಗ ಶೀಲ ಎನ್ನುವುದು ಅವರನ್ನು ಅಷ್ಟು ಕಾಡಿಸಿಲ್ಲ. ಯಾವುದೇ ಸಂದರ್ಭದಲ್ಲಿ ಜಾರಿದ ಹೆಣ್ಣು ಅದರಿಂದ ತನ್ನ ನೈತಿಕ ಬದುಕಿಗೆ ಧಕ್ಕೆ ಬರುವುದೆಂದಾಗ ಅದನ್ನು ಮುಚ್ಚಿಡಲು ಪ್ರಯತ್ನಿಸುತ್ತಾಳೆ. ಈ ನೆಲೆಯಲ್ಲಿ 'ಇಂದಿರಾಬಾಯಿ' ಕಾದಂಬರಿಯ ಅಂಬಾಬಾಯಿಯನ್ನು ಗುರುತಿಸಲು ಸಾಧ್ಯವಿದೆ. ಅಂಬಾಬಾಯಿಯು ಸುಂದರಾಯನ ಹೆಸರನ್ನು ಕೇಳುತ್ತಲೇ ಸಿಡಿಮಿಡಿಗೊಂಡವಳಂತೆ "ಸುಂದರಾಯನು ಜೀವಂತನಾಗಿರುವವರೆಗೆ ನನಗೆ ಸುಖವಿರದು ಅದಲ್ಲದೆ ಅವನು ಬದುಕಿರುವುದು ನಮ್ಮ ಮನೆತನದ ಮುಂದಿನ ವೃದ್ಧಿಗೆ ಅಪಾಯವೇ ಸರಿ"[೮] ಎನ್ನುವಲ್ಲಿ ತನ್ನ ಶೀಲದ ಕುರಿತು ಅವಳಿಗೆ ಶಂಕೆಯಿದೆ. ತನ್ನಿಂದಾದ ತಪ್ಪನ್ನು ಮುಚ್ಚಿಕೊಳ್ಳುವ ಪ್ರಯತ್ನವಿದೆ.

ಇಲ್ಲಿಯ ಸ್ತ್ರೀಯರಿಗೆ ಶೀಲ ಎಂಬುದು ಸಮಸ್ಯೆಯಾಗಿ ಕಾಡಿದ್ದರೂ ಪುರುಷರನ್ನು ಕಾಡಿದಂತಿಲ್ಲ. ಮಾನವನ ಮೂಲಭೂತ ಸಂಬಂಧಗಳಲ್ಲಿ ಒಂದಾದ ಕಾಮ ಸಂಬಂಧ ಸ್ತ್ರೀ

ಪುರುಷ ಇಬ್ಬರಿಗೂ ಸಂಬಂಧಿಸಿದೆ. ಇದನ್ನು ಸರಿಯಾದ ಕಾಲ, ಸಂದರ್ಭಗಳಲ್ಲಿ ಈಡೇರಿಸಿಕೊಳ್ಳದೇ ಹೋದರೆ ಮಾನವನಲ್ಲಿಯ ಸೂಪ್ತ ಪ್ರಜ್ಞೆ ಏನೆಲ್ಲ ಅನಾಹುತಗಳಿಗೂ ಕಾರಣವಾಗುತ್ತದೆ. ಎನ್ನುವ ಮನೋವಿಜ್ಞಾನಿಗಳ ಅಭಿಪ್ರಾಯವನ್ನು ಮನ್ನಿಸಬೇಕಾಗುತ್ತದೆ. ಆದ್ದರಿಂದಲೇ ಇಲ್ಲಿಯ ಸ್ತ್ರೀಯರು ಪ್ರಕೃತಿ ಸಹಜವಾದ ಕಾಮದ ಹಸಿವನ್ನು ವಿರೋಧಿಸಿಲ್ಲ. ಈ ಹಿನ್ನೆಲೆಯಲ್ಲಿ 'ವಿರಾಗಿಣಿ' ಕಾದಂಬರಿಯ ವಿಧವೆ ತುಂಗೆ, 'ಮರಳಿ ಮಣ್ಣಿಗೆ' ಕಾದಂಬರಿಯ ಜಲಜಾಕ್ಷಿ ಅವರನ್ನು ನಿದರ್ಶನವಾಗಿ ನೋಡಬಹುದು. 'ವಿರಾಗಿಣಿ' ಕಾದಂಬರಿಯ ವಿಧವೆ ತುಂಗೆ ಬರೀ ಕಾಮ ಸಂಬಂಧವನ್ನು ಒಪ್ಪಿಕೊಂಡವಳು. ವೈರಾಗ್ಯ ಪರಳಾದ ವಿರಾಗಿಣಿಯ ಬೋಧನೆಗೆ ಪ್ರತಿಕ್ರಿಯೆಯಾಗಿ "....ನಿನ್ನ ಹಿತ ಬೋಧನೆ ನಿನ್ನಲ್ಲೇ ಇರಲಿ ನನಗೆ ದೈನ್ಯ ವೃತ್ತಿಯು ಬೇಕಾಗಿಲ್ಲ. ದೇವರು ಕೊಟ್ಟಿದ್ದನ್ನು ಮನದಣಿಯುವಂತೆ ಅನುಭವಿಸುವೆನಲ್ಲದೆ ಯಾರ ಅಟ್ಟಿಗೂ ತಡೆಯಲೊಲ್ಲೆನು"[೯] ಎನ್ನುವ ತುಂಗೆ ನಿಸರ್ಗ ಸಹಜವಾದ ಬಯಕೆಯನ್ನು ಈಡೇರಿಸಿಕೊಳ್ಳುವಲ್ಲಿ ಸಂಪ್ರದಾಯಿಕ ಕಟ್ಟಳೆಗಳನ್ನೆಲ್ಲ ಮೆಟ್ಟಿ ನಿಲ್ಲುತ್ತಾಳೆ. ಇದೇ ನೆಲೆಯಲ್ಲಿ 'ವಾಗ್ದೇವಿ' ಕಾದಂಬರಿಯ ವಾಗ್ದೇವಿ ಬರೀ ಕಾಮ ಸಂಬಂಧವನ್ನು ಅಪ್ಪಿಕೊಳ್ಳದೇ ಅಧಿಕಾರ, ಅಂತಸ್ತುಗಳಿಗಾಗಿ ಅನೈತಿಕ ಸಂಬಂಧ ಬೆಳೆಸಿದವಳು. ಗಂಡನಿಂದ ಪಡೆಯುವ ಶಾರೀರಿಕ ಸುಖ, ಬಡತನದ ಬೇಗೆ, ಇವುಗಳ ಜೊತೆಗೆ ತಾಯಿಯ ಒತ್ತಡದಿಂದಾಗಿ ತನ್ನಲ್ಲಿ ಹುಟ್ಟುವ ಮಗುವಿಗೆ ಯತಿಪೀಠ ಕೊಡಬೇಕೆಂಬ ವಚನ ಪಡೆದು ಸನ್ಯಾಸಿ ಚಂಚಲನೇತ್ರರ ಬಯಕೆಯನ್ನು ಈಡೇರಿಸಿದವಳು. ಆದರೆ ಕಾಲಕ್ರಮೇಣ ಮಠದ ಮೇಲಿನ ಅಪವಾದಗಳನ್ನು ಮುಚ್ಚಿ ಹಾಕಲು ಸಿಕ್ಕಿದವರಿಗೆಲ್ಲ ತನ್ನ ಮೈಯನ್ನು ಒಪ್ಪಿಸುತ್ತಾಳೆ. ಸಾಲದಕ್ಕೆ ಗಂಡಬಿಟ್ಟ ಚಿಕ್ಕಮ್ಮನ ಮಗಳು ಶೃಂಗಾರಿಯನ್ನು ಕರೆಸಿಕೊಂಡು ಅವಳ ಅನೈತಿಕ ಸಂಬಂಧಕ್ಕೂ ಸಮ್ಮತಿಸುತ್ತಾಳೆ.

ಇದೇ ನೆಲೆಯ 'ನಿಸರ್ಗ' ಕಾದಂಬರಿಯ ಬಂಗಾರಿ, ಸೋನಾ, ಜಾತಿ ಕಟ್ಟಳೆಗಳನ್ನು ಮೀರಿ ಅನೈತಿಕ ಸಂಬಂಧವನ್ನು ಬೆಳೆಸಿದವರು. ಬಂಗಾರಿಯಂತೂ ಮದುವೆಯಾಗದೇನೆ ಅನಂತನೊಂದಿಗೆ ಸಂಬಂಧ ಬೆಳೆಸಿ ಕಾಮ, ಪ್ರೇಮ ಸಂಬಂಧದಲ್ಲಿ ಸಂತೃಪ್ತಳಾಗಿದ್ದರೆ, ಸೋನಾ ಅಪ್ಪಣ್ಣನೊಂದಿಗೆ ಸುಖಪಟ್ಟು ಅವನಿಂದ ಹುಟ್ಟಿದ ಮಗಳು ಚಂಪಿಯನ್ನು ಅಪ್ಪಣ್ಣನ ಮಗಳೆಂದೇ ಹೇಳಿಕೊಳ್ಳುವುದು ಸಾಮಾಜಿಕ ಸಂಪ್ರದಾಯಿಕ ಕಟ್ಟಳೆಗಳನ್ನು ಗಾಳಿಗೆ ತೂರಿದೆ.

ಈ ಮೇಲಿನ ಎಲ್ಲಾ ಸ್ತ್ರೀಯರು ಮೇಲ್ವರ್ಗ(ಬ್ರಾಹ್ಮಣ)ದವರೇ ಆಗಿದ್ದರೂ, ಪ್ರಕೃತಿ ಸಹಜವಾದ ಲೈಂಗಿಕ ಬಯಕೆಯನ್ನು ಕೆಲವರು ರಹಸ್ಯವಾಗಿ ಈಡೇರಿಸಿಕೊಂಡಿದ್ದರೆ, ಕೆಲವರು ಮುಕ್ತವಾಗಿಯೇ ಅನುಭವಿಸಿದ್ದಾರೆ. ಹದಿಹರೆಯದ ಮಧ್ಯಮ ವರ್ಗದ ಯುವತಿಯರು ಅನಿವಾರ್ಯ ಎಂಬಂತೆಯೇ ಪರಪುರುಷನಿಂದ ಲೈಂಗಿಕ ಸುಖ ಪಡೆದಿದ್ದರು. ಅದು ಅನೈತಿಕತೆ ಎಂದು

ಅನಿಸುವುದಿಲ್ಲ. 'ಕಾನೂರು ಹೆಗ್ಗಡಿತಿ' ಕಾದಂಬರಿಯ ಸುಬ್ಬಮ್ಮ, 'ನಿಸರ್ಗ' ಕಾದಂಬರಿಯ ತಾರಾ ಹಾಗೂ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಕಾವೇರಿ ಇದಕ್ಕೆ ಸಾಕ್ಷಿಯಾಗಿದ್ದಾರೆ.

'ಕಾನೂರು ಹೆಗ್ಗಡಿತಿ' ಕಾದಂಬರಿಯ ಸುಬ್ಬಮ್ಮ ಸೇರೆಗಾರ ರಂಗಪ್ಪನ ಕಾಮಚೇಷ್ಟೆಯಿಂದ ಅದುವರೆಗೂ ಸುಪ್ತವಾದ ಲೈಂಗಿಕ ಪ್ರಜ್ಞೆ ಎಚ್ಚೆತ್ತು ರಂಗಪ್ಪನೊಂದಿಗೆ ಸುಖವನ್ನುಂಡ ಮುಗ್ಧತೆ ಸುಬ್ಬಮ್ಮಳದು. ಆದರೆ "ಸ್ವಲ್ಪ ಕಾಲದಲ್ಲಿಯೇ ತಾನು ಗರ್ಭವತಿ ಆಗಿರುವುದಾಗಿ ಸುಬ್ಬಮ್ಮನಿಗೆ ತಿಳಿದು ಭಯದಿಂದ ಬಿಕ್ಕಿ ಬಿಕ್ಕಿ ಅತ್ತಳು"[೧೦] ಅಷ್ಟೇ ಅಲ್ಲ ಸಮಾಜದ ಮುಂದೆ ತಾನೊಬ್ಬ ಅಪರಾಧಿ ಎಂದೇ ತಿಳಿದಿದ್ದಳು. ಸುಬ್ಬಮ್ಮಳಂತೆ ಮುಗ್ಧಳಾದ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಅಂತಕ್ಕಸೆಡ್ತಿಯ ಮಗಳು ಕಾವೇರಿ, ದೇವಯ್ಯ ಗೌಡರೊಂದಿಗೆ ಕಾಮ, ಪ್ರೇಮದ ಅನೈತಿಕ ಸಂಬಂಧವಿಟ್ಟುಕೊಂಡವಳು. ತಮ್ಮ ಜನಾಂಗದ ಕುರೂಪಿ ಕಿಟ್ಟಯ್ಯನಿಗೆ ಕಟ್ಟಿಕೊಂಡ ವಳಾಗಿರುವುದಕ್ಕಿಂತ, ದೇವಯ್ಯನಿಗೆ ಇಟ್ಟುಕೊಂಡವಳಾಗಿರುವುದೇ ಹೆಚ್ಚೆಂದು ಭಾವಿಸಿದವಳು. ಇಂತಿರುವಾಗ ಸಾಬಿಗಳು ಮತ್ತು ಚೀಂಕ್ರನ ಅತ್ಯಾಚಾರದಿಂದ ಈ ಮೈ ಭೂಮಿಯ ಮೇಲಿರುವುದು ಒಳಿತಲ್ಲವೆಂದು ನೊಂದು ಬಾವಿಗೆ ಹಾರಿ ಆತ್ಮಾರ್ಪಣೆ ಮಾಡಿಕೊಳ್ಳುತ್ತಾಳೆ. ಆದರೆ 'ನಿಸರ್ಗ' ಕಾದಂಬರಿಯ ತಾರಾ ಗಂಡನಿಂದ ಪಡೆಯಲಾಗದ ಸುಖವನ್ನು ಒಂದೇ ಒಂದು ಬಾರಿ ತಾನು ಮನಸಾರೆ ಮೆಚ್ಚಿಕೊಂಡ ಅನಂತನಿಂದ ಪಡೆದು ಜೀವನ ಪೂರ್ತಿ ಸಂತೃಪ್ತಿಗೊಂಡಿದ್ದಾಳೆ.

'ಚೋಮನದುಡಿ' ಕಾದಂಬರಿಯ ಬೆಳ್ಳಿ ತೋಟದ ಸಾಲ ತೀರಸಲು ಹೋಗಿ ಮನ್ವೇಲನನ್ನು ತಿರಸ್ಕರಿಸಲಾಗದೇ ಅವನ ಕಾಮಕ್ಕೆ ಬಲಿಯಾಗಿರುವುದು ಬೆಳ್ಳಿಯ ಮುಗ್ಧತೆಗೆ ಸಾಕ್ಷಿ ಮತ್ತು ಬಾಹ್ಯ ಒತ್ತಡಗಳಿಗೆ ಮಣಿದು ಮಿಂಗೇಲ ದೊರೆಗಳಿಗೂ ಮೈ ನೀಡುವುದು ಅನಿವಾರ್ಯವಾಗುತ್ತದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ತಿಮ್ಮಿ, ಬಚ್ಚನೊಂದಿಗೆ ಓಡಿಹೋಗಿದ್ದು, ಪುಟ್ಟಿ ತಿಮ್ಮಪ್ಪ ಹೆಗಡೆಯೊಂದಿಗೂ, ಗುತ್ತಿಯೊಂದಿಗೂ ಅನೈತಿಕ ಸಂಬಂಧವಿಟ್ಟುಕೊಂಡಿದ್ದು ಅಕ್ಕಣಿಯಂತೂ ಗಂಡನಿಗೆ ಸಹಾಯ ಹಸ್ತನಾದ ಚೀಂಕ್ರನಿಗೆ ಕೃತಜ್ಞತಾ ಪೂರ್ವಕವಾಗಿ ಸುಖ ಕೊಡುವುದು. ಇವರೆಲ್ಲರಿಗೂ ಅನೈತಿಕ ಸಂಬಂಧ ಎಂಬ ಪ್ರಶ್ನೆ ಉದ್ಭವಿಸಿಲ್ಲ. ಹೀಗೆ ನಿಸರ್ಗ ಸಹಜವಾದ ಕಾಮ ಬಯಕೆಯನ್ನು ಅದುಮಿಟ್ಟುಕೊಳ್ಳದೇ ಸಹಜವಾಗಿಯೇ ಅನುಭವಿಸಿದ್ದಾರೆ.

### ೭.೨. ಕೌಟುಂಬಿಕ ನೆಲೆ

ಕುಟುಂಬವೆಂಬುದು ಸಾಮಾಜಿಕ ವ್ಯವಸ್ಥೆಯ ಚಿಕ್ಕ ಘಟಕವಾಗಿದೆ. ಇಂತಹ ಅನೇಕ ಘಟಕಗಳು ಸೇರಿ ಒಂದು ಸಮಾಜದ ನಿರ್ಮಾಣವಾಗುತ್ತದೆ. ಗಂಡು-ಹೆಣ್ಣು ವಿಧ್ಯುಕ್ತವಾಗಿ ಕೂಡಿ ಬದುಕುವ ಜೀವನ ಚಾಲ್ತಿಗೆ ಬಂದ ಮೇಲೆ ಕುಟುಂಬ ಜೀವನ ಅಸ್ತಿತ್ವಕ್ಕೆ ಬಂತು.

ಕುಟುಂಬಕ್ಕೆ ಯಜಮಾನ ಅಥವಾ ಯಜಮಾನಿ ಪ್ರಮುಖವಾಗಿರುತ್ತಾನೆ/ಳೆ. ಉಳಿದವರು ಆಯಾ ಕುಟುಂಬದ ಸದಸ್ಯರಾಗಿರುತ್ತಾರೆ. ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ ಚಾಲ್ತಿಗೆ ಬರುವ ಪೂರ್ವದಲ್ಲಿ ಮಾತೃಪ್ರಧಾನ ವ್ಯವಸ್ಥೆ ಸಮಾಜದಲ್ಲಿತ್ತು ಎಂಬುವುದು ಅಧ್ಯಯನದಿಂದ ತಿಳಿದುಬಂದಿದ್ದು, ನಂತರ ಮಹಿಳೆ ಪುರುಷನ ನಂತರದ ಸ್ಥಾನಕ್ಕೆ ತಳ್ಳಲ್ಪಟ್ಟಳು. ಆದರೂ ಮಹಿಳೆಗೆ ಮಹತ್ವದ ಸ್ಥಾನವಿದೆ. ಕುಟುಂಬದಲ್ಲಿ ಮಹಿಳೆ ಪರೋಕ್ಷವಾಗಿ ಮುಖ್ಯವಾಗುತ್ತಾಳೆ. ಮಹಿಳೆ ಇಲ್ಲದೆ ಕುಟುಂಬ ಅಸ್ತಿತ್ವಕ್ಕೆ ಬರಲು ಸಾಧ್ಯವೇ ಇಲ್ಲ. ಕೌಟುಂಬಿಕ ಜೀವನದಲ್ಲಿ ಮಹಿಳೆ ನಿರ್ವಹಿಸಬೇಕಾದ ಜವಾಬ್ದಾರಿಗಳು ಅನೇಕ. ತಾಯಿ, ಮಗಳು, ಹೆಂಡತಿ, ಅತ್ತಿಗೆ, ನಾದಿನಿ, ಅತ್ತೆ, ಸೊಸೆ, ಅಜ್ಜಿ ಹೀಗೆ ಅನೇಕ ರೀತಿಯ ಜವಾಬ್ದಾರಿಗಳಲ್ಲಿ ಸ್ತ್ರೀ ಪಾಲುದಾರಳಾಗುತ್ತಾಳೆ. ಈ ಹಿನ್ನೆಲೆಯಲ್ಲಿ ಸ್ತ್ರೀ ಜೀವನವನ್ನು ನೋಡಲು ಪ್ರಯತ್ನಿಸಲಾಗಿದೆ.

**೭.೨.೧. ಹೆಂಡತಿ**

ಪುರುಷ ಪ್ರಧಾನ ಭಾರತೀಯ ಸಮಾಜದಲ್ಲಿ ಹೆಂಡತಿಯಾಗಿ ಬಾಳುವ ಹೆಣ್ಣನ್ನು ಸತಿ, ಪತ್ನಿ, ಬಾರ್ಯ, ಅರ್ಧಾಂಗಿ ಎಂದು ಕರೆಯಲಾಗುತ್ತದೆ. ಪುರುಷ ಮನೆಯ ಹೊರಗೆ ದುಡಿದರೆ ಸ್ತ್ರೀ ಮನೆಯ ಒಳಗಿನ ಕಾರ್ಯಗಳಿಗೆ ಸೀಮಿತವಾದಳು. ಮನೆಯಲ್ಲಿ ಹಗಲಿರುಳು ದುಡಿಯುವ ದುಡಿತಕ್ಕೆ ಯಾವ ಆದಾಯವು ಇಲ್ಲ. ಸ್ವಾತಂತ್ರ್ಯ ಪೂರ್ವ ಸ್ತ್ರೀ ಕೇಂದ್ರಿತ ಕನ್ನಡ ಕಾದಂಬರಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದಾಗಲೂ ಸ್ತ್ರೀ ಸಾಮಾಜೀಕರಣದ ಸಂಕ್ರಮಣಾವಸ್ಥೆಯಲ್ಲಿದ್ದಂತೆಯೇ ಕಾಣುತ್ತಾಳೆ. ಇಷ್ಟಾಗಿಯೂ ಪತಿಯನ್ನೆ ದೇವರೆಂದು ನಂಬಿದವಳು. ಇಲ್ಲಿ ಹೆಂಡತಿಯ ಸ್ಥಾನವನ್ನು ಅಲಂಕರಿಸುವ ಸ್ತ್ರೀಯರು ಗಂಡನ ನೆರಳಿನಲ್ಲಿಯೇ ಜೀವನದ ಸವಿಯನ್ನು ಉಂಡವರು. ಈ ನೆಲೆಯಲ್ಲಿ ಚಿತ್ರಣಗೊಂಡಿರುವ ಸ್ತ್ರೀಯರ ಸಂಖ್ಯೆ ಹೆಚ್ಚಾಗಿದೆ. 'ಪ್ರಬುದ್ಧ ಪದ್ಮಯನೆ' ಕಾದಂಬರಿಯ ಮನಮೋಹಿನಿಯ ಮಗಳು ಪದ್ಮನಯನೆ ಮತ್ತು 'ಇಂದಿರಾಬಾಯಿ' ಕಾದಂಬರಿಯ ಜಲಜಾಕ್ಷಿ, ಸುಶೀಲೆ, ಅಂಬಾಬಾಯಿ, 'ಮಾಡಿದುಣ್ಣೊ ಮಹಾರಾಯ' ಕಾದಂಬರಿಯ ಸೀತೆ, ತಿಮ್ಮಮ್ಮ, 'ಮಾತೃನಂದಿನಿ' ಕಾದಂಬರಿಯ ಚಿತ್ರ, 'ಸುಶೀಲಾ' ಕಾದಂಬರಿಯ ಸುಶೀಲಾ, 'ನಭಾ' ಕಾದಂಬರಿಯ ರಮಾಮಣಿ, 'ಸುಖಲತಾ' ಕಾದಂಬರಿಯ ಸುಖಲತಾ, 'ಸುಬ್ಬಣ್ಣ' ಕಾದಂಬರಿಯ ನಾರಾಯಣ ಶಾಸ್ತ್ರಿಗಳ ಹೆಂಡತಿ ಯಜಮಾನಿ ಮತ್ತು ಲಲಿತಮ್ಮ, 'ಸರಸಮ್ಮನ ಸಮಾಧಿ' ಕಾದಂಬರಿಯ ಜಾನಕಿ, 'ಕಾನೂರು ಹೆಗ್ಗಡಿತಿ'ಯ ಗೌರಮ್ಮ, ಸುಬ್ಬಮ್ಮ, ಪುಟ್ಟಮ್ಮ, 'ಮರಳಿ ಮಣ್ಣಿಗೆ' ಕಾದಂಬರಿಯ ಪಾರ್ವತಿ, ಸತ್ಯಾಭಾಮ, ನಾಗವೇಣಿ, ಒಕ್ಕಲತಿ ಬಚ್ಚಿ, 'ಬೆಟ್ಟದ ಜೀವ' ಕಾದಂಬರಿಯ ಶಂಕರಿ, ಲಕ್ಷ್ಮೀ, 'ನಿಸರ್ಗ' ಕಾದಂಬರಿಯ ರತ್ನವ್ವ, ಸುಂದರಾಬಾಯಿ, 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ

ದಾನಮ್ಮ, ದೇವಮ್ಮ, ರಂಗಮ್ಮ, ಜಟ್ಟಮ್ಮ, ಪಿಂಚಲು ಇವರೆಲ್ಲ ಪತಿಯನ್ನೆ ದೇವರೆಂದು ಭಾವಿಸಿದವರು.

ಈ ಮೇಲಿನ ಕಾದಂಬರಿಗಳ ಎಲ್ಲಾ ಪಾತ್ರಗಳು ಪರಂಪರಾಗತವಾದ ಪ್ರವಾಹದಲ್ಲಿಯೇ ತೇಲಿಕೊಂಡು ಬಂದಿವೆ. ಇವರು ಆದರ್ಶ ಗೃಹಿಣಿಯರಾಗಿ ಬಾಳುವುದರಲ್ಲಿ ಹೆಚ್ಚಿನ ನಂಬಿಕೆ ಉಳ್ಳವರು. ಅವರು ಬದುಕನ್ನು ನೆಚ್ಚಿಕೊಂಡಿದ್ದರಿಂದಲೇ ಜೀವನ ಎಂಬುದು ಸಂಘರ್ಷಮಯವಾಗಿ ಕಂಡಿದೆ. 'ಸುಶೀಲೆ' ಕಾದಂಬರಿಯ ಸುಶೀಲೆ ತ್ಯಾಗಮೂರ್ತಿ ದಾರಿತಪ್ಪಿದ ಗಂಡನಿಂದ ಮತ್ತು ಇನ್ನಿತರ ದುಷ್ಟ ಜನರಿಂದ ಕಷ್ಟವನ್ನು ಅನುಭವಿಸಿದರೂ ಪತಿಯ ಹಂಬಲಿಕೆಯನ್ನು ಬಿಟ್ಟವಳಲ್ಲ. 'ಸುಬ್ಬಣ್ಣ' ಕಾದಂಬರಿಯ ಲಲಿತಮ್ಮ ಪತಿಭಕ್ತೆ. ಪತಿಯ ಪಾದಸೇವೆಗೆ ಹಾತೊರೆದವಳು. ಒಂದು ದಿನ ಗಂಡ ಸುಬ್ಬಣ್ಣನಿಂದ ಹೊಡೆತ ತಿಂದಾಗ ಏನು ಮಾಡಿದರೂ ಪತಿಯೇ ಪರದೈವ ಎಂಬ ಭಾವನೆಯಲ್ಲಿ ಬದುಕುವುದು. 'ಕಾನೂರು ಹೆಗ್ಗಡಿತಿ' ಕಾದಂಬರಿಯ ಸುಬ್ಬಮ್ಮನ ಗಂಡ ಚಂದ್ರಯ್ಯ ಗೌಡ ಹಾಸಿಗೆ ಹಿಡಿದಾಗ, ಇದೊಂದು ಬಾರಿ ಗುಣವಾದರೆ ಈರ್ವರು ಸುಖವಾಗಿರಬಹುದೆಂದು ಆಶಿಸಿದವಳು. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ರಂಗಮ್ಮ ಹರಕೆ ಮುಟ್ಟಿಸಲು ಹೋದ ದೊಡ್ಡಣ್ಣ ಮರಳಿ ಬರದಿದ್ದಾಗ ಗಂಡನ ಕೊರಗಿನಲ್ಲಿ ಸಣ್ಣಗಾಗುತ್ತಾಳೆ. ಹೀಗೆ ಸ್ತ್ರೀ ಪಾತ್ರಗಳೆಲ್ಲವೂ ಹಿಂದೂ ಸಂಪ್ರದಾಯದ ಮೌಲ್ಯಗಳಿಗೆ ತಲೆಬಾಗಿವೆ. ಹೆಣ್ಣು ಪುರುಷನ ಸುಖ ಮತ್ತು ಶ್ರೇಯಸ್ಸನ್ನು ಬಯಸುವ ಪರತಂತ್ರ ಜೀವಿ. ಇಲ್ಲಿಯ ಎಲ್ಲಾ ಗೃಹಿಣಿಯರು ಪುರುಷನ ಅಡಿಯಾಳಾಗಿ ಜೀವಿಸುವುದರಲ್ಲಿ ಸುಖ ಕಂಡಿದ್ದಾರೆ. ಹೀಗಾಗಿ ಗಂಡನಿಲ್ಲದ ಹೆಣ್ಣಿನ ಬದುಕು ಶವದಂತೆ ಭಾವಿಸಲಾಗಿತ್ತು. 'ನಭಾ' ಕಾದಂಬರಿಯ ಶರಾವತಿ, 'ಮರಣಿ ಮಣ್ಣಿಗೆ' ಕಾದಂಬರಿಯ ನಾಗವೇಣಿ ಸ್ವಾವಲಂಬಿಯ ಹಂಬಲವುಳ್ಳವರು. ಗೃಹಿಣಿ ನಾಗವೇಣಿಯ ಬದುಕಿನ ಪರಿಯೇ ಹೋರಾಟದಂತಿದೆ. ಸ್ತ್ರೀ ಪುರುಷರಿಗೆ ಸಮನಾಗಿ ದುಡಿದರೂ ಅವರ ಅಧಿಕಾರವೆನಿದ್ದರೂ ಗೃಹಕೃತ್ಯಕ್ಕೆ ಮಾತ್ರ ಸೀಮಿತ. ಇಲ್ಲಿಯ ಎಲ್ಲಾ ಗೃಹಿಣಿಯರು ಪುರುಷನ ಅಧಿಕಾರಕ್ಕೆ ಮೌನವಾಗಿದ್ದಾರೆ. ಹೀಗೆ ಹೆಂಡತಿಯ ಸ್ಥಾನವನ್ನಾವಲಂಬಿಸಿದ್ದ ಗೃಹಿಣಿಯರು ವೈವಿಧ್ಯಮಯ ರೂಪಗಳಲ್ಲಿ ಕಾಣಿಸಿಕೊಂಡಿದ್ದಾರೆ. ಗಂಡನಾದವನು ಎಂಥ ಅಪರಾಧ ಎಸಗಿದ್ದರೂ ಆತನು ಕ್ಷಮಾರ್ಹನಾಗಿದ್ದಾನೆ. ಆದರೆ ಪತ್ನಿ ಯಾವ ಸಣ್ಣ ಅಪರಾಧ ಎಸಗಿದರೂ ಅದಕ್ಕೆ ತಕ್ಕ ಶಿಕ್ಷೆ ಅನುಭವಿಸಬೇಕಾಗುತ್ತಿತ್ತು. ಒಟ್ಟಾರೆ ಕಾದಂಬರಿಗಳಲ್ಲಿಯ ಗೃಹಿಣಿಯರು ಕಷ್ಟ ಸಹಿಷ್ಣುಗಳಾಗಿ ಸತೀತ್ವವುಳ್ಳವರಾಗಿ ಸದಾ ಗಂಡನ ಸುಖವನ್ನೆ ಬಯಸುವಂತೆ ಚಿತ್ರಣಗೊಂಡಿದ್ದಾರೆ.

**೭.೨.೨. ತಾಯಿ-ಮಗಳು**

ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕನ್ನಡ ಕಾದಂಬರಿಗಳನ್ನು ಪರಿಶೀಲಿಸಿದಾಗ ಈ ಕಾಲಾವಧಿಯ ಎಲ್ಲಾ ಸ್ತ್ರೀ ಪಾತ್ರಗಳು ತಾಯ್ತನದ ಹಂಬಲವುಳ್ಳವುಗಳಾಗಿದ್ದವು. ಇಲ್ಲಿಯ

ಎಲ್ಲಾ ತಾಯಂದಿರ ಆದರ್ಶ ಮುಖಗಳನ್ನು ಒಳಗೊಂಡಂತಿರುವ ಕಾರಂತರ 'ಮರಳಿಗೆ ಮಣ್ಣಿಗೆ' ಕಾದಂಬರಿಯನ್ನು ನಿದರ್ಶನವಾಗಿ ನೋಡಬಹುದು. "ಎಲ್ಲಾ ಗರತಿಯಂತೆ ತಾನೊಂದು ಕೂಸನ್ನು ಪಡೆದು ಸುಖ ಸವಿಯಬೇಕೆಂದು ಮಾಡಿದ ಬಯಕೆಗಳು ವಿಫಲವಾದುದರಿಂದ ಸಂಸಾರಕ್ಕೆ ಒಂದು ಬಂಜೆಯಾಗಿ ಸಾಯಬೇಕೆ? ಎಂಬೊಂದು ಸಿಡಿಲು ಮನಸ್ಸನ್ನು ಹಾಯ್ದರೆ ಜೀವ ಏತಕ್ಕೂ ಬೇಡವೆನಿಸುತ್ತದೆ."[೧೧] ಇದು ತಾಯ್ತನದ ಹಂಬಲವುಳ್ಳ ಎಲ್ಲ ಸ್ತ್ರೀ ಪಾತ್ರಗಳಿಗೂ ಅನ್ವಯವಾಗುತ್ತದೆ. ತಾಯ್ತನದ ಬಯಕೆಯಿಂದಾಗಿ ಬಂಜೆ ಎಂಬ ಶಾಪದಿಂದ ಮುಕ್ತರಾಗಬಯಸಿದ ಸ್ತ್ರೀಯರು ದೇವರು, ಧರ್ಮಗಳಿಗೆ ಮೊರೆ ಹೋಗುತ್ತಾರೆ. 'ಇಂದಿರಾಬಾಯಿ' ಕಾದಂಬರಿಯ ಅಂಬಾಬಾಯಿ ಶ್ರೀಗಳಿಂದ ಪಡೆದ ಸಂತಾನ ವ್ರತವನ್ನಾಚರಿಸಿ ಹೆಣ್ಣನ್ನು ಹೆತ್ತಾಗ ಗಂಡಾದರೇನು? ಹೆಣ್ಣಾದರೇನು? ಮಗುವು ದೀರ್ಘಾಯುವಾಗಿದ್ದರೆ ಸಾಕು. ದೇವರ ದಯೆಯಿಂದ ನಮಗೇನು ಗತಿಗೇಡಿಲ್ಲವಷ್ಟೇ. ಸಂತಾನ ಗೋಪಾಲನ ಕಟಾಕ್ಷದಿಂದ ನನ್ನ ಬಂಜೆ ಎಂಬ ಕೊರತೆಯೊಂದು ಹೋಯಿತಷ್ಟೇ ಸಾಕು"[೧೨] ಎಂದು ಸಮಾಧಾನ ಪಡುತ್ತಾಳೆ.

ಇಂತಹ ತಾಯ್ತನದ ಹಂಬಲಿಕೆಯ ಪ್ರವೃತ್ತಿ ಮತ್ತು ಪುರುಷನ ದೇಹದಾಸೆಯನ್ನು ಈಡೇರಿಸುವ ಕ್ರಿಯೆ ಇವೆರಡೂ ಪ್ರಕೃತಿ ಸಹಜವಾದ ಕೊಡುಗೆಗಳೇ. ಎಲ್ಲಾ ಸ್ತ್ರೀಯರ ತಾಯ್ತನದ ಹಂಬಲವನ್ನು ಪುನಃ ಸ್ಮರಿಸುವ ಸಮಾಜ, ವಿಧವೆಯ ತಾಯ್ತನದ ಹಂಬಲದ ವಿಷಯದಲ್ಲಿ ಮಾತ್ರ ಮೌನ ತಾಳಿದೆ. ತಾಯ್ತನದ ಹಂಬಲಿಕೆಯ ಹಿಂದೆ ಲೈಂಗಿಕ ಬಯಕೆ ಮತ್ತು ಸಂತಾನೋತ್ಪತ್ತಿ ಇವೆರಡೂ ಮೂಲ ಪ್ರವೃತ್ತಿಯೆಂಬಂತೆ ಕಾಣಿಸಿಕೊಂಡು ಸ್ತ್ರೀಯರು ರೋಗಿಗಳಾಗಿದ್ದಾರೆ. ಕಾನೂರು ಹೆಗ್ಗಡಿತಿ ಕಾದಂಬರಿಯ ಕೆಳಕಾನೂರು ಅಣ್ಣಯ್ಯ ಗೌಡರ ಹೆಂಡತಿ ರೋಗಿಯಾಗಿಯೇ ಸಾವನ್ನಪ್ಪುತ್ತಾಳೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬರುವ ಕೆಳವರ್ಗದ ಧ್ಯೇಯಿ ಆರು ಮಕ್ಕಳನ್ನು ಹೆತ್ತು ಏಳನೆಯ ತುಂಬು ಬಸಿರಿನಲ್ಲಿ ತನ್ನ ಗಂಡ ಚೀಂಕ್ರನ ಪಶುವಿನಂಥ ಕಾಮದಾಸೆಗೆ ಬಲಿಯಾಗಿ ದುರಂತ ಮರಣವನ್ನಪ್ಪುವ ದುರ್ದೈವಿ. ಹಾಗೂ 'ಮರಳಿ ಮಣ್ಣಿಗೆ' ಕಾದಂಬರಿಯ ನಾಗವೇಣಿ 'ನಿಸರ್ಗ' ಕಾದಂಬರಿಯ ತಾರಾ, ಇಂದಿರಾ, ಇವರು ಪತಿಯ ರೋಗವನ್ನು ಎರವಲಾಗಿ ಪಡೆದವರು.

'ಇಂದಿರಾಬಾಯಿ' ಕಾದಂಬರಿಯ ಜಲಜಾಕ್ಷಿ ತಮ್ಮ ಆಶ್ರಯಿತ ಬಾಲಕ ಭಾಸ್ಕರನನ್ನೆ ಮಗನೆಂದು ಭಾವಿಸಿ, ಅವನ ಸುಖಸಮೃದ್ಧಿಯಲ್ಲಿಯೇ ಸಂತೃಪ್ತಳಾಗುವುದು. 'ಇಂದಿರೆ' ಕಾದಂಬರಿಯ ವಿಧವೆ ದೇವಯಾನಿ, ಕಮಲಾಕಾಂತನ ಮಗ ರಮಾಕಾಂತನನ್ನು ಮಗನಂತೆ ನೋಡುವುದು. ಮಾತೃಹೃದಯವೆಂಬುದು ನಿಸ್ವಾರ್ಥತೆಯಿಂದ ಕೂಡಿದ್ದು ಎಂಬುದು ಸಮರ್ಥಿಸುತ್ತದೆ. ಹಾಗೆಯೇ 'ನಭಾ' ಕಾದಂಬರಿಯಲ್ಲಿ ರಮಾಮಣಿಯ ಭಾವನ ಮಗಳು ಬಾಲ ವಿಧವೆ

ನಭಾಳನ್ನು ತನ್ನ ಕಣ್ಣರೆಪ್ಪೆಯಲ್ಲಿಟ್ಟು ಸಾಕಿದರೆ, 'ಮರಳಿ ಮಣ್ಣಿಗೆ' ಕಾದಂಬರಿಯ ಪಾರ್ವತಿಯ ಸವತಿ ಸತ್ಯಭಾಮೆಯ ಮಗ ಲಚ್ಚನನ್ನು ಮುದ್ದು ಮಾಡಿ ಬೆಳೆಸುವಳು. 'ಸುಬ್ಬಣ್ಣ' ಕಾದಂಬರಿಯ ಲಲಿತೆ ಮತ್ತು ಯಜಮಾನಿ 'ಬೆಟ್ಟದ ಜೀವ' ಕಾದಂಬರಿಯ ಶಂಕರಿ ಮತ್ತು ಎಲ್ಲಾ ಪಾತ್ರಗಳು ಮಾತೃ ವಾತ್ಸಲ್ಯಗಳನ್ನು ಮೈಗೂಡಿಸಿಕೊಂಡವುಗಳು. ಮಕ್ಕಳಿಗಾಗಿ ಹಾತೊರೆದು ನಿಷ್ಪ್ರಯೋಜಕರಾದಾಗ ಬೇರೆಯವರ ಮಕ್ಕಳನ್ನು ತಮ್ಮ ಮಕ್ಕಳಂತೆ ಪ್ರೀತಿಸುತ್ತಾ ತಮ್ಮ ನೋವನ್ನು ಮರೆತು ಸಂತಸದಿಂದ ಜೀವನ ಸಾಗಿಸಿದ್ದಾನೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯ ಸೀತೆ ಮನೋರೋಗದಿಂದ ಹಾಸಿಗೆ ಹಿಡಿದಿರುವಾಗ ಮಗಳ ಶುಶ್ರೂಷೆ ಮಾಡುವ ಗೌರಮ್ಮ ತನಗೆ ತಿಳಿದ ಹರಕೆ, ಮಂತ್ರ, ತಂತ್ರಗಳ ಮೊರೆಹೊಕ್ಕು ಮಗಳು ಬೇಗ ಗುಣಮುಖವಾಗಲಿ ಎಂದು ಹಾರೈಸುವ ಚಿತ್ರಣವಿದೆ. ಇದು ತಾಯಿ ತನ್ನ ಮಕ್ಕಳ ಬಗೆಗೆ ಹೊಂದಿರುವ ವಾತ್ಸಲ್ಯಕ್ಕೆ ನಿದರ್ಶನ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ದೇವಯ್ಯನ ಹೆಂಡತಿ ದೇವಮ್ಮ ಇದೇ ನೆಲೆಯಲ್ಲಿ ಚಿತ್ರಣಗೊಂಡಿದ್ದಾಳೆ.

ಹೆಣ್ಣು ಮದುವೆಯಾಗಿ ಗಂಡನ ಮನೆಯಲ್ಲಿ ಹೇಗೆ ತಗ್ಗಿ-ಬಗ್ಗಿ ನಡೆಯಬೇಕೆಂಬುದನ್ನು ಸ್ವತಃ ತಾಯಿಯಂದಿರೆ ಉಪದೇಶ ನೀಡುತ್ತಾರೆ. ಈ ನೆಲೆಯಲ್ಲಿ ಚಿತ್ರಣಗೊಂಡಿರುವ 'ಇಂದಿರಾಬಾಯಿ' ಕಾದಂಬರಿಯ ಅಂಬಾಬಾಯಿ ಅಡಿಗೆ ಕೆಲಸಗಳನ್ನು ಮಾತ್ರ ಕಲಿಸಿಕೊಡುವುದು. 'ಸುಬ್ಬಣ್ಣ' ಕಾದಂಬರಿಯ ಲಲಿತಮ್ಮಳ ತಾಯಿ ಗಂಡನೇ ದೇವರೆಂದು ಬೋಧಿಸುವುದನ್ನು ಕಾಣುತ್ತೇವೆ. 'ನಿಸರ್ಗ' ಕಾದಂಬರಿಯಲ್ಲಿನ ರತ್ನವ್ವ ತನ್ನ ಮಗಳು ಗಂಡನ ಮನೆಗೆ ಹೋಗುವ ಮುನ್ನ ಗಂಡನ ಮನೆಯಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು "ಈಗ್ಯಾನ ನೀ ಸಣ್ಣಾಕೀ ಅಲ್ಲ, ಹರಿವತ್ತಾ ನಿನ್ನ ಎಬ್ಬಿಸಬೇಕು. ಹಿಂಗ್ಯಾನ ಇಲ್ಲ. ಅತ್ತಿ ಎಬ್ಬಿಸುಕ್ಕಿಂತ ಮೊದಲು ಎದ್ದ ಬೀಸಕ್ಕ ಹಾಕಬೇಕು. ಅತ್ತಿ ಬೀಸಾಕ ಹಾಕಿದ್ರ, ಆಕಿ ಬ್ಯಾಡ್, ಬ್ಯಾಡ್ ಅಂದರೂ ಬೀಸಕ್ಕ ಹಿಡೀಬೇಕ... ಕೆಲಸ ಇಲ್ಲದ ಕೂಡಬಾರದು... ಇಲ್ಲಿ ನಿಮ್ಮವ್ವ ಯಾನ ಬ್ಯಾಡ ಅನ್ನುನಾ.... ಹ್ಯಾಂಗ್ ಗಪ್ ಕೂಡತಿ ಹಾಂಗ ಕೂಡಬಾರದ ಇಲ್ಲೀಹಾಂಗ ನಿನ್ನ ಕೈಲೆ ತಗೊಂಡ ತಿನಬಾರದ... ಅತ್ತಿ ಎತ್ತಿ ಕೊಟ್ಟದ ಅಷ್ಟ ತಿನ್ನಬೇಕ"[೧೩] ಎನ್ನುವುದು. ಅಂದಿನ ಸಮಾಜದಲ್ಲಿ ಹೆಣ್ಣು ಮಗಳನ್ನು ನಡೆಸಿಕೊಂಡಿರುವ ವಾಸ್ತವ ಬದುಕನ್ನು ಬಿಚ್ಚಿಡುತ್ತದೆ. ಹೀಗೆ ಹೆಣ್ಣು ಮಗಳು ಅನರ್ಹಳು ಎಂದು ಭಾವಿಸುವ ತಂದೆ-ತಾಯಿಗಳೇ ಮಗಳ ಮೇಲೆ ನಿರ್ಬಂಧನೆಗಳನ್ನು ವಿಧಿಸಿರುವುದು ಆಶ್ಚರ್ಯವಲ್ಲದೆ ಮತ್ತೇನಲ್ಲ.

ಈ ರೀತಿಯಾಗಿ ಹುಟ್ಟಿದ ಮನೆಯಲ್ಲಿಯೇ ಗುಲಾಮಳಂತೆ ಬದುಕಿ ಬಾಳಿದ ಹೆಣ್ಣು, ಗಂಡನ ಮನೆಯಲ್ಲಿ ಹೀನಾಯ ಬದುಕು ಸಾಗಿಸಿದ್ದಾಳೆಂಬುದರಲ್ಲಿ ಸಂಶಯವಿಲ್ಲ. ವಿವಾಹೊತ್ತರ ಜೀವನದಲ್ಲಿ ತವರು ಮನೆಯ ಮೇಲಿನ ಹಕ್ಕನ್ನು ಕಳೆದುಕೊಳ್ಳುವ ಹೆಣ್ಣಿಗೆ ಗಂಡನ ಮನೆಯೇ

ಗತಿ. ಆದರೆ ಬಾಲ್ಯದಲ್ಲಿಯೇ ವಿಧವೆಯಾದಾಗ ತಂದೆಯ ಮನೆಯನ್ನು ಅವಳು ಆಶ್ರಯಿಸುತ್ತಾಳೆ. ಮಗಳು ನೊಂದಿರುವಳೆಂಬ ಕಾರಣಕ್ಕಾಗಿಯೇ ಅವಳನ್ನು ಪ್ರೀತಿಯಿಂದ ಕಾಣಲಾಗುತ್ತದೆ.

**೭.೨.೩. ಅತ್ತಿಗೆ–ನಾದಿನಿ**

ಅತ್ತಿಗೆ–ನಾದಿನಿಯರಾಗಿ ಬಾಳುವ ಈ ಎರಡು ಸ್ತ್ರೀ ಪಾತ್ರಗಳು ತಾವು ಹುಟ್ಟಿ ಬೆಳೆದ ಮನೆ ಇಲ್ಲವೆ ಊರನ್ನು ತ್ಯಜಿಸಿ ಬೇರೊಂದು ಅಪರಿಚಿತ ಮನೆಯಲ್ಲಿ ಜೀವನ ಸಾಗಿಸಬೇಕಾಗುತ್ತದೆ. ಪಿತೃ ಪ್ರಧಾನ ಕೌಟುಂಬಿಕ ಸಮಾಜದಲ್ಲಿ ಸ್ತ್ರೀ ಇದನ್ನು ಒಪ್ಪಿಕೊಂಡಿದ್ದಾಳೆ. ಈ ಹಿನ್ನಲೆಯಿಂದ ವಿಚಾರ ಮಾಡಿದಾಗ, ಅತ್ತಿಗೆ–ನಾದಿನಿ ಎಂಬ ಪಾತ್ರಗಳು ಮೊದಲು ಮಗಳಾಗಿ, ಅಣ್ಣನ ಹೆಂಡತಿಯಾಗಿ ಬಂದವಳಿಗೆ ನಾದಿನಿಯಾಗಿ, ಮುಂದೆ ತಾನು ಮದುವೆಯಾಗಿ ಗಂಡನ ಮನೆ ಸೇರಿದಾಗ ಅತ್ತಿಗೆಯೆಂದು ಕರೆಸಿಕೊಳ್ಳುತ್ತಾಳೆ. ಹೀಗೆ ಬೇರೊಂದು ಮನೆಯಲ್ಲಿ ಜೀವನ ನಡೆಸಬೇಕಾದ ಸ್ತ್ರೀಗೆ ಗಂಡನ ಮನೆ ಪರಕೀಯವಾಗಿದ್ದರೂ ತಾನು ಬಾಳಿ ಬದುಕಿ ಜೀವನದ ಸಾರ್ಥಕತೆಯನ್ನು ಕಾಣಬೇಕಾದ ಮನೆ ಇದು ಎಂಬುದನ್ನು ಒಪ್ಪಿಕೊಂಡಿದ್ದಾಳೆ.

ಹೆಣ್ಣು ತನ್ನ ಬೇಸರವನ್ನು ಕಳೆದುಕೊಳ್ಳಲು ತವರು ಮನೆಯೇ ಆಧಾರ. ಹಬ್ಬ, ಹರಿದಿನ ಮತ್ತು ಜಾತ್ರೆಗಳಲ್ಲಿ ತವರಿಗೆ ಬಂದ ಹೆಣ್ಣು, ಅಣ್ಣನ ಹೆಂಡತಿಯ ಅಧಿಕಾರಕ್ಕೆ ಒಳಗಾಗಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ ತಾನು ಹುಟ್ಟಿದ ಮನೆಯಲ್ಲಿ ಪರಕೀಯಳಾದೆನಲ್ಲ ಎಂಬ ಭಾವನೆ ಹುಟ್ಟುವುದು ಸಹಜ. ಆದರೆ ಅತ್ತಿಗೆ–ನಾದಿನಿಯರಿಬ್ಬರು ಪರಸ್ಪರ ಪ್ರೀತಿ, ಪ್ರೇಮಗಳಿಂದ ನಡೆದುಕೊಂಡಿದ್ದಾದರೆ ತಾನು ಪರಕೀಯಳೆಂಬ ಭಾವನೆಗೆ ಆಸ್ಪದವೇ ಇರದು. ತನ್ನ ಗಂಡನ ಅಕ್ಕಂದಿರನ್ನು ತನಗಿಂತ ಹಿರಿಯರು ಎಂಬ ಕಾರಣಕ್ಕಾಗಿಯೇ ಅವರನ್ನು ತಾಯಿಯ ಸ್ವರೂಪದಲ್ಲಿ ಗೌರವಾಧರಗಳಿಂದ ಕಾಣುತ್ತಾರೆ. ಆದರೆ ಇದಕ್ಕೂ ಮಿಗಿಲಾಗಿ ಅತ್ತಿಗೆ–ನಾದಿನಿಯರು ಮತ್ಸರ ಇಲ್ಲವೆ ವಿರೋಧ ಸಾಧಿಸುವ ಪ್ರಸಂಗಗಳೇ ಹೆಚ್ಚು ಮತ್ತು ಇನ್ನು ಮದುವೆಯಾಗದೆ ಉಳಿದಿರುವ ನಾದಿನಿಯರು ಅತ್ತಿಗೆಯ ಮೇಲೆ ಅಧಿಕಾರ ಚಲಾಯಿಸುತ್ತಾರೆ. ಇಂತಹ ವಿವಿಧ ಬಗೆಯ ನೆಲೆಯನ್ನು ಅತ್ತಿಗೆ–ನಾದಿನಿಯರ ಚಿತ್ರಣವನ್ನು ಸ್ವಾತಂತ್ರ್ಯ ಪೂರ್ವ ಸ್ತ್ರೀ ಕೇಂದ್ರಿತ ಕನ್ನಡ ಕಾದಂಬರಿಗಳಲ್ಲಿ ಗಮನಿಸಬಹುದಾಗಿದೆ.

'ಮಾಡಿದುಣ್ಣೊ ಮಹಾರಾಯ' ಕಾದಂಬರಿಯ ಅತ್ತಿಗೆ ಸೀತಮ್ಮ ಸೌಮ್ಯ ಗುಣವುಳ್ಳ ತ್ಯಾಗಮೂರ್ತಿಯಾಗಿದ್ದಾರೆ. ಇವಳಿಗೆ ವಿರೋಧ ಗುಣವುಳ್ಳ ನಾದಿನಿಯ ಪಾತ್ರ, ಒಂಬತ್ತು ವರ್ಷ ಬಾಲೆ ಸಾತು(ಸಾವಿತ್ರಿ)ಯದು. ಅತ್ತಿಗೆ ಸೀತಮ್ಮಳನ್ನು ಬೈಯಿಸುವುದಕ್ಕಾಗಿಯೇ ಅಡಿಗೆಗೆ ಹೆಚ್ಚಿನ ಉಪ್ಪು ಬೆರೆಸುವುದು, ಇಲ್ಲವೆ ಮರಳು ಬೆರೆಸುವುದು, ಸುಳ್ಳು ಚಾಡಿ ಮೊದಲಾದ ಅಪವಾದಗಳನ್ನು ಹೊರಿಸುತ್ತಾಳೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಜಟ್ಟಮ್ಮ ಮತ್ತು

ಲಕ್ಕಮ್ಮಳ ಪಾತ್ರಗಳು ಬಹು ವಿಶಿಷ್ಟವಾಗಿವೆ. ಅತ್ತಿಗೆ ಜಟ್ಟಮ್ಮ ಮಕ್ಕಳಾಗದೆ ಬಂಜೆಯಾಗಿದ್ದವಳು. ಲಕ್ಕಮ್ಮಳಾದರೂ ಅವಿವಾಹಿತ ಯುವತಿ. ಇವರಿಬ್ಬರ ನಡುವೆ ಜಗಳ ಸಹ ನಡೆದಿರುವುದಕ್ಕೆ ಮನೆಯ ಆಳು ಮರಾಠ ಮಂಜನ ಹೇಳಿಕೆ "ಮತ್ತೆ ಸುರುವಾಯ್ತಪ್ಪ ಈ ಹೆಗ್ಗಡಿತಿಯರಿಂದ ಸುಖ ಇಲ್ಲ. ಮುರ್ಹೊತ್ತು ಜಗಳಾ, ಜಗಳಾ, ಜಗಳಾ. ಜಟ್ಟಮ್ಮ, ಲಕ್ಕಮ್ಮ, ನೀ ಮುಂಡೆ, ನೀ ರಂಡೆ, ನೀ ರಂಡೇ, ನಾನಾಗೋ ಹೊತ್ತಿಗೆ ಕಾಲಾ ಮಾಡ್ತೀನಿ."[೧೪] ಎಂದು ಪ್ರಸ್ತುತ ಕಾದಂಬರಿಯ ಆರಂಭದಲ್ಲಿಯೇ ಬರುತ್ತದೆ. ಈ ಪಾತ್ರಗಳಿಗೆ ಭಿನ್ನವಾಗಿ ನಿಲ್ಲುವ 'ನಿಸರ್ಗ' ಕಾದಂಬರಿಯ ಸುಂದರಾಬಾಯಿ-ರತ್ನವ್ವ, ತಾರಾ, ಸೌಹಾರ್ದ ಸಂಬಂಧವುಳ್ಳವರಾಗಿ ಕಾಣಿಸುತ್ತಾರೆ.

ಇನ್ನೂಳಿದ ಕಾದಂಬರಿಗಳ ನಾದಿನಿಯರ ಪಾತ್ರಗಳು ಅತ್ತಿಗೆಯೊಂದಿಗೆ ಸಖಿ, ಸ್ನೇಹಿತೆಯರಂತೆ ಪ್ರೀತಿ, ಪ್ರೇಮಗಳಿಂದ ಬದುಕಿ ಬಾಳಿರುವ ಚಿತ್ರಣವೇ ಪ್ರಧಾನವಾಗಿವೆ. ಇದಕ್ಕೆ ನಿದರ್ಶನವಾಗಿ 'ಮರಳಿ ಮಣ್ಣಿಗೆ' ಕಾದಂಬರಿಯ ಪಾರ್ವತಿ-ಸರಸ್ವತಿ. ದಾಂಪತ್ಯ ಸುಖಕ್ಕೆ ಕಾಲಿಡುವ ಮುನ್ನವೇ ಬಾಲ ವಿಧವೆಯಾಗಿ ಅಣ್ಣ ರಾಮೈತಾಳರ ಮನೆ ಸೇರಿ ಸರಸ್ವತಿ ತನ್ನೆಲ್ಲಾ ಆಸೆಗಳನ್ನು ದೂರೀಕರಿಸಿ ಅಣ್ಣ ಅತ್ತಿಗೆಯರ ಸುಖವನ್ನರಿಸಿ ಬದುಕಿದವಳು. ಸರಸ್ವತಿಯ ಅತ್ತಿಗೆ ಪಾರ್ವತಿಯು ಅಷ್ಟೇ, ಸರಸ್ವತಿಯನ್ನು ಬಿಟ್ಟು ಒಂದು ಕ್ಷಣ ಕಾಲ ಇದ್ದವಳಲ್ಲ.

ಹೀಗೆ ಅತ್ತಿಗೆ-ನಾದಿನಿಯರು ಒಂದೆಡೆ ಹೊಟ್ಟೆ ಕಿಚ್ಚಿನಿಂದ ವೈರ, ದ್ವೇಷ, ಮತ್ಸರದಿಂದ ಕಂಡಿದ್ದಾರೆ. ಇನ್ನೊಂದೆಡೆ ಸಖಿ, ಸ್ನೇಹಿತೆಯರಾಗಿ, ಅಕ್ಕ-ತಂಗಿಯರಂತೆ ಸುಖ-ದುಃಖದಲ್ಲಿ ಭಾಗಿಯಾಗಿ ಚಿತ್ರಣಗೊಂಡಿದ್ದಾರೆ.

### ೭.೨.೪. ಸವತಿ

ಒಬ್ಬ ಪುರುಷನನ್ನು ಇಬ್ಬರು ಹೆಣ್ಣು ಮಕ್ಕಳು ಮದುವೆಯಾಗಿದ್ದು, ಅವರು ಒಬ್ಬರಿಗೊಬ್ಬರು ಸವತಿಯರಾಗುತ್ತಾರೆ. ಈ ಸವತಿ ಎಂಬ ಪದ ಮೂಲತಃ ಸಹವರ್ತಿ ಎಂಬುದರಿಂದ ಬಂದಿದೆ. ಸಹವರ್ತಿ ಎಂದರೆ ಈರ್ವರು ಸಮ ಸಮನಾದ ಹಕ್ಕು ಬಾಧ್ಯತೆಗಳನ್ನು ಹೊಂದಿದವರು. ಇಂತಹ ಹಕ್ಕು ಬಾಧ್ಯತೆಗಳನ್ನು ಗಂಡನಿಂದ ಪಡೆದ ಸ್ತ್ರೀಯರೆ ಸವತಿಯರು. ಸವತಿ ಎಂಬುದು ಮತ್ಸರ, ವೈರ, ಆಗದವರು ಎಂಬ ನಾನಾರ್ಥಗಳನ್ನು ಪಡೆದುಕೊಂಡಿದೆ. ಪುರಾಣ ಇತಿಹಾಸಗಳ ಕಾಲದಿಂದಲೂ ಇದು ಬೆಳೆದುಬಂದಿದೆ.

ಈ ಸವತಿ ಸಂಸ್ಕೃತಿ ಬೆಳೆದು ಬರಲು ಪುರುಷನ ಲೈಂಗಿಕ ಆಪೇಕ್ಷೆ ಮತ್ತು ಪ್ರತಿಷ್ಠೆ ಪ್ರಧಾನವೆಂದು ಪರಿಗಣಿಸಲಾದರೂ ಇದರ ಹಿಂದೆ ಸಂತಾನ ಅಪೇಕ್ಷೆಯ ಉದ್ದೇಶವಿದೆ. ಪತಿಯಾದವನು ಎರಡನೆಯ ಮದುವೆಯಾಗುವನೆಂದು ತಿಳಿದಾಗಲೂ, ಸತಿಯ ಮನಸ್ಸು

ಒಪ್ಪದಿದ್ದರೂ ಅದಕ್ಕೆ ಮೌನವಾಗಿಯೇ ಸಮ್ಮತಿಸಬೇಕಾಗಿತ್ತು. ಸ್ತ್ರೀಯ ಒಡಲಾಳದ ನೋವು, ಗಂಭೀರ ದೃಷ್ಟಿಯದ್ದಾಗಿದ್ದರೂ ಆಕೆ ಅದನ್ನು ಗಂಡನೆದುರು ತೋಡಿಕೊಳ್ಳುವಂತಿರಲಿಲ್ಲ. ಅಂತಹ ವ್ಯವಸ್ಥೆಯನ್ನು ಪ್ರತಿಭಟಿಸಿ ನಿಲ್ಲುವ ಶಕ್ತಿಯನ್ನು ಅವಳು ಆಗ ಪಡೆದುಕೊಂಡಿರಲಿಲ್ಲ. ಪುರುಷನಾದರೆ ತಾನು ಎರಡನೆಯ ಮದುವೆಯಾಗುವ ವಿಚಾರವನ್ನು ಪತ್ನಿಯ ಮುಂದಿಟ್ಟು ಅವಳ ಒಪ್ಪಿಗೆಗಾಗಿ ಕಾಯುವುದು ಅಂದಿನ ವ್ಯವಸ್ಥೆಗೆ ಸಲ್ಲದ ಮಾತಾಗಿತ್ತು. ಇದಕ್ಕೆ ಸಂಬಂಧಿಸಿದಂತೆ 'ಮರಳಿ ಮಣ್ಣಿಗೆ' ಕಾದಂಬರಿಯ ರಾಮೈತಾಳರು ತಮ್ಮ ಎರಡನೆಯ ಮದುವೆ ವಿಷಯದಲ್ಲಿ ಸೀನಮಯ್ಯನಿಗೆ ಮನದಟ್ಟು ಮಾಡಿಕೊಡುವ ಹೇಳಿಕೆಯನ್ನು ನಿರ್ದಶನವಾಗಿ ನೋಡಬಹುದು. "ಶೀನ ನಮ್ಮ ಮನೆಯ ಪಂಚಾತಿಕೆ ನಿನಗೆ ಗೊತ್ತಿಲ್ಲ. ನಮ್ಮಲ್ಲಿ ಒಬ್ಬ ಯಜಮಾನ ಎಂದರೆ ಒಬ್ಬನೇ ಯಜಮಾನ. ಗಂಡನು ಒಂದು ಹೇಳುವುದು, ಹೆಂಡತಿ ಇನ್ನೊಂದನ್ನು ಅನ್ನುವುದೇ ಈವರೆಗೆ ನಡೆದಿದ್ದಿಲ್ಲ."[೧೫] ಇಂತಹ ವ್ಯವಸ್ಥೆಯ ಬೇರು ಗಟ್ಟಿಗೊಂಡಿರುವಾಗ ಸ್ತ್ರೀ ಅದನ್ನು ವಿರೋಧಿಸುವಂತಿರಲಿಲ್ಲ. ಪುರುಷ ಪ್ರಧಾನ ಸಮಾಜದಲ್ಲಿ ಈ ವ್ಯವಸ್ಥೆಯನ್ನು ವಿರೋಧಿಸಿ ಬಾಳಲಾಗದೆ ಸ್ತ್ರೀ ಸಿಟ್ಟನ್ನು ಹೊಸದಾಗಿ ಬರುವ ಹೆಣ್ಣಿನ ಮೇಲೆ ತೀರಿಸಿಕೊಳ್ಳುತ್ತಾಳೆ. ಈ ಬಗೆಯ ಸವತಿ ಮತ್ಸರ ಸಹಜವಾದುದು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಬಂಜೆಯಾದ ಜಟ್ಟಮ್ಮ ಗಂಡ ಭರಮೈ ಹೆಗ್ಗಡೆಗೆ ತಾನೇ ಮುಂದೇ ನಿಂತು ಎರಡನೆಯ ಮದುವೆ ಮಾಡುತ್ತಾಳೆ. 'ಸಂಧ್ಯಾರಾಗ' ಕಾದಂಬರಿ ಈ ನೆಲೆಯಲ್ಲಿ ಒಂದು ಹೆಜ್ಜೆ ಮುಂದು. ಈ ಕಾದಂಬರಿಯ ಕೇಂದ್ರ ಬಿಂದುವಾದ ಮೀನಾಕ್ಷಮ್ಮ ಸಂಪ್ರದಾಯಶೀಲ ಆದರ್ಶ ಗೃಹಿಣಿ. ಏನೇನೂ ಮಾಡಿದರೂ ಮಕ್ಕಳಾಗದಿರುವಾಗ ಗಂಡನಿಗೆ ಎರಡನೆಯ ಮದುವೆ ಮಾಡುವುದು ಅನಿವಾರ್ಯವಾಗಿ ತೋರುತ್ತದೆ.

**೭.೨.೫. ಅತ್ತೆ-ಸೊಸೆ**

ಕೌಟುಂಬಿಕ ಜೀವನದಲ್ಲಿ ಅತ್ತೆ-ಸೊಸೆಯರ ಸಂಬಂಧ ತುಂಬಾ ಹಳೆಯದು. ಮದುವೆಯ ನಂತರ ವಧುವಿನ ತಾಯಿ-ತಂದೆ, ಅತ್ತೆ-ಮಾವರಿಗೆ ಧಾರೆಯೆರೆದು ಕೊಡುವಾಗ, ಇಂದಿನಿಂದ ಇವಳು ನಮ್ಮ ಮಗಳಲ್ಲ, ನಿಮ್ಮ ಮಗಳು. ಏನಾದರೂ ತಪ್ಪು ಮಾಡಿದರೆ ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು ಎಂದು ವಿನಂತಿಸಿಕೊಂಡರೆ. ಅತ್ತೆ ಮಾವಂದಿರು ಪ್ರಾರಂಭದ ದಿನಗಳಲ್ಲಿ ಸೊಸೆಯನ್ನು ಮಗಳಂತೆಯೇ ಕಾಣುತ್ತಾರೆ. ಆದರೆ ದಿನಗಳು ಉರುಳಿದಂತೆ ಸೊಸೆಯನ್ನು ಅನುಮಾನದ ದೃಷ್ಟಿಯಿಂದ ನೋಡುವುದು, ಹರಿಹಾಯುವುದು, ಕಿಡಿಕಾರುವುದು, ನಿತ್ಯ ಚಟುವಟಿಕೆಗಳಾಗುತ್ತವೆ. ಸೊಸೆಯನ್ನು ವೈರಿಯಂತೆ ಕಂಡವರಲ್ಲಿ ಅತ್ತೆಯವರ ಪಾಲು ಹೆಚ್ಚಾಗಿದೆ.

"ಪುರುಷ ಎಂದ ಕೂಡಲೇ ಯಜಮಾನ ಎಂಬ ಕಲ್ಪನೆ ಮೂಡುವುದು ಸಹಜ. ಮನೆಯ ಎಲ್ಲಾ ಅಧಿಕಾರದ ಹಕ್ಕು ಬಾಧ್ಯತೆಗೆ ಪುರುಷನೇ ಬಾಧ್ಯವಾಗಿರುವಾಗ, ಯಾವ ಅಧಿಕಾರ, ಹಕ್ಕುಗಳನ್ನು ಅವಲಂಬಿಸದ ಸ್ತ್ರೀ ಅಲ್ಲಿ ಸಹಜವಾಗಿಯೇ ಶೋಷಣೆಗೆ ಒಳಗಾಗುತ್ತಾಳೆ.

ಈ ಹಕ್ಕು ಬಾಧ್ಯತೆಗಳು ಪುರುಷನಿಂದ ಸಾಗಿ ಬರುವಾಗ ಸ್ತ್ರೀ ತನಗಿಂತ ಹಿರಿಯಳಾಗಿದ್ದರೂ ಪುರುಷನ ಯಜಮಾನಿಕೆಯಲ್ಲಿ ಕುಬ್ಜಳಾಗಿ ಕಾಣುತ್ತಾಳೆ. ಕೆಲವೊಂದು ಬಾರಿ ಮಗನ ಅಂಕಿತಕ್ಕೂ, ಒಳಗಾಗುವ ಸಾಧ್ಯತೆ ಇದೆ. ಈ ಸಾಧ್ಯತೆಯಿಂದಾಗಿಯೇ ಸ್ತ್ರೀಯರು ಅನುಭವಿಸುವ ಯಾತನೆ, ನೋವು, ಅವಮಾನಗಳು ಅವಳ ಮನದಾಳದಲ್ಲಿ ಗಟ್ಟಿಗೊಳ್ಳುತ್ತಾ ಹೋಗುತ್ತದೆ. ಹೀಗೆ ಪುರುಷನ ವಿರುದ್ಧ ಧ್ವನಿ ಎತ್ತಲಾಗದೆ ಅಸಹಾಯಕ ಸ್ಥಿತಿಯಲ್ಲಿ ಬದುಕು ಸಾಗಿಸುತ್ತಾಳೆ. ಈ ಹತಾಶೆಯ ಸೇಡನ್ನು ತೀರಿಸಿಕೊಳ್ಳಲು ಅವಕಾಶಗಳಿಗಾಗಿ ಕಾಯುತ್ತಾಳೆ. ಹೊಸದಾಗಿ ಮನೆ ಸೇರಿದ ಹೆಣ್ಣು-ಹೆಣ್ಣನ್ನು ಶೋಷಿಸುವಂತಹ ಪರಿಸ್ಥಿತಿ, ಅವಳು ಬದುಕಿ ಬಾಳುವ ಪರಿಸರದಿಂದಲೇ ಉಗಮವಾಗುತ್ತದೆ. ಸೊಸೆ, ಅತ್ತೆಯ ಶೋಷಣೆಗೆ ಒಳಗಾಗಿಯೂ ಪ್ರತಿಭಟಿಸಲಾಗದೆ ತಮ್ಮ ಪೂರ್ವಜನ್ಮದ ಕರ್ಮದ ಫಲವೆಂದೇ ನಂಬಿ ತಮ್ಮ ನೋವು, ಯಾತನೆ, ಸಂಕಟ ಮತ್ತು ದುಃಖವನ್ನು ಅದುಮಿಟ್ಟುಕೊಂಡವರು ಒಂದೆಡೆ ಕಂಡು ಬಂದರೆ, ಇನ್ನೊಂದೆಡೆ ಕೆಲವು ಸೊಸೆಯರು ವಿನಾಕಾರಣ ಅಪವಾದಕ್ಕೆ ಗುರಿಯಾಗುವ ಸಂದರ್ಭ ಒದಗಿ ಬಂದಾಗ ಅನ್ಯಾಯವನ್ನು ಪ್ರತಿಭಟಿಸುವ ಧೈರ್ಯವನ್ನು ಅವಳಲ್ಲಿ ಕಾಣುತ್ತೇವೆ. ಹೀಗೆ ಸರಸ-ವಿರಸಗಳಿಂದ ಕೂಡಿದ ಅತ್ತೆ-ಸೊಸೆಯರ ಸಂಬಂಧಗಳನ್ನು ಸ್ವಾತಂತ್ರ್ಯಪೂರ್ವ ಕಾಲದ ಕನ್ನಡ ಕಾದಂಬರಿಗಳಲ್ಲಿ ಕಾದಂಬರಿಕಾರರು ಚಿತ್ರಿಸಿದ್ದಾರೆ. ಯಾವುದೇ ಪ್ರಮುಖ ಕಾರಣಗಳಿಲ್ಲದೆ ಅತ್ತೆಯಾದವಳು ಸೊಸೆಯನ್ನು ಮಾತ್ಸರ್ಯದಿಂದ ಕಂಡಿದ್ದಾಳೆ. ಇಲ್ಲಿ ಸೊಸೆ ಯಾವ ತಪ್ಪು ಮಾಡದಿದ್ದರೂ ತಪ್ಪಿತಸ್ಥಳಾಗಿ ಅತ್ತೆಯಿಂದಾಗುವ ಶೋಷಣೆಯನ್ನು ಮೌನವಾಗಿಯೇ ಅನುಭವಿಸಿದ್ದಾಳೆ. ಇದಕ್ಕೆ ಸಾಕ್ಷಿಯಾಗಿ 'ಮಾಡಿದುಣ್ಣೊ ಮಹಾರಾಯ' ಕಾದಂಬರಿಯ ಅತ್ತೆ ತಿಮ್ಮಮ್ಮ, ಸೊಸೆ ಸೀತೆ, 'ಸುಬ್ಬಣ್ಣ' ಕಾದಂಬರಿಯ ಯಜಮಾನಿ, ಸೊಸೆ ಲಲಿತಮ್ಮಳನ್ನು ಕಾರಣವಿಲ್ಲದೆ ಜರಿಯುವುದು, ಆಸ್ತಿ ಇಲ್ಲದೆ ಸಂಪತ್ತಿಗಾಗಿ ಅಣ್ಣನ ಮಗಳನ್ನು ಸೊಸೆಯಾಗಿಸಿಕೊಂಡ 'ನಿಸರ್ಗ' ಕಾದಂಬರಿಯ ಚಿಮ್ಮವ್ವ, ಅಣ್ಣನ ಆಸ್ತಿ ತನ್ನದಾಗದೆಂದು ತಿಳಿದು ಸೊಸೆ ತಾರಾಳಿಗೆ ಇಲ್ಲದ ಕಿರುಕುಳ ಕೊಡುವಳು. ಅರೆಹೊಟ್ಟೆ, ಅರೆಬಟ್ಟೆ, ಸಾಲದ್ದಕ್ಕೆ ಮಾನಸಿಕವಾಗಿ ಹಿಂಸೆ ಕೊಟ್ಟದ್ದನ್ನು ನೋಡಬಹುದು. ಇಂತಹದೆ ವಾಸ್ತವ ಜೀವನ ಚಿತ್ರಣವನ್ನು 'ಮಾಡಿದುಣ್ಣೊ ಮಹಾರಾಯ' ಕಾದಂಬರಿ ಬಿಚ್ಚಿಟ್ಟಿದೆ. ಆದರೆ ಅತ್ತೆ ತಿಮ್ಮಮ್ಮ ಸೊಸೆ ಸೀತೆಯನ್ನು ದ್ವೇಷಿಸಲು ಕಾರಣ ಮಾತ್ರ ಬೇರೆಯಾಗಿದೆ. ತನ್ನ ಸಂಬಂಧಿಕರ ಕನ್ನೆಯನ್ನು ತಿರಸ್ಕರಿಸಿ ಸೀತೆಯನ್ನು ತಂದುಕೊಂಡದ್ದು ಕಾರಣ. "ಇದೇನೆ

ರಂಗವಲ್ಲಿಯನ್ನು ಸಣ್ಣಗೆ ಕೊರೆಯುತ್ತಾ ಕುಕ್ಕರಿಸಿದ್ದಿಯೇ? ಸೀತೆಯನ್ನು ಚಿವುಡುತ್ತಾಳೆ."[೧೬] ಇಂಗ್ಲಿಷ್ ವಿದ್ಯೆ ಕಲಿತ ಸೊಸೆ ಪತ್ರಿಕೆ ಓದುವುದನ್ನು ಮಾತ್ರ ಸಹಿಸುತ್ತಿರಲಿಲ್ಲ. ಹೀಗೆಯೇ ಮೇಲಿನ ಎಲ್ಲಾ ಅತ್ತೆಯರು ಸೊಸೆಯಂದಿರನ್ನು ಕೀಳಾಗಿಯೇ ನಡೆಸಿಕೊಂಡಿದ್ದಾರೆ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣನ್ನು ದ್ವಿತೀಯ ದರ್ಜೆಯ ಪ್ರಜೆಯನ್ನಾಗಿ ಕಂಡಿರುವುದಾದರೆ ಅದೇ ವ್ಯವಸ್ಥೆಯಲ್ಲಿ ಬಾಳಿದ ಅತ್ತೆಯು ಒಂದು ಹೆಣ್ಣೇ. ಆದರೆ ಈ ಅತ್ತೆ ಸೊಸೆಯರನ್ನು ತೃತೀಯ ದರ್ಜೆಯ ಪ್ರಜೆಯನ್ನಾಗಿ ಕಂಡಿರುವುದು ಅಷ್ಟು ಸಮಂಜಸವಾದುದಲ್ಲ.

ಸಮಾಜ ಸುಧಾರಕರಿಂದ ಪ್ರೇರಿತವಾದಂತೆ ತೋರುವ ಇನ್ನುಳಿದ ಅತ್ತೆಯರು ತಮ್ಮಂತೆ ಬಾಳುವ ಸೊಸೆಯರ ನೋವಿಗೆ ಸ್ಪಂದಿಸಿದ್ದಾರೆ. ಸೊಸೆಯನ್ನು ಮಗಳು ಎಂಬಂತೆ ಕಾಣುವಲ್ಲಿ 'ವಿರಾಗಿಣಿ' ಕಾದಂಬರಿ ಸಾಕ್ಷಿಯಾಗಿ ನಿಲ್ಲುತ್ತದೆ. ಇಲ್ಲಿಯ ಸೊಸೆ ಚಂದ್ರಪ್ರಭಾ ಅತ್ತೆಯನ್ನು ತಾಯಿಯ ಸ್ವರೂಪದಲ್ಲಿ ಕಂಡಿದ್ದರೆ, ಅತ್ತೆ ನರಸಮ್ಮ ಸೊಸೆಯನ್ನು ಮಗಳೆಂದೇ ಆಧರಿಸಿದ್ದಾಳೆ. 'ಮರಳಿ ಮಣ್ಣಿಗೆ' ಕಾದಂಬರಿಯ ಸತ್ಯಭಾಮೆ ಮಗನ ಕೆಟ್ಟ ನಡಾವಳಿಗಾಗಿ ದ್ವೇಷಿಸಿದರೆ, ಸೊಸೆ ನಾಗವೇಣಿಯನ್ನು ಬಹು ಅಕ್ಕರೆಯಿಂದ ಕಾಣುತ್ತಾಳೆ. ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಅತ್ತೆ ದಾನಮ್ಮ ಹೆಗ್ಗಡತಿ ಸೊಸೆ ದೇವಮ್ಮಳ ಬಗೆಗೆ ಒಂದು ಮಾತನ್ನು ಆಡುವುದಿಲ್ಲ, ಸೊಸೆಯೂ ಅಷ್ಟೇ. ಹೀಗೆ 'ಮರಳಿ ಮಣ್ಣಿಗೆ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಂತೂ ಆದರ್ಶ ಅತ್ತೆ–ಸೊಸೆಯರ ವಾಸ್ತವಿಕ ಜೀವನವನ್ನು ಕಟ್ಟಿಕೊಟ್ಟಿದೆ.

### ೭.೨.೬. ಅಜ್ಜಿ

ಸ್ತ್ರೀ ಜನನದಿಂದ ಹಿಡಿದು ಜೀವಿತದ ಅಂತ್ಯದವರೆಗೆ ಪುರುಷನನ್ನೇ ಅವಲಂಬಿಸಿದ್ದಾಳೆ. ಪುರುಷನ ಏಳ್ಗೆಗಾಗಿಯೇ ಬದುಕುತ್ತಿದ್ದಾಳೆ. ಆರ್ಥಿಕ ಮತ್ತು ಸಾಮಾಜಿಕವಾಗಿ ಹೀನರೆಂದು ಭಾವಿಸಿದ ಪುರುಷ ಸಮಾಜ, ಧಾರ್ಮಿಕ ಕಟ್ಟಳೆಗಳ ನೆಲೆಯಲ್ಲಿ ಅವಳನ್ನು ದೇವತಾಸ್ಥಾನಕ್ಕೇರಿಸಿ ಮೂಲೆಗುಂಪು ಮಾಡಿದೆ. ಈ ಹೇಳಿಕೆಯನ್ನು ಸಮರ್ಥಿಸುವ "ಸ್ತ್ರೀಯು ಪಿತನಿಂದ, ಸಹೋದರನಿಂದ, ಪತಿಯಿಂದ ಮತ್ತು ಇತರ ಸಂಬಂಧಿಗಳಿಂದ ಗೌರವಿಸಲ್ಪಡಬೇಕು ಮತ್ತು ಪೂಜಿಸಲ್ಪಡಬೇಕು. ಅವಳ ಇಚ್ಛೆಯೂ ನಮ್ಮ ಏಳ್ಗೆಯನ್ನು ಬಯಸುವುದೇ ಆಗಿದೆ"[೧೭] ಎಂಬುವಲ್ಲಿ ಯಾವ ಕಾಲಕ್ಕೂ ಸಹ, ಸ್ತ್ರೀಯಾದವಳು ಪುರುಷನ ಯೋಗಕ್ಷೇಮಕ್ಕಾಗಿ ಬದುಕಬೇಕು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಹೆಣ್ಣಾಗಿ ಜನಿಸಿದ ಪ್ರತಿಯೊಬ್ಬರೂ ಹುಟ್ಟಿನಿಂದ ತಂದೆಯ ಆಶ್ರಯ, ಯೌವ್ವನದಲ್ಲಿ ಗಂಡನ ಆಶ್ರಯ, ಮುಪ್ಪಿನಲ್ಲಿ ಮಕ್ಕಳ ಆಶ್ರಯದಲ್ಲಿ ಬದುಕಬೇಕಾಗಿದ್ದರಿಂದ ಸ್ತ್ರೀಗೆ ಸ್ವಾತಂತ್ರ್ಯದ ಅವಶ್ಯಕತೆ ಇಲ್ಲವೆನ್ನುವ ಮನುಸ್ಮೃತಿಯ ಹೇಳಿಕೆ ಒಪ್ಪುವಂಥದಲ್ಲ. ಇಂದಿನ ವೈಜ್ಞಾನಿಕ ಯುಗದಲ್ಲಿ ಅವನ್ನು ಸಾರಾಸಗಟಾಗಿ ಅಲ್ಲಗೆಳೆಯಲಾಗುತ್ತದೆ. ಈ ತೆರನಾದ ನಿರ್ಬಂಧನೆಗಳು ಮತ್ತು

ಕಟ್ಟಳೆಗಳಿಂದ ಸ್ತ್ರೀಯರ ಸ್ಥಾನ–ಮಾನಗಳ ಮೇಲೆ ಗಾಢವಾದ ದುಷ್ಪರಿಣಾಮವಾಗಿದೆ. ಹೆಚ್ಚು ಮುಪ್ಪಾವಸ್ಥೆಗೆ ಕಾಲಿಟ್ಟಾಗಲಂತೂ ಗೃಹಕೃತ್ಯದ ವ್ಯವಹಾರಗಳಿಗೆ ಸಂಬಂಧಿಸಿದಂತೆ ಅನುಭವ ಸ್ಥಳಾಗಿದ್ದರೂ ಮನೆಯ ಯಜಮಾನನ ತಾಯಿಯಾಗಿ ಗೌರವಾದರಗಳಿಗೆ ಮಾತ್ರ ಅರ್ಹಳಾಗುತ್ತಾಳೆ. ಆದರೆ ಜವಾಬ್ದಾರಿಯುತವಾದ ಅಧಿಕಾರ, ಹೊಣೆಗಾರಿಕೆಗಳಿಂದ ದೂರವಾಗಿಯೇ ಇದ್ದಾಳೆ.

"ವಿಕ್ಟೋರಿಯನ್ ಕಾಲದ ಪ್ರಸಿದ್ಧ ಕಾದಂಬರಿಗಾರ್ತಿ ಜಾರ್ಜ್ ವಿಲಿಯಟ್‌ಳ ಕೃತಿಗಳ ಬಗೆಗೆ ಬರೆಯುವಾಗ, ಜಮಿಲ್‌ವಾಸ್ತಿ ಹೀಗೆ ಹೇಳುತ್ತಾಳೆ. 'ತಾರುಣ್ಯವು ಬರುತ್ತದೆ, ಹೋಗುತ್ತದೆ. ಆದರೆ ಸ್ಥಿರವಾಗಿ ನಿಲ್ಲುವುದು ವೃದ್ಧಾಪ್ಯವೊಂದೇ.' ಇದು ಮುದುಕಿಯರ ಬದುಕಿನಲ್ಲಾದ ಅನುಭವಗಳ ಮೌಲ್ಯದ ಪ್ರತೀಕ. ಹೀಗೆ ಮದುಕಿಯರು, ತಮ್ಮ ಆಸೆ, ಆಕಾಂಕ್ಷೆಗಳೆಲ್ಲವನ್ನು ಹತ್ತಿಕ್ಕಿ ತಮ್ಮ ಕುಟುಂಬದ ಒಳತಿಗಾಗಿ ಚಿಂತಿಸಿದ್ದಾರೆ."[೧೮]

ಮಕ್ಕಳು, ಮೊಮ್ಮಕ್ಕಳ ಪ್ರೀತಿ, ಗೌರವಾದರಗಳಿಗಾಗಿ ಹಂಬಲಿಸಿದ್ದಾರೆ. ಅವು ದೊರೆಯದಿದ್ದಾಗಲೂ ವ್ಯಸನ ಪಡದೆ ತಮ್ಮ ಉಸಿರಿರುವವರೆಗೂ ಅವರ ಕ್ಷೇಮಕ್ಕಾಗಿ ದೇವರಲ್ಲಿ ಪ್ರಾರ್ಥಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯಪೂರ್ವದ ಕಾದಂಬರಿಕಾರರು ಚಿತ್ರಿಸಿದ ಅಜ್ಜಿಯರ ಚಿತ್ರಣ ನೋಡಬಹುದು. ಇಲ್ಲಿಯ ಅಜ್ಜಿಯರು ಕೆಲಸಕ್ಕೆ ಬಾರದವರಂತೆ ಕಂಡರೂ ಬೌದ್ಧಿಕ ಜಾಣ್ಮೆಯುಳ್ಳವರು. ಆದರೆ ಮಾನಸಿಕವಾಗಿ ಶಕ್ತಿಗುಂದದ ಭ್ರಮಾ ಜೀವಿಗಳಲ್ಲ. ಪ್ರಕೃತಿ ಸಹಜವಾಗಿ ಜರುಗುವ ಕ್ರಿಯೆಗಳನ್ನು ಅಲ್ಲಗೆಳೆಯದೇ ಅವನ್ನು ಸಾಮಾನ್ಯ ಎಂಬಂತೆ ಸ್ವೀಕರಿಸಿದ್ದಾರೆ. ಧೈರ್ಯ, ಸ್ಥೈರ್ಯಗಳ ಸ್ಫೂರ್ತಿಯಿಂದ ಸ್ವಾಭಿಮಾನದ ಸಂಕೇತವಾಗಿ ಅರಿವಿಗಿಂತಲೂ ಇರುವಿಕೆನ್ನು ನೆಚ್ಚಿ ಬದುಕಿದವರು. ಯಾವುದೇ ಪರಿಸ್ಥಿತಿಯಲ್ಲಿ ಧೈರ್ಯಗೆಡದೇ ತಾಳ್ಮೆಯಿಂದ ಎದುರಿಸಿದ್ದಾರೆ. ಇಂಥ ಅಜ್ಜಿಯರಿಗೆ ಸಾಕ್ಷಿಯಾಗಿ 'ಮಾಡಿದುಣ್ಣೋ ಮಹಾರಾಯ' ಕಾದಂಬರಿಯ ವೆಂಕಮ್ಮ, 'ಮರಳಿ ಮಣ್ಣಿಗೆ' ಕಾದಂಬರಿಯ ಪಾರ್ವತಿ, ಸರಸ್ವತಿ, ಪರಂಪರೆಯ ಮೌಲ್ಯಗಳಲ್ಲಿ ಬದುಕಿದವರು. ಮಾನವೀಯ ಮೌಲ್ಯಗಳ ಪ್ರತಿನಿಧಿಯಂತಿರುವ ಅಜ್ಜಿ ಪಾರ್ವತಿ ವಿನಾಃ ಕಾರಣ ಸೀತೆಯನ್ನು ಹೊಡೆದಾಗ "ಹೀಗೆ ಹೊಡೆಯುತಾರೆಯೇನೆ ತಿಮ್ಮು? ಬೇಕೆಂದು ಅವಳು ಅನ್ನಕ್ಕೆ ಉಪ್ಪು ಹಾಕುತ್ತಾಳೆಯೇ? ಎಲ್ಲಿಯಾದರೂ ಪೂಣ್ಯವಂತರ ಮನೆಯನ್ನು ಸೇರಿಕೊಂಡು ಬದುಕಿಕೊಳ್ಳುತ್ತಾ ಇದ್ದ ಹೆಣ್ಣನ್ನು ತಂದದ್ದು ಅದರ ಜೀವನ ಸಹಿತ ಕೊಲ್ಲುವುದಕ್ಕಾಯಿತು"[೧೯] ಎನ್ನುವ ಅಜ್ಜಿ ಪಾರ್ವತಿ ಸೀತೆಯ ಮೇಲೆ ಕನಿಕರ, ಮಮತೆಯನ್ನು ಸೂಚಿಸುವಂತಹದ್ದು. ಇಲ್ಲಿಯ ಅಜ್ಜಿಯರು, ತಮ್ಮ ವಿಚಾರ, ವಿಮರ್ಶೆಗಳಿಂದ ಸ್ವಲ್ಪ ಭಿನ್ನವಾಗಿ ನಿಂತವರು. ಪರಂಪರೆಯ ನೆರಳಿನಲ್ಲಿ ಬದುಕು ಸಾಗಿಸಿರುವ ಅಜ್ಜಿಯರು. ಈ ನೆರಳಿನಿಂದ ದೂರ ಸರಿಯಲು ಪ್ರಯತ್ನಿಸಿದಾಗ ಕೆಲವರಿಗೆ ಗೆಲುವುಂಟಾದರೆ ಇನ್ನು ಕೆಲವರಿಗೆ ಸೋಲುಂಟಾಗುವುದು ಸಹಜ.

ಪರಂಪರೆಯ ಪ್ರತಿನಿಧಿಯಾಗಿ ನಿಲ್ಲುವ 'ಚೋಮನದುಡಿ' ಕಾದಂಬರಿಯ ಸಂಕಪ್ಪಯ್ಯನವರ ತಾಯಿ ಕಾದಂಬರಿಯ ವಸ್ತುವಿಗೆ ತಿರುವು ಕೊಟ್ಟವಳು. ಸುಧಾರಣೆಯ ಗಾಳಿ ಮತ್ತು ಗಾಂಧಿತತ್ವದ ಪ್ರಭಾವದಿಂದ ಪ್ರೇರಿತರಾದಂತೆ ಕಾಣುವ ಧಣಿ ಸಂಕಪ್ಪಯ್ಯನವರು ಜೋಮನ ಆಸೆಯನ್ನು ಅರ್ಥೈಸಿಕೊಂಡವರು. ಆದಾಗ್ಯೂ ತಾಯಿಯ ಮಾತು ಮೀರದೆ ಅಸಹಾಯಕರಾಗುತ್ತಾರೆ. ಹೀಗೆ ಸಂಕಪ್ಪಯ್ಯನವರ ತಾಯಿ ಅಂದರೆ ಮುದುಕಿ ಜಡ್ಡುಗಟ್ಟಿದ ಪರಂಪರಾಗತ ಮೌಲ್ಯಗಳ ಪ್ರತಿನಿಧಿ. ಅಂದಿನ ದಿನಗಳಲ್ಲಿ ಯಾರೊಬ್ಬರೂ ಒಪ್ಪದ ಈ ಸಂಗತಿಯಿಂದ ಮಗನಿಗೆ ಅಪಕೀರ್ತಿ ಬರುವುದೆಂಬ ನಂಬಿಕೆಯವಳು. ಇವಳ ಈ ನಿಲುವಿನಿಂದಾಗಿ ಚೋಮನ ಆಸೆಗೆ ಕಲ್ಲು ಬಿದ್ದಂತಾಗುತ್ತದೆ. ಹೀಗಾಗಿ ಈ ಪಾತ್ರ ಎಲ್ಲ ಕಾದಂಬರಿಗಳ ಮುದಕಿಗಿಂತ ಭಿನ್ನವಾಗಿ, ಮಾನವೀಯ ಮೌಲ್ಯಗಳಿಗೆ ಕಂಟಕವೆನಿಸಿದೆ. ಉಳಿದ ಎಲ್ಲಾ ಕಾದಂಬರಿಗಳ ಮುದುಕಿಯರು ಮಾನವೀಯ ಮೌಲ್ಯಗಳಂತಿರುವ ಪ್ರೀತಿ, ಪ್ರೇಮ, ಸ್ನೇಹ, ಸಹಕಾರಕ್ಕಾಗಿ ಹಾತೊರೆದವರು. ಅನುಭವಗಳ ಕಣಿಯೇ ಅವರ ಪಾಲಿನ ಸಂಪತ್ತು. ಇಂಥ ವಿಶಿಷ್ಟ ಅನುಭವ ವಿಚಾರಗಳಿಂದ ಜನತೆಯ ಬಾಳನ್ನು ಹಸನುಗೊಳಿಸಿದ್ದಾರೆ. ಇದೆ ನೆಲೆಯ 'ಮರಳಿ ಮಣ್ಣಿಗೆ' ಕಾದಂಬರಿಯ ಸರಸ್ವತಿ, ಪಾರ್ವತಿ, ಒಂದೇ ಹೃದಯದ ಎರಡು ಜೀವಗಳು.

ಸಂಪ್ರದಾಯ, ಮೌಢ್ಯತೆಗಳನ್ನು ಅಪ್ಪಿಕೊಂಡಂತಿರುವ ಮುದುಕಿಯರೇ ಹೆಚ್ಚಾಗಿದ್ದರೂ, ಬದಲಾವಣೆಗೆ ಒಗ್ಗಿಕೊಂಡು ಜೀವನ ಸಾಗಿಸಿದ್ದಾರೆ. ಇದಕ್ಕೆ ನಿದರ್ಶನ, 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಚಿನ್ನಮ್ಮಳ ಅಜ್ಜಿಯನ್ನು ಕಾಣುವುದು. ಸಂಪ್ರದಾಯಿಕ ಸಮಾಜದಲ್ಲಿ ಪುರುಷ ಮೇಲ್ದರ್ಜೆಯಲ್ಲಿದ್ದರೆ ಸ್ತ್ರೀ ಕೆಳದರ್ಜೆಯಲ್ಲಿದ್ದಾಳೆ. ಹೀಗಾಗಿ ಇಲ್ಲಿಯ ಚಿನ್ನಮ್ಮಳ ಮದುವೆ ತಂದೆ ವೆಂಕಟಪ್ಪನಿಂದ ನಿರ್ಣಯವಾಗುತ್ತದೆ. ಬಾಲ್ಯದಿಂದಲೇ ಮುಕುಂದಯ್ಯನನ್ನು ಪ್ರೀತಿಸಿದ ಚಿನ್ನಮ್ಮ ಮದುವೆಯ ರಾತ್ರಿ ಪರಾರಿಯಾಗುತ್ತಾಳೆ. ತಂದೆ ವೆಂಕಟಪ್ಪನ ಸಾವಿನಿಂದ ಮನೆಗೆ ಮರಳಿದ ಚಿನ್ನಮ್ಮಳನ್ನು ಕಂಡು ಅಜ್ಜಿಗೆ ಜೀವವೇ ಬಂದಂತಾಗುತ್ತದೆ. ಪರಂಪರೆಯನ್ನು ನೆಚ್ಚಿಕೊಂಡಿರುವ ಅಜ್ಜಿಗೆ ಮೊಮ್ಮಗಳು ಓಡಿ ಹೋಗಿರುವುದು ಅಪರಾಧವಾಗಿ ತೋರುವುದಿಲ್ಲ. ಸಮಾಜದ ನಿಂದೆ, ಬಹಿಷ್ಕಾರಾದಿಯಾಗಿ ಯಾವುದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಬದಲಾದ ಸರಸ್ವತಿಗೆ ಹೊಂದಿಕೊಂಡಿದ್ದಾಳೆ.

## ೭.೩. ಧಾರ್ಮಿಕ ನೆಲೆ

ಲೌಕಿಕತೆಯನ್ನು ಮೀರಿ ನಿಂತ ಅಲೌಕಿಕ ಶಕ್ತಿಯುಳ್ಳ ಪವಿತ್ರ ಭಾವನೆಯ ನಿಗೂಢ ಶಕ್ತಿಯೇ ಧರ್ಮ. ಭಾರತೀಯ ಸಂಸ್ಕೃತಿ ಹಲವು ಧರ್ಮ, ದೇವತೆಗಳಿಂದ ಸಮ್ಮಿಳಿತವಾಗಿದೆ. "ಧರ್ಮ ಎನ್ನುವ ವ್ಯವಸ್ಥೆ ಹೆಚ್ಚು-ಕಡಿಮೆ ಸಂಪೂರ್ಣವಾಗಿ ಪುರುಷ ಪ್ರಧಾನವಾದದ್ದು.

ಪುರುಷನ ನಿಯಂತ್ರಣದಲ್ಲಿಯೇ ಬೆಳೆದು ಬಂದಿರುವಂಥ ಧಾರ್ಮಿಕ ವ್ಯವಸ್ಥೆ"[೨೦] ಎನ್ನುವ ಹೇಳಿಕೆಯಲ್ಲಿ ವಾಸ್ತವ ಚಿತ್ರಣವಿದೆ. ಧರ್ಮ ಎನ್ನುವ ಪರಿಕಲ್ಪನೆಯೇ ಬಲಿಷ್ಠತನವನ್ನು ಸೂಚಿಸುತ್ತದೆ. "ಸ್ತ್ರೀಯನ್ನು ಕುರಿತ ಧರ್ಮದ ಧೋರಣೆಗಳು ದ್ವಿಮುಖ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ. ಒಂದೆಡೆ ಆಕೆಯನ್ನು ದೇವತೆಯೆಂದು ಘೋಷಿಸುವುದು ಮತ್ತೊಂದೆಡೆ ಆಕೆಯ ಮೇಲಿನ ದೌರ್ಜನ್ಯಕ್ಕೆ ಮಾನ್ಯತೆ ನೀಡುವುದು. ಇದು ಧರ್ಮದಲ್ಲಿ ಅಡಗಿರುವ ವೈರುಧ್ಯಗಳಿಗೆ ಒಂದು ಉದಾಹರಣೆಯಷ್ಟೆ."[೨೧] ಇಂತಹ ವ್ಯವಸ್ಥಿತವಾದ ಬಲೆಯನ್ನು ಹೆಣೆದಿರುವ ಪುರುಷ ಸಮಾಜ, ಒಂದೆಡೆ ಸ್ತ್ರೀಯನ್ನು ದೇವತೆಯೆಂದು ಗೌರವಿಸಿ ಮೂಲೆಗೆ ತಳ್ಳಿದೆ. ಹೀಗಾಗಿ ಧರ್ಮದ ಕಟ್ಟಳೆಗಳಿಗೆ ಸಿಕ್ಕ ಸ್ತ್ರೀ, ಸಂಪ್ರದಾಯ, ನಂಬಿಕೆ, ಆರಾಧನೆ, ಆಚರಣೆಗಳಲ್ಲಿಯೇ ವಿಶ್ವಾಸವಿರಿಸಿ ತನ್ನ ಮೇಲಾಗುವ ಶೋಷಣೆ, ದೌರ್ಜನ್ಯಗಳನ್ನು ಅರಿಯುವ ಗೋಜಿಗೂ ಹೋಗದೇ ಮೌನವಾಗಿ ಅನುಭವಿಸಿದ್ದಾಳೆ. ಪ್ರಸ್ತುತ ಸಂದರ್ಭದಲ್ಲಿಯೂ ಗ್ರಾಮೀಣ ಪ್ರದೇಶದ ಸ್ತ್ರೀ ಸಮಾಜ ಧರ್ಮದಲ್ಲಿಯೇ ನಂಬಿಕೆಯಿರಿಸಿದ್ದನ್ನು ಕಾಣುತ್ತೇವೆ. ಹೀಗಾಗಿ ಸಂಪ್ರದಾಯಿಕ ವೈದಿಕ ಪುರುಷ ಸಮಾಜ ಧಾರ್ಮಿಕ ಕಲ್ಪನೆಗಳನ್ನು ಮತ್ತಷ್ಟು ಗಟ್ಟಿಗೊಳಿಸುವುದರ ಮೂಲಕ ಸ್ತ್ರೀಯನ್ನು ಶೋಷಿಸುತ್ತಲೇ ಬಂದಿದೆ.

ಇಲ್ಲಿ ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕಾದಂಬರಿಗಳಲ್ಲಿ ಸ್ತ್ರೀಯರು ಆಚರಣೆ, ಆರಾಧನೆ, ಸಂಪ್ರದಾಯ, ನಂಬಿಕೆಗಳನ್ನು ಹೆಚ್ಚಿಕೊಂಡು ಜೀವನ ಸಾಗಿಸಿದ್ದಾರೆ. ಹೀಗೆ ಕಾದಂಬರಿಗಳಲ್ಲಿ ಬರುವ ಸ್ತ್ರೀ ಜೀವನವನ್ನು ಧರ್ಮದ ಹಿನ್ನೆಲೆಯಲ್ಲಿ ಸ್ತ್ರೀಪರ ದೃಷ್ಟಿಕೋನದಿಂದ ಚರ್ಚಿಸಲು ಪ್ರಯತ್ನಿಸಿದೆ. ಉಪನಿಷತ್ತುಗಳ ಕಾಲದಲ್ಲಿ ಧಾರ್ಮಿಕ, ಸಾಮಾಜಿಕ, ಕ್ಷೇತ್ರಗಳಲ್ಲಿ ಸ್ತ್ರೀಯರ ಸ್ಥಾನಮಾನಗಳು ಉತ್ತಮವಾಗಿದ್ದವೆಂದು ತಿಳಿದುಬರುತ್ತದೆ. ಭಾರತೀಯ ಸಂಸ್ಕೃತಿಯು ಕೂಡ ಸ್ತ್ರೀಯನ್ನು ದೇವತೆಯ ಸ್ವರೂಪದಲ್ಲಿ ಕಂಡಿದೆ. "ಕ್ರಮೇಣ ಸ್ತ್ರೀಯರ ಸ್ಥಾನಮಾನಗಳು ಗ್ರೀಕರ ಕಾಲದಿಂದ ವಿನಾಶದತ್ತ ಸಾಗಿದವು. ಸ್ತ್ರೀಯರನ್ನು ದ್ವಿತೀಯ ದರ್ಜೆಯ ಪ್ರಜೆ ಇಲ್ಲವೆ ಗುಲಾಮರಂತೆ ನಡೆಸಿಕೊಳ್ಳಲಾಯಿತು. ಪುರುಷರ ಸೇವೆ ಮಾಡುವಲ್ಲಿಯೇ ಸ್ತ್ರೀಯರಿಗೆ ಸುಖವಿದೆ ಎಂದು ಹೇಳುವುದಷ್ಟೇ ಅಲ್ಲ. ಅದನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಆದರ್ಶಗಳನ್ನು ಹೇರಲಾಯಿತು. ಧರ್ಮ ಪಂಡಿತರು ಇಲ್ಲವೇ ಪುರೋಹಿತರಿಂದ ಸೃಷ್ಟಿಗೊಂಡ ಹೇಳಿಕೆಗಳು ಶಾಸನಗಳಾದವು"[೨೨] ಆದರೆ ಈ ಎಲ್ಲಾ ಕಟ್ಟುನಿಟ್ಟುಗಳನ್ನು ತಿರಸ್ಕರಿಸಿದ ಶರಣರು ಲಿಂಗಭೇದವನ್ನೆಣಿಸದೇ ಶಿವನ ಸನ್ನಿಧಿಯಲ್ಲಿ ಸಮಾನರೆಂದು ಸಾರಿದರು. ನುಡಿದಂತೆ ನಡೆದು ತೋರಿದರು. ಆದರೆ ದಿನಗಳು ಉರುಳಿದಂತೆ ಸ್ತ್ರೀ ಮೇಲಿನ ಹಿಡಿತಗಳು ಮತ್ತಷ್ಟು ಗಟ್ಟಿಗೊಂಡವು. ಈ ಹಿನ್ನೆಲೆಯಲ್ಲಿ ಇಂದಿರಬಾಯಿ ಕಾದಂಬರಿಯ ಸುಶೀಲಾ, ಜಲಜಾಕ್ಷಿ, 'ವಾಗ್ದೇವಿ' ಕಾದಂಬರಿಯ ಸುಶೀಲಾಬಾಯಿ, 'ಮಾಡಿದ್ದುಣ್ಣೊ ಮಹಾರಾಯ' ಕಾದಂಬರಿಯ ಅರುಂದಮ್ಮ, ಅವಳ ಮಗಳು ವೆಂಕಮ್ಮ, ಪಾರ್ವತಮ್ಮ,

ತಿಮ್ಮಮ್ಮ, ಸೀತೆ, ಸುಬ್ಬಮ್ಮ, 'ಸುಶೀಲೆ' ಕಾದಂಬರಿಯ ಸುಶೀಲೆ, 'ನಭಾ' ಕಾದಂಬರಿಯ ನಭಾ, ರಮಾಮಣಿ. 'ಮಾತೃನಂದಿನಿ' ಕಾದಂಬರಿಯ ಚಿತ್ರಕಲೆ, ನಂದಿನಿ, ಸುವರ್ಣ. 'ಸುಖಲತಾ' ಕಾದಂಬರಿಯ ಸುಖಲತಾ, 'ಸುಬ್ಬಣ್ಣ' ಕಾದಂಬರಿಯ ಲಲಿತಮ್ಮ 'ಸರಸಮ್ಮನ ಸಮಾಧಿ' ಕಾದಂಬರಿಯ ಜಾನಕಿ, ಸೀತಮ್ಮ, 'ಕಾನೂರು ಹೆಗ್ಗಡಿತಿ' ಕಾದಂಬರಿಯ ನಾಗಮ್ಮ-ಗೌರಮ್ಮ, ಪುಟ್ಟಮ್ಮ, 'ಮರಳಿ ಮಣ್ಣಿಗೆ' ಕಾದಂಬರಿಯ ಸರಸ್ವತಿ, ಪಾರ್ವತಿ, ನಾಗವೇಣಿ, ಪದ್ಮಾ ಮತ್ತು ಸೂರನ ಹೆಂಡತಿ ಬಚ್ಚಿ. 'ಬೆಟ್ಟದ ಜೀವ' ಕಾದಂಬರಿಯ ಶಂಕರಿ, ಲಕ್ಷ್ಮೀ, 'ನಿಸರ್ಗ' ಕಾದಂಬರಿಯ ರತ್ನವ್ವ, ಸುಂದರಾಬಾಯಿ, ಇಂದಿರಾ, 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ರಂಗಮ್ಮ, ಜಟ್ಟಮ್ಮ, ದಾನಮ್ಮ, ಹೆಗ್ಗಡಿತಿ, ದೇವಮ್ಮ, ಇವರೆಲ್ಲರೂ ಸ್ತ್ರೀ ಧರ್ಮವನ್ನು ಅವಲಂಬಿಸಿದವರು. ಸ್ತ್ರೀಗೆ ಮೀಸಲಾದ ಧರ್ಮವನ್ನು ತ್ಯಜಿಸಿ ಬದುಕಲು ಸಾಧ್ಯವೇ ಇಲ್ಲ ಎಂಬಂತೆ ಚಿತ್ರಣಗೊಂಡಿದ್ದಾರೆ.

ಪತಿಯನ್ನು ಪರದೈವವೆಂದು ತಿಳಿದಿರುವ ಸತಿಯ ನಡೆಯೇ ಸತಿಧರ್ಮ. ಪತ್ನಿಯು ಪತಿಯನ್ನು ಪೂಜಿಸಿ, ಆರಾಧಿಸಿ, ಅವನ ಸೇವೆಯಲ್ಲಿ ಸುಖವನ್ನರಸಬೇಕು. ಇದನ್ನು ಸತಿ ಧರ್ಮವೆಂದು ಕರೆಯಲಾಗಿದೆ. ಈ ನೆಲೆಯಲ್ಲಿ 'ಮಾಡಿದುಣ್ಣೊ ಮಹಾರಾಯ' ಕಾದಂಬರಿಯಲ್ಲಿ ಅರುಂದಮ್ಮ, ಏಳು ವರ್ಷದ ಕನ್ಯೆಯಿರುವಾಗಲೇ ಒಳ್ಳೆಯ ಗಂಡ ಸಿಗಲೆಂದು, ಗೌರಿ ಪೂಜೆ ಮಾಡಿದವಳು. "ಬೆಳಿಗ್ಗೆ ಉಷಃ ಕಾಲಕ್ಕೆ ಎದ್ದು ಮನೆಯ ಕೆಲಸವನ್ನೆಲ್ಲ ಮುಗಿಸಿಕೊಂಡು ಮಡಿಯುಟ್ಟುಕೊಂಡು ಅಡುಗೆ ಮಾಡುತ್ತಲೇ ನಿತ್ಯ ಗೌರಿಪೂಜೆಯನ್ನು ಬೃಂದಾವನದ ಪೂಜೆಯನ್ನು ಮುಗಿಸಿ ಅತ್ತೆ ಮಾವಂದಿರಿಗೂ ಗಂಡನಿಗೂ ನಮಸ್ಕಾರ ಮಾಡುತ್ತಿದ್ದಳು."[೨೩] ಗಂಡ ಸಾವನ್ನಪ್ಪಿದಾಗ ಸತಿ ಹೋಗಲು ನಿರ್ಧರಿಸಿ ಪತಿಯ ಚಿತೆಯೊಂದಿಗೆ ಸಜೀವ ದಹನಗೊಳ್ಳುತ್ತಾಳೆ. ಹೀಗೆ ಸ್ತ್ರಿಯರು ಇಂತಹ ಆಚರಣೆಗಳನ್ನು ಮನಸಾರೆ ಒಪ್ಪಿಕೊಂಡಿದ್ದಾರೆ.

**೭.೩.೧. ವ್ರತ ಆಚರಣೆ**

ಯಾವುದೇ ಅಲೌಕಿಕ ಶಕ್ತಿಯನ್ನು ನಂಬಿಕೊಂಡಿರುವ ಮಾನವ ತನಗಾಗಿಯೋ ಇಲ್ಲ ತನ್ನವರ ಸುಖ ಸಮೃದ್ಧಿಗಾಗಿಯೋ ಕೆಲವು ಸಂದರ್ಭಗಳಲ್ಲಿ ಉಪವಾಸವಿದ್ದು ದೇವರನ್ನು ಆರಾಧಿಸುವುದು ವ್ರತಾಚರಣೆ. ಈ ವ್ರತ-ಆಚರಣೆ ಹೆಚ್ಚಾಗಿ ಅಂಟಿಕೊಂಡಿರುವುದು ಹೆಣ್ಣು ಮಕ್ಕಳಿಗೆ. ಅದರಲ್ಲೂ ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳು ವಾರಕ್ಕೆ ಎರಡು ಮೂರು ದಿನ ಉಪವಾಸದಲ್ಲಿಯೇ ಕಳೆಯುತ್ತಾರೆ. ವ್ರತ ಆಚರಣೆಗಳಲ್ಲಿ ಅಳವಡಿಸಿಕೊಂಡು ಕಟ್ಟುನಿಟ್ಟಾಗಿ ಪಾಲಿಸುತ್ತಾ ಬಂದವರೆಂದರೆ ಮೇಲ್ವರ್ಗದ ಬ್ರಾಹ್ಮಣರು ಹಾಗೂ ಒಳಪಂಗಡಗಳಾದ ಪುರೋಹಿತ, ಜೋಯಿಸ ಹಾಗೂ ಕುಲಕರ್ಣಿಯ ಸ್ತ್ರಿಯರು. ಈ ನೆಲೆಯಲ್ಲಿ ಚಿತ್ರಣಗೊಂಡ 'ಮಾಡಿದುಣ್ಣೊ

ಮಹಾರಾಯ' ಕಾದಂಬರಿಯ ಅರುಂದಮ್ಮ ಬಾಲ್ಯದಿಂದಲೇ ಒಳ್ಳೆಯ ಗಂಡ ಸಿಗಲೆಂದು ಗೌರಿ ವ್ರತ ಮಾಡಿರುವುದು. 'ನಿಸರ್ಗ' ಕಾದಂಬರಿಯ ವೃದ್ಧೆ ಚಾಂಗಲವ್ವ ತಿಂದ ಬೆಳೆಸಿ ಯಾನ ಮಾಡೋದು ಈ ಕೊಡ್ಡು....? ಎಂದಾದರೊಮ್ಮಿ ಈ ಹೆಣ್ಣಿನ ಜನ್ಮ ನೀಗಿ ಹೋಗೋದ ಅಲ್ಲ.... ಈ ಹೆಣ್ಣಿನ ಕಾಯ ಮಣ್ಣಿನ ಸಮಾನ... ಇನ್ಯಾದಕ ಬರೋದೈತಿ... ತಿಂದ ಉಂಡ...? ಹೀಗೆ ಚಾಂಗಲವ್ವ ನೋವು, ಯಾತನೆಗಳಿಂದ ನೀಗಿಕೊಳ್ಳುವ ಸಲುವಾಗಿ ವಾರಕ್ಕೆ ಮೂರು ನಾಲ್ಕು ದಿವಸಗಳಾದರೂ ಉಪವಾಸ ಮಾಡುತ್ತಿದ್ದಳು."[೨೪] ಇದೆ ನೆಲೆಯಲ್ಲಿ ಚಿತ್ರಿತವಾದ 'ಮರಳಿ ಮಣ್ಣಿಗೆ' ಕಾದಂಬರಿಯ ಸರಸ್ವತಿ ಬಾಲ್ಯದಲ್ಲಿಯೇ ವಿಧವೆಯ ಪಟ್ಟಧರಿಸಿ, ವ್ರತದಾರಿಯಾಗಿ ತನ್ನ ಜೀವನವನ್ನು ಕೊನೆಗೊಳಿಸಿದ್ದಾಳೆ. 'ಸುಬ್ಬಣ್ಣ' ಕಾದಂಬರಿಯ ಲಲಿತಮ್ಮ ತನ್ನ ಕಣ್ಣೆದುರಿನ ಗಂಡನನ್ನು ದೇವರ ಪ್ರತಿರೂಪವಾಗಿ ಕಂಡವಳು. ಹೀಗೆ ವ್ರತ ಆಚರಣೆಗಳು ಬ್ರಾಹ್ಮಣ ಸ್ತ್ರೀಯರ ಬದುಕಿನ ಒಡಲಲ್ಲಿಯೇ ಮೊಳಕೆಯೊಡೆದು ಬೆಳೆದು ಬಂದಿದೆ. ವ್ರತ ಆಚರಣೆಗಳಲ್ಲಿಯೇ ಜೀವನ ಸಾರ್ಥಕ ಮಾಡಿಕೊಂಡಿದ್ದರೆ.

**೭.೩.೨. ಪ್ರಾರ್ಥನೆ, ಪೂಜೆ, ನಂಬಿಕೆ**

'ಮಾಡಿದುಣ್ಣೊ ಮಹಾರಾಯ' ಕಾದಂಬರಿಯ ಸೀತೆ ದೇವರು ದೈವತ್ವವನ್ನು ನಂಬಿದವಳು. ತಾನು ಮಲಗುವ ಹಾಸಿಗೆ ತೊಲೆಯ ಕೆಳಗೆ ಬಂದುದಕ್ಕಾಗಿ ಅಪಶಕುನವಾಯಿತೆಂದು ದಿಗ್ಭ್ರಾಂತಳಾಗಿ "ಹಾವಿಗೆ ಹರನ ಆಣೆ, ಚೌಳಿಗೆ ಭೈರವನ ಆಣೆ, ಇರುವೆ ಎಂಬತ್ತು ಕೋಟಿ ಜೀವರಾಶಿಗೂ ಬಿದ್ದ ಬಳಿ ಬಿಟ್ಟು ಇತ್ತಿತ್ತ ಬಂದರೆ ತಾಯಿ ಮುದ್ರವ್ವೆಯ ಪಾದದಾಣೆ"[೨೫] ಎಂದು ದೇವರುಗಳನ್ನು ನೆನೆಯುವ ಸೀತೆಯ ದೃಢವಾದ ನಂಬಿಕೆಯನ್ನು ಸೂಚಿಸುತ್ತದೆ. ಜಾತಿಯನ್ನು ನಂಬಿಕೊಂಡೇ ಬದುಕಿರುವ 'ಚೋಮನದುಡಿ' ಕಾದಂಬರಿಯ ಬೆಳ್ಳಿ, ಅಣ್ಣ ಗುರುವ ಕ್ರಿಶ್ಚಿಯನ್ ಹುಡುಗಿ ಮಾರಿಯಮ್ಮಳೊಂದಿಗೆ ಓಡಿ ಹೋಗಿರುವನೆಂದಾಗ ದೊಡ್ಡ ದುರಂತವೇ ನಡೆದು ಹೋದಂತೆ ಭಾವಿಸಿದವಳು. ಇದಕ್ಕೆ ಬೆಳ್ಳಿಯ ಅಪ್ಪ ಚೋಮನು ಹೊರತಾಗಿಲ್ಲ. 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ದೊಡ್ಡಮ್ಮ ಹೆಗ್ಗಡಿತಿ ಮತ್ತು ಸೊಸೆ ದೇವಮ್ಮ ಇಂತಹ ನಂಬಿಕೆಗಳಲ್ಲಿ ಅಚಲ ವಿಶ್ವಾಸವುಳ್ಳವರು.

ಪ್ರಾರ್ಥನೆ, ಪೂಜೆ, ನಂಬಿಕೆ-ಹರಕೆ, ಬಲಿ, ಮಲೆನಾಡಿನ ಜನಮನದಲ್ಲಿ ಹೆಚ್ಚಾಗಿ ಹಾಸು ಹೊಕ್ಕಾಗಿವೆ. ಬೆಟ್ಟ-ಗುಡ್ಡ, ಅರಣ್ಯ ಪ್ರದೇಶಗಳೇ ಅವರ ನೆಲೆಗಳಾಗಿದ್ದವು. ಪ್ರಜ್ಞಾ ಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ ದೈನಂದಿನ ಬದುಕಿನಲ್ಲಿ ನಂಬಿಕೆಗಳನ್ನು ಅಕ್ಷರಶಃ ಪಾಲಿಸಿಕೊಂಡು ಬಂದಿದ್ದಾರೆ. ವಿದ್ಯಾವಂತನಾದ 'ಕಾನೂರು ಹೆಗ್ಗಡಿತಿ' ಕಾದಂಬರಿಯ ಹೂವಯ್ಯ ನಂಬಿಕೆಯನ್ನು ಮೀರಿ ನಿಂತಿದ್ದಾರೆ. ಅವರ ತಾಯಿ ನಾಗಮ್ಮ ದೇವರು, ದೆವ್ವ,

ಭೂತಾದಿಗಳಲ್ಲಿ ನಂಬಿಕೆಯುಳ್ಳವರು. ಹಾಗೂ ಮಲೆನಾಡು ಪ್ರದೇಶದಲ್ಲಿ ಪ್ರಚಲಿತವಿರುವ ಭೂತ, ದೆವ್ವಗಳನ್ನು ನಂಬಿಯೇ ಜೀವನ ಸಾಗಿದೆ. ಕಾಫಿ ತೋಟದಲ್ಲಿ ಭೂತವಿದೆ ಎಂದು ನಂಬಿದ್ದು "ಮುಟ್ಟಾದ ಸ್ತ್ರೀಯರು ಭೂತಾದ ಜನ ಪ್ರವೇಶಿಸಿದರೆ ರಕ್ತಕಾರಿ ಸಾಯುತ್ತಾರೆ ಎಂಬ ನಂಬಿಕೆಯಿಂದಾಗಿಯೇ ಮುಟ್ಟಾದ ಸ್ತ್ರೀಯರು ಅಲ್ಲಿಗೆ ಹೋಗುತ್ತಿರಲಿಲ್ಲ. ಮಲೆನಾಡಿನ ಜನ ಹತ್ತು ಹಲವು ಭೂತಗಳನ್ನು ಆರಾಧಿಸುತ್ತಿದ್ದರು. ಅಂತಹುಗಳಲ್ಲಿ ಪಂಜ್ರೊಳ್ಳಿ, ಜಕಣಿ, ಚೌಡಿ, ಮಸಣಿ, ಕಲ್ಕುಟ್ಟಾ ಮುಖ್ಯವಾದವುಗಳು. ಹಾಗೆಯೇ ಧರ್ಮಸ್ಥಳದ ಮಂಜುನಾಥ, ತಿರುಪತಿ ತಿಮ್ಮಪ್ಪ ಮುಂತಾದ ದೇವರುಗಳಿಗೆ ಹರಕೆ ಹೊರುತ್ತಾರೆ."[೨೬] ಸ್ವಾತಂತ್ರ್ಯಪೂರ್ವ ಕಾದಂಬರಿಗಳನ್ನು ಪರಿಶೀಲಿಸಿದಾಗ ಸ್ತ್ರೀಯರು ತಮ್ಮ ಬದುಕಿಗೆ ಸಂಬಂಧಿಸಿದಂತೆ ಹಿಂಸಾತ್ಮಕ ಮತ್ತು ಅಹಿಂಸಾತ್ಮಕ ಹರಕೆಗಳನ್ನು ಹೊತ್ತ ಚಿತ್ರಣವನ್ನು ಕಾಣುತ್ತೇವೆ. 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಭೂತಗಳಿಗೆ ಕೊಡುವ ಹರಕೆ, ಕಾನೂರು ಜನರಿಗೆ ಹಬ್ಬವಾಗಿ ಪರಿಣಮಿಸಿತ್ತು. ಇದಕ್ಕೆ ಹೋಲುವ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ವೆಂಕಟಪ್ಪನಾಯಕ ನಾಗಕ್ಕಳನ್ನು ಸೀರುಡಿಕೆ ಮಾಡಿಕೊಳ್ಳುವ ಮುಂಚೆ ಭೂತಕ್ಕೆ ಹರಕೆಯಾಗಿ ಹಂದಿಯನ್ನು ಬಲಿ ಕೊಡುತ್ತಾನೆ. ಇಂತಹ ಹರಕೆಯಲ್ಲಿ ಕಾನೂರಿನ ನಾಗಮ್ಮ, ಸುಬ್ಬಮ್ಮ, ಪುಟ್ಟಮ್ಮ ಹಾಗೂ ಸೀರೆಗಾರರ ಇಟ್ಟುಕೊಂಡವಳಾದ ಗಂಗೆ, ಇನ್ನಿತರ ಕೆಳವರ್ಗದ ಹೆಣ್ಣಾಳುಗಳು ನಂಬಿಕೆ ಉಳ್ಳವರು.

'ಚೋಮನದುಡಿ' ಕಾದಂಬರಿಯ ಹೊಲೆಯ ಚೋಮನ ಮಗಳು ಬೆಳ್ಳಿ ತನ್ನ ಅಣ್ಣ ಜ್ವರದಿಂದ ನರಳುತ್ತಿರುವಾಗ ಭೂತದ ಕಾಟವೆಂದು ಭ್ರಮಿಸಿದಳು. ಅಂತೆಯೇ ಬೆಳ್ಳಿ "ಗ್ರಾಮದ ಭೂತಕ್ಕೆ ಎರಡು ತೆಂಗಿನ ಕಾಯಿಯನ್ನು ಸುಲಿದು ಇರಿಸಿದಳು. ಅಣ್ಣನ ಬೊಬ್ಬೆ ಹೆಚ್ಚಿದಂತೆ ಎರಡು ಕೋಳಿಗಳನ್ನು ಕೊಡುತ್ತೇನೆಂಬ ಹರಕೆ ಹೊತ್ತಳು."[೨೭]

ಸಂಪ್ರದಾಯವೆಂಬಂತೆ ದೇವರನ್ನು ಪೂಜಿಸುವುದು ಒಂದು ಪುಣ್ಯದ ಕೆಲಸವೆಂಬಂತೆ ಸ್ತ್ರೀಯರು ದೇವತೆಗಳ ಪೂಜೆಗಳಲ್ಲಿಯೇ ಸಂತೃಪ್ತರಾಗುತ್ತಿದ್ದರು. ಇದಕ್ಕೆ ನಿದರ್ಶನ 'ಮಾಡಿದುಣ್ಣೊ ಮಹಾರಾಯ' ಕಾದಂಬರಿಯ ಅರುಂಧಮ್ಮ, ಸೀತೆ, ತಿಮ್ಮಮ್ಮ, 'ಸುಬ್ಬಣ್ಣ' ಕಾದಂಬರಿಯ ಲಲಿತಮ್ಮ, ಕಾನೂರು ಹೆಗ್ಗಡಿತಿ ಕಾದಂಬರಿಯ ಗೌರಮ್ಮ, ಗೌರಿ ಪೂಜೆಯಲ್ಲಿಯೇ ತಲ್ಲಿನಳು. ಅರುಂಧಮ್ಮ ಹಾಗೂ ಸೀತಮ್ಮ ಪ್ರತಿದಿನ ಏಳುತ್ತಲೇ ಗಂಡನ ಪಾದಗಳನ್ನು ಕಾಣದೆ ಕೆಲಸ ಹಿಡಿದವರಲ್ಲ. ಅರುಂಧಮ್ಮಳಂತೂ ಗಂಡನ ಪಾದ ತೊಳೆದ ನೀರನ್ನು ಊಟ ಮಾಡುವ ಮೊದಲು ತೀರ್ಥವಾಗಿ ಸ್ವೀಕರಿಸುತ್ತಿದ್ದಳು. ಹೀಗೆ ಸ್ವಾತಂತ್ರ್ಯಪೂರ್ವದಲ್ಲಿ ಕಾದಂಬರಿಕಾರರು ಗ್ರಾಮೀಣ ಪ್ರದೇಶದ ಸ್ತ್ರೀ ಜೀವನವನ್ನು ಚಿತ್ರಿಸುವಾಗ ಅವರ ಅವಿಭಾಜ್ಯ ಅಂಗವಾಗಿರುವ ಪೂಜೆ, ಪ್ರಾರ್ಥನೆ, ಹರಕೆಗಳನ್ನು ಯಥೇಚ್ಛವಾಗಿ ಅನುಸರಿಸಿದ್ದಾರೆ.

ಹೀಗೆ ಸ್ತ್ರೀಯರು ಧರ್ಮವನ್ನು ನೆಚ್ಚಿಕೊಂಡು ಬದುಕಿದವರು. ಒಟ್ಟಾರೆಯಾಗಿ ಸ್ವಾತಂತ್ರ್ಯ ಪೂರ್ವ ಕನ್ನಡ ಕಾದಂಬರಿಗಳನ್ನು ಗಮನಿಸಿದಾಗ ಇಲ್ಲಿಯ ಸ್ತ್ರೀ ಜೀವನ ವಿಭಿನ್ನ ನೆಲೆಗಳಲ್ಲಿ ಚಿತ್ರಣಗೊಂಡಿದೆ. ಪುರುಷ ಪ್ರಧಾನ ವ್ಯವಸ್ಥೆಯ ಬೇರುಗಳು ಪಾಶ್ಚಿಮಾತ್ಯ ಗಾಳಿ ಬೀಸಿದಾಗಲೂ ಗಟ್ಟಿಗೊಂಡಿದ್ದವು. ಈ ದಿನಗಳಲ್ಲಿ ಸಮಾಜ ಸುಧಾರಣೆಯ ಗಾಳಿ ಬರದಿಂದ ಬೀಸಿದರೂ ಸ್ತ್ರೀ ಸಮಾಜ ಎಚ್ಚೆತ್ತುಕೊಳ್ಳಲಾಗಲಿಲ್ಲ. ಕಾರಣ ಅನಕ್ಷರತೆ. ಅಂಧಶ್ರದ್ಧೆಗಳಿಂದಾದ ಧಾರ್ಮಿಕ ಮೌಲ್ಯಗಳಿಂದ ಸ್ತ್ರೀ ಬಂಧಿಸಲ್ಪಟ್ಟಿದ್ದಳು. ಹೀಗೆ ಪುರುಷ ಹಾಕಿಕೊಟ್ಟ ಲಕ್ಷ್ಮಣ ರೇಖೆಯ ಒಳಗಡೆ ನಡೆಯಬೇಕಾದ ಅನಿವಾರ್ಯತೆಯಿಂದಾಗಿ ಕುಟುಂಬ, ಸಮಾಜ ಹಾಗೂ ಧರ್ಮ ಸಂಕೋಲೆಗಳನ್ನು ಹರಿದೊಗೆಯ ಲಾಗದೇ ಬದುಕು ಸಾಗಿಸಿದ್ದಳು. ಶತಮಾನಗಳಿಂದ ಸ್ತ್ರೀ ಮೇಲೆ ಪ್ರಯೋಗಿಸುತ್ತ ಬಂದಿರುವ ಶೀಲದ ಕಲ್ಪನೆ ಪುರುಷನಿಗೆ ಅಡಿಯಾಳಾಗಿ ಬದುಕುವಂತೆ ಮಾಡಿತ್ತು. ಆಕೆ ಏನಿದ್ದರೂ ಗೃಹಸ್ವಾಮಿನಿಯ ಪಟ್ಟದಲ್ಲೇ ಸಂತುಷ್ಟಳಾಗಬೇಕಾಗಿತ್ತು. ಸಾಮಾಜಿಕ, ಕೌಟಂಬಿಕ, ಧಾರ್ಮಿಕ ನೆಲೆಗಳಲ್ಲಿ ಸ್ತ್ರೀ ಪುರುಷಪ್ರಧಾನ ಸ್ಥಾಪಿತ ಮೌಲ್ಯಗಳ ಒಳಗೆ ಸ್ತ್ರೀ ತನ್ನತನವನ್ನು ಕಳೆದುಕೊಂಡು ಪುರುಷನ ಅಭಿವೃದ್ಧಿಗಾಗಿಯೇ ತನ್ನ ಇಡೀ ಜೀವನವನ್ನು ಸವೆಸಿದ್ದಾಳೆ.

**ಕೊನೆಟಿಪ್ಪಣಿಗಳು**

೧. ಆರ್.ಇಂದಿರಾ, **'ಮಹಿಳೆ ಸಮಾಜ ಮತ್ತು ಸಂಸ್ಕೃತಿ'**, ಪು.೨

೨. ಕುವೆಂಪು, **'ಮಲೆಗಳಲ್ಲಿ ಮದುಮಗಳು'**, ಪು.೩೩೪.

೩. ಶಿವರಾಮಕಾರಂತ, **'ಮರಳಿ ಮಣ್ಣಿಗೆ'**, ಪು.೨೨೫.

೪. ಆರ್.ಇಂದಿರಾ, **'ಮಹಿಳೆ, ಸಮಾಜ ಮತ್ತು ಸಂಸ್ಕೃತಿ'**, ಪು.೪೮.

೫. ಬಿ.ಎನ್.ಸುಮಿತ್ರಾಬಾಯಿ, **'ಕನ್ನಡ ಮಹಿಳಾ ಸಾಹಿತ್ಯ ಮತ್ತು ಸ್ತ್ರೀ ತತ್ವದ ಶೋಧ'**, ಪು.೧೮೯.

೬. ಶಿವರಾಮಕಾರಂತ, **'ಮರಳಿ ಮಣ್ಣಿಗೆ'**, ಪು.೧೯೭.

೭. ಶಿವಲಿಂಗಪ್ಪ ಆಯ್ ಬಂಡಾರಿ, **'ಕನ್ನಡ ಕಾದಂಬರಿಗಳಲ್ಲಿ ಸ್ತ್ರೀ'**, ಪು.೧೨೮.

೮. ಗುಲ್ವಾಡಿ ವೆಂಕಟರಾಯ, **'ಇಂದಿರಾಬಾಯಿ'**, ಪು.೨೬.

೯. ನಂಜನಗೂಡು ತಿರುಮಲಾಂಬಾ, **'ವಿರಾಗಿಣಿ ಹಿತೈಷಿಣಿಯ ಹೆಜ್ಜೆಗಳು'**, ಪು.೧೧೧.

೧೦. ಕುವೆಂಪು, **'ಕಾನೂರು ಹೆಗ್ಗಡಿತಿ'**, ಪು.೬೭೦.

೧೧. ಶಿವರಾಮಕಾರಂತ, **'ಮರಳಿ ಮಣ್ಣಿಗೆ'**, ಪು.೧೧-೧೨.

೧೨. ಗುಲ್ವಾಡಿ ವೆಂಕಟರಾಯ, **'ಇಂದಿರಾಬಾಯಿ'**, ಪು.೮೧.

೧೩. ಮಿರ್ಜಿ ಅಣ್ಣಾರಾಯ, **'ನಿಸರ್ಗ'**, ಪು.೨೭.

೧೪. ಕುವೆಂಪು, **'ಮಲೆಗಳಲ್ಲಿ ಮದುಮಗಳು'**, ಪು.೧-೨.

೧೫. ಶಿವರಾಮಕಾರಂತ, **'ಮರಳಿ ಮಣ್ಣಿಗೆ'**, ಪು.೫೮.

೧೬. ಎಂ.ಎಸ್.ಪುಟ್ಟಣ್ಣ, **'ಮಾಡಿದುಣ್ಣೊ ಮಹಾರಾಯ'**, ಪು.೭೨.

೧೭. ನವರತ್ನಶೇಷ, **'ಮನುಸ್ಮೃತಿ'**, ಪು.೨೮೬.

೧೮. ಸುನಿತಾ ಶೆಟ್ಟಿ, **'ಶಿವರಾಮಕಾರಂತ ಕಾದಂಬರಿಗಳಲ್ಲಿ ಸ್ತ್ರೀ'**, ಪು.೮೫.

೧೯. ಎಂ.ಎಸ್.ಪುಟ್ಟಣ್ಣ, **'ಮಾಡಿದುಣ್ಣೊ ಮಹಾರಾಯ'**, ಪು.೮೦-೮೧.

೨೦. ಇಂದಿರಾ ಆರ್., **'ಮಹಿಳೆ ಸಮಾಜ ಮತ್ತು ಸಂಸ್ಕೃತಿ'**, ಪು.೧೧.

೨೧. ಅದೇ, ಪು.೯.

೨೨. ಶಿವಲಿಂಗಪ್ಪ ಬಂಡಾರಿ, **'ಕನ್ನಡ ಕಾದಂಬರಿಗಳಲ್ಲಿ ಸ್ತ್ರೀ'**, ಪು.೧೩೪.

೨೩. ಎಂ.ಎಸ್.ಪುಟ್ಟಣ್ಣ, **'ಮಾಡಿದುಣ್ಣೊ ಮಹಾರಾಯ'**, ಪು.೯೮.

೨೪. ಮಿರ್ಜಿ ಅಣ್ಣಾರಾಯ, **'ನಿಸರ್ಗ'**, ಪು.೪೮.

೨೫. ಎಂ.ಎಸ್.ಪುಟ್ಟಣ್ಣ, **'ಮಾಡಿದುಣ್ಣೋ ಮಹಾರಾಯ'**, ಪು.೧೫೨.

೨೬. ಕುವೆಂಪು, **'ಕಾನೂರು ಹೆಗ್ಗಡಿತಿ'**, ಪು.೨೫೯.

೨೭. ಶಿವರಾಮಕಾರಂತ, **'ಜೋಮನದುಡಿ'**, ಪು.೫೯.

## ಅಧ್ಯಾಯ ಎಂಟು

# ಕಾದಂಬರಿಗಳಲ್ಲಿ ಸ್ತ್ರೀ ಪರ ಆಲೋಚನೆ

೮.೧. ಸ್ತ್ರೀ ಶಿಕ್ಷಣಕ್ಕಾಗಿ ಒಲವು

೮.೨. ಸಂಪ್ರದಾಯಿಕ ವಿವಾಹ ಪದ್ಧತಿಗೆ ವಿರೋಧ

೮.೩. ಬಾಲ್ಯ ವಿವಾಹಕ್ಕೆ ವಿರೋಧ

೮.೪. ವಿಧವಾ ವಿವಾಹಕ್ಕೆ ಬೆಂಬಲ

೮.೫. ವಿಷಮ ದಾಂಪತ್ಯ ಖಂಡನೆ

೮.೬. ಶೀಲದ ಮೌಲ್ಯ ಪ್ರತಿಪಾದನೆ

## ಅಧ್ಯಾಯ ಎಂಟು

# ಕಾದಂಬರಿಗಳಲ್ಲಿ ಸ್ತ್ರೀ ಪರ ಆಲೋಚನೆ

ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷನಿಗೆ ಹೆಚ್ಚಿನ ಪ್ರಧಾನ್ಯತೆ ದೊರಕಿ ಸ್ತ್ರೀ ಅವನ ನಂತರದ ಸ್ಥಾನಕ್ಕೆ ಇಳಿಸಲ್ಪಟ್ಟಿದ್ದಾಳೆ. ಮತ್ತು ಮಹಿಳೆ ಪುರುಷನ ಗುಲಾಮತನಕ್ಕೆ ಒಳಗಾಗಿದ್ದಾಳೆ. ಈ ನಿಟ್ಟಿನಲ್ಲಿ ಪುರುಷ ಪ್ರಧಾನ ಸಮಾಜ, ಸ್ತ್ರೀಯ ಮೇಲೆ ಅನೇಕ ದಿಗ್ಬಂಧನ ಮತ್ತು ಕಟ್ಟುಪಾಡುಗಳನ್ನು ವಿಧಿಸಿದೆ. ಇದರಿಂದಾಗಿ ಸ್ತ್ರೀಯ ಬೆಳವಣಿಗೆ ಕುಂಠಿತಗೊಂಡು ಸಮಾಜದ ಮೇಲೆ ಅನೇಕ ದುಷ್ಪ ಪರಿಣಾಮಗಳಾಗಿವೆ.

ಸ್ತ್ರೀಯರನ್ನು ಈ ಬಗೆಯ ಶೋಷಣೆಯಿಂದ ಮುಕ್ತಗೊಳಿಸಲು ಅನೇಕ ಪ್ರಯತ್ನಗಳು ಕಾಲದಿಂದ ಕಾಲಕ್ಕೆ, ಸಮಾಜ ಸುಧಾರಕರಿಂದ ಮತ್ತು ಬುದ್ಧಿ ಜೀವಿಗಳಿಂದ ನಡೆದಿದೆ. ಇಂತಹ ಸಾಮಾಜಿಕ ಉದ್ದೇಶಗಳನ್ನಿರಿಸಿಕೊಂಡ ಅನೇಕ ಲೇಖಕರು ಮತ್ತು ಬರಹಗಾರರು ಸಾಹಿತ್ಯದ ಮೂಲಕ ಸಮಾಜ ಸುಧಾರಣೆಗೆ ಪ್ರಯತ್ನಮಾಡಿರುವುದನ್ನು ನೋಡಬಹುದು. ಹಾಗೆಯೇ ಸ್ವಾತಂತ್ರ್ಯಪೂರ್ವ ಕಾಲದ ಕನ್ನಡ ಕಾದಂಬರಿಕಾರರು ಸಾಮಾಜಿಕ ಉದ್ದೇಶವನ್ನು ಪ್ರಧಾನವಾಗಿರಿಸಿ ಕೊಂಡು ಕೃತಿ ರಚನೆ ಮಾಡಿದ ವಿಷಯ ಸ್ಪಷ್ಟವಾಗಿದೆ. ಈ ನಿಟ್ಟಿನಲ್ಲಿ ಸ್ತ್ರೀ ಜೀವನ ಕುರಿತ ಅವರು ದಾಖಲಿಸಿದ ವಿವರಗಳು, ವ್ಯಕ್ತಪಡಿಸಿದ ಕಾಳಜಿಗಳು ಹಾಗೂ ಅವರು ತಳೆದ ಧೋರಣೆಗಳು ಒಟ್ಟಾರೆ ಸ್ತ್ರೀಪರ ಆಲೋಚನೆಗೆ ಪ್ರೇರಣೆಯಾಗಿದೆ.

ಬಿ.ಎನ್.ಸುಮಿತ್ರಾಬಾಯಿ ಗ್ರಹಿಸಿರುವಂತೆ "ಪಾಶ್ಚಿಮಾತ್ಯ ಮತಪ್ರಚಾರಕರಿಗೆ, ದೇಶಿಯ ಸನಾತನ ಧರ್ಮವಾದಿಗಳಿಗೆ ಮತ್ತು ಸುಶಿಕ್ಷಿತರಾದ ಸಮಾಜ ಸುಧಾರಕರಿಗೆಲ್ಲರಿಗೂ ತಮ್ಮ ತಾತ್ವಿಕ ಚರ್ಚೆಗಳಿಗೆ, ಸಾಮಾಜಿಕ ಕಾರ್ಯಾಚರಣೆಗಳಿಗೆ ಸ್ತ್ರೀ ಸಮಸ್ಯೆಗಳೇ ಕೇಂದ್ರ ವಸ್ತುವಾಗಿದ್ದ ಒಂದು ವಿಶಿಷ್ಟ ಕಾಲ ಅದು. ಬಹು ಸಂಕೀರ್ಣವಾಗಿದ್ದ ಆ ಯುಗ ವಿಧವಾ ಪುನರ್ವಿವಾಹ, ಬಾಲ್ಯವಿವಾಹ ವಿರೋಧ, ಸತಿಪದ್ಧತಿಯ ನಿಷೇಧ, ಕೇಶಮುಂಡನೆ ವಿರೋಧ ಮುಂತಾಗಿ ಸ್ತ್ರೀ

ಸಮಸ್ಯೆಗಳ ನಿವಾರಣೆಯತ್ತಲೇ ಆ ಸುಧಾರಣಾ ಚಳುವಳಿಗಳ ಗುರಿಯಿತ್ತು."[೧] ಈ ದೃಷ್ಟಿಯಿಂದ ನವೋದಯ ಕಾಲ ಕನ್ನಡ ಸಾಹಿತ್ಯದಲ್ಲಿಯೇ ಒಂದು ಪ್ರಮುಖ ಘಟ್ಟ. ಮಾನವೀಯ ಮೌಲ್ಯಗಳ ಪ್ರೇರಣೆಯಿಂದ ಸ್ತ್ರೀ ಪರ ಚಿಂತನೆ ಮತ್ತು ಸುಧಾರಣಾ ಚಳುವಳಿಗಳು ತಲೆಯೆತ್ತಿದವು. ಪ್ರಾಚೀನ ಕಾಲದಿಂದ ಸಾಗಿಬಂದ ಸಂಪ್ರದಾಯಿಕ ಮೌಲ್ಯಗಳು ಅರ್ಥವನ್ನು ಕಳೆದುಕೊಂಡು ಸ್ಥಿತ್ಯಂತರಗೊಂಡವು. ಇದು ಸ್ತ್ರೀ ಬಗೆಗಿನ ಚಿಂತನೆ, ಸ್ಪಂದನೆ, ಸಹಾನುಭೂತಿ, ಅನುಕಂಪ, ಸುಧಾರಣಾಪರ ನಿಲುವುಳ್ಳದ್ದಾಗಿದೆ. ಈ ಹಿನ್ನೆಲೆಯಲ್ಲಿ ಸ್ತ್ರೀಪರ ಆಲೋಚನೆ ಕುರಿತಂತೆ ಕನ್ನಡ ಕಾದಂಬರಿಕಾರರು ಎಷ್ಟರ ಮಟ್ಟಿಗೆ ಸ್ಪಂದಿಸಿದರು ಎಂಬುವುದನ್ನು ಸ್ವಾತಂತ್ರಪೂರ್ವ ಸ್ತ್ರೀ ಕೇಂದ್ರಿತ ಕಾದಂಬರಿಗಳ ಮೂಲಕ ಅಧ್ಯಯನ ಮಾಡಲಾಗಿದೆ.

## ೮.೧. ಸ್ತ್ರೀ ಶಿಕ್ಷಣಕ್ಕಾಗಿ ಒಲವು

ಇಂದಿರಾಬಾಯಿ, ಇಂದಿರೆ, ಮಾತೃನಂದಿನಿ, ಸುಶೀಲೆ, ಪ್ರಿಯಂವದೆ, ಸರಸಮ್ಮನ ಸಮಾದಿ, ಕಾನೂರು ಹೆಗ್ಗಡಿತಿ ಹಾಗೂ ಮಲೆಗಳಲ್ಲಿ ಮದುಮಗಳು, ಸದ್ಗುಣಿ ಕೃಷ್ಣಾಬಾಯಿ ಕಾದಂಬರಿಗಳು ಸ್ತ್ರೀಪರ ಶಿಕ್ಷಣವನ್ನು ಬಿಚ್ಚಿಡುತ್ತವೆ.

ಸ್ವತಃ ಬಾಲವಿಧವೆಯರಾಗಿ ಜಿಡ್ಡುಗಟ್ಟಿದ ಆಚರಣೆಗಳ ನಡುವೆ ಅತಂತ್ರಬಾಳು ಸಾಗಿಸಿದ ತಿರುಮಲಾಂಬಾ ಹಾಗೂ ಆರ್.ಕಲ್ಯಾಣಮ್ಮ ಶಿಕ್ಷಣವನ್ನು ಪಡೆದವರು. ಈ ಓದಿನ ಫಲವಾಗಿಯೇ ತಮ್ಮ ವೈಚಾರಿಕತೆಯ ಮಿತಿಯಲ್ಲಿ ಸ್ತ್ರೀಯ ಶಿಕ್ಷಣಕ್ಕಾಗಿ ಹಾತೊರೆದರು. ಮೈಸೂರಿನ ಮಹಾರಾಜರನ್ನು ಕಾಣಲು ಹೋದ ಕಲ್ಯಾಣಮ್ಮ "ನಿಮ್ಮ ಆಳ್ವಿಕೆಯಲ್ಲಿ ಸ್ತ್ರೀ ಶಿಕ್ಷಣವು ವ್ಯಾಪಕವಾಗಿ ಬೆಳೆಯಲಿ"[೨] ಎಂದು ಕೇಳಿಕೊಂಡಿದ್ದು ತಾನೊಬ್ಬ ಸ್ತ್ರೀಯಾಗಿ, ಸ್ತ್ರೀಪರ ಕಾಳಜಿಯನ್ನು ತೋರಿದ್ದಾಳೆಂಬುದಕ್ಕೆ ಸಾಕ್ಷಿಯಾಗಿದೆ. ಕೌಟುಂಬಿಕ ಚೌಕಟ್ಟಿನ ಒಳಗೆ ಉತ್ತಮ ಗೃಹಿಣಿಯಾಗಿ ಬಾಳಲು ಬೇಕಾದ ಶಿಕ್ಷಣಕ್ಕಾಗಿ ಸಂತೂಬಾಯಿ ನೀಲಗಾರರು ಸಹ ಹಾತೊರೆದಿರುವುದನ್ನು ಕಾದಂಬರಿಯಲ್ಲಿ ನೋಡಬಹುದು. 'ಸದ್ಗುಣಿ ಕೃಷ್ಣಾಬಾಯಿ' ಕಾದಂಬರಿಯಲ್ಲಿ "ಕೃಷ್ಣಾಬಾಯಿ ತಾಯಿ-ಅಣ್ಣನೊಂದಿಗೆ ಮುಂಬಯಿಗೆ ಹೋಗುತ್ತಾಳೆ. ವೈದ್ಯಶಾಸ್ತ್ರವನ್ನು ಅಭ್ಯಾಸ ಮಾಡುತ್ತಾಳೆ ಮತ್ತು ಮದುವೆಯ ನಂತರವು ಗಂಡನ ಪ್ರೋತ್ಸಾಹದಿಂದ ಸಂಸ್ಕೃತ, ಇಂಗ್ಲಿಷ್ ಭಾಷೆಗಳನ್ನು ಕುರಿತು ಚಿತ್ರಕಲೆಯ ಅಭ್ಯಾಸ ಮುಂದುವರೆಸುತ್ತಾಳೆ."[೩] ಅಕ್ಕನ ಮಕ್ಕಳ ಶಿಕ್ಷಣದ ಕಡೆಗೆ ಗಮನಕೊಡುವುದು ಪ್ರಮುಖ ಅಂಶ. ಗುಲ್ವಾಡಿಯರ 'ಇಂದಿರಾಬಾಯಿ' ಕಾದಂಬರಿ ಸ್ತ್ರೀ ಶಿಕ್ಷಣದ ಮಹತ್ವವನ್ನು ಸಾರುತ್ತದೆ. ವಿಧವೆ ಇಂದಿರಾಬಾಯಿ ತನ್ನ ಮನದ ದುಃಖ ಶಮನಕ್ಕಾಗಿ ಕ್ರೈಸ್ತ ಪಾದ್ರಿಗಳ ನೀತಿಕತೆಗಳನ್ನು ಓದುತ್ತಿದ್ದಳು. ಅಮೃತರಾಯ ಜಲಜಾಕ್ಷಿಯ ಮೂಲಕ ಭಾಸ್ಕರನಿಗೆ ಮತ್ತು ಇಂದಿರಾಬಾಯಿಗೆ ವಿದ್ಯೆ ಕೊಡಿಸುವುದು ಸ್ತ್ರೀ ಶಿಕ್ಷಣದ ಕುರಿತ ನಿಲುವು ಕಾಣಬಹುದು. ಗುಲ್ವಾಡಿ ವೆಂಕಟರಾಯರು

ವೈದಿಕ ಸಮಾಜದ ಗೊಡ್ಡುಆಚರಣೆ, ನಿಂದನೆಗಳ ನಡುವೆಯೂ ವಿಧವೆ ಇಂದಿರಾಬಾಯಿ ಸತಾರೆಗೆ ಪ್ರಯಾಣ ಬೆಳೆಸಿ ಮೆಟ್ರಿಕ್ಯುಲೇಷನ್ ಪಾಸು ಮಾಡಿಕೊಂಡು ಬರುವ ದಿಟ್ಟತನ ಪ್ರದರ್ಶಿಸಿದ್ದಾರೆ. ತಿರುಮಲಾಂಬಾಳ 'ಮಾತೃನಂದಿನಿ' ಕಾದಂಬರಿಯಲ್ಲಿ ಸ್ತ್ರೀ ಶಿಕ್ಷಣ ವಿರೋಧಿಯಾದ ಪುರುಷನ ವಿರುದ್ಧ ಕಿಡಿಕಾರಿದ್ದಾಳೆ. "ಬುದ್ಧಿ ತಿಳಿಯದ ಹುಡುಗಿಯರು ತಾವಾಗಿ ಬಂದು ತಮ್ಮನ್ನು ಸಂಸಾರ ಚಕ್ರಗತಿಗೆ ಈಗಲೇ ಬಲಿಯಾಗಿ ಒಪ್ಪಿಸಿ ಬಿಡಬೇಕೆಂದು ನಿಮ್ಮನ್ನು ಕಾಡಲಿಲ್ಲವಷ್ಟೇ... ಎಂದು ಪ್ರಶ್ನಿಸುವ ನಂದಿನಿ ಮುಂದುವರೆದು ವಿದ್ಯೆಯಿಂದ ಕೇಡೆಂದಿಗೂ ಉಂಟಾಗದು, ಬಾಲ್ಯದಿಂದ ಮಕ್ಕಳಿಗೆ ಶಿಕ್ಷರೂಪವಾದ ವಿದ್ಯಾಭ್ಯಾಸ ಮಾಡಿಸಿದರೆ, ಅದರಿಂದ ಅನಂತ ಸುಖವುಂಟು"[೪] ಎನ್ನುತ್ತಾಳೆ.

ಇಂತಹ ಮುಂದುವರೆದ ವಿಚಾರಗಳಿಂದಾಗಿ ಸ್ತ್ರೀ ಸುಧಾರಣೆಯನ್ನೆ ಮುಖ್ಯ ಧ್ಯೇಯವಾಗಿಟ್ಟುಕೊಂಡು ಅಂದಿನ ದಿನಗಳಲ್ಲಿ ಶೋಷಿತ ಸ್ತ್ರೀಯರನ್ನು ಮೇಲೆತ್ತ ಬಯಸಿದವರಲ್ಲಿ ತಿರುಮಲಾಂಬಾ ಒಬ್ಬರು. ಇವರು ಪ್ರತಿಪಾದಿಸುವ ಶಿಕ್ಷಣದ ಮಹತ್ವ ಬೇರೆ ರೀತಿ ಇದೆ. ಗೃಹಕೃತ್ಯವನ್ನು ನಿಭಾಯಿಸಿಕೊಂಡು ಹೋಗುವ ದೇಶಾಚಾರ ಪದ್ಧತಿ, ಪ್ರಾಥಮಿಕ ಶಿಕ್ಷಣದ ಸೀಮಿತ ಜ್ಞಾನದ ಪರಿಮಿತಿಯಲ್ಲಿಯೇ ನಿಂತು ಸಮಾಧಾನಪಡುತ್ತಾರೆ. ಹೆಣ್ಣುಮಕ್ಕಳ ಉನ್ನತ ವ್ಯಾಸಂಗವನ್ನು ತಿರುಮಲಾಂಬಾ ಸಮ್ಮತಿಸಿಲ್ಲ. ಇದಕ್ಕೆ ಕಾರಣವನ್ನು ಸಹ ಅವರ ಸಂಪ್ರದಾಯಿಕ ವೈಚಾರಿಕ ಮಿತಿಯಲ್ಲಿ ಗುರುತಿಸುವುದಾದರೆ ಪಾಶ್ಚಾತ್ಯ ಶಿಕ್ಷಣ ಪದ್ಧತಿಯ ಪ್ರಭಾವದಿಂದಾಗಿ ನಮ್ಮ ಯುವಕ, ಯುವತಿಯರು ಎಲ್ಲಿ ಕೆಡುವರೋ ಎಂಬ ಭಯವಿದೆ.

ಹೀಗೆ ಶಿಕ್ಷಣ ಪಡೆದ ಸ್ತ್ರೀಯರಲ್ಲಿ 'ಇಂದಿರೆ' ಕಾದಂಬರಿಯ ಇಂದಿರೆ, ದೇವಯಾನಿ, 'ಮರಳಿ ಮಣ್ಣಿಗೆ' ಕಾದಂಬರಿಯ 'ನಾಗವೇಣಿ', 'ಸುಶೀಲೆ' ಕಾದಂಬರಿಯ ಸುಶೀಲೆ, 'ಪ್ರಿಯಂವದೆ' ಕಾದಂಬರಿಯ ಪ್ರಿಯಂವದೆ, 'ನಿರ್ಭಾಗ್ಯ ವನಿತೆ' ಕಾದಂಬರಿಯ ಇಂದಿರೆ, 'ಮಾತೃ ನಂದಿನಿ'ಯ ನಂದಿನಿ. ಈ ಎಲ್ಲಾ ಸ್ತ್ರೀಯರು ಓದಿನ ಫಲದಿಂದಾಗಿಯೇ ಆದರ್ಶ ಗೃಹಿಣಿಯಾಗಿ ಉಳಿದದ್ದನ್ನು ಕಾಣುತ್ತೇವೆ. ದೇವಯಾನಿ ಕಾಲೇಜು ಮೆಟ್ಟಿಲು ಹತ್ತಿ ಇಳಿದವಳಾಗಿದ್ದರೂ ವೈಚಾರಿಕತೆ ಹಾಗೂ ನೈತಿಕತೆಯನ್ನು ಬಿಟ್ಟು ಬಾಳಿದವಳಲ್ಲ. ಇಲ್ಲಿಯ ನಾಯಕಿ ಇಂದಿರೆ ವಿದ್ಯಾವಂತಳಾಗಿಯೂ ಸ್ತ್ರೀಗೆ ಯಾರಿಂದ ಸ್ವಾತಂತ್ರ್ಯ ಬೇಕು? ಎಂದು ಪ್ರಶ್ನಿಸುವ ಮನೋಭಾವದವಳು. ಕಾದಂಬರಿಕಾರ ಸ್ತ್ರೀ ಶಿಕ್ಷಣ ಕುರಿತು ಚರ್ಚಿಸುವಾಗ ನಾಯಕ ರಮಾಕಾಂತ "ಸ್ತ್ರೀಯರು ಉಚ್ಚ ಶಿಕ್ಷಣ ಹೊಂದುವುದು ಅವಶ್ಯ. ಅವರ ಸ್ವಾತಂತ್ರ್ಯಾತಿಶಯವು ಮಾತ್ರ ನನಗೆ ಸಹಿಸದು"[೫] ಎನ್ನುವಾಗ ಸ್ತ್ರೀಗೆ ಶಿಕ್ಷಣ ನೀಡಲು ಅನುಕಂಪ ತೋರಿರುವುದು ಕಾಣಬಹುದು. 'ಕಾನೂರು ಹೆಗ್ಗಡಿತಿ' ಕಾದಂಬರಿಯ ಸೀತೆ ಅಕ್ಷರ ಕಲಿತ ಅಪರೂಪದ ಯುವತಿ. ಒಟ್ಟಾರೆಯಾಗಿ ಕಾದಂಬರಿಕಾರರು ಸ್ತ್ರೀ ಶಿಕ್ಷಣದ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ.

## ೮.೨. ಸಂಪ್ರದಾಯಿಕ ವಿವಾಹ ಪದ್ಧತಿಗೆ ವಿರೋಧ

ವಿವಾಹವೆಂಬುದು ಹೆಣ್ಣು-ಗಂಡಿನ ಮಧ್ಯೆ ಕೂಡು ಬಾಳುವೆಯ ಸಂಕೇತವಾಗಿ ಸಮಾಜದಲ್ಲಿ ಆಚರಣೆಯಲ್ಲಿದೆ. ಹಾಗೆ ನೋಡಿದರೆ ಈ ಸಂಬಂಧ ವ್ಯಕ್ತಿ ಸಂಬಂಧವಾಗಿ ಮಾತ್ರ ಉಳಿಯದೇ ಎರಡು ಕುಟುಂಬಗಳ ನಡುವೆ ಏರ್ಪಡುವ ಸಾಮಾಜಿಕ ಒಪ್ಪಂದವಾಗಿದೆ. ಧರ್ಮದ ಕಟ್ಟಳೆಯ ಮೇಲೆ ನಿಂತಿರುವ ಭಾರತೀಯ ಸ್ತ್ರೀ ಸಮಾಜ ಜೀವನ ಸಂಗಾತಿಯ ಆಯ್ಕೆಯಲ್ಲೂ ತನ್ನತನದಿಂದ ವಂಚಿತಳಾಗಿದ್ದಾಳೆ. 'ಇಂದಿರೆ' ಕಾದಂಬರಿ ಸಂಪ್ರದಾಯಿಕ ವಿವಾಹ ಪದ್ಧತಿಯನ್ನು ವಿರೋಧಿಸಿದೆ. ಇಲ್ಲಿಯ ಇಂದಿರೆ ಮತ್ತು ರಮಾಕಾಂತನದು ಅಮರ ಪ್ರೇಮ. ಇವರಿಬ್ಬರು ನೈತಿಕ ನೆಲೆಗಟ್ಟಿನಲ್ಲಿ ನಿಂತು ಸಂಪ್ರದಾಯಿಕ ವಿವಾಹ ತೊರೆದು ಪರಸ್ಪರ ಇಚ್ಛಿತ ಆಯ್ಕೆಯಿಂದ ಮದುವೆಯಾಗುವ ಅಪೇಕ್ಷೆ ಉಳ್ಳವರು. ಇದೆಲ್ಲವನ್ನೂ ತಿಳಿದಿದ್ದರೂ ಇಂದಿರೆಯ ತಂದೆ ಜಯರಾಮ ಪ್ರೇಮವಿವಾಹವನ್ನು ವಿರೋಧಿಸುತ್ತಾನೆ. ಆದರೆ ದೇವಯಾನಿ ಇವರಿಗೆ ನೇರವಾಗಿ ಸಂಪ್ರದಾಯಿಕ ವಿವಾಹ ಪದ್ಧತಿ ವಿರೋಧ ವ್ಯಕ್ತಪಡಿಸುತ್ತಾಳೆ. ಇದೆ ನೆಲೆಯಲ್ಲಿ 'ಮಾತೃನಂದಿನಿ' ಕಾದಂಬರಿಯಲ್ಲಿ ಯಾವ ಕುಲ, ಜಾತಕಗಳನ್ನು ಲೆಕ್ಕಿಸದೆ ವಧುವರರಿಬ್ಬರು ಪರಸ್ಪರ ಒಪ್ಪಿಗೆಯಿಂದ ಮದುವೆಯಾಗುವುದನ್ನು ಕಾದಂಬರಿ ಎತ್ತಿ ಹಿಡಿದಿದೆ. 'ನಿರ್ಭಾಗ್ಯ ವನಿತೆ' ಕಾದಂಬರಿಯ ವಿಧವೆ ಇಂದಿರೆ, ವಿಧುರ ಸುಂದರೇಶ ಪರಸ್ಪರರ ಒಪ್ಪಿಗೆಯಿಂದ ಮದುವೆಯಾಗುವುದನ್ನು ಬೆಂಬಲಿಸಿದೆ.

'ನಿಸರ್ಗ' ಕಾದಂಬರಿ ಏನು ಅರಿಯದ ಮಕ್ಕಳನ್ನು ಹಿರಿಯರೆಲ್ಲರೂ ಸೇರಿ ಸಂಸಾರ ಬಂಧನಕ್ಕೆ ಸಿಲುಕಿಸಿದ್ದನ್ನು ವಿರೋಧಿಸಿದೆ. ಚಿಕ್ಕಂದಿನಿಂದ ಜೀವನದ ಸ್ನೇಹಿತರಾದ ತಾರಾ, ಅನಂತ, ಸಮಾಜದ ದೃಷ್ಟಿಯಲ್ಲಿ ಪರವ್ಯಕ್ತಿಗಳು, ತಾರಾ ಬರಮನ ಹೆಂಡತಿಯಾಗಿದ್ದರೆ, ಅನಂತ ಇಂದಿರೆಯ ಗಂಡನಾಗಿದ್ದ. ಪತಿಯಿಂದ ಕಾಣದ ಸುಖವನ್ನು ಅನಂತನಿಂದ ಪಡೆದ ತಾರಾಳಲ್ಲಿ ಸ್ವಾರ್ಥವಿಲ್ಲ. ಗಂಡನಿಂದ ಬಿಡುಗಡೆಯಾಗಿ ಬಂದಾಗ ತನಗಿನ್ನು ಅನಂತನೆ ನಿಜವಾದ ಗಂಡನೆಂದು ಭಾವಿಸಿದ್ದಳು. ಕೂಡಿ ಬಾಳಲು ಇಚ್ಛಿಸಿದಳು. 'ಕಾನೂರು ಹೆಗ್ಗಡಿತಿ' ಕಾದಂಬರಿಯ ಸೀತೆ ಚಿಕ್ಕಂದಿನಿಂದಲೇ ಹೂವಯ್ಯನನ್ನು ಪ್ರೀತಿಸಿ ಅನಿವಾರ್ಯವಾಗಿ ರಾಮಯ್ಯನನ್ನು ಮದುವೆಯಾದಳು (ಸೀತೆಗೆ ಪ್ರಜ್ಞೆಯಿರದ ಸಮಯದಲ್ಲಿ). ಇಂತಹ ಒತ್ತಾಯದ ಮದುವೆಯನ್ನು ಕಾದಂಬರಿಕಾರರು ಅಭಿಪ್ರಾಯಿಸಿದಂತೆ "ಮದುಮಗಳನ್ನು ಮಂಟಪಕ್ಕೆ ಎತ್ತಿಕೊಂಡು ಬಂದರು. ಹೊತ್ತು ತಂದವರು ಸೀತೆಯನ್ನು ಮದುಮಗಳಾಗಿ ಮಾಡಿದ್ದರು. ಆದರೆ ಸೀತೆ ಮದುಮಗಳಾಗಿರಲಿಲ್ಲ"[೬] ಹೀಗಾಗಿ ಅವಳು ರಾಮಯ್ಯನನ್ನು ಪತಿಯೆಂದು ಒಪ್ಪಿಕೊಳ್ಳುವುದಿಲ್ಲ. ಅಂತೆಯೇ ಶೋಷಣೆಯನ್ನು ಸಹಿಸದ ಸೀತೆ ರಾತೋರಾತ್ರಿ, ಪ್ರಿಯತಮನಲ್ಲಿಗೆ ಅರಸಿ ಹೋಗುವ ಧೈರ್ಯ ತಂದುಕೊಳ್ಳುತ್ತಾಳೆ. ವಿಮರ್ಶಕ ಕುಮುದ ಪ್ರಿಯಾ ಅವರು ಗುರುತಿಸಿರುವಂತೆ ತಾನು ಆತ್ಮಸಾಕ್ಷಿಯಾಗಿ ಮದುವೆಯಾಗಿದ್ದ

ಹೂವಯ್ಯನನ್ನೇ ತನ್ನ ಪತಿಯೆಂದು ಸ್ವೀಕರಿಸಿ, ಮಂಗಳಸೂತ್ರ ಕಿತ್ತೊಗೆದಳು. ಇದು ಸ್ತ್ರೀಪರ ನಿಲುವುವಿನ ಯಶಸ್ಸಿಗೆ ಕಾರಣ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಇದ್ದೊಬ್ಬ ಮಗಳು ಚಿನ್ನಮ್ಮಳನ್ನು ತನ್ನ ಸಾಲದ ಋಣಕ್ಕಾಗಿ ವಿವಾಹಿತ ಬರಮ್ಮೆ ಹೆಗ್ಗಡೆಗೆ ಕೊಡುವಂತಾದುದು ವೆಂಕಟಪ್ಪನಿಗೆ ಅನಿವಾರ್ಯವಾಗಿದ್ದರೂ ಅಚ್ಚರಿಯಾಗಿದೆ. ಚಿನ್ನಮ್ಮ ಮುಕುಂದಯ್ಯ ಪರಸ್ಪರ ಪ್ರೀತಿಸುವರೆಂದು ತಿಳಿದಿದ್ದ ತಂದೆಯ ಮನಸ್ಸು ಮಗಳ ಸೌಖ್ಯಕ್ಕಾಗಿ ಪರಿತಪಿಸುತ್ತಿದ್ದರೂ ಕೊಟ್ಟ ಮಾತಿಗೆ ತಪ್ಪದ ನಿಷ್ಠಾವಂತ. ಮದುವೆಯ ಮುಹೂರ್ತ ಸಮೀಪಿಸುತ್ತಿದ್ದಂತೆ ಚಿನ್ನಮ್ಮಳನ್ನು ಹಾರಿಸಿಕೊಂಡು ಹೋಗುವುದು ಕೂಡ ಪೂರ್ವಾಲೋಚನೆಯ ಫಲ. ಒಟ್ಟಾರೆಯಾಗಿ ಹಿರಿಯರು ನಿರ್ಣಯಿಸಿದ ವಿವಾಹ ಬಂಧನದಿಂದ ಪಾರುಗೊಳಿಸುವುದು ಇಲ್ಲಿ ಚಿನ್ನಮ್ಮಳನ್ನು ಹಾರಿಸಿಕೊಂಡು ಹೋದುದರ ಮೂಲೋದ್ದೇಶ. ಇಲ್ಲಿ ಚಿನ್ನಮ್ಮ ಮುಕುಂದಯ್ಯ ವ್ಯಕ್ತಿಗಳನ್ನೆದುರಿಸಿ ನಿಂತವರೇ ವಿನಃ ಸಮಾಜವನಲ್ಲ.

ಚಿನ್ನಮ್ಮ-ಮುಕುಂದಯ್ಯರಿಗೆ ಭಿನ್ನವಾಗಿ ನಿಲ್ಲುವ ಗುತ್ತಿ-ತಿಮ್ಮಿಯರದು ದಿಟ್ಟಧೈರ್ಯ. ಗುತ್ತಿ-ತಿಮ್ಮಿಯ್ಯರ ಮದುವೆಗೆ ಗುತ್ತಿಯರ ಮನೆಯವರಾಗಲಿ, ತಿಮ್ಮಿಯರ ಮನೆಯವರಾಗಲಿ ಅಡ್ಡಿಪಡಿಸಿದವರಲ್ಲ. ತಿಮ್ಮಿ ಬಚ್ಚನ ಮದುವೆ ಎರಡು ದಿವಸಗಳಿರುವಾಗಲೇ ತಿಮ್ಮಿಯನ್ನು ಹಾರಿಸಿಕೊಂಡು ಹೋಗುವಲ್ಲಿ ತಿಮ್ಮಿಯ ತಾಯಿ ಸೇಸಿ ಸಂಪೂರ್ಣವಾಗಿ ಸಹಕರಿಸಿದವಳು. ಕಾದಂಬರಿಕಾರರ ದೃಷ್ಟಿಯಲ್ಲಿ ವಿವಾಹ ಎನ್ನುವುದು ಸಾಮಾಜಿಕ ಸಮ್ಮತಿಯನ್ನು ಪಡೆದು, ಪರಸ್ಪರ ಪ್ರೇಮ ಸಂಬಂಧದ ಕುರುಹು ಆಗಿದೆ. ಅಂತೆಯೇ ಕಾದಂಬರಿಕಾರರು ವಿವಾಹ ಸಂಸ್ಥೆಯನ್ನು ವಿರೋಧಿಸದೆ, ಅದರಲ್ಲಿಯ ದೋಷವನ್ನು ಬಿಚ್ಚಿಡಲು ಪ್ರಯತ್ನಿಸಿದರು. ಹೀಗಾಗಿ ಸಂಪ್ರದಾಯಿಕ ವೈಚಾರಿಕ ಮಿತಿಯ ಒಳಗೆ ಸುಧಾರಣೆಗಾಗಿ ಪ್ರಯತ್ನಿಸಿದ್ದು ಶ್ಲಾಘನೀಯ.

### ೮.೩. ಬಾಲ್ಯ ವಿವಾಹಕ್ಕೆ ವಿರೋಧ

ಸ್ತ್ರೀಯನ್ನು ಶೋಷಿಸುವ ಇನ್ನೊಂದು ಮುಖ ಬಾಲ್ಯವಿವಾಹ. ಇದು ಪ್ರಾಚೀನ ಕಾಲದಲ್ಲಿ ಪ್ರಚಲಿತವಿರದಿದ್ದರೂ ಕಾಲಾನುಕ್ರಮದಲ್ಲಿ ಜನಪ್ರಿಯವಾಯಿತು. ಹೆಣ್ಣು ಮಕ್ಕಳು ಪ್ರಾಪ್ತ ವಯಸ್ಕರಾಗುವ ಮೊದಲೇ ಮದುವೆ ಮಾಡುವುದು. ಏನು ಅರಿಯದ ಮುಗ್ಧ ಮಕ್ಕಳನ್ನು ಹಸೆಮಣೆಯ ಮೇಲೆ ಕೂರಿಸಿ, ಸಂಸಾರವೆಂಬ ಉರುಳಿಗೆ ಬಲಿಯಾಗಿಸುವ ಪ್ರವೃತ್ತಿ ಜನಮನದಲ್ಲಿ ಬೇರುಬಿಟ್ಟವು.

ಈ ನೆಲೆಯಲ್ಲಿ ಇಂದಿರಾಬಾಯಿ, ಮಾತೃನಂದಿನಿ, ನಿರ್ಭಾಗ್ಯವನಿತೆ ಹಾಗೂ ಕನ್ಯಾಬಲಿ ಕಾದಂಬರಿಗಳು ಬಾಲ್ಯವಿವಾಹದಿಂದಾಗುವ ದುಷ್ಪರಿಣಾಮಗಳನ್ನು ಬಿಚ್ಚಿಟ್ಟಿವೆ. 'ಇಂದಿರಾಬಾಯಿ' ಕಾದಂಬರಿ ಬಾಲ್ಯವಿವಾಹದಿಂದಾಗುವ ದುಷ್ಪರಿಣಾಮಗಳನ್ನು ಬಿಚ್ಚಿಟ್ಟ ಗಮನಾರ್ಹ ಕೃತಿ. ಸ್ವತಃ

ಬಾಲ ವಿಧವೆಯರಾಗಿ ಅನುಭವಿಸಿದ್ದನ್ನು ಲೇಖಕಿಯರಾದ ತಿರುಮಲಾಂಬಾ ಹಾಗೂ ಕಲ್ಯಾಣಮ್ಮನವರು ತಮ್ಮ ಕಾದಂಬರಿಗಳ ಮೂಲಕ ಬಿಚ್ಚಿಟ್ಟಿದ್ದಾರೆ.

೧೯೧೬ರಲ್ಲಿ ಹೊರಬಂದ ತಿರುಮಲಾಂಬಾರ 'ಮಾತೃನಂದಿನಿ' ಕಾದಂಬರಿ ಬಾಲ್ಯ ವಿವಾಹದ ವಿರೋಧಿಯಾಗಿ, ಪ್ರೌಢ ಹಾಗೂ ಪ್ರೇಮ ವಿವಾಹದ ಪರವಾಗಿ ನಿಂತಿದೆ. ಅಕ್ಷರ ಜ್ಞಾನವನ್ನು ಪಡೆದು ವಿದ್ಯಾವಂತಳಾಗಿರುವ ಯುವತಿ ನಂದಿನಿ ಮತಾಂಧರಾದ ವಿಶ್ವನಾಥ ಹಾಗೂ ಗಣೇಶರಾಯರ ವಾದಗಳಿಗೆ ಪ್ರತಿರೋಧಿಸುತ್ತಾಳೆ.

"ಮಹಾಶಯ! ನೀವು ನಿಮ್ಮ ಮಕ್ಕಳನ್ನು ಬಾಲ್ಯ ವಿವಾಹವೆಂಬ ಕಟ್ಟಳೆಯಲ್ಲಿ ಕೆಡುಹುವ ಪ್ರಯತ್ನಕ್ಕೆ ನಿಂತು, ವಯೋ, ವಿದ್ಯಾ, ಗುಣಶೀಲೆಗಳಲ್ಲಿ ಪರಸ್ಪರ ಹೊಂದಿಸಲಾಗದ ಸಂಬಂಧವೆಂಬ ಆಳವಾದ ಬಾವಿಗೆ ತಳ್ಳಿ ಅವರನ್ನು ನೀವಾಗಿ ಕೆಡಿಸುತ್ತಿರುವಿರಿ"[೭] ಎಂದು ನೇರವಾಗಿ ಪುರುಷ ಸಮಾಜದ ನೀತಿಯನ್ನು ಖಂಡಿಸುತ್ತಾಳೆ. "ಆ ನಿಮ್ಮ ಬುದ್ಧಿ ತಿಳಿಯದ ಹುಡುಗಿಯರು ತಾವಾಗಿ ಬಂದ ತಮ್ಮನ್ನು ಸಂಸಾರ ಚಕ್ರಗತಿಗೆ ಈಗಾಗಲೇ ಬಲಿಯಾಗಿ ಒಪ್ಪಿಸಿ ಬಿಡಬೇಕೆಂದು ನಿಮ್ಮನ್ನು ಕಾಡಲಿಲ್ಲವಷ್ಟೇ? ಹಾಗಾದರೆ ಅವರನ್ನೇಕೆ ಹಾಗೆ ಮೂರ್ಖರಾಗುವಂತೆ ಮಾಡಬೇಕು?"[೮] ಎಂದು ಪ್ರಶ್ನಿಸುವ ನಂದಿನಿ ಪ್ರೌಢ ವಿವಾಹವನ್ನು ಸಮ್ಮತಿಸಿದವಳಲ್ಲದೆ ಆ ನಿಟ್ಟಿನಲ್ಲಿ ನಡೆದು ತೋರಿದ್ದಾಳೆ. ಮೂಢನಂಬಿಕೆ, ಮೌಢ್ಯ ಆಚರಣೆಗಳ ಗಣಿಯಾಗಿ ತೋರುವ ಸಂತ, ಮಠಾಧೀಶರುಗಳಿಂದ ಬಹಿಷ್ಕಾರದಂತಹ ನಿರೂಪಗಳು ಬಂದರೂ ಹೆದರದೆ ಬಾಳಿದಳು. ಈ ನೈತಿಕ ಪ್ರತಿಭಟನೆಯ ಹಿಂದೆ ಸ್ವತಃ ತಿರುಮಲಾಂಬಾ ಅವರ ಧ್ವನಿ ಇದೆ.

'ನಿರ್ಭಾಗ್ಯ ವನಿತೆ' ಕಾದಂಬರಿಯಲ್ಲಿ ವೈದಿಕ ಸಮಾಜದ ಪ್ರತಿನಿಧಿಯಾಗಿ ತೋರುವ ಅಜ್ಜಿ "ಇಂದಿರೆಗೆ ಆಗಲೇ ಒಂಬತ್ತು ವರ್ಷ ತುಂಬಿ ಹತ್ತನೆಯ ವರ್ಷವು ಮೊದಲಾಗುತ್ತದೆಯಲ್ಲ, ಇನ್ನೂ ವಿವಾಹವಿಲ್ಲದೆಯೇ ನಿಂತಿರುವಳು"[೯] ಎನ್ನುವಲ್ಲಿ ಬಾಲ್ಯವಿವಾಹವನ್ನು ಸಮರ್ಥಿಸುವಂತಿದ್ದರೆ, ತಾಯಿಯ ಹೇಳಿಕೆಗೆ ವಿರೋಧವಾಗಿ ನಿಲ್ಲುವ ವಿಚಾರವಾದಿ ಸತೀಶ "......ಇಂದಿರೆಯು ಇನ್ನೂ ಆಡುವ ಹಸು ಮಗು. ಅವಳನ್ನು ಈಗಲೇ ವಿವಾಹ ಬಂಧನಕ್ಕೆ ಸಿಲುಕಿಸಿ, ಸಂಸಾರ ಸಾಗರದಲ್ಲಿ ಮುಳುಗಿಸಿ ತೇಲಿಸುವುದಕ್ಕೆ ನನ್ನ ಮನಸ್ಸು ಎಂದಿಗೂ ಒಪ್ಪಲಾರದು"[೧೦] ಎಂಬ ಹೇಳಿಕೆ ಬಾಲ್ಯ ವಿವಾಹ ವಿರೋಧಕ್ಕೆ ಸಾಕ್ಷಿ ಹಾಗೂ ಸ್ತ್ರೀಪರ ಧೋರಣೆಯುಳ್ಳದ್ದು.

ಈ ಹಿನ್ನೆಲೆಯಲ್ಲಿ ಶಿವರಾಮಕಾರಂತರದ್ದು ದಿಟ್ಟ ಹೆಜ್ಜೆ. ಅವರ ಮೊದಲ ಕೃತಿ 'ಕನ್ಯಾಬಲಿ' ಬಾಲ್ಯವಿವಾಹದಿಂದಾಗುವ ದುಷ್ಪರಿಣಾಮಗಳ ಗಣಿಯಾಗಿದೆ. ಬಾಲವಿಧವೆ ಮಾಲತಿ ತನಗರಿವಿಲ್ಲದೆ ಆಗಿ ಹೋದ ಮದುವೆ ಅದು ಮದುವೆಯೇ ಅಲ್ಲ ಎನ್ನುವಷ್ಟರ ಮಟ್ಟಿಗೆ ಕಾರಂತರ ವೈಚಾರಿಕ

ಪ್ರಜ್ಞೆ ಮುಂದುವರಿದಿದೆ. ಇಂದಿನ ಪ್ರಜ್ಞಾವಂತ ಸಮಾಜದ ನಡೆಯೂ ಬಾಲ್ಯವಿವಾಹಗಳು ಘಟಿಸುತ್ತಿರುವುದು ವಿಷಾದನೀಯ.

### ೮.೪. ವಿಧವಾ ವಿವಾಹಕ್ಕೆ ಬೆಂಬಲ

ಸ್ವಾತಂತ್ರ್ಯಪೂರ್ವ ದಿನಗಳಲ್ಲಿ ವೈಧವ್ಯ ಎಂಬುದು ಬಹುದೊಡ್ಡ ಸಮಸ್ಯೆಯಾಗಿತ್ತು. ಈ ಸಮಸ್ಯೆಯಿಂದ ಸ್ತ್ರೀಯರನ್ನು ಮುಕ್ತಗೊಳಿಸುವಲ್ಲಿ ಸಮಾಜ ಸುಧಾರಕರು ಕಂಡುಕೊಂಡ ಮಾರ್ಗ ವಿಧವಾ ವಿವಾಹ. ಆದರೆ, ಅದು ಸರಳವಾದ ಕೆಲಸ ಆಗಿರಲಿಲ್ಲ. ಅಂದಿನ ದಿನಗಳಲ್ಲಿ ವಿಧುರರು ಮಾತ್ರ ಮರುಮದುವೆಯಾಗುವ ಅವಕಾಶ ಪಡೆದಿದ್ದು, ಪ್ರಜ್ಞಾವಂತ ಸ್ತ್ರೀ-ಪುರುಷರನ್ನು ಬಲವಾಗಿ ಕಾಡುತ್ತಿತ್ತು. ವಿಧವೆಯನ್ನು ನಿರ್ಬಂಧಿಸಿರುವ ಸಮಾಜ, ವಿಧುರರನ್ನೇಕೆ ನಿರ್ಬಂಧಿಸಲಿಲ್ಲ ಎಂಬ ವಿಚಾರ ನಿಗೂಢವಾಗಿಯೇ ಉಳಿದಿದ್ದರಿಂದ ವಿಧುರರು ಮರುಮದುವೆಯಾಗುವುದು ಸಾಮಾನ್ಯವಾಗಿತ್ತು. ಇಂತಹ ಸಮಯದಲ್ಲಿ "ಸಂಪ್ರದಾಯ, ವಿಧಿನಿಯಮ ಹಾಗೂ ಕಟ್ಟಳೆಗಳ ನಡುವೆ ಈಶ್ವರಚಂದ್ರ ವಿದ್ಯಾಸಾಗರ್ ಹಾಗೂ ವಿರೇಶ ಲಿಂಗಪಂತಲು(೧೮೮೧)ರಲ್ಲಿ ವಿಧವಾ ವಿವಾಹ ಮಾಡಿಸಿ ತಾವೇ ವಿಧವೆಯನ್ನು ಮದುವೆಯಾಗಿ ವಿಧವಾ ವಿವಾಹಕ್ಕೆ ಮಾದರಿಯಾದರು."[೧೧] ಇಂತಹ ಸಂಗತಿಗಳು ಕನ್ನಡ ಸಾಹಿತ್ಯದ ಮೇಲೆ ಪ್ರಭಾವ ಬೀರಿರುವುದರಿಂದ ಕಾದಂಬರಿಕಾರರು, ಸಹ ಪ್ರಭಾವಿತರಾದಂತೆ ಕಂಡುಬರುತ್ತಾರೆ. ಹೀಗಾಗಿ ಗುಲ್ವಾಡಿಯವರು ಹಾಗೂ ಆರ್.ಕಲ್ಯಾಣಮ್ಮನವರು ವಿಧವಾ ವಿವಾಹ ಮಾಡಿಸುವಲ್ಲಿ ಯಶಸ್ವಿಯಾದರು.

'ಇಂದಿರಾಬಾಯಿ' ಕಾದಂಬರಿಯ ಇಂದಿರಾಬಾಯಿ ಬಾಲ ವಿಧವೆಯಾಗಿ ಸ್ವ ಇಚ್ಛೆಯಿಂದ ಭಾಸ್ಕರನೊಂದಿಗೆ ವಿವಾಹವಾಗಲು ನಿರ್ಧರಿಸಿದಾಗ ಸ್ವಂತ ತಂದೆ-ತಾಯಿಗಳೇ ವಿರೋಧಿಸುತ್ತಾರೆ. ಧರ್ಮ ಪಂಡಿತರು ಮತ್ತು ಮಠಮಾನ್ಯಗಳಿಂದ ಬಹಿಷ್ಕಾರದ ಪತ್ರಗಳು ಬಂದುವಾದರೂ ಅದಕ್ಕಾಗಿ ತಲೆ ಕೆಡಿಸಿಕೊಳ್ಳದೆ ವಿಧವಾ ವಿವಾಹ ಯಶಸ್ವಿಯಾಗುತ್ತದೆ.

ಆರ್.ಕಲ್ಯಾಣಮ್ಮನವರ 'ನಿರ್ಭಾಗ್ಯ ವನಿತೆ' ಕಾದಂಬರಿ ಇದೆ ನೆಲೆಯುಳ್ಳದ್ದಾಗಿ ತೋರಿದರೂ ಸಮಾಜವನ್ನು ಎದುರಿಸುವ ಸಾಮರ್ಥ್ಯವಿಲ್ಲ. ಹೀಗಿದ್ದೂ ತಮ್ಮ ವೈಚಾರಿಕ ಮಿತಿಯ ಒಳಗೆ ಬಾಲವಿಧವೆ ಇಂದಿರೆ ಹಾಗೂ ಸುಂದರೇಶನ ಮದುವೆ ನೆರವೇರುವಂತೆ ಮಾಡಿದ್ದಾರೆ.

ಸ್ತ್ರೀಯ ವೈಧವ್ಯದ ನೋವಿಗಾಗಿ ಸ್ಪಂದಿಸಿರುವ ಕಾದಂಬರಿಕಾರರು ಎಲ್ಲಾ ನಿರ್ಬಂಧನೆಗಳ ನಡುವೆ ವಿಧವೆಗೂ ಜೀವವಿದೆ ಎಂದು ತೋರ್ಪಡಿಸಿದ್ದು ಅವರ ಸೈದ್ಧಾಂತಿಕ ವಿಚಾರ ಹಾಗೂ ತಾತ್ವಿಕ ಧೋರಣೆಯ ಫಲ ಎಂಬುವುದನ್ನು ಕಾಣಬಹುದು.

## ೮.೫. ವಿಷಮದಾಂಪತ್ಯ ಖಂಡನೆ

ಗಂಡು, ಹೆಣ್ಣುಗಳೆರಡು ಶಾಸ್ತ್ರಬದ್ಧವಾಗಿ ಪತಿ-ಪತ್ನಿಯಾಗಿದ್ದರೂ ಜೀವನ ಸಾರ್ಥಕ ಪಡೆಯುವುದು ಸುಖದಾಂಪತ್ಯದಿಂದ ಮಾತ್ರ. ಸತಿ-ಪತಿಯ ದೇಹ, ಮನಸ್ಸುಗಳೆರಡು ಪರಸ್ಪರ ಸಮಾಗಮಗೊಳ್ಳಬೇಕು. ವಿಷಾದನೀಯ ಸಂಗತಿ ಎಂದರೆ ಜೀವನದಲ್ಲಿ ದಾಂಪತ್ಯ ಸುಖದಿಂದ ವಂಚಿತರಾದ ಸ್ತ್ರೀಯರೇ ಹೆಚ್ಚಾಗಿದ್ದಾರೆ. ದಾಂಪತ್ಯ ಸುಖದಿಂದ ವಂಚಿತರಾಗಿ ಜೀವನ ಪೂರ್ತಿ ದುಃಖದಲ್ಲಿ ಮುಳುಗಿರುವ 'ಕಾನೂರು ಹೆಗ್ಗಡಿತಿ' ಕಾದಂಬರಿಯ ಸುಬ್ಬಮ್ಮ, ಸೀತೆ, 'ವಾಗ್ದೇವಿ' ಕಾದಂಬರಿಯ ಪಾರ್ವತಿ, ನಾಗವೇಣಿ, 'ಸರಸಮ್ಮನ ಸಮಾಧಿ' ಕಾದಂಬರಿಯ ಜಾನಕಿ, ಭಾಗೀರಥಿ ಮತ್ತು ಸುನಾಲಿನಿ. 'ನಿಸರ್ಗ' ಕಾದಂಬರಿಯ ತಾರಾ, ಇಂದಿರೆ ಹಾಗೂ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿಯ ಕೆಳವರ್ಗದ ಅಕ್ಕಣಿ ಧ್ಯೆಯಿ ನಿದರ್ಶನರಾಗುತ್ತಾರೆ. ಸೂಕ್ಷ್ಮವಾಗಿ ಗ್ರಹಿಸಿದರೆ ಇವರ್‍ಯಾರು ದಾಂಪತ್ಯ ಸುಖವನ್ನು ಸವಿದವರಲ್ಲ. ಇಂತಹದಕ್ಕೆ 'ಸರಸಮ್ಮನ ಸಮಾಧಿ' ಕಾದಂಬರಿಯ ಸ್ತ್ರೀಪಾತ್ರಗಳು ಉಳಿದೆಲ್ಲಾ ಕಾದಂಬರಿಗಳ ಸ್ತ್ರೀ ಪ್ರತಿನಿಧಿಗಳಾಗಿ ನಿಲ್ಲುತ್ತವೆ. ಶಿವರಾಮ ಕಾರಂತರು ಗುರುತಿಸುವಂತೆ "ನಿಜ ದಾಂಪತ್ಯವೆಂದರೆ ಎರಡು ಜೀವಿಗಳ ಸ್ವಾರಸ್ಯದ ಮಿಲನ. ಅವು ತಿಕ್ಕಾಡಬಾರದು. ಅವು ಹೊಂದಿಕೊಳ್ಳಬೇಕಾದರೆ ಮನಸ್ಸು ಹೊಂದಿಕೊಳ್ಳಬೇಕು. ಅದಕ್ಕೆ ಮನಸ್ಸು ಬೆಳೆಯಬೇಕು. ಒಬ್ಬರು ಇನ್ನೊಬ್ಬರ ಮನಸ್ಸು ಏನೆಂದು ತಿಳಿಯಬೇಕು. ಪಾತಿವ್ರತ್ಯದ ಹೆಸರಿನಲ್ಲಿ ಪರಂಪರೆ, ಅಂಧಶ್ರದ್ಧೆಗಳ ಅಫೀಮನ್ನು ಮೆದ್ದು, ತಾವು ಜೀವನ್ಮೃತರಾಗಬೇಕು. ಗಂಡಿನ ಪ್ರತಿಯೊಂದು ಅನ್ಯಾಯವನ್ನು ಸಹಿಸಿ, ಬಾಳ್ವೆ ಮಾಡುವುದೆಂದರೆ ನಿಜ ದಾಂಪತ್ಯದ ಒಂದು ಭಾಗ, ಅಭಿಮಾನ ಶೂನ್ಯ ಹೊಣೆವಾದರೆ ಆಗ ದಾಂಪತ್ಯ ಸುಖವಾಗಿ ಸಾಗುತ್ತದೆ. ಪತಿಗೇನುಬೇಕು? ಪತ್ನಿಯ ಮನಸಲ್ಲಿ ತನ್ನ ಕಾಯಕ್ಕೆ ಬಲಿಕೊಡಲು ಮಾಂಸಬೇಕು"[೧೨] ಎಂಬ ವ್ಯಂಗ್ಯ ಧ್ವನಿ ಪುರುಷ ಪ್ರಾಧಾನ್ಯತೆಯನ್ನು ಕೆಣಕುತ್ತದೆ. ಅಷ್ಟೇ ಅಲ್ಲ; ಸ್ತ್ರೀಯರ ನೋವಿನ ಒಡಲ ಉರಿಗೆ ಸ್ಪಂದಿಸುತ್ತದೆ.

ಸುಖ ಎನ್ನುವುದು ಗಂಡಿಗೆಷ್ಟೋ ಹೆಣ್ಣಿಗೂ ಅಷ್ಟೇ. ಇಲ್ಲಿ ಕಾರಂತರು ಸ್ಪಂದಿಸಿದ್ದು ಮಾನವೀಯ ಮೌಲ್ಯವನ್ನು. ಹೀಗಾಗಿ ಮನಬಂದಂತೆ ಅಧಿಕಾರ ಚಲಾಯಿಸಿ ದೈಹಿಕ ಹಸಿವನ್ನು ತೀರಿಸಿಕೊಳ್ಳುವ ಪುರುಷ ಸಮಾಜವನ್ನು ವಿರೋಧಿಸುತ್ತಾರೆ. ಅದೇ ಕಾರಣವೇ ಸುನಾಲಿನಿಯ ಮೂಲಕ "ನಾನು ಬೇಕೆಂದಿದ್ದರೆ ಮಾತ್ರ..... ಬರಿಯ ಬೋಗಕ್ಕಲ್ಲ"[೧೩] ಎಂದು ಪ್ರತಿಕ್ರಿಯಿಸುತ್ತಾರೆ. ಇಂತಹ ಪ್ರತಿಕ್ರಿಯೆಯ ಹಕ್ಕು ವಿದ್ಯಾವಂತ, ವಿಚಾರವಂತ ಸ್ತ್ರೀಯರದಾಗಿತ್ತು. ವಿಷಾದದ ಸಂಗತಿ ಎಂದರೆ ಮಧ್ಯಮ ಮತ್ತು ಕೆಳವರ್ಗದ ಸ್ತ್ರೀಯರು ಅನಕ್ಷರಸ್ಥರಾಗಿದ್ದರಿಂದ ಗಂಡನ ಅಧಿಕಾರವನ್ನು ವಿರೋಧಿಸಲಾಗದೆ ಬಲತ್ಕಾರಕ್ಕೆ ಒಳಗಾದವರೇ ಹೆಚ್ಚು. ಗಂಡಿಗಿರುವ ಆಸೆ,

ಆಕಾಂಕ್ಷೆ ಬಯಕೆಗಳು ಹೆಣ್ಣಿಗೂ ಇರುತ್ತವೆಂಬುದನ್ನು ಪುರುಷ ಸಮಾಜ ಒಪ್ಪಿಕೊಂಡಿಲ್ಲ. ಕೌಟುಂಬಿಕ ಚೌಕಟ್ಟಿನ ಒಳಗೆ ಸ್ತ್ರೀ ಅನುಭವಿಸಿದ ಸುಖ ಹೇಳಿಕೊಳ್ಳುವಂಥದಲ್ಲ. ಪತಿ, ಪತ್ನಿಯ ಇಚ್ಛೆಯನ್ನರಿತು ಎಂದು ನಡೆದುದಿಲ್ಲ. ಪತಿಯ ಎದುರು ವಾದಿಸುವುದು ಇರಲಿ ನಿಲ್ಲುವಂತೆಯೂ ಇರಲಿಲ್ಲ. ಸತಿ ಎಂಬುವವಳು ಪತಿಯ ಸೊತ್ತಾಗಿದ್ದಳು. ಭಾರತೀಯ ಸಮಾಜ ಇಂತಹ ಗೊಡ್ಡು ಆಚರಣೆಗಳಿಂದಾಗಿ ಪತಿ–ಪತ್ನಿಯರಲ್ಲಿ ವಿರಸ ಕಾಣಿಸಿಕೊಂಡಿರಬಹುದು. ಇಲ್ಲಿ ಮುಖ್ಯವಾಗಿ ಒಂದು ಅಂಶವನ್ನು ಗುರುತಿಸಲು ಸಾಧ್ಯವಿದೆ. ಹತ್ತೊಂಬತ್ತನೆಯ ಶತಮಾನದ ಬಹುತೇಕ ಲೇಖಕರು ಮೇಲ್ವರ್ಗದವರಾಗಿದ್ದರಿಂದ ತಮ್ಮ ಜಾತಿ ಜನಾಂಗದ ಸ್ತ್ರೀಯರನ್ನು ಸಮಸ್ಯಾತ್ಮಕವಾಗಿ ಚಿತ್ರಿಸಿದಂತೆ, ಇನ್ನುಳಿದ ವರ್ಗಗಳ ಸ್ತ್ರೀಯರನ್ನು ಚಿತ್ರಿಸಲು ಇಚ್ಛಿಸಿಲ್ಲ. ಬದಲಾಗಿ ಅವರಿಗೆ ಸಮಸ್ಯೆಗಳೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಸ್ವತಂತ್ರಳು, ಸ್ವಾವಲಂಬಿಯು ಆಗಿದ್ದಾಳೆಂದು ವೈಭವೀಕರಿಸಿದ್ದಾರೆ.

### ೮.೬. ಶೀಲದ ಮೌಲ್ಯ ಪ್ರತಿಪಾದನೆ

ಶೀಲವೆಂಬುದು ಮಾನವ ಸಮಾಜದಲ್ಲಿ ವ್ಯಕ್ತಿಗಳ ವರ್ತನೆಗಳಿಗೆ ಸಂಬಂಧಿಸಿದೆ. ಶುದ್ಧ ಚಾರಿತ್ರ್ಯವುಳ್ಳವರು ಶೀಲವಂತರೆಂಬುದು ಸಮಾಜದಲ್ಲಿ ರೂಢಿಯಲ್ಲಿದೆ. ನಡತೆಯಿಂದ ಕೆಟ್ಟವರನ್ನು ಶೀಲಗೆಟ್ಟವರೆಂದು ಗುರುತಿಸುವುದು ಒಂದು ರೂಢಿಯಾಗಿದೆ. ಇದೊಂದು ಮೌಲ್ಯವಾಗಿಯೂ ಪರಿಗಣಿಸಲ್ಪಟ್ಟಿವೆ. ಆದರೆ ಸಮಾಜದಲ್ಲಿ ಶೀಲಕ್ಕೆ ಸಂಬಂಧಿಸಿದಂತೆ ಕಟ್ಟಳೆಗಳನ್ನು ರೂಪಿಸುವಾಗ ಮಹಿಳೆಗೆ ನಿರ್ಬಂಧನೆಗಳನ್ನು ಸೃಷ್ಟಿಸಿ, ಪುರುಷನ ವಿಷಯದಲ್ಲಿ ಸಡಿಲು ಧೋರಣೆ ತಾಳಿದಂತೆ ಕಾಣುತ್ತದೆ. ಹೆಣ್ಣು ಗಂಡನಿಗಾಗಿ ನಿಷ್ಠವಂತಳಾಗಿರುವುದೇ ಪಾತಿವ್ರತ್ಯದ ಲಕ್ಷಣವೆಂದು ಪ್ರತಿಪಾದಿಸಲ್ಪಟ್ಟಿದೆ.

ಸ್ವಾತಂತ್ರ್ಯಪೂರ್ವದ ಕಾದಂಬರಿಗಳು ಹೆಚ್ಚಾಗಿ ಹೆಣ್ಣಿನ ಶೀಲದ ಪರವಾಗಿ ನಿಂತಿವೆ. 'ಇಂದಿರಾಬಾಯಿ' ಕಾದಂಬರಿಯ ವಿಧವೆ, ಇಂದಿರಾಬಾಯಿ, ಪ್ರಗತಿಶೀಲ ವಿಚಾರಗಳುಳ್ಳವಳಾದರೂ ಹೆಣ್ಣಿನ ಜೀವನದಲ್ಲಿ ಅತ್ಯಂತ ಮಹತ್ವದ್ದು ಶೀಲವೆಂದು ಭಾವಿಸಿದ್ದಳು. ಆದರೆ ಅಂದಿನ ದಿನಗಳಲ್ಲಿ ವಿಧವೆಯರ ಸ್ಥಿತಿ ಹೀನಾಯವಾಗಿತ್ತಾದರೂ ಪುರುಷ ಸಮಾಜದ ಕಣ್ಣಲ್ಲಿ ಕಾಮ ತೀರಿಸುವ ರತಿಯಾಗಿ ಗೋಚರಿಸಿದ್ದು ವಿಷಾದದ ಸಂಗತಿ. ಅದರಂತೆ ಸದಾ ಒಳ್ಳೆಯದನ್ನೇ ಬಯಸಬೇಕಾದ ಸಂತಮಂಡಲಿಯ ರಂಗಪ್ಪ ಇಂದಿರಾಬಾಯಿಯನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದಾಗ, ಇಂದಿರಾಬಾಯಿ ಸವಿಯ ಮಾತುಗಳಿಂದ ಮೆಚ್ಚಿಸಿ, ಅವನನ್ನು ಕೋಣೆಯಲ್ಲಿ ಬಂಧಿಸಿ ಪರಾರಿಯಾಗುವುದು ಶೀಲ ರಕ್ಷಣೆಗೋಸ್ಕರವಾಗಿಯೇ. 'ಮಾಡಿದುಣ್ಣೊ ಮಹಾರಾಯ' ಕಾದಂಬರಿಯ ಪೂಜಾರಿ ಸಿದ್ದಾಪ್ಪಾಜಿ ಸೀತೆಯನ್ನು ಬಲಾತ್ಕರಿಸಲು ಬಂದಾಗ ಕಲ್ಲಿನಿಂದ

ಒಡೆದು ಪರಾರಿಯಾದದ್ದು ಕೂಡ ಶೀಲದ ಮೌಲ್ಯವನ್ನೇ ಎತ್ತಿ ಹಿಡಿಯುತ್ತದೆ. ಇದಕ್ಕೆ ತಿರುಮಲಾಂಬಾ ಅವರ 'ಸುಶೀಲೆ', 'ನಭಾ', 'ವಿರಾಗಿಣಿ' ಮತ್ತು 'ಮಣಿಮಾಲಾ' ಕಾದಂಬರಿಗಳು ಹೊರತಾಗಿಲ್ಲ.

'ನಭಾ' ಕಾದಂಬರಿಯಲ್ಲಿ ನಭಾ ವಿಧವೆಯಾಗಿ ಭಾರತೀಯ ಸ್ತ್ರೀ ಧರ್ಮದ ಪ್ರತಿಪಾದನೆಯಂತೆ ಕಾಣುತ್ತಾಳೆ. ಹಿಂತಿರುಗುವಾಗಲೂ ರಾಜಶೇಖರನೆಂಬ ಯುವಕ ನಭಾಳನ್ನು ಮದುವೆಯಾಗುವಂತೆ ಪೀಡಿಸುತ್ತಾನೆ. ಎಷ್ಟು ಹೇಳಿದರೂ ಕೇಳದ ರಾಜಶೇಖರ ಯಾರಿಲ್ಲದ ವೇಳೆ ನಭಾಳ ಮೈಮೇಲೆ ಬಿದ್ದು ಇಂದ್ರಿಯ ತೃಪ್ತಿ ನೀಡುವಂತೆ ಕೇಳುತ್ತಾನೆ. ಇಲ್ಲವಾದರೆ ಕೊಲ್ಲುವುದಾಗಿ ಹೆದರಿಸುತ್ತಾನೆ. ಇಂತಹ ಕ್ಲಿಷ್ಟ ಸಮಯದಲ್ಲಿ ತಾಳ್ಮೆ ಕಳೆದುಕೊಳ್ಳದ ನಭಾ "ನಾನು ಸಾಯಲು ಸಿದ್ಧಳಾಗಿಯೇ ಇರುವೆನು. ನಿನ್ನ ಮನಬಂದಂತೆ ಮಾಡಬಹುದು. ಹುಟ್ಟಿದವರು ಸಾಯಲೇಬೇಕು. ಪರಸುಖಕ್ಕಾಗಿ ಪ್ರಾಣತ್ಯಾಗ ಮಾಡುವುದು ಪುಣ್ಯಪ್ರದವಾದುದು. ಪತಿದ್ರೋಹ ಪಾತಕಕ್ಕಿಂತ ಅದು ಮೇಲೆಂದು ದೃಢವಾಗಿಯೂ ಹೇಳಬಲ್ಲೆನು."[೧೪] ಈ ಕೆಲಸವನ್ನು ಮೊದಲು ಮಾಡು ಎನ್ನುವಲ್ಲಿ ಅವಳಿಗೆ ಜೀವಕ್ಕಿಂತಲೂ ಶೀಲವೇ ಮುಖ್ಯವಾಗುತ್ತದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಮಧ್ಯಮ ವರ್ಗದ ಅಂತಕ್ಕಳ ಮಗಳು ಕಾವೇರಿ ತನ್ನ ಮೈ ಮೀಸಲಿರಿಸಿದ್ದು ದೇವಯ್ಯ ಗೌಡನೊಬ್ಬನಿಗೆ ಮಾತ್ರ. ಚೀಂಕ್ರನ ಮಾತಿಗೆ ಮರುಳಾಗಿ ಸಾಮೂಹಿಕ ಅತ್ಯಾಚಾರಕ್ಕೊಳಗಾದಾಗ ಅವಳಿಗೆ ಜೀವನವೇ ಅಸಹ್ಯವೆನಿಸಿ ಬಾವಿಗೆ ಹಾರಿ ಪ್ರಾಣ ಬಿಡುತ್ತಾಳೆ. 'ಚೋಮನದುಡಿ' ಕಾದಂಬರಿಯ ಬೆಳ್ಳಿಯು ಅಷ್ಟೇ ಹೊಲೆಯನ ಮಗಳಾದರೂ ಶೀಲಕ್ಕೇನು ಕೊರತೆಯಿಲ್ಲ. ಒಂಟಿ ಹೆಣ್ಣಿನ ಅಸಹಾಯಕತೆ ಮನ್ವೇಲನ ಕಾಮದಾಸೆಯನ್ನಾಗಿ ಮಾಡಿದರೆ, ಮಿಂಗೇಲ ದೊರೆಗಳ ಒತ್ತಾಯದ ದೇಹ ಸುಖಕ್ಕೂ ಬಲಿಯಾಗಿ ರಾತ್ರೋರಾತ್ರಿ ಊರಿಗೆ ಪ್ರಯಾಣಬೆಳೆಸಿದ್ದು ತನ್ನ ಶೀಲವನ್ನು ಕಾಪಾಡಿಕೊಳ್ಳುವುದಕ್ಕಾಗಿಯೇ.

ಒಟ್ಟಾರೆ ಸ್ವಾತಂತ್ರ್ಯ ಪೂರ್ವದ ಕನ್ನಡ ಕಾದಂಬರಿಗೆ ಸಂಬಂಧಿಸಿದಂತೆ ನೋಡುವಾಗ ಸ್ತ್ರೀ ಶೋಷಣೆಗೆ ಕಾರಣನಾದ ಪುರುಷ ಅವಳ ಸುಧಾರಣೆಗೆ ಮೊಟ್ಟ ಮೊದಲು ಸ್ಪಂದಿಸಿದವನು ಪುರುಷನೆ ಆಗಿದ್ದಾನೆ. ಬದಲಾದ ಸಮಾಜದ ಪರಿಸ್ಥಿತಿಗೆ ಸ್ತ್ರೀಯ ಅನುಭವವನ್ನು ತನ್ನದಾಗಿಸಿಕೊಂಡು ಅಭಿವ್ಯಕ್ತಿ ಮಾಡಲು ಪ್ರಯತ್ನಿಸಿತು ಹಾಗೂ ಕಾದಂಬರಿಕಾರರ ಸ್ತ್ರೀಪರ ಪ್ರಜ್ಞೆ ಹಾಗೂ ಸುಧಾರಣೆಯು ಮೆಚ್ಚುವಂತಹದ್ದು. ಒಟ್ಟಾರೆ ಸ್ತ್ರೀ ಪರ ಚಿಂತನೆ ನೈತಿಕ ಮೌಲ್ಯಗಳ ಸುಧಾರಣೆಯ ಕಡೆಗೆ ಮುಖ ಮಾಡಿದೆ. ಸ್ತ್ರೀಯರು ಹಿಂದುಳಿಯಲು ಅವರ ಮೇಲೆ ಹೇರಲ್ಪಟ್ಟ ಕಟ್ಟುಪಾಡುಗಳೇ ಮುಖ್ಯ ಕಾರಣವೆಂಬ ಅಂಶ ಕಾದಂಬರಿಗಳಲ್ಲಿ ದಾಖಲಾಗಿದೆ.

**ಕೊನೆಟಿಪ್ಪಣಿಗಳು**

೧. ಸುಮಿತ್ರಾಬಾಯಿ ಬಿ.ಎನ್.(ಸಂ)., **'ಕಲ್ಯಾಣ ಸರಸ್ವತಿ'**, ಕರ್ನಾಟಕ ಲೇಖಕಿಯರ ಸಂಘ, ಪು.೪.

೨. ಅದೇ, ಪು.೪೧.

೩. ಸಂತುಬಾಯಿ ನೀಲಗಾರ, **'ಸದ್ಗುಣಿ ಕೃಷ್ಣಬಾಯಿ'**, ಪು.೪೫.

೪. ತಿರುಮಲಾಂಬಾ, **'ಮಾತೃನಂದಿನಿ'**, ಪು.೩೪.

೫. ಕೆರೂರು ವಾಸುದೇವಚಾರ್ಯ, **'ಇಂದಿರೆ'**, ಪು.೮೮.

೬. ಕುವೆಂಪು, **'ಕಾನೂರು ಹೆಗ್ಗಡಿತಿ'**, ಪು.೪೮೦.

೭. ನಂಜನಗೂಡು ತಿರುಮಲಾಂಬ, **'ಮಾತೃ ನಂದಿನಿ'**, ಪು.೩೨.

೮. ಅದೇ, ಪು.೩೩.

೯. ಕಲ್ಯಾಣಮ್ಮ ಆರ್., **'ನಿರ್ಭಾಗ್ಯ ವನಿತೆ'**(ಕಲ್ಯಾಣ ಸರಸ್ವತಿ), ಪು.೨೭೪.

೧೦. ಅದೇ, ಪು.೨೭೪.

೧೧. ಶಿವಲಿಂಗಪ್ಪ ಭಂಡಾರಿ, **'ಕನ್ನಡ ಕಾದಂಬರಿಗಳಲ್ಲಿ ಸ್ತ್ರೀ'**, ಪು.೨೭೪.

೧೨. ಕಾರಂತ ಶಿವರಾಮ, **'ಸರಸಮ್ಮನ ಸಮಾಧಿ'**, ಪು.೧೦೮.

೧೩. ಅದೇ, ಪು.೧೦೯.

೧೪. ತಿರುಮಲಾಂಬಾ, **'ನಭಾ'**, ಪು.೫೮.

## ಅಧ್ಯಾಯ ಒಂಬತ್ತು

# ಕಾದಂಬರಿಗಳಲ್ಲಿ ಆದರ್ಶ ಮತ್ತು ವಾಸ್ತವ

ಕಳೆದ ಶತಮಾನದ ಮೂರನೆಯ ದಶಕದ ಸುಮಾರಿಗೆ ಕನ್ನಡ ಕಾದಂಬರಿ ಪ್ರಯೋಗ ಸಹಜವಾಗಿ ಅನಿಶ್ಚಿತತೆಯನ್ನು ಕಳೆದುಕೊಂಡು ವಾಸ್ತವದ ರಾಜಮಾರ್ಗವನ್ನಾಯ್ದುಕೊಂಡಿತು. ಹೀಗಾಗುವುದಕ್ಕೆ ಮುಖ್ಯ ಕಾರಣ ಹತ್ತೊಂಬತ್ತನೆಯ ಶತಮಾನದ ಯುರೋಪಿಯನ್ ಕಾದಂಬರಿಯ ಪ್ರಭಾವವೆಂದು ತೋರುತ್ತದೆ. "ಈ ವಾಸ್ತವ ಮಾರ್ಗದ ಕಾದಂಬರಿ ಜನ್ಮ ತಾಳಿದ್ದೇ ಐತಿಹಾಸಿಕ ಕಾದಂಬರಿಯ ಗರ್ಭದಲ್ಲಿ ಇದು ಐತಿಹಾಸಿಕ ದೃಷ್ಟಿಕೋನವನ್ನು ಸಮಕಾಲೀನ ಜೀವನವನ್ನು ಚಿತ್ರಿಸುವುದಕ್ಕೋಸ್ಕರ ಉಪಯೋಗಿಸುತ್ತಾರೆ. ಕನ್ನಡ ಕಾದಂಬರಿಯ ಸಂದರ್ಭದಲ್ಲಿ ಈ ವಿಚಾರಗಳ ಪ್ರಸ್ತುತತೆ ಬಗ್ಗೆ ಹೆಚ್ಚು ಹೇಳುವ ಅವಶ್ಯಕತೆಯಿಲ್ಲ. ನವೋದಯ ಕಾದಂಬರಿಕಾರ ವಾಸ್ತವಮಾರ್ಗವನ್ನೇ ಆಯ್ದುಕೊಂಡುದುದಕ್ಕೆ ಮುಖ್ಯ ಕಾರಣ ಅವರಿಗೆ ತನ್ನ ಪರಿಸರದಲ್ಲಿ ಹುಟ್ಟಿದ ಆಸ್ಥೆ ಇದು ಅವನ ಅಸ್ತಿತ್ವದ ಶೋಧದ ಅಂಗವೂ ಆಗಿತ್ತು."[೧] ವಾಸ್ತವವನ್ನು ಹಿಡಿದಿಡುವಲ್ಲಿ ಭಾಷೆಯ ಸಾಮರ್ಥ್ಯದ ಬಗ್ಗೆ ತುಂಬಾ ವಿಶ್ವಾಸವುಳ್ಳ ಈ ಲೇಖಕರು ಪರಿವರ್ತನೆಯ ಮಾರ್ಗದಲ್ಲಿದ್ದ ತಮ್ಮ ಸಮಾಜವನ್ನು ವಸ್ತುವನ್ನಾಗಿ ಆರಿಸಿಕೊಂಡರು. ವೈವಿಧ್ಯಪೂರ್ಣವಾದ ಕರ್ನಾಟಕ ಪ್ರಾದೇಶಿಕ ಜೀವನವನ್ನು ದಾಖಲೆಗೊಳಿಸಿದ ಅನೇಕ ಕಾದಂಬರಿಗಳು ಈ ಮಾರ್ಗದಲ್ಲಿ ಹುಟ್ಟಿಕೊಂಡವು. ವಾಸ್ತವ ಮಾರ್ಗದ ಮೊತ್ತ ಮೊದಲ ಸಾಮಾಜಿಕ ಕಾದಂಬರಿ ಇಂದಿರಾಬಾಯಿಯಿಂದ ಶುರುವಾದ ಕನ್ನಡ ಕಾದಂಬರಿ ಪರಂಪರೆ ಮುಂದೆ ಕಾಲಗತಿಯಲ್ಲಿ ಪ್ರಗತಿಶೀಲ, ನವ್ಯ, ದಲಿತ, ಬಂಡಾಯಗಳಲ್ಲಿ ಸಮೃದ್ಧವಾಗಿ ಬೆಳೆದು ಹೊಸಗನ್ನಡದ ಸಾಮಾಜಿಕ ವಾಸ್ತವದ ಹೆದ್ದಾರಿಯಾಯಿತು.

ಅದೇ ರೀತಿ ಈ ಸಾಮಾಜಿಕ ಕಾದಂಬರಿಗಳಲ್ಲಿ ಆದರ್ಶವಾದುದರಿಂದ ಪ್ರೇರಿತವಾದವುಗಳು. ಕನ್ನಡದ ನವೋದಯ ಸಾಹಿತ್ಯದ ಪ್ರೇರಕಶಕ್ತಿಯೂ ಆಗಿದೆ. ಹೀಗಾಗಿ ನಮ್ಮ ಮೊದಲ ಪೀಳಿಗೆಯ ಕಾದಂಬರಿಕಾರರಲ್ಲಿ ಹೆಚ್ಚು ಆದರ್ಶವಾದಿಗಳಾಗಿದ್ದಾರೆ. ಅವರವರ ವ್ಯಕ್ತಿತ್ವದ ಪ್ರಕಾರ ಆದರ್ಶಪ್ರಿಯತೆ ಬೇರೆ ಬೇರೆಯಾಗಿ ಅಭಿವ್ಯಕ್ತಿಯನ್ನು ಪಡೆದಿದೆ. "ವಾಸ್ತವವಾದ ಮತ್ತು ನೈಜತೆ(Realism and

naturalism)ಯನ್ನು ಅನೇಕ ಬಾರಿ ಒಂದೇ ಎಂದು ಭಾವಿಸಲಾಗುತ್ತದೆ. ಆದರೆ ಇದು ತಪ್ಪು. ನೈಜವಾದ ಜೀವನವನ್ನು ಅದು ಇರುವಂತೆಯೇ ವಿವರಿಸುತ್ತದೆ. ಆದರೆ ವಾಸ್ತವವಾದದಲ್ಲಿ ಜೀವನದ ವಿಮರ್ಶೆಯೂ ಇರುತ್ತದೆ. ನೈಜತೆಯು ಬದುಕಿನ ದೈನಿಕದ ವಾಸ್ತವವನ್ನು ಹಾಗೆಯೇ ಚಿತ್ರಿಸುತ್ತದೆ. ಆದುದರಿಂದ ನಿಜ ಜೀವನದ ಮನನೋಯಿಸುವ ಘಟನೆಗಳ ಅನವಶ್ಯಕ ಚಿತ್ರಣ ನೈಜತೆಯಾದರೆ ಆಳವಾದ ಜೀವನ ವಿಮರ್ಶೆಯನ್ನು ಒಳಗೊಂಡುದ್ದು ವಾಸ್ತವವಾದವಾಗುತ್ತದೆ."[೨]

ಈ ಮೊದಲು ಕಾದಂಬರಿಗಳಲ್ಲಿ ಆದರ್ಶ ಮತ್ತು ವಾಸ್ತವಗಳ ಸಂಬಂಧವನ್ನು ಶಿವರಾಮ ಪಡಿಕ್ಕಲ್ ಅವರು ಮೂರು ವಿಭಿನ್ನ ಸ್ಥಿತಿಗಳಲ್ಲಿ ಗುರುತಿಸಿದ್ದಾರೆ. "ಭವಿಷ್ಯದಲ್ಲಿ ನಿಜವಾಗಿ ಬಿಡುವ ಆದರ್ಶವನ್ನು ಒಂದು ಬಗೆ, ಆದರ್ಶದ ವೈಭವೀಕರಣವನ್ನು ಇನ್ನೊಂದು ಬಗೆಯಲ್ಲಿ ಹಾಗೂ ಅದು ಹೇಳುತ್ತಿರುವ ಆದರ್ಶವನ್ನು ಮಗದೊಂದು ರೀತಿಯಲ್ಲಿ ನಾವು ಕಾಣುತ್ತೇವೆ. ಈ ಮೂರು ವಿಭಿನ್ನ ದೃಷ್ಟಿಕೋನಗಳು ಒಟ್ಟಾಗಿ ಕನ್ನಡ ಕಾದಂಬರಿಯ ಮೊದಲ ಘಟ್ಟವನ್ನು ಪ್ರತಿನಿಧಿಸುತ್ತದೆ."[೩] ಹೀಗಾಗಿ ಕಾದಂಬರಿಯನ್ನು ರಚಿಸುವಾಗ ನಿರೂಪಣಾ ಪ್ರಜ್ಞೆಗೆ ಆದರ್ಶದ ಅರಿವು ಇರುತ್ತದೆ. ಈ ಆದರ್ಶದ ಅರಿವಿನಿಂದಲೇ ಕಾದಂಬರಿಯಲ್ಲಿ ವಾಸ್ತವವನ್ನು ಕುರಿತು ಚಿಂತನೆಯು ಮಂಡಿತವಾಗುತ್ತದೆ. ಕಾದಂಬರಿಯ ಬಂಧದಲ್ಲಿ ಲೇಖಕರ ವೈಚಾರಿಕತೆಯು ನೇರವಾಗಿ ಮಂಡಿತವಾಗುವುದಿಲ್ಲ. ಬದಲಾಗಿ ಕಾದಂಬರಿಯ ವೈವಿಧ್ಯಮಯ ವಿವರಗಳನ್ನು ನಿರೂಪಿಸುವ ರೀತಿಯಲ್ಲಿಯೇ ಅದು ಓದುಗರ ಗಮನಕ್ಕೆ ಬರುವಂತೆ ಮಾಡುತ್ತದೆ.

ಈ ಕಾದಂಬರಿಯಲ್ಲಿ ವಿವಿಧ ಪಾತ್ರಗಳ ತಾಕಲಾಟಗಳು ಪರಿಸ್ಥಿತಿಯ ವಿರುದ್ಧ ಅವು ನಡೆಸುವ ಹೋರಾಟಗಳು ಕಂಡುಬರುತ್ತವೆ. ಕಾದಂಬರಿಯ ಕೊನೆ ತಲುಪುವ ಹೊತ್ತಿಗೆ ಆ ಪಾತ್ರಗಳು ಬೆಳವಣಿಗೆಯನ್ನು ಪಡೆದು ಪಾತ್ರ, ಘಟನೆ, ಕ್ರಿಯೆಗಳು ಒಂದು ನಿಲುಗಡೆಗೆ ತಲುಪುತ್ತವೆ. ಈ ಪ್ರಕ್ರಿಯೆಯಲ್ಲಿ ಕಾದಂಬರಿಯ ವಾಸ್ತವವನ್ನು ಪ್ರಬುದ್ಧತೆಯ ಅರಿವನ್ನು ಪಡೆಯುವುದು ಕಾಣುತ್ತೇವೆ. ಆದುದರಿಂದ ಆದರ್ಶ ಮತ್ತು ವಾಸ್ತವಗಳು ತಮ್ಮ ನಡುವಿನ ಘರ್ಷಣೆಯಿಂದ ಕಾದಂಬರಿಯ ಆಕಾರವನ್ನು ನಿರೂಪಿಸುತ್ತವೆ. ಆದರ್ಶದ ಅರಿವಿನಿಂದ ವಾಸ್ತವಕ್ಕಿಂತ ಭಿನ್ನವಾದ ರಚನೆಯೊಂದರ ಮೂಲಕ ಕಾದಂಬರಿಕಾರ ವಾಸ್ತವವನ್ನು ಕುರಿತ ತನ್ನ ಚಿಂತನೆಯನ್ನು ಮಂಡಿಸುತ್ತಾನೆ.

"ಇಂದಿರಾಬಾಯಿ ಕಾದಂಬರಿಯಲ್ಲಿ ಇರುವಂಥ ಆದರ್ಶ ಯಾವುದೆಂದರೆ ಕಾದಂಬರಿಯಲ್ಲಿಯೇ ನಿಜವಾಗಿ ಬಿಡುವ ಆದರ್ಶ. ಈ ಕಾದಂಬರಿಯಲ್ಲಿ ವಾಸ್ತವ ಮತ್ತು ಆದರ್ಶಗಳೆರಡೂ ಬೆರೆತು ಹೋಗುತ್ತವೆ. ಇದು ನಿಂತಿರುವುದು ಕೃತಿಯಲ್ಲಿಯೇ ಸಾಕ್ಷಾತ್ಕಾರಗೊಳ್ಳುವ ಆದರ್ಶದ ಮೇಲೆ."[೪]

ಇಂದಿರಾಬಾಯಿ ಮುಕ್ತಾಯವಾಗುವುದು ಮಂಗಳದ ಪ್ರಸ್ತಾವದಿಂದ ಕಾದಂಬರಿಯ ಬಂಧದ್ದುದಕ್ಕೂ ಖಳನಾಯಕರಂತೆ ಚಿತ್ರಿತವಾದ ಪಾತ್ರಗಳು ಸಂಘರ್ಷವಾಗಿ ಸೋಲನ್ನು ಅನುಭವಿಸಿ, ಕಾದಂಬರಿಯಲ್ಲಿ ಆದರ್ಶ ಸಾಕ್ಷಾತ್ಕಾರವಾಗುವುದು ಇವರ ಲಕ್ಷಣ. ಇಲ್ಲಿ ಭೀಮರಾಯ, ಅಂಬಾಬಾಯಿಯವರು ಸೋತು ಹೋದ ಬದುಕನ್ನು ಅನಿವಾರ್ಯವಾಗಿ ಸ್ವೀಕರಿಸುತ್ತಾರೆ. ಭಾಸ್ಕರರಾಯ, ಅಮೃತರಾಯ, ಇಂದಿರಾಬಾಯಿಯರು ಪ್ರತಿನಿಧಿಸುವ ವಿದ್ಯಾವಂತ ವರ್ಗದ ಆದರ್ಶದ ಮೌಲ್ಯಗಳನ್ನು ಸ್ವೀಕರಿಸುತ್ತಾರೆ. ಹಾಗೂ ಇಂದಿರಾಬಾಯಿ ಪ್ರತಿನಿಧಿಸುವ ಮೌಲ್ಯಗಳ ವಿಜಯ, ಅಂಬಾಬಾಯಿ ಭೀಮರಾಯರ ಪರಿವರ್ತನೆಗಳು ಕಾದಂಬರಿಯ ಆಕೃತಿಯಲ್ಲಿಯೇ ಸಾಧಿತವಾಗಿ 'ಸದ್ಧರ್ಮ ವಿಜಯ'ವೆನ್ನುವ ಕಾದಂಬರಿಯ ಇನ್ನೊಂದು ಹೆಸರು ಅನ್ವರ್ಥವಾಗುತ್ತದೆ.

ಕಾದಂಬರಿಯಲ್ಲಿ ಭೀಮರಾಯ–ಅಂಬಾಬಾಯಿ ಸಮಾಜದ ಭ್ರಷ್ಟತೆಯ ಕೇಂದ್ರವಾಗಿದ್ದಾರೆ. ಈ ಕೇಂದ್ರದ ಸುತ್ತ ಹಲವಾರು ಮೋಸ, ಅತ್ಯಾಚಾರಗಳ ಪ್ರತಿನಿಧಿಗಳು ತಿರುಗುತ್ತಾರೆ. ಸಂತಮಂಡಲಿಯ ನೀತಿಯ ಭ್ರಷ್ಟಾಚಾರ ಮಠಗಳಲ್ಲಿ ನಡೆಯುವ ಶೋಷಣೆ, ಅನ್ಯಾಯ, ವೈದ್ಯ–ಜೋತಿಷ್ಯಗಳಿಂದ ನಡೆಯುವ ಮೋಸ, ಸಮಾಜದಲ್ಲಿ ರೂಢಿಗೊಂಡ ವಿಷಪ್ರಾಶದಂಥ ವಾಮಚಾರಗಳು ಇಂಥ ಭ್ರಷ್ಟ ಆಚಾರಣೆಗಳಿಗೆ ಕಾದಂಬರಿ ಭೂತಗನ್ನಡಿ ಹಿಡಿಯುತ್ತದೆ. ಕೊಂಕಣಿ, ತುಳು ಸುಶಿಕ್ಷಿತರ ಆಂಗ್ಲೋ–ಕನ್ನಡ ಇಂಥ ಭಾಷೆಯ ವೈವಿಧ್ಯವನ್ನು ಬಳಸಿಕೊಂಡಿರುವಲ್ಲಿ ಕಾರಂಬರಿಕಾರರ ವಾಸ್ತವ ಪ್ರಜ್ಞೆ ದುಡಿದಿರುವುದು ಕಂಡುಬರುತ್ತದೆ. ಭೀಮರಾಯ–ಅಂಬಾಬಾಯಿಯರ ಜೀವನದ ಆಗು–ಹೋಗುಗಳು ಕಾದಂಬರಿಯಲ್ಲಿ ಗಟ್ಟಿಯಾದ ವಾಸ್ತವದ ನೆಲೆಯನ್ನು ನಿರ್ಮಿಸಿದರೆ, ಭಾಸ್ಕರ–ಇಂದಿರೆಯರ ಪ್ರಗತಿ, ಆದರ್ಶದ ನೆಲೆಯಲ್ಲಿ ನಡೆಯುತ್ತದೆ. ವಾಸ್ತವದ ನೆಲೆ ವಿವರಗಳಲ್ಲಿ ಸಾಕಾರತೆಯನ್ನು ಪಡದರೆ ಆದರ್ಶದ ನೆಲೆ ವರ್ಣನೆಯ ಮೇಲೆ ನಿಂತಿದೆ.

'ವಾಗ್ದೇವಿ'ಯಲ್ಲಿ ವೈದಿಕ ಸಮಾಜದ ಅವನತಿಯ ಚಿತ್ರಣವೊಂದನ್ನು ನೀಡಿದ್ದಾರೆ. ಧರ್ಮದರ್ಶಿಗಳಾಗಿರಬೇಕಾದಂಥವರ ಅನ್ಯಾಯಗಳನ್ನು ಬಯಲಿಗೆಳೆದಿದ್ದಾರೆ. ಕಮಲಾಪುರ ಮಠಾಧೀಶರಾದ ಚಂಚಲನೇತ್ರ ಶ್ರೀಪಾದಂಗಳವರು ವಾಗ್ದೇವಿಯಂಥ ಚೆಲುವೆಯಾದ ಗರತಿಗೆ ಮನಸೋತು ಮಠದ ಪವಿತ್ರ ವಾತಾವರಣವನ್ನು ಹೇಗೆ ಹೊಲೆಗೆಡಿಸಿದರೆಂಬುದು ಇಲ್ಲಿಯ ವಾಸ್ತವದ ಕಥಾವಸ್ತು. 'ವಾಗ್ದೇವಿ' ತನ್ನ ಸಮಕಾಲೀನ ಕಾದಂಬರಿಗಳಿಗಿಂತ ತುಂಬಾ ಭಿನ್ನವಾಗಿಯೂ ಇದೆ. ವಾಗ್ದೇವಿಯ ಪಾತ್ರವನ್ನು ಇಂದಿರಾಬಾಯಿ, ಇಂದಿರೆ, ತಿರುಮಲಾಂಬಾ, ಕಲ್ಯಾಣಮ್ಮ, ಕಾರಂತ, ಕುವೆಂಪು ಮೊದಲಾದವರು ಚಿತ್ರಿಸಿದ ಸ್ತ್ರೀ ಪಾತ್ರಗಳಿಗೆ ಹೋಲಿಸಿದರೆ ಒಂದು ಮುಖ್ಯ ವ್ಯತ್ಯಾಸ ಹೊಳೆಯುತ್ತದೆ. ಸುಧಾರಣೆ, ಆದರ್ಶಗಳ ನೆಲೆಯಲ್ಲಿ ಚಿತ್ರಿತವಾದ ಆಕಾಲದ ಬಹಳಷ್ಟು ಸ್ತ್ರೀ ಪಾತ್ರಗಳು ತೆಳು ಅನಿಸಿದರೆ ಕೆಲವೊಮ್ಮೆ ಅವಾಸ್ತವಿಕ ಎಂದು ತೋರಿದರೆ

ವಾಗ್ದೇವಿ ಮತ್ತು ಅವಳ ತಾಯಿಯ ಪಾತ್ರಗಳು ದೃಢವಾಗಿ ನಿಂತ ಹಾಗೆ ಕಾಣುತ್ತೇವೆ. "ಇಲ್ಲಿ ಹೆಣ್ಣು ಅಬಲೆಯಂತೆ ಶೋಷಿತಳಂತೆ ಏಕ ಆಯಾಮದಲ್ಲಿ ಸೃಷ್ಟಿಗೊಂಡಿಲ್ಲ ಎಂಬುದನ್ನು ಗಮನಿಸಬೇಕು. ಸಾಮಾನ್ಯ ಹೆಣ್ಣು ಮಗಳಾದ ವಾಗ್ದೇವಿ ತನ್ನ ಪ್ರಾಬಲ್ಯವನ್ನು ತೋರುವುದು ಈ ಕಾದಂಬರಿಯ ವೈಶಿಷ್ಟ್ಯವಾಗಿದೆ."[೫] ಅಂದರೆ ಶೋಷಣೆಯನ್ನು ಕಲಿತ ಗೃಹಿತ ನಂಬಿಕೆ ಮತ್ತು ಕಲ್ಪನೆಗಳನ್ನು ಈ ಕಾದಂಬರಿ ಗೊತ್ತಿದ್ದೋ ಗೊತ್ತಿಲ್ಲದೆಯೋ ಸ್ವಲ್ಪಮಟ್ಟಿಗೆ ಒಡೆದಿದೆ. ಆದರ್ಶದ ಮತ್ತು ಸಂಪ್ರದಾಯದ ನೆಲೆಗಳಿಗಿಂತ ವಾಸ್ತವದ ನೆಲೆಗಳಿಗೆ ಹೆಚ್ಚು ಸಮೀಪವಾಗಿದೆ. ಇದು ಘಟನೆಗಳಿಂದ ತುಂಬಿದ ಕಥೆ. ಕುತೂಹಲಕಾರಿಯಾಗಿ ವೇಗವಾಗಿ ಸಾಗುತ್ತದೆ. ಈ ಕಾದಂಬರಿ ದೇಸೀಯ ನೆಲೆಯಲ್ಲಿ ಸಮುದಾಯ ಮತ್ತು ಸಮಾಜಗಳನ್ನು ಕುರಿತ ಹೊಸ ಪ್ರಶ್ನೆಗಳನ್ನು ಹುಟ್ಟು ಹಾಕಿವೆ. ಹಳೆ ಮತ್ತು ಹೊಸ ಮೌಲ್ಯಗಳ ಸಹಬಾಳ್ವೆ ಮತ್ತು ವಿಶಿಷ್ಟವಾದ ಆಧುನಿಕ ಧೋರಣೆಯು ಸಮಾಜದ ಅಸ್ತಿತ್ವವೊಂದರ ಸ್ಥಾಪನೆಯ ಪ್ರಯತ್ನವನ್ನು ಕಾದಂಬರಿ ಮೂಡಿಸಲು ಪ್ರಯತ್ನಿಸಿದೆ. ಇಲ್ಲಿ ಆದರ್ಶಕ್ಕಿಂತ ವಾಸ್ತವ ಅಂಶಗಳನ್ನು ಬಿಡಿ ಬಿಡಿಯಾಗಿ ತೆರೆದಿಟ್ಟಿದ್ದಾರೆ. ವಾಗ್ದೇವಿ ಧರ್ಮಚ್ಯುತರಾದವರು ತಮ್ಮ ಕರ್ಮಫಲವನ್ನುಣ್ಣುವ ಕಥನ ಎಂದು ಹೇಳಬಹುದು.

'ವಾಗ್ದೇವಿ' ಮುಖ್ಯವಾಗಿ ಎರಡು ನೆಲೆಗಳಲ್ಲಿ ನಡೆಯುತ್ತದೆ. ವಾಗ್ದೇವಿಯನ್ನು ಕುರಿತ ಚಂಚಲನೇತ್ರರ ಮೋಹದ ಪ್ರಕರಣದಿಂದ ಕತೆ ಪ್ರಾರಂಭವಾಗುತ್ತಾ ಈ ಎರಡು ಪ್ರಧಾನ ಪಾತ್ರಗಳ ಹೆಸರುಗಳೂ ತುಂಬ ಧ್ವನಿ ಪೂರ್ಣ. ಇಬ್ಬರೂ ಆರಂಭದಿಂದಲೂ ಅಲೆದಾಡಿ ಕೊನೆಯಲ್ಲಿ ತಮ್ಮ ಪಾಪದ ಭಾರಕ್ಕೆ ತಾವೇ ಕುಸಿದು ಹೋಗುತ್ತಾರೆ. ವಾಗ್ದೇವಿಯ ಜೀವಿತದ ಸರ್ವಸ್ವದ ಆಸೆಯೆಂದರೆ ಚಂಚಲನೇತ್ರರಿಂದ ಆಕೆಯು ಪಡೆದ ಪುತ್ರ ಸೂರ್ಯನಾರಾಯಣನಿಗೆ ಮಠದ ಪಟ್ಟವು ಸಿಗಬೇಕೆಂಬುದು. ಕಾದಂಬರಿಯು ಮೊದಲ ಭಾಗದಲ್ಲಿ ವಿಡಂಬನೆಗೊಳಗಾದ ಚಂಚಲನೇತ್ರರ ಸ್ತ್ರೀ ವ್ಯಾಮೋಹ, ವಾಗ್ದೇವಿಯ ಅಟ್ಟಹಾಸದ ಜೀವನ, ಹೆಣ್ಣು ಮತ್ತು ಹಣದ ವಿಚಾರದಲ್ಲಿ ಸಂಪೂರ್ಣ ಭ್ರಷ್ಟಗೊಂಡಿರುವ ಪಟ್ಟಣದ ಆಡಳಿತ, ರಾಜಕೀಯ ತಂತ್ರ, ವೈಯಕ್ತಿಕತೆಯಲ್ಲಿ ಮುಳುಗಿ ಹೋದ ಪೀಠಾಧಿಪತಿಗಳ ಜಂಜಾಟಗಳು ಹೀಗೆ ಸೋಲನ್ನು ಅನುಭವಿಸುವುದು ವಾಸ್ತವದ ಸಂಗತಿ. ವಾಗ್ದೇವಿ ಕಾದಂಬರಿಯುದ್ದಕ್ಕೂ ಖಳನಾಯಕಿಯಂತೆ ಚಿತ್ರಿತಳಾದವಳು. ಬೀದಿಪಾಲಾಗಿ ಪಡಬಾರದ ಕಷ್ಟಗಳನ್ನು ಅನುಭವಿಸಿ ಕೊನೆಯಲ್ಲಿ ಆತ್ಮಹತ್ಯೆಗೆ ಯತ್ನಿಸುವ ಹೊತ್ತಿನಲ್ಲಿ ಮಗನಿಂದ ರಕ್ಷಿಸಲ್ಪಡುತ್ತಾಳೆ. ಆದರೆ ಮಗನಿಗಾಗಿ ಕುಮುದಪುರವನ್ನು ಅನೇಕ ಕಷ್ಟಗಳಲ್ಲಿ ತೊಡಗಿಸಿದ ಆಕೆ ಪುತ್ರ ವಿಯೋಗವನ್ನು ಅನುಭವಿಸಬೇಕಾಗುತ್ತದೆ. ಆಕೆಯ ಮಗ ಸೂರ್ಯನಾರಾಯಣ ಹೆಣ್ಣೊಂದನ್ನು ಕಟ್ಟಿಕೊಂಡು ಓಡಿ ಹೋಗುತ್ತಾನೆ. ತನ್ನ ಪಾಪದ

ಭಾರಕ್ಕೆ ತಾನೇ ಕುಸಿದು ಹೋಗುವ ಚಿತ್ರಣ ವಾಗ್ದೇವಿಯಲ್ಲಿ ಹಳೆಯ ಕಟ್ಟಡವೊಂದು ತನ್ನ ಆಂತರಿಕ ಛಿದ್ರತೆಯ ಕಾರಣದಿಂದ ಕುಸಿಯಲೇ ಬೇಕು ಎನ್ನುವುದು ವಾಗ್ದೇವಿಯ ವಾಸ್ತವ ಅಂಶದ ತರ್ಕ.

'ಇಂದಿರೆ' ಕಾದಂಬರಿಯು ಭಾರತೀಯ ಕಥಾ ಸಂಪ್ರದಾಯಕ್ಕೆ ತೀರ ಹತ್ತಿರವಿದ್ದ ಕೃತಿ ಪ್ರೇಮವಿವಾಹ, ವಿಧವಾ ಸಮಸ್ಯೆ, ಶೃಂಗಾರಗಳನ್ನೊಳಗೊಂಡ ಪ್ರೇಮದ ವಿಜಯವನ್ನು ಸಾರುವ ಸ್ಥಳ, ಕಾಲಗಳ ದೃಷ್ಟಿಯಿಂದ ಇಂದಿರೆಗೆ ಒಂದು ವಾಸ್ತವ ಸಂದರ್ಭವಿದೆಯಾದರೂ ಕಾಲ–ಸ್ಥಳಗಳಿಗೆ ಇಲ್ಲಿ ಪ್ರಧಾನ್ಯವಿಲ್ಲ, ಆಚಾರ್ಯರ ಬೆಂಗಳೂರು ಯಾವ ನಗರವೂ ಆಗಬಹುದು. ತನಗೆ ಪರಿಚಿತವಾದ ಬಾಗಲಕೋಟೆ, ವಿಜಾಪುರ, ಧಾರವಾಡಗಳಿಂದ ಸ್ಥಳಗಳನ್ನು ಬಿಟ್ಟು ದೂರದ ಎಂದೋ ಒಮ್ಮೆ ನೋಡಿರಬಹುದಾದ ಬೆಂಗಳೂರು ಶ್ರೀರಂಗಪಟ್ಟಣಗಳನ್ನು ಕತೆಯ ಹಿನ್ನೆಲೆಯಾಗಿ ಬಳಸುವ ಔಚಿತ್ಯವಾದರೂ ಏನು? ವಸಂತಮಾಸ, ಮಂದಮಾರುತ, ಕೋಗಿಲೆ ಮುಂತಾದ ಕವಿ ಸಮಯಗಳನ್ನು ಕೂಡಿದ ಈ ವರ್ಣನೆ ಕೆರೂರರ ಸಾಹಿತ್ಯ ಪರಂಪರೆಯನ್ನು ಸೂಚಿಸುವಂತೆ ಕಾದಂಬರಿಗೆ ಕಾವ್ಯದ ಆಯಾಮವನ್ನು ಸೇರಿಸಲು ಪ್ರಯತ್ನಿಸುತ್ತದೆ. ಈ ಕ್ರಮ ವಾಸ್ತವ ಮಾರ್ಗದ ಪ್ರಬುದ್ಧ ಕಾದಂಬರಿಗಳು ಅನುಸರಿಸುವ ಮಾರ್ಗಕ್ಕಿಂತ ಭಿನ್ನವಾಗಿದೆ ಎಂದು ತೋರಿದರು. ಕಾದಂಬರಿಯ ಮೂಲದ್ರವ್ಯ ಆದರ್ಶದ ಪುನರುಜ್ಜೀವನವೇ ಆಗಿದೆ. ಕುಲೀನ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿರುವ ಆದರ್ಶಪಾತ್ರಗಳನ್ನು ವೈಭವೀಕರಿಸುವುದನ್ನು ವಿ.ಎಂ.ಇನಾಂದಾರರು ಗುರುತಿಸಿದ್ದಾರೆ.

ನೇರವಾದ ಒಂದು ಮಾತಿನಿಂದ ಆತಂಕ ಪರಿಹಾರವಾದದ್ದನ್ನು ನೋಡಿದರೆ ಕಾದಂಬರಿಕಾರರಿಗೆ ಪ್ರಣಯಕ್ಕೆ ಒದಗಿದ ಆತಂಕವನ್ನು ಪರಿಹರಿಸುವುದಕ್ಕಿಂತ ಅದು ಬೆಳೆದ ಬಗೆಯನ್ನು ವಿವರಿಸುವುದೇ ಮುಖ್ಯವೆನಿಸಿದಂತೆ ಕಾಣುತ್ತದೆ. ಅವರಿಬ್ಬರ ನಡುವಿನ ಪ್ರಣಯ ಸುಕುಮಾರವಾದದ್ದು. ಅದನ್ನು ಸುಕುಮಾರವಾಗಿಯೇ ಕಾದಂಬರಿಕಾರರು ಚಿತ್ರಿಸಿದ್ದಾರೆ. ಯಾವ ಸನ್ನಿವೇಶದಲ್ಲಿಯೂ ರಮಾಕಾಂತ ಇಂದಿರೆಯವರು ಭಾವನಿಷ್ಠರಾಗುವುದಿಲ್ಲ ಇದಕ್ಕೆ ಕಾರಣ ಅವರಿಬ್ಬರು ವಿದ್ಯಾಭ್ಯಾಸದಿಂದ ಲಲಿತಕಲೆಗಳಲ್ಲಿಯ ಪರಿಶ್ರಮದಿಂದ ಪಡೆದಿದ್ದ ಮನಸಂಸ್ಕಾರ. ಆಧುನಿಕ ವಿದ್ಯಾಭ್ಯಾಸವನ್ನು ಪಡೆದು ಪ್ರಾಚೀನ ಸಂಸ್ಕಾರಗಳನ್ನು ಮೈಗೂಡಿಸಿಕೊಂಡಿರುವ ಪಾತ್ರಗಳಾದ ದೇವಯಾನಿ, ರಮಾಕಾಂತ, ಇಂದಿರೆ ಈ ಕಾದಂಬರಿಯ ಆದರ್ಶ ಪಾತ್ರಗಳು. ಅದರಂತೆ ಸುಧಾರಣಾವಾದಿಗಳನ್ನು ಕೆರೂರರು ತೀವ್ರ ವಿಡಂಬನೆಗೆ ಗುರಿ ಮಾಡಿರುವುದು ಗಮನಾರ್ಹ. ಭಾಷ್ಕಳಪಂತ, ಪಂಡಿತ ರಮಾಬಾಯಿ, ಕಮಲೆಯರು ವಿಡಂಬನೆಗೆ ಗುರಿಯಾಗುವ ಪಾತ್ರಗಳು. ಕೃತಿಯ ನಿಜವಾದ ಖಳಪಾತ್ರಗಳಂತೆ ಪಂಡಿತ ರಮಾಬಾಯಿ, ಕಮಲೆಯರು

ಕಾಣಿಸಿಕೊಳ್ಳುತ್ತಾರೆ. ಸಾಮಾಜಿಕ ವಿಚಾರಗಳಲ್ಲಿ ಪ್ರಗತಿಪರ ದೃಷ್ಟಿಯನ್ನು ಹೊಂದಿದ್ದರೂ ಹೊಸಬದುಕು ಭಾರತೀಯ ನೆಲಗಟ್ಟಿನ ಮೇಲೆಯೇ ರೂಪಿತವಾಗಬೇಕೆಂದು ವಾದಿಸುತ್ತಿದ್ದ ಕೆರೂರರು ಇವೆರಡರ ಬೆಸುಗೆಯನ್ನು ಸಾಧಿಸುತ್ತಾರೆ. ಆದರೆ ಆದರ್ಶದ ವೈಭವೀಕರಣವೇ 'ಇಂದಿರೆ' ಕಾದಂಬರಿಯ ಮೂಲ ಸೆಲೆಯಾಗಿದೆ. ವಿದ್ಯಾವಂತ ತರುಣ, ವಿದ್ಯಾವತಿಯಾದ ಕುಲವಧುವಿನ ಕಲ್ಪನೆ ಕೆರೂರರ ಆದರ್ಶ ಕಲ್ಪನೆಯಾಗಿದೆ. 'ಇಂದಿರೆ' ಕಾದಂಬರಿಯು ಸಮಕಾಲೀನ ವಾತಾವರಣವನ್ನು ಚಿತ್ರಿಸುತ್ತಲೇ ಆದರ್ಶವನ್ನು ವೈಭವೀಕರಿಸುತ್ತದೆ.

'ಇಂದಿರೆ ಕಾದಂಬರಿಯಲ್ಲಿ ಉತ್ತರ ಕರ್ನಾಟಕದ ಪರಿಸರಕ್ಕಿಂತ ಭಿನ್ನವಾದ ಪರಿಸರವನ್ನು ಚಿತ್ರಿಸುವ ಮೂಲಕ ಈ ನಿರ್ದಿಷ್ಟತೆಯ ಸಮಸ್ಯೆಯನ್ನು ಪರಿಹರಿಸಿಕೊಳ್ಳುತ್ತಾರೆ. ವಾಸ್ತವಿಕ ವರ್ತಮಾನದಿಂದ ಭಿನ್ನವಾದ ಕಾಲ್ಪನಿಕ ಪ್ರಪಂಚವೊಂದನ್ನು ಸೃಷ್ಟಿಸುವ ಈ ನಿಲುವು ಮೂಲತಃ ವಾಸ್ತವಕ್ಕೆ ಒಂದು ಪ್ರತಿಕ್ರಿಯೆಯೇ ಆಗಿದೆ. 'ಮಾಡಿದುಣ್ಣೋ ಮಹಾರಾಯ' ಕಾದಂಬರಿಯಲ್ಲಿ ಆದರ್ಶ ಮತ್ತು ವಾಸ್ತವಗಳ ಅರ್ಥಪೂರ್ಣ ಸಂವಾದವನ್ನು ಸಾಧಿಸುವ ಮೂಲಕ ಕಾದಂಬರಿ ಪ್ರಕಾರ ಶ್ರೀಮಂತಗೊಳಿಸಿದ್ದಾರೆ. "ಆದರ್ಶದ ಮೂರು ನೆಲೆಗಳನ್ನು ಕಾದಂಬರಿಯಲ್ಲಿ ಗುರುತಿಸಿದ್ದಾರೆ ಜಿ.ಎಸ್.ಆಮೂರ ಅವರು. ಮೊದಲನೆಯದು ಕಾದಂಬರಿ ನಾಯಕಿಯಲ್ಲಿ ಸೂಚಿತವಾಗುವ ಪೌರಾಣಿಕ ಸಂದರ್ಭ. ಸೀತಮ್ಮನನ್ನು ಪುಟ್ಟಣ್ಣನವರು ರಾಮಾಯಣದ ಸೀತೆಯ ಪಡಿಯಚ್ಚಿನಲ್ಲಿಯೇ ಮೂಡಿಸಿದ್ದಾರೆ. ಕಾದಂಬರಿಯ ಕೊನೆಗೆ ಸೀತಮ್ಮ ಚಿತೆಯಿಂದ ಎದ್ದು ತನ್ನ ಪತಿಯನ್ನು ಪುನಃ ಕೂಡಿಕೊಳ್ಳುವ ಘಟನೆ ಸೀತಾದೇವಿಯ ಅಗ್ನಿಪರೀಕ್ಷೆಯ ರೂಪಾಂತರವಾಗಿದೆ. ಈ ಕತೆಯ ಖಳನಾಯಕ ಸಿದ್ಧನನ್ನು ನವೀನ ರಾವಣನೆಂದೇ ಕಾದಂಬರಿಕಾರರು ಕರೆದಿದ್ದಾರೆ."[೬]

ಕಾದಂಬರಿಯಲ್ಲಿ ಆದರ್ಶದ ನೆಲೆ ಮುಮ್ಮಡಿ ಕೃಷ್ಣರಾಜರಲ್ಲಿ ಸ್ಥಾಪಿತವಾಗಿದೆ. ಮುಮ್ಮಡಿಯವರನ್ನು ಪುಟ್ಟಣ್ಣನವರು ಆದರ್ಶ ರಾಜನೆಂದೇ ಕಂಡಿದ್ದಾರೆ. ಪ್ರಜೆಗಳು ಎಂದರೆ ತನ್ನ ಮಕ್ಕಳು ಎಂದು ಭಾವಿಸಿದ್ದ ಈ ಮಹಾರಾಯನ ವಿವೇಕದಿಂದಲೇ ಮೈಸೂರು ರಾಜ್ಯವು ಇದುವರೆಗೆ ಇಷ್ಟರಮಟ್ಟಿಗೆ ಉಳಿದಿದೆ. ಮುಮ್ಮಡಿಯವರ ಧರ್ಮಾಚಾರಗಳು, ವಿದ್ವಾಂಸರಲ್ಲಿ ಗೌರವ, ಪ್ರಜೆಗಳಲ್ಲಿ ಪ್ರೀತಿ ಹಲವು ನಿದರ್ಶನಗಳ ಮೂಲಕ ನಮ್ಮ ಗಮನಕ್ಕೆ ಬರುತ್ತದೆ. ಮಾರಮಣಯ್ಯನಂಥ ಭ್ರಷ್ಟ ಅಧಿಕಾರಿಗಳು ಅವರ ರಾಜ್ಯದಲ್ಲಿದ್ದರೂ ಅವರನ್ನು ದಂಡಿಸುವ ಶಕ್ತಿ ಪ್ರಭುಗಳಲ್ಲಿದೆ. ಸಂಜೆವಾಡಿಯಲ್ಲಿ ನಡೆದ ದುರ್ವ್ಯವಹಾರಗಳಿಗೆ ಕೊನೆ ಅರಸರ ದಂಡಿನಿಂದಲೇ ಬರುತ್ತದೆನ್ನುವುದನ್ನು ನಾವು ಗಮನಿಸಬೇಕು. ಆದರ್ಶದ ಮತ್ತೊಂದು ನೆಲೆ ಕಾದಂಬರಿಯ ಹೆಸರು ಸೂಚಿಸುವ ಪಾಪ, ಪುಣ್ಯ ಹಾಗೂ ಅವುಗಳ ಫಲವನ್ನೊಳಗೊಂಡ ನೈತಿಕ ಕಲ್ಪನೆಯಲ್ಲಿದೆ. ಈ ನೀತಿಯನ್ನು ಕಾಯ್ದುಕೊಂಡು ಬರುವ ಸೀತೆ ಕಾದಂಬರಿಯ ಕೊನೆಯಲ್ಲಿ ಜಯಶಾಲಿಯಾದರೆ,

ಅನೀತಿಗೆ ಅಂಟಿಕೊಂಡ ಸಿದ್ದ, ಮಾರಮಣಯ್ಯ ಮೊದಲಾದವರಿಗೆ ತಕ್ಕ ಶಿಕ್ಷೆಯಾಗುತ್ತದೆ. ಹಾಗೆಯೇ ಕಾದಂಬರಿಯ ಪ್ರಾರಂಭದದಲ್ಲಿಯೇ ಅಮಲ್ದಾರ ಮಾರಮಣರಾಯ್ಯನ ಲಂಚಕೋರ ತನದ ದೃಷ್ಟಾಂತಗಳಿವೆ. ಮುಂದೆ ಕಾದಂಬರಿ ಬೆಳೆಯುತ್ತಾ ಹೋದ ಹಾಗೆ ಭ್ರಷ್ಟತನದ ಇತರ ಸಾಮಾಜಿಕ ಅವತಾರಗಳನ್ನು ನಾವು ನೋಡುತ್ತೇವೆ. ಶಿಕ್ಷಣದ ಹೆಸರಿನಲ್ಲಿ ನಾರಪ್ಪಯ್ಯ ನಡೆಸುವ ಕ್ರೌರ್ಯಪ್ರದರ್ಶನ ಹಾಗೂ ಉಂಡ ಮನೆಯಂಗಳ ಎಣಿಸುವ ಅವನ ಹರಾಮಖೋರತನ, ಧರ್ಮದ ಹೆಸರಿನಲ್ಲಿ ಸಿದ್ದ ಪ್ರಸ್ತಾಪಿಸುವ ದುರಾಚಾರ, ಕಳ್ಳರಿಗೆ ಸಂರಕ್ಷಣೆ ನೀಡಿ ಹಣ ಗಳಿಸುವ ಅಧಿಕಾರಿಗಳ ಕುತಂತ್ರ, ಈ ಉದಾಹಣೆಗಳು. ವಾಸ್ತವದ ಮಾದರಿಗೆ ಸಾಕ್ಷಿಯಾಗುತ್ತವೆ.

ಹಾಗೆಯೇ 'ಮಾಡಿದುಣ್ಣೋ ಮಹಾರಾಯ' ಕಾದಂಬರಿಯ ವಸ್ತು ವಿನ್ಯಾಸವು ಸಾಕಷ್ಟು ಸುಸಂಬದ್ಧವಾಗಿಯೇ ಇದೆ. ಮೂವತ್ತರ ವಯಸ್ಸಿನಲ್ಲಿಯೇ ತನ್ನ ಹೆಂಡತಿಯನ್ನು ಕಳೆದುಕೊಂಡು ಸದಾಶಿವ ದೀಕ್ಷಿತ ಸಂಜೆವಾಡಿ ಜೋಯಿಸರ ಮಗಳು ತಿಮ್ಮವ್ವನನ್ನು ಮದುವೆಯಾಗುತ್ತಾನೆ. ಜೋಯಿಸರಿಗೆ ಕಿಟ್ಟನೆಂಬ ಒಬ್ಬ ಮಗನಿದ್ದರೂ ಅವನು ಐಲು ಸ್ವಭಾವದವನಾದ್ದರಿಂದ ತಾನು ಸಾಯುವ ಮುನ್ನ ಅಳಿಯನನ್ನು ಕರೆಸಿಕೊಂಡು ತನ್ನ ಆಸ್ತಿಯನ್ನು ಅವನಿಗೆ ಒಪ್ಪಿಸುತ್ತಾರೆ. ದೀಕ್ಷಿತ ತನ್ನ ವೃದ್ಧತಾಯಿ ಪಾರ್ವತಮ್ಮ ಹಾಗೂ ಮೊದಲನೆಯ ಹೆಂಡತಿಯಲ್ಲಿ ಹುಟ್ಟಿದ ಮಗ ಮಹಾದೇವನೊಡನೆ ಮೈಸೂರನ್ನು ಬಿಟ್ಟು ಸಂಜೆವಾಡಿಯಲ್ಲಿ ನೆಲೆಸುತ್ತಾನೆ. ಮಹಾದೇವ ದೊಡ್ಡವನಾದ ನಂತರ ಸೀತಮ್ಮ ಎಂಬ ಒಬ್ಬ ಸದ್ಗುಣಿ ಹಾಗೂ ರೂಪವತಿ ಕನ್ಯೆಯನ್ನು ಮದುವೆಯಾಗುತ್ತಾನೆ. ತಿಮ್ಮವ್ವನಿಗೆ ಒಂದು ಹೆಣ್ಣು ಮಗುವಾಗುತ್ತದೆ. ತಿಮ್ಮವ್ವ ತನ್ನ ಸೊಸೆಗೆ ನಾನಾ ತರಹದ ಯಾತನೆಗಳನ್ನು ಕೊಟ್ಟರೂ ಅವಳು ಅದನ್ನು ಸಹಿಸಿಕೊಳ್ಳುತ್ತಾಳೆ. ಒಳ್ಳೆಯ ಹೆಸರು ಗಳಿಸಿಕೊಳ್ಳುತ್ತಾಳೆ. ಸಂಜೆವಾಡಿ ಕೆಲವೊಂದು ಅಪವಾದಗಳನ್ನು ಬಿಟ್ಟರೆ ಕಳ್ಳರ ಊರು. ಈ ಕಳ್ಳರಿಗೆ ಗುರುವಾದ ಸಿದ್ದನೆಂಬ ಶೂದ್ರ ಪೂಜಾರಿ ಮಾರಿಯ ಗುಡಿಯಲ್ಲಿ ನೆಲೆಸಿರುತ್ತಾನೆ. ಗುಡಿಗೆ ಅನತಿ ದೂರದಲ್ಲಿರುವ ಅರುಂದಮ್ಮ ಎಂಬ ಸವತಿಯ ವೃಂದಾವನಕ್ಕೆ ದಿನಾಲು ಪೂಜೆ ಮಾಡಲು ಹೋಗುತ್ತಿದ್ದ ಸೀತಮ್ಮನ ಮೇಲೆ ಅವನ ಕಣ್ಣು ಬೀಳುತ್ತದೆ. ಅವನ ಕಾಮುಕತೆಗೆ ದೀಕ್ಷಿತನಲ್ಲಿ ಆಶ್ರಿತನಾದ ನಾರಪ್ಪಯ್ಯ ಎಂಬ ಒಬ್ಬ ಪಂತೋಜಿ ಕುಮ್ಮಕ್ಕು ಕೊಡುತ್ತಾನೆ. ಅವಳು ಯಾವ ಆಮಿಷಗಳಿಗೂ ಸೋಲುವವಳಲ್ಲ ಎಂದು ಗೊತ್ತಾದಾಗ ಸಿದ್ದ ಅವಳು ಒಬ್ಬಳೇ ಇದ್ದ ಸಮಯ ನೋಡಿ ಸೀರೆ ಎಳೆದು ಅವಮಾನಗೊಳಿಸುತ್ತಾನೆ. ಅವಮಾನ, ದುಃಖ ಸಹಿಸಲಾರದ ಸೀತೆ ಮನೋರೋಗಕ್ಕೆ ಒಳಗಾಗುತ್ತಾಳೆ. ಅವಳು ಸತ್ತಳೆಂದು ತಿಳಿದು ಮನೆಯವರು ಅವಳ ದಹನ ಕ್ರಿಯೆ ನೆರವೇರಿಸುತ್ತಾರೆ.

ಆದರೆ ಚಿತೆಯಲ್ಲಿ ಕಟ್ಟಿಗೆಗಳು ಹಸಿಯಿದ್ದುದರಿಂದ ಅವಳ ದೇಹ ಸುಟ್ಟಿರುವುದಿಲ್ಲ. ಅವಳು ನಿಜವಾಗಿ ಸತ್ತಿರುವುದೂ ಇಲ್ಲ. ಈ ವೇಳೆಗೆ ಸ್ಮಶಾನದ ಹತ್ತಿರದಿಂದ ಹೋಗುತ್ತಿದ್ದ

ಆನಂದ ಭಟಜಿ ಎಂಬ ಒಬ್ಬ ತಾಂತ್ರಿಕನಿಗೆ ಇದು ತಿಳಿದು ಅವಳನ್ನು ಬದುಕಿಸುತ್ತಾನೆ. ಸೀತಮ್ಮ ಮತ್ತೆ ತನ್ನ ಪತಿಯನ್ನು ಕೂಡಿಕೊಳ್ಳುತ್ತಾಳೆ. ಆನಂದಭಟಜಿ ಸಿದ್ದನ ಹಲ್ಲು ಉದುರಿಸಿ ಅವನನ್ನು ಶಿಕ್ಷಿಸುತ್ತಾನೆ. ಅಮಾಸೆ ಎಂಬ ಕಳ್ಳನಿಂದ ಸಂಜೆವಾಡಿಯ ಜನರ ದುಷ್ಕೃತ್ಯಗಳು ಹೊರಬಿದ್ದು ಅವರಿಗೂ ಶಿಕ್ಷೆಯಾಗುತ್ತದೆ. ಇವೆಲ್ಲವೂ ವಾಸ್ತವ ಕುರಿತಾದ ಅಂಶಗಳು. ಸೀತಮ್ಮ ಚಿತೆಯಿಂದ ಪಾರಾಗುವುದು ಒಂದನ್ನು ಬಿಟ್ಟರೆ, ಅವಾಸ್ತವವಾದ ಘಟನೆಗಳಾವುವು ಇಲ್ಲ. ಇಲ್ಲಿ ಬರುವ ಆದರ್ಶ ಪಾತ್ರಗಳು ಧರ್ಮವನ್ನು ಪರಿಪಾಲಿಸುವ ಪಾತ್ರಗಳು ಸೀತೆ ಪಾತಿವ್ರತ್ಯವನ್ನು ಮತ್ತು ಸದಾಶಿವ ದೀಕ್ಷಿತ ಅಪ್ರಮೇಯರು. ಬ್ರಾಹ್ಮಣ ಧೀಮಂತಿಕೆಯನ್ನು ಮುಮ್ಮಡಿ ಕೃಷ್ಣರಾಜ ತನ್ನ ರಾಜ ಸಹಜ ಔದಾರ್ಯ ಸಜ್ಜನಿಕೆಗಳನ್ನು ಉಳಿಸಲು ಯತ್ನಿಸುತ್ತಾರೆ.

'ಸುಬ್ಬಣ್ಣ' ಕಾದಂಬರಿ ಆದರ್ಶ ದೂರದ ಕನಸಾಗಿ ಕಾಣದೆ ಬದುಕಿನ ಧರ್ಮವಾಗಿದೆ. ಒಬ್ಬ ಸಂಗೀತಗಾರನ ಜೀವನ ಚಿತ್ರಣವಿದೆ. ಆದರೆ ಮುಖ್ಯವಾಗಿ ಸುಬ್ಬಣ್ಣನದು ಒಂದು ಸಾತ್ವಿಕ ಜೀವನ. ಆ ಜೀವನ ಒಳಮೈ ಇಲ್ಲಿ ಕಣ್ಣಿಗೆ ಕಾಣುವಷ್ಟು ಸುಂದರವಾಗಿ ರೂಪಿತವಾಗಿದೆ. ಸುಬ್ಬಣ್ಣ ಬಾಲ್ಯದಲ್ಲಿಯ ಮದುವೆ, ಕೌಟುಂಬಿಕ ಜೀವನದ ವಿರಸಗಳು, ಅವನನ್ನು ಕಲೆಯ ಕಡೆಗೆ ಪ್ರೇರೇಪಿಸುವುದು ವಾಸ್ತವದ ಅಂಶಗಳು. ನೀಲಾಸಾನಿಯ ಸಹವಾಸದಲ್ಲಿ ಆ ಕಲೆ ಪೂರ್ಣತೆಯನ್ನು ಪಡೆಯಿತು. ಆದರೆ ಸುಬ್ಬಣ್ಣನವರು ಜೀವನದೊಡನೆ ಹೊಂದಿಕೊಳ್ಳುವುದನ್ನು ಮರೆತಿಲ್ಲ. ಉತ್ತರ ಹಿಂದುಸ್ಥಾನದ ಯಾತ್ರೆ, ಅಲ್ಲಿ ಉದ್ಭವಿಸಿದ ಕಷ್ಟ-ನಷ್ಟಗಳು, ಲಲಿತೆಯ ಮರಣ, ಅವರ ಅಂತಃಕರಣಕ್ಕೆ ಪರಿಪಕ್ವವನ್ನು ಕೊಟ್ಟಿದೆ. ಕ್ರಮೇಣ ಅವರ ಮನಸ್ಸು ಈ ಲೋಕದ ಬಂಧನವನ್ನು ತೊರೆಯುವುದಲ್ಲದೆ ಹೆಂಡತಿ ಸತ್ತಳು ಎಂದರೆ ಸಂಸಾರದಿಂದ ಮುಕ್ತನಾದೆ ಎನ್ನುವ ರೀತಿ ಅವರಲ್ಲಿ ಬಿಡುಗಡೆ ಪ್ರತಿಕ್ರಿಯೆಯಾದಾಗ ಅವರ ಮನಸ್ಸು ಸಂಕಟಪಡುತ್ತದೆ.

"ಯಾವ ಸಂಗೀತ ನಿವೃತ್ತಿಯ ಒಂದು ಸಾಧನವಾಗಿತ್ತೋ ಅದೇ ಬಂಧನವಾದಾಗ ಪಿಟೀಲನ್ನು ಸಿದ್ದಿಗಳಲ್ಲೊಂದಾಗಿದೆ. ಆಮೇಲೆ ಹುಟ್ಟೂರಿಗೆ ತಿರುಗಿ ಬಂದು ಮೊದಲು ತಮ್ಮದಾಗಿದ್ದ ಮನೆಯ ಕಟ್ಟೆಯ ಮೇಲೆ ಮಲಗಿ, ಮರುದಿನ ಮನೆಯವರಿಗೆ 'ನಮ್ಮದು ಪರಸ್ಥಳ' ಎಂದು ಹೇಳಿದಾಗಿನ ಅವರ ಮನಸ್ಥಿತಿ ಅವರ ಜೀವನ ಸಿದ್ದಿಗೆ ಹಿಡಿದ ಕನ್ನಡಿಯಾಗಿದೆ."[೭]

ಈ ಬಗೆಯ ಆದರ್ಶ ಜೀವನ ಸುಬ್ಬಣ್ಣ ಕಾದಂಬರಿಯಲ್ಲಿ ನೈಜವಾಗಿ ಚಿತ್ರಿಸಲಾಗಿದೆ. ಆದರ್ಶ ಜೀವನವೊಂದರ ಇರುವಿಕೆಯ ರೀತಿಯ ಜೊತೆಗೆ ಬದುಕಿನ ವಾಸ್ತವ ಅಂಶಗಳನ್ನು ಎಣೆದು ಮುಖಾಮುಖಿಗೊಳಿಸಿದ್ದಾರೆ. ಲಲಿತೆಯ ಸಹನೆ, ತಾಳ್ಮೆ ಎಲ್ಲವೂ ಒಬ್ಬ ಮಹಿಳೆಯ

ಆದರ್ಶದ ಪ್ರತೀಕವಾಗಿ ಗೋಚರಿಸಿದೆ. ಹಾಗೆಯೇ ಸುಬ್ಬಣ್ಣನ ಜೀವನವು ಆದರ್ಶದ ಪ್ರತೀಕ. ಅವರ ಜೊತೆಗೆ ಬರುವ ಪಾತ್ರಗಳ ವರ್ಣನೆ ವಾಸ್ತವದ ಪ್ರಮುಖ ಅಂಶಗಳು.

'ನಿಸರ್ಗ' ಕಾದಂಬರಿಯನ್ನು ಓದುತ್ತ ಹೋದಂತೆ ಓದುಗ, ಸುಖ-ದುಃಖಗಳ, ರಾಗ-ದ್ವೇಷಗಳ ಮೂರ್ತಿಗೊಂಡ ಜಗತ್ತೊಂದರಲ್ಲಿ ಮೈ ಮರೆತುಬಿಡುತ್ತಾನೆ. ಅನಂತ-ತಾರೆಯರ ವಿಫಲ ಪ್ರಣಯದ ಕತೆ ಇಲ್ಲಿ ಮುಖ್ಯವಾಗಿದ್ದರೂ ಅದು ಜೀವಂತವಾಗುವುದು ಈ ಪರಿಸರದ ಮೂಲಕವೇ. ತಾರೆಯ ಬಾಲ್ಯವಿವಾಹ, ಹುಡುಗಾಟಿಕೆಯ ಜೀವನ, ಅವಳ ಅತ್ತೆಯ ಮನೆ, ಮಾವನ ಸಾವು, ಅತ್ತೆಯ ಕಾಟ, ತವರುಮನೆಯ ಪಕ್ಷಪಾತ, ತಾರೆಯ ಬಿಡುಗಡೆ ಅವಳ ಎರಡನೆ ಮದುವೆ ಈ ಪ್ರಸಂಗಗಳೆಲ್ಲಾ ತಮ್ಮ ವಿಶಿಷ್ಟವಾದ ವಾಸ್ತವ ಜೀವನಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಹಾಗೆಯೇ ತಾರೆಯ ಎರಡನೆಯ ಗಂಡನ ಮನೆಯ ವರ್ಣನೆಯಂತೂ ಇಂಥ ವಿವರಗಳು ಸ್ಪಷ್ಟವಾಗಿದೆ. ಅಲ್ಲಿಯ ಹಾಳು ಮನೆ, ತೋಟದಲ್ಲಿಯ ಕೆಲಸ ಮಾಡುವ ಆಳುಗಳು, ಸೋನಾಳನ್ನು ಸಾಕುವ ಪರಿ, ಆದರ್ಶದ ನೆಲೆಯಾಗಿ ಕಂಡುಬರುತ್ತದೆ. ಹೀಗೆ ತಾರಾಳ ಆದರ್ಶ ಹಾಗೂ ಅದಕ್ಕೆ ಸಂಬಂಧಿಸಿದ ಜೀವನ ವಿವರಗಳು ವಾಸ್ತವ ಲೋಕಕ್ಕೆ ತೆರೆದಿಟ್ಟಿರುವುದು ಮಹತ್ವದ ಅಂಶಗಳಲ್ಲಿ ಒಂದಾಗಿದೆ.

'ಸರಸಮ್ಮನ ಸಮಾಧಿ' ಕಾದಂಬರಿಯಲ್ಲಿ ಕಾರಂತರು ವಾಸ್ತವ ಮಾರ್ಗದಲ್ಲಿ ಭಿನ್ನ ರೀತಿಯನ್ನು ಅನುಸರಿಸಿದರು. ಸಮಕಾಲೀನ ಜೀವನದ ಸಮಸ್ಯೆಗಳನ್ನು ಅಮೂಲಾಗ್ರವಾಗಿ ವಾಸ್ತವತೆಯ ಬೆಳಕಿನಲ್ಲಿ ಚರ್ಚಿಸುವುದೇ ಅವರ ಉದ್ದೇಶವಾಗಿದೆ. "ದಾಂಪತ್ಯ ಜೀವನದ ವಿಷಮತೆಯ ಕಾರಣವನ್ನು ಕಾರಂತರು ಸಾಮಾಜಿಕ ಸಂಪ್ರದಾಯಗಳ ಅವಿವೇಕತನದಲ್ಲಿ ಕಂಡು ಅದನ್ನು ವಿಡಂಬಿಸಿದ್ದಾರೆ. ಸುನಾಲಿನಿ, ತಿಪ್ಪಯ್ಯ ಸೆಟ್ಟರು, ಹಿರಣಯ್ಯ, ಚಂದ್ರಯ್ಯ ಇವರೆಲ್ಲ ಅಂತರಂಗದಲ್ಲಿ ಗುಪ್ತ ವೇದನೆಯಿಂದ ಬಳಲುತ್ತಿದ್ದಾರೆ. ಸತ್ತರೂ ದಂತಕತೆಯಾಗಿ ಬದುಕಿರುವ ಸರಸಮ್ಮನ ಸಮಾಧಿಯ ಸುತ್ತಲೂ ವಿಷಮ ದಾಂಪತ್ಯದ ಜೀವಂತ ಪಂಜು ಹಿಡಿದುಕೊಂಡು ನಿಂತಿದೆ."[೮] ವ್ಯಕ್ತಿಗಳಲ್ಲಿ ರಹಸ್ಯವೇ ಕಾದಂಬರಿಯ ಕ್ರಿಯೆಗೆ ಪ್ರೇರಕ ಶಕ್ತಿಯಾಗಿರುವುದು ಕಾದಂಬರಿಯ ಏಕಸೂತ್ರತೆಗೆ ಸಾಕಷ್ಟು ಸಹಾಯ ಮಾಡಿದೆ. ಜನರ ಬಾಯಲ್ಲಿ ಮಹಾಪತಿವ್ರತೆಯಾಗಿದ್ದ ಸರಸಮ್ಮ ದಾಂಪತ್ಯದ ಅತೃಪ್ತಿಯಿಂದ ಪ್ರೇತವಾದ ಬೆಳ್ಳಕ್ಕನೇ ಎಂಬ ದೊಡ್ಡ ರಹಸ್ಯ ಕಾದಂಬರಿಯ ವಿಡಂಬನ ಶಿಖರವಾಗಿದೆ. ಬೆಳ್ಳಕ್ಕನ ಪ್ರೇತದೊಂದಿಗೆ ದಾಂಪತ್ಯವನ್ನು ಹೊಂದಿಸಿಕೊಳ್ಳುವ ಹವಣಿಕೆಯಲ್ಲಿರುವ ಚಂದ್ರಯ್ಯನ ಪಾತ್ರ ಧೀರವಿದ್ದಷ್ಟೇ ದುರಂತವೂ ಆಗಿದೆ. ಇಡೀ ಕಾದಂಬರಿ ತುಂಬಾ ರಹಸ್ಯಮಯ ವಾತಾವರಣದೊಂದಿಗೆ ನಿಮಿತ್ತ ಪ್ರಜ್ಞೆಯ ತಳಹದಿಯ ಮೇಲೆ ಸರಸಮ್ಮನ ಸಮಾಧಿ ನಿರ್ಮಿತವಾಗಿದೆ. ಆದರ್ಶದ

ನೆಲೆಯಲ್ಲಿ ಮಹಾಸತಿಯೆಂದು ಪ್ರಸಿದ್ಧಳಾದ ಸರಸಮ್ಮನ ನಿಜವಾದ ಜೀವನದ ವೈವಾಹಿಕ ವಿರಸವನ್ನು ವ್ಯಂಗ್ಯವಾಗಿ ತೋರಿಸಿ, ವಸ್ತುವಿನ ಸಾರ್ವಕಾಲಿಕ ಸಾಂಕೇತಿಕವನ್ನು ಸೂಚಿಸುವುದಕ್ಕಾಗಿ ಚಂದ್ರಯ್ಯ–ಪ್ರೇತದ ಸಾಂಕೇತಿಕ ಮಿಲನವೂ ಆಗಿದೆ.

'ಚೋಮನದುಡಿ' ಕಾದಂಬರಿಯಲ್ಲಿ ಕಾರಂತರು ಸಮಾಜವಾದಿ ಆದರ್ಶದ ಬದುಕನ್ನು ಅವಲೋಕಿಸಬಹುದು. ಬದುಕಿನ ಪ್ರತಿಯೊಂದು ಕ್ಷೇತ್ರವನ್ನು ಸೂಕ್ಷ್ಮವಾಗಿ ಅವಲೋಕಿಸುವ ಸಾಮಾಜಿಕ ಮನಸ್ಸಾದ್ದರಿಂದ ಸಾಮಾಜಿಕ ಸಮಸ್ಯೆಗಳನ್ನೊಡ್ಡಿಕೊಂಡು ಕಾದಂಬರಿ ಬರೆದರು. ರಾಷ್ಟ್ರೀಯ ಚಳವಳಿ ನಡೆಯುತ್ತಿದ್ದ ಸಂದರ್ಭದಲ್ಲಿ ಜೀತದಾಳುಗಳ ಸ್ಥಿತಿ ಹೇಗಿತ್ತು ಎಂಬುವುದನ್ನು ಕಾರಂತರು ಗಮನಿಸಿದ್ದು ಚಾರಿತ್ರಿಕ ದೃಷ್ಟಿಯಿಂದ ವಿಶೇಷವಾದುದು. ದೇಶದ ನಿಜವಾದ ವಾಸ್ತವ ಬದುಕನ್ನು ಈ ಕಾದಂಬರಿಯ ಮೂಲಕ ತೆರೆದು ತೋರಿಸಿದರು. 'ಚೋಮನದುಡಿ'ಯಲ್ಲಿ ಮೂರು ವರ್ಗಗಳಿವೆ. ಸಂಪ್ರದಾಯ ವೈದಿಕ ಸಮಾಜವನ್ನು ಪರಂಪರಾಗತವಾಗಿ ವಾಲಿಕೊಂಡು ಯಾವ ಬದಲಾವಣೆಯನ್ನು ಒಪ್ಪದ ಸಂಕಪ್ಪಯ್ಯನ ತಾಯಿ, "ಸಂಕಪ್ಪಯ್ಯನಂತಹ ವೈದಿಕರ ಅಧೀನದಲ್ಲಿ ಶತಮಾನಗಳ ನಿರಂತರ ಶೋಷಣೆಗೀಡಾಗುತ್ತಾ ಬಂದ ಚೋಮನಂತಹ ಜೀತದಾಳುವಿನ ವರ್ಗ. ವಸಾಹತುಶಾಹಿಯಿಂದ ಹೊಸದಾಗಿ ಭಾರತಕ್ಕೆ ಬಂದ ತೀರಾ ಆಧುನಿಕವೆನಿಸಿಕೊಂಡ ಕ್ರಿಶ್ಚಿಯನ್ ವರ್ಗ. ಈ ಮೂರು ವರ್ಗಗಳ ಹಿನ್ನಲೆ ಬೆಳವಣಿಗೆ, ಚಾರಿತ್ರಿಕವಾಗಿ ಭಿನ್ನವಾಗಿದೆ."[೯] ವಾಸ್ತವ ಲೋಕಕ್ಕೆ ಹತ್ತಿರವಾದುದು. ಚೋಮನ ಲೋಕ ವೈದಿಕ ಮತ್ತು ಕ್ರಿಶ್ಚಿಯನ್ ಎರಡೂ ವರ್ಗಗಳಿಂದಲೂ ಶೋಷಣೆಗೆ ಒಳಗಾಗುತ್ತದೆ. ಈ ಕಾದಂಬರಿಯಲ್ಲಿ ಭೂಮಿ ಪ್ರಶ್ನೆಯೇ ಬಹಳ ಮುಖ್ಯವಾದುದು. ಸಾವಿರಾರು ವರ್ಷಗಳ ಕಾಲ ತುಂಡು ನೆಲ ಇಲ್ಲದೆ ಬದುಕಿದ ಚೋಮನಂತಹ ಜೀತದಾಳುಗಳು ಈ ನೆಲದಲ್ಲಿ ಜೀವಿಸುತ್ತಾ ಸಂಕಪ್ಪಯ್ಯನ ವೈದಿಕ ಮನಸ್ಸು ಹೊಸಕಿ ಹಾಕುತ್ತದೆ. ಚೋಮನಂತಹ ಭೂಮಿ ಉಳುವ ಆದರ್ಶದ ಕನಸು ಹಾಗು ಬಡತನ ವಾಸ್ತವ ಬದುಕಿನ ವಿವರಗಳು ಸಂಘರ್ಷಕ್ಕೆ ಎಡೆ ಮಾಡಿಕೊಟ್ಟಿವೆ.

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಸಮಾಜದ ಒಂದು ವಾಸ್ತವಿಕ ಚಿತ್ರಣವಿದೆ. ಅದನ್ನು ಕಾರಂತರು ಮೂರು ತಲೆಮಾರುಗಳಲ್ಲಿ ಚಿತ್ರಿಸಿದ್ದಾರೆ. ಕಾದಂಬರಿ ಪ್ರಾರಂಭವಾಗುವುದೇ ರಾಮೈತಾಳ ಮತ್ತು ಪಾರ್ವತಿಯರ ಮದುವೆಯ ವರ್ಣನೆಯಿಂದ. ಇದು ಕಾದಂಬರಿಯ ಜೀವನ ಕ್ರಮದಲ್ಲಿ ಒಂದು ಮಹತ್ವದ ಹಂತ. ಈ ಮದುವೆಯಿಂದ ಒಂದೆಡೆ ಸೇರಿದ ಐತಾಳರು ಪಾರ್ವತಿ ಸರಸ್ವತಿಯರು ಅಷ್ಟೇನೂ ಸಹಾನುಭೂತಿಪರವಲ್ಲದ ಪ್ರಕೃತಿಯೊಂದಿಗಿನ ಬದುಕಿನ ಹೋರಾಟದಲ್ಲಿ ಪಾಲ್ಗೊಳ್ಳುತ್ತಾರೆ. ಪೂರ್ವಜನ್ಮ ಕರ್ಮದಂತೆ ಹೋರಾಟ ಅವರಿಗೆ ಅನಿವಾರ್ಯವಾಗಿದೆ, ಸಹಜವಾಗಿದೆ.

"ಐತಾಳರ ಎರಡನೆಯ ಮದುವೆಯಿಂದುಂಟಾದ ಸತ್ಯಭಾಮೆಯ ಪ್ರವೇಶದಿಂದ ಈ ಹೋರಾಟಕ್ಕೆ ಮತ್ತೊಂದು ಮಗ್ಗಲು ಸೇರಿಕೊಳ್ಳುತ್ತದೆ. ಮನುಷ್ಯ–ಮನುಷ್ಯರ ನಡುವಿನ ಸಂಬಂಧದಲ್ಲಿ ತೊಡಕುಗಳು ಉಂಟಾಗಿ ಹೋರಾಟ ಇಮ್ಮುಖವಾಗುತ್ತದೆ. ನೆಲದೊಡನೆ ಅಗಲಿಕೆ, ಹೊಸತನದ ಸಂಪರ್ಕ ಇವೇ ಎರಡನೆಯ ತಲೆಮಾರಿನ ದುಃಖಕ್ಕೆ ಕಾರಣವಾಗಿದೆ."[೧೦] ಸರ್ವವ್ಯಾಪ್ತಿಯಾದ ಈ ದುಃಖವನ್ನು ಲಚ್ಚ–ನಾಗವೇಣಿಯರ ವಿಷಮ ದಾಂಪತ್ಯದ ಮೂಲಕ ವ್ಯಕ್ತಪಡಿಸಲಾಗಿದೆ. ಲಚ್ಚ ವಿದ್ಯಾಭ್ಯಾಸಕ್ಕಾಗಿ ಕುಂದಾಪುರಕ್ಕೆ ಹೋಗುತ್ತಾನೆ. ಅದರ ಫಲವಾಗಿ ಅನೇಕ ದುಷ್ಚಟಗಳಿಗೆ ಬಲಿಯಾಗುತ್ತಾನೆ. ಹೊಸ ಪೀಳಿಗೆಯಲ್ಲಿ ಬೀಸಿದ ಗಾಳಿ ಅದು. ಈ ಹೋರಾಟದ ಪರಂಪರೆಗೆ ಪರಕೀಯಳಾದ ನಾಗವೇಣಿ ಆ ದುಃಖಕ್ಕೆ ಮೈಯೊಡ್ಡಬೇಕಾಗುತ್ತದೆ. ನಾಗವೇಣಿ ಹೊರಗಿಂದ ಬಂದವಳಾದರೂ ದೂರದಲ್ಲಿ ಅವಳು ಈ ನೆಲಕ್ಕೆ ಸೇರಿದವಳೇ. ನೆಲದೊಂದಿಗಿನ ಹೋರಾಟದಲ್ಲಿ ಛಲದಿಂದ ಆಕೆ ಮುಂದುವರಿದಾಗ ಅವಳ ಹಿಂದಿನ ತಲೆಮಾರಿನ ಅನಿವಾರ್ಯದ ಸಹಜ ಹೋರಾಟಕ್ಕೂ ನಾಗವೇಣಿಯ ಬುದ್ಧಿಪೂರ್ವಕವಾದ ಹೋರಾಟಕ್ಕೂ ಇರುವ ವ್ಯತ್ಯಾಸ ಗಮನಾರ್ಹ. ನಾಗವೇಣಿ ಮೊದಲನೆ ಮತ್ತು ಮೂರನೆಯ ತಲೆಮಾರುಗಳ ನಡುವಿನ ಕೊಂಡಿಯಾಗಿ ನಿಲ್ಲುತ್ತಾಳೆ.

ರಾಮ ಈ ಸಂಸ್ಕೃತಿಗೆ ಹೊರತಾದ ವಿದ್ಯೆ–ಸಂಸ್ಕೃತಿಗಳನ್ನು ಅರಗಿಸಿಕೊಂಡವನು. ಲಚ್ಚನ ವಿದ್ಯೆಗೂ ರಾಮನ ವಿದ್ಯೆಗೂ ಅಪಾರವಾದ ಅಂತರವಿದೆ. ರಾಮನಂತಹ ಸಮಸ್ಯೆ ಸರಳವಾದುದಲ್ಲ. ತಾತ–ತಂದೆಯರಿಗಿಂತಲೂ ರಾಮನ ಜೀವನ ಕಷ್ಟವಾದುದಾಗಿತ್ತು. ರಾಮ ಬಹಳ ಎಚ್ಚರದಿಂದ ತಾತ ಮತ್ತು ತಂದೆಗಿಂತ ಭಿನ್ನವಾದ ದಾರಿಯನ್ನು ಕಾಣಬೇಕಾಗಿದೆ. ರಾಮ ಮರಳಿ ಮಣ್ಣಿಗೆ ಬರುವುದರ ಮುಖಾಂತರ ಆದರ್ಶದ ನೆಲೆಯಾಗಿ ಚಿತ್ರಿತವಾಗಿದೆ. ಪಾರ್ವತಿ, ಸರಸ್ವತಿ, ನಾಗವೇಣಿ, ರಾಮ, ಒಂದು ನೆಲೆಯಲ್ಲಿ ಆದರ್ಶದ ಪ್ರತೀಕವಾಗಿ ನಿಂತಿದೆ. ಅದು ವಾಸ್ತವ ಅಂಶಗಳಿಂದ ಬಿಂಬಿತವಾಗುತ್ತಾರೆ. ಕತೆಯು ಸರಳವಾದ ಸಾಮಾನ್ಯತೆಯಿಂದ ಭಾವನೆಗಳ ಅಪೂರ್ವ ಸಂಯಮದಂತೆ ವಾಸ್ತವದ ಅಂಶಗಳಿಂದ ಆದರ್ಶಗಳನ್ನು ಚಿತ್ರಿಸಿರುವುದು ಪ್ರಮುಖವಾದ ಅಂಶವಾಗಿದೆ.

'ಬೆಟ್ಟದ ಜೀವ' ಕಾದಂಬರಿದಲ್ಲಿ ಗೋಪಾಲಯ್ಯ ಓರ್ವ ವ್ಯಕ್ತಿಯಾಗಿದ್ದುಕೊಂಡು ಸಮಗ್ರ ಜೀವನವನ್ನು ಉದಾಹರಿಸಬಲ್ಲವರಾಗಿದ್ದಾರೆ. ಕಥಾನಾಯಕ ದಾರಿ ತಪ್ಪಿಸಿಕೊಂಡು ಅವರ ಮನೆಗೆ ಬಂದಾಗ ಅವರು ತೋರಿಸುವ ವಿಶೇಷ ಆದರ, ಅವರ ಮನೆಯೊಳಗಿನ ಬದುಕಿನ ರೀತಿ, ಹೆಂಡತಿ ಶಂಕರಮ್ಮನೊಡನೆ ಅವರು ಆಡುವ ವಿನೋದ, ಇವುಗಳನ್ನು ನೋಡಿದರೆ ಹಗಲಿರುಳು ಕಾಡುವ ದುಃಖವೊಂದರಿಂದ ಅವರು ಪೀಡಿತರಾದಂತೆ ತೋರುವುದೇ ಇಲ್ಲ. ಆ

ದುಃಖ ಸಾಮಾನ್ಯವಾಗಿಲ್ಲ. ಇದ್ದ ಒಬ್ಬನೇ ಮಗ ಮನೆಬಿಟ್ಟು ಓಡಿ ಹೋಗಿದ್ದಾನೆ. ಅವನು ತಿರುಗಿ ಬರಬಹುದೆಂಬ ಆಸೆಯಿಂದ ಗಂಡ-ಹೆಂಡಿರಿಬ್ಬರೂ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ದಾರಿ ಕಾಯುತ್ತಿದ್ದಾರೆ. ಆದರೆ ಅದಕ್ಕಾಗಿ ಗೋಪಾಲಯ್ಯ ಜೀವನವನ್ನು ಅರ್ಥಹೀನವೆಂದು ಕಾಣುವುದಿಲ್ಲ. ತಮ್ಮ ಮನೆ-ಹೊಲ ಸುತ್ತಲಿನ ಪ್ರೀತಿ, ಇವುಗಳ ಮೇಲಿನ ಪ್ರೀತಿ ಕಡಿಮೆಯಾಗುವುದಿಲ್ಲ. ಇದು ವಾಸ್ತವಕ್ಕೆ ಹತ್ತಿರವಾದ ಸತ್ಯ ಸಂಗತಿ. ಗೋಪಾಲಯ್ಯನವರ ಈ ಮಿತಿಮೀರಿದ ಜೀವನೋತ್ಸಾಹ ಕಾಡುಮೂಲೆಯ ನಾರಾಯಣನನ್ನು ಆತ್ಮೀಯವಾಗಿಸಿದೆ. ಗೋಪಾಲಯ್ಯ ಗೋಪಾಲಯ್ಯನಾಗಿಯೇ ಉಳಿದು ಮಾನವೀಯ ಆದರ್ಶದ ಪ್ರತೀಕವಾಗಿದ್ದಾರೆ. ಹಾಗೂ ಗೋಪಾಲಯ್ಯ ಗ್ರಾಮ ಸಂವೇದನೆಯ ಗ್ರಾಮ ಮೌಲ್ಯಗಳ ಪ್ರತಿನಿಧಿಯಾಗಿ ನಮ್ಮೆದುರಿಗಿದ್ದಾರೆ. ನಾಗರಿಕ ಪ್ರತಿನಿಧಿಯಾಗಿ ಶಿವರಾಮಯ್ಯನ ಆದರ್ಶಗಳು ವಾಸ್ತವಿಕ ಅಂಶಗಳಾಗಿ ಪ್ರಮುಖ ಪಾತ್ರವಹಿಸುತ್ತವೆ. ಏಕೆಂದರೆ ಶಿವರಾಮಯ್ಯ ಇಲ್ಲಿ ಕೇಂದ್ರ ವ್ಯಕ್ತಿಯಾಗುತ್ತಾನೆ. ಇವನು ಕಾದಂಬರಿಯ ಪರಿಸರ ಹಾಗೂ ಪಾತ್ರಗಳೊಂದಿಗೆ ಸಮರಸವಾಗಿಯೂ, ದೂರ ನಿಂತು ವಿವರಗಳನ್ನು ಗ್ರಹಿಸಬಲ್ಲ, ಎಚ್ಚರದಿಂದ ಅರ್ಥೈಸಬಲ್ಲ, ನಿರೀಕ್ಷಿತ ಕೆಳಬೈಲಿನ ವ್ಯಕ್ತಿಗಳ ಜೊತೆಗೆ ತಾದ್ಯಾತ್ಮ್ಯ ಹೊಂದಿದ ಇದರಿಂದಾಗಿಯೇ ಶಂಭು ನಾರಾಯಣನ ಹೆಂಡತಿಯ ಮೇಲೆ ಕೈ ಮಾಡಿದ ಸಂಗತಿ, ನಾರಾಯಣನ ಅಂತರಂಗ, ನಿಸರ್ಗದ ಮಡಿಲಲ್ಲಿ ಅಡಗಿಕೊಂಡಿರುವ ಅಸೌಕರ್ಯದ ಪಿಡುಗುಗಳು, ಶಂಕರಿ-ಗೋಪಾಲಯ್ಯರ ಸಮರಸ ದಾಂಪತ್ಯ, ಎಲ್ಲ ಸುಖವಿದ್ದು ಅವರನ್ನು ಕಾಡುವ ಒಬ್ಬಂಟಿತನ, ಗುಪ್ತನೋವು ಇತ್ಯಾದಿ ಅಂಶಗಳು ವಾಸ್ತವದ ಪರಧಿಯೊಳಗೆ ಶಂಕರಿ-ಗೋಪಾಲಯ್ಯರ ಆದರ್ಶ ಜೀವನದ ಮೇಲೆ ಬೆಳಕು ಚೆಲ್ಲುವಂತಹದ್ದು ಪ್ರಮುಖವಾದ ಅಂಶವಾಗಿದೆ.

'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳು ವಾಸ್ತವವಾದಿ ಪರಂಪರೆಯ ಕಾದಂಬರಿಗಳಾಗಿವೆ. ವಾಸ್ತವ ಹಾಗೂ ಆದರ್ಶಗಳು ಹೆಗ್ಗಡಿತಿಯಲ್ಲಿ ಕಂಡರೆ, 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಹೆಣ್ಣು ಮತ್ತು ವಾಸ್ತವಾಂಶಗಳನ್ನು ಕಾಣುತ್ತೇವೆ. ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಚಂದ್ರೇಗೌಡ, ವೆಂಕಪ್ಪಯ್ಯಜೋಯಿಸ ಇವರ ಕೂಲಿಕಾರರು ಮಹಿಳೆಯರು ಮಲೆನಾಡಿನ ಜೀವನವನ್ನು ಹೊತ್ತುಕೊಂಡಿರುವುದು ಇಡೀ ಮಲೆನಾಡಿನ ಬದುಕನ್ನು ವೆಂಕಪ್ಪಯ್ಯ ಜೋಯಿಸ ನಿಯಂತ್ರಿಸುತ್ತಾನೆ. ಆತನ ನಿರ್ದೇಶನದಂತೆ ಒಕ್ಕಲಿಗರು ನಡೆದುಕೊಳ್ಳುತ್ತಾರೆ. ಹುಟ್ಟಿನಿಂದ ಸಾವಿನವರೆಗೂ ವೆಂಕಪ್ಪಯ್ಯ ಜೋಯಿಸರ ಕೈಯಿದೆ. ಜೀತದಾಳುಗಳಂತೂ ಪಶುಗಳಿಗಿಂತಲೂ ಹೀನಾಯವಾಗಿ ಇವರ ಅಧೀನದಲ್ಲಿ ಬದುಕುವರು. ಬದುಕಿಗಾಗಿ ಅವರನ್ನೇ ಅವಲಂಬಿಸಿರುವವರು. ಈ ಮೂರು ವರ್ಗಗಳ ಜೀವನ ಕಾದಂಬರಿಯಲ್ಲಿ ಪುನರ್ಜನ್ಮ ಪಡೆಯುತ್ತದೆ. ಮಲೆನಾಡಿನ ವೈವಿಧ್ಯತೆ, ಸಾಂಸ್ಕೃತಿಕ ಅನನ್ಯತೆ ಮೈವೆತ್ತಿದೆ. ಪ್ರಕೃತಿಯು ಮಾನವನಷ್ಟೇ ವೈವಿಧ್ಯತೆಯನ್ನು ಪಡೆದುಕೊಂಡಿದೆ. ಮಲೆನಾಡಿನ ಸಾಂಸ್ಕೃತಿಕ ಬದುಕನ್ನು

ಅದ್ಭುತವಾಗಿ ದಾಖಲಿಸುತ್ತಾರೆ. ಈ ರೀತಿಯ ಪ್ರಾದೇಶಿಕ ಸಂಕೀರ್ಣ ಜೀವನ ಮೊದಲಬಾರಿಗೆ ಕಾದಂಬರಿಯಲ್ಲಿ ಅನಾವರಣಗೊಂಡಿದ್ದು ಕುವೆಂಪು ಅವರಿಂದ, ಕುರ್ತುಕೋಟಿಯವರು ಈ ಕಾದಂಬರಿ ಕುರಿತು ಬರೆದ ಮಾತುಗಳು ಉಲ್ಲೇಖಾರ್ಹವಾಗಿದೆ. "ಕೃತಿಯು ಕನ್ನಡದಲ್ಲಿ ಅನನ್ಯವಾದ ಕೃತಿಯಾಗಿದೆ. ಮುಖ್ಯವಾಗಿ ಇದು ಒಂದು ಪ್ರಾದೇಶಿಕ ಹಿನ್ನೆಲೆಯಲ್ಲಿ ಮನುಷ್ಯನ ಕ್ರಿಯೆಗಳನ್ನು ಸಹಜ ಗತಿಯಲ್ಲೇ ವರ್ಣಿಸುವ ಕೃತಿಯಾಗಿದೆ. ಈ ಕಾದಂಬರಿಯಲ್ಲಿ ಉಕ್ಕುವ ಚೈತನ್ಯ ಪ್ರವಾಹ ಬೇರೆ ಯಾವ ಕನ್ನಡ ಕಾದಂಬರಿಯಲ್ಲಿಯೂ ಇಲ್ಲ. ಇಲ್ಲಿಯ ವ್ಯಕ್ತಿಗಳ ಕ್ಷೇಮ ಸಮಾಚಾರವನ್ನು ಕೇಳಬೇಕೆಂದು ಮನಸ್ಸಾಗುತ್ತದೆ. ಅಲ್ಲದೆ ಈ ಕೃತಿಯ ಭಾವ ಪ್ರಪಂಚ ಓದುಗರ ರಸಿಕ ಪ್ರಜ್ಞೆಯನ್ನು ಹೆಚ್ಚು ವಿಸ್ತಾರಗೊಳಿಸುವಂಥದ್ದು. ಶೈಲಿಯ ಕ್ಷೇತ್ರವೂ ಹಾಗೆಯೇ ವಿಸ್ತಾರವಾಗಿದೆ. ಗ್ರಾಮ್ಯ ಭಾಷೆಯಿಂದ ಹಿಡಿದು ಸಂಸ್ಕೃತ ಭೂಯಿಷ್ಠವಾದ ಭಾಷೆಯವರೆಗೆ ಶೈಲಿ, ವ್ಯಾಪ್ತಿಯನ್ನು ಪಡೆದಿದ್ದರೂ ವಸ್ತುವಿಗೆ ತೀರ ಸಹಜವಾಗಿ ಬಂದಿದೆ. ಇದನ್ನೊಮ್ಮೆ ಓದಿ ಬಿಟ್ಟರೆ ಸಾಕು. ಒಂದು ಜನಾಂಗದ ಆಚಾರ, ವಿಚಾರಗಳ ನಡವಳಿಕೆಯ ರಾಗದ್ವೇಷಗಳ ಆಳವಾದ ಆತ್ಮೀಯ ಪರಿಚಯ ಓದುಗನಿಗಾಗುತ್ತದೆ."[೧೧] ಈ ರೀತಿ ವಾಸ್ತವದ ಅಂಶಗಳನ್ನು ದಾಖಲಿಸಿರುವುದು ಕಂಡುಬರುತ್ತದೆ. ಕಾನೂರು ಮನೆಯ ಕಥೆಯನ್ನು ಮತ್ತು ಅದಕ್ಕೆ ಸಂಬಂಧಿಸಿದ ಮುತ್ತಳ್ಳಿ ಸೀತೆಮನೆ ಕೆಳಕಾನೂರು ಗೌಡರ ಮನೆತನಗಳ ಜೀವನ ಕಥೆ, ಹೂವಯ್ಯನ ಆದರ್ಶಗಳು, ವಾಸ್ತವಕ್ಕೆ ಹತ್ತಿರವಾದವು. ಹೂವಯ್ಯನ ಪಾತ್ರ ಪಾಶ್ಚಾತ್ಯ ಕಾವ್ಯಗಳು, ರಾಮಕೃಷ್ಣ ಪರಮಹಂಸರ ವಿಚಾರಧಾರೆ, ವೈಜ್ಞಾನಿಕ ಮನೋಭಾವ, ವಿಚಾರವಾದ ಮುಂತಾದವುಗಳನ್ನು ಓದಿಕೊಂಡು ಮಲೆನಾಡಿಗೆ ಮರಳುವ ಹೂವಯ್ಯ ಇಲ್ಲಿ ಆದರ್ಶಗಳ ಪ್ರತೀಕವಾಗುತ್ತಾನೆ. ಎಲ್ಲರೂ ಬದುಕುವ ಸಾಮಾನ್ಯ ಬದುಕಿಗಿಂತ ಭಿನ್ನವಾಗಿ ಏನನ್ನಾದರೂ ಸಾಧಿಸಬೇಕು ಎಂಬ ಮನಸ್ಸು ಹೂವಯ್ಯನದು. ಪ್ರಕೃತಿಯ ಸಾನಿಧ್ಯದಲ್ಲಿ ರಸಸಮಾಧಿಗೆ ಹೋಗಿ ಬಿಡುವ ಭಾವ ಜೀವಿ ಅವನು. ಇಂಥ 'ವಿಶ್ವಯಾತ್ರೆ' ಮನಸ್ಸಿನ ಹೂವಯ್ಯ, ತನ್ನ ವಯಸ್ಸಿಗೆ ಸಹಜವಾಗಿ ಸೀತೆಯ ಕಡೆ ಆಕರ್ಷಿತನಾದರೂ ಅದನ್ನು ಮಾನಸಿಕವಾಗಿ ಒಪ್ಪಿಕೊಳ್ಳಲು ಹಿಂಜರಿಯುತ್ತಾನೆ. ಅವನು ಆತ್ಮವಂಚನೆ ಮಾಡಿಕೊಳ್ಳುವ ರೀತಿ ಕಾದಂಬರಿಯಲ್ಲಿ ಸ್ಪಷ್ಟವಾಗಿ ಗೊತ್ತಾಗುತ್ತದೆ. ಕೃಷ್ಣಪ್ಪನೊಡನೆ ಮದುವೆ ನಿಶ್ಚಯವಾದಾಗ, ತೀವ್ರ ಆಘಾತಕ್ಕೊಳಗಾಗಿ ಮನೋರೋಗಿಯಾಗುವ ಸೀತೆಯ ಕುರಿತು ಹೂವಯ್ಯನ ಪ್ರತಿಕ್ರಿಯೆ ವಿಚಿತ್ರವಾಗಿರುತ್ತದೆ. ತಕ್ಷಣ ಅವಳನ್ನು ನೋಡಲು ಅವನು ಮುತ್ತಳ್ಳಿಗೆ ಹೋಗುವುದಿಲ್ಲ. ಬದಲಾಗಿ ಅವಳ ಪ್ರೇಮ, ಹಸಿ, ತನ್ನ ಪ್ರೇಮಕ್ಕೆ ವಂಚನೆ ಮಾಡಿದ್ದಾರೆ ಎಂಬ ಕುತರ್ಕದ ನಿರ್ಣಯಕ್ಕೆ ಬರುತ್ತಾನೆ. ಜಿ.ಎಸ್.ಆಮೂರ್ ಸರಿಯಾಗಿಯೇ ಗುರುತಿಸಿರುವಂತೆ. ಹೂವಯ್ಯನ ಆದರ್ಶದ ಹಂಬಲ ಅವನ ಮಾನವೀಯತೆಯನ್ನೇ ಊನಗೊಳಿಸುತ್ತದೆ. ಮುಂದೆ ನಾನಾ ಘಟನಾವಳಿಯ ನಂತರ ಹೂವಯ್ಯ ಸೀತೆ ಒಟ್ಟಿಗೆ ಬಾಳುವ ಹಂತವೊಂದು ಬರುತ್ತದೆ. ಆದರೆ ಆಗ "ಆಕೆಯ

ಮತ್ತು ಹೂವಯ್ಯನ ಬಾಳು ಒಡಲ ಸೋಂಕಿನ ಗೋಡವೆಯಿಲ್ಲದೆ ಪರಸ್ಪರ ಪ್ರೇಮದ ಎರಡು ಆತ್ಮಗಳ ಪ್ರಜ್ವಲ ಜೀವನವಾಗಿತ್ತು."[೧೨] ಇದು ಅತ್ಯಂತ ಅವಾಸ್ತವಿಕವಾಗಿ ತೋರುತ್ತದೆ. ಸೀತೆ ಮತ್ತು ಹೂವಯ್ಯನ ಪಾತ್ರಗಳು. ಕುವೆಂಪು ಅವರ ಆದರ್ಶದ ಭಾರದಿಂದ ಕುಸಿದಿರುವುದನ್ನು ಗಮನಿಸುತ್ತೇವೆ. ಅದೇ ರೀತಿ ಈ ಕಾದಂಬರಿಯಲ್ಲಿ ನಾಗಮ್ಮ, ಪುಟ್ಟಮ್ಮ, ಲಕ್ಷ್ಮಿ, ಗೌರಮ್ಮ, ನಂಜಿ, ಸುಬ್ಬಮ್ಮ, ಗಂಗಿ ಪಾತ್ರಗಳು ಪಿತೃವ್ಯವಸ್ಥೆಯು ಹೆಣ್ಣಿಗೆ ಕೊಡಮಾಡುವ ಪಾತ್ರಗಳಾಗಿವೆ. ಇಂತಹ ಪಾತ್ರಗಳ ಚಿತ್ರಣದಲ್ಲಿ ಕುವೆಂಪು ಅವರು ಸಹಜತೆಯನ್ನು ಮೆರೆದಿದ್ದಾರೆ.

'ಮಲೆಗಳಲ್ಲಿ ಮದುಮಗಳು' ಮೊದಲ ಕಾದಂಬರಿ ಬರೆದು ಮೂವತ್ತು ವರ್ಷಗಳ ನಂತರ ಈ ಕಾದಂಬರಿ ಪ್ರಕಟವಾಯಿತು. ಇದು ಮಲೆನಾಡಿನ ಜೀವನ, ಪ್ರಕೃತಿಯನ್ನು ಚಿತ್ರಿಸುವ ಕಾದಂಬರಿಯಲ್ಲಿ ಬೃಹತ್ತಾದ ಹೆಚ್ಚು ಪಾತ್ರಗಳಿಂದ ಕೂಡಿದ ತುಂಬಾ ಸಂಕೀರ್ಣವಾದ ಆದರೆ ಅಷ್ಟೇ ರಸವತ್ತಾದ ಕಾದಂಬರಿ ಇದು. ಇದಕ್ಕೆ ಒಂದು ನಾಯಕ ಪಾತ್ರ ಇಲ್ಲ. ಇಲ್ಲಿ ಯಾರು ಮುಖ್ಯರಲ್ಲ, ಯಾರೂ ಅಮುಖ್ಯರಲ್ಲ ಎಂದು ಕುವೆಂಪು ಅವರೇ ಹೇಳಿದ್ದಾರೆ. ಇಲ್ಲಿ ಅನೇಕ ಪ್ರೇಮಿಗಳ ಜೋಡಿಗಳಿವೆ. ಅವರುಗಳ ಸಂಸ್ಕಾರ ಭಿನ್ನವಾದುದು. ಇಲ್ಲಿ ಆದರ್ಶಮೌಲ್ಯಗಳಿಂದ ಪ್ರಭಾವಿತರಾದ ವ್ಯಕ್ತಿಗಳೂ ಇದ್ದಾರೆ. ಹಾಗೂ ಸಹಜ ಗ್ರಾಮೀಣ ವ್ಯಕ್ತಿಗಳು ಇದ್ದಾರೆ. ಈ ಕಾದಂಬರಿಯಲ್ಲಿ ಬರುವ ಪಾತ್ರಗಳು ಪ್ರಸಂಗಗಳೆಲ್ಲವೂ ಗ್ರಾಮ ಜೀವನದ ಮೂಲಕ ಒಟ್ಟು ಮಾನವ ಜೀವನದ ಮುಖ್ಯಾಂಶಗಳನ್ನೆ ಧ್ವನಿಸುತ್ತದೆ. ಮಲೆನಾಡಿನ ಮದುಮಕ್ಕಳ ವೈವಾಹಿಕ ಹೋರಾಟ ಕಾದಂಬರಿಯ ಕೇಂದ್ರ ಕ್ರಿಯೆ. ಆದರೆ ಕಾದಂಬರಿಯ ಆಶಯ ಇಷ್ಟಕ್ಕೆ ಉಳಿಯುವುದಿಲ್ಲ. ವೈವಾಹಿಕ ಹೋರಾಟಗಳು ಕಾದಂಬರಿಯ ಉದ್ದಕ್ಕೂ ಬಂದರೂ ಇದಕ್ಕೆ ಅನೇಕ ಆಶಯಗಳು ಕೂಡಿಕೊಳ್ಳುತ್ತವೆ. ಅಂದರೆ ಕಾದಂಬರಿಯ ಅನುಭವ, ಬದುಕಿನ ನಿಗೂಢ ಅನುಭವದ ಏಕಸ್ತರದಲ್ಲಿ ಮಾತ್ರ ಹರಿಯದೆ ವಿಸ್ತಾರದಲ್ಲಿ ಹರಡುವುದರ ಜನತೆಗೆ ಪರಸ್ಪರ ಸಂಬಂಧವನ್ನು ಪಡೆದುಕೊಳ್ಳುತ್ತದೆ. ಮದುಮಕ್ಕಳ ಹೋರಾಟ ಕ್ರಿಯೆ ಆಯಾ ಸಮಾಜಗಳ ಸ್ವರೂಪಕ್ಕೆ ತಕ್ಕಂತೆ ವಾಸ್ತವಿಕ ಅಂಶವಾದರೂ ಜಗತ್ತಿನ ಎಲ್ಲಾ ಹೆಣ್ಣು ಗಂಡುಗಳ ಕೂಡುವಿಕೆಯ ತನಕವೂ ಒಂದು ರೀತಿಯ ಹೋರಾಟವೇ. ಆದುದರಿಂದ ಜೀವಿಯ ಪ್ರವೃತ್ತಿ ಹಿನ್ನೆಲೆಯಲ್ಲಿ ಇವು ಚಿರವಾಸ್ತವಿಕ ಅಂಶವೂ ಆಗಿದೆ. ಆದ್ದರಿಂದ ಕಾದಂಬರಿಯ ವಸ್ತುವಿನ ಸ್ಥೂಲ ಹಾಗೂ ಸೂಕ್ಷ್ಮ ಆವರಣಗಳೆರಡು ವಾಸ್ತವ ಸತ್ಯದ ಚಿಪ್ಪಿನಿಂದಲೇ ಮೂಡಿದಂತಿದೆ.

ಕಾದಂಬರಿ ಕಥೆ ಐದಾರು ಕುಟುಂಬಗಳ ಪರಿಧಿಯೊಳಗೆ ಹರಡಿಕೊಂಡಿದೆ ಎಂದು ಹೇಳಬಹುದು. ಸಿಂಭಾವಿ ಭರಮೈ ಹೆಗಡೆಯವರ ಕುಟುಂಬದ ವಲಯದಲ್ಲೇ ಬರುವ ಗುತ್ತಿಯ ಕಥೆ, ಹಳೆಮನೆ ಸುಬ್ಬಣ್ಣ ಹೆಗ್ಗಡೆಯವರ ಕುಟುಂಬಕ್ಕೆ ಸೇರಿದಂತೆ ಶಂಕರಪ್ಪ ಹೆಗ್ಗಡೆಯವರ

ಸಂಸಾರಿಕ ಕಥನ ಕೋಣೂರು ರಂಗಪ್ಪ ಗೌಡರಿಗೆ ಸೇರಿದಂತೆ ಬರುವ ಅವರ ತಮ್ಮ ಮುಕುಂದಯ್ಯ ಕಥೆ, ಮಾವಳ್ಳಿ ವೆಂಕಟಪ್ಪ ಮತ್ತು ನಾಗಕ್ಕ–ನಾಗತ್ತೆ, ಚಿನ್ನಮ್ಮರ ಕಥೆಗಳು, ಬೆಟ್ಟಳ್ಳಿ ಕಲ್ಲಯ್ಯ ಗೌಡರಿಗೆ ಸೇರಿದಂತೆ ದೇವಯ್ಯಗೌಡ ಕಲ್ಲೂರು ಮಂಜಭಟ್ಟ, ಇವರ ಕಥೆ–ಕಾದಂಬರಿಯಲ್ಲಿ ಮುಖ್ಯ ಪಾತ್ರವಹಿಸುತ್ತದೆ.

ಹಾಗೆಯೇ ಮುಖ್ಯ ಪ್ರವಾಹಗಳಿಗೆ ಉಪನದಿಗಳಾಗಿ ಇವರ ಒಕ್ಕಲಿಗೆ ಸೇರಿದ ಆಳುಗಳ ಕಥೆಯೂ ಬರುತ್ತವೆ. ಉದಾಹರಣೆಗೆ ಕಾದಂಬರಿಯಲ್ಲಿ ಪ್ರಮುಖ ಪಾತ್ರವಹಿಸುವ ಗುತ್ತಿ, ಸಿಂಬಾವಿಯವನು, ಪೀಂಚಲು, ದೇಯಿ, ಅಕ್ಕಣಿ, ಚೀಂಕ್ರ, ಕೋಣೂರಿಗೆ ಸೇರಿದವರು, ಯಾವ ಊರಿಗೆ ಸೇರದ ಅಲೆಮಾರಿ ಸಾಬರುಗಳಿಗೂ ಇಲ್ಲಿ ಸ್ಥಾನವುಂಟು. ಮೇಗರಳ್ಳಿಯ ಕಣ್ಣಾಪಂಡಿತ ಅಂತಕ್ಕ ಸೆಟ್ಟಿ ಕಾವೇರಿ ಇವರಿಗೂ ಕಾದಂಬರಿಯಲ್ಲಿ ಸಾಕಷ್ಟು ಪ್ರಾಧಾನ್ಯವಿದೆ. "ಆಗುಂಬೆಯಿಂದ ಮೇಗರವಳ್ಳಿಯ ಮುಖಾಂತರ ತೀರ್ಥಹಳ್ಳಿಗೆ ಬಂದು ದೇಣಿಗಡಿಯಲ್ಲಿ ಹೊಳೆದಾಟಿ ಮುತ್ತಳ್ಳಿ ಸೀತೆಮನೆ, ಕಾನೂರುಗಳಿಗೆ ಹೋಗುವ ಗಟ್ಟದ ತಗ್ಗಿನವರ ಗುಂಪಿನಲ್ಲಿ ಗುತ್ತಿ ತಿಮ್ಮಿಯೊಡನೆ ತುಂಗಾನದಿಯ ಎಡ ದಡದಲ್ಲಿರುವ ದೈತ್ಯಾಕಾರದ ಅರಳಿ ಮರದ ಕಟ್ಟೆಗೆ ತುಸು ದೂರದಲ್ಲಿ ಹೊಳೆ ದಾಟಲು ದೋಣಿಯಲ್ಲಿ ತನಗೆ ಲಭಿಸುವ ಸರದಿಗಾಗಿ ಕಾಯುತ್ತ ಕುಳಿತಿದ್ದನು"[೧೩] ಎಂದು ಕುವೆಂಪು ವಿವರಿಸುವಲ್ಲಿ ವಾಸ್ತವಿಕತೆಯ ದರ್ಶನವಾಗುತ್ತದೆ.

ಗುಡ್ಡದಯ್ಯ, ಮುಕುಂದಯ್ಯ, ಚಿನ್ನಮ್ಮರ ಜನ್ಮಾಂತರ ಪ್ರೇಮ, ದೊಡ್ಡಣ್ಣಯ್ಯ–ಚೆಲುವಯ್ಯನಾಗುವ ಪುನರ್ಜನ್ಮ ಇವಿಷ್ಟನ್ನೂ ಬಿಟ್ಟರೆ ಮಿಕ್ಕುಳಿದ ಪಾತ್ರಗಳು ವಾಸ್ತವಿಕವಾದವು. ಗುತ್ತಿಯ ಹೊಟ್ಟೆಬಾಕತನ, ಹಾಗೂ ಕಿಲಾಡಿತನ, ಚೀಂಕ್ರನ ಕಾಮುಕತೆ, ಸಾಬರ ಧೂರ್ತತೆ, ಕಲ್ಲಯ್ಯ ಗೌಡರ ಕಲ್ಲಿನಷ್ಟೇ ಕ್ರೂರವರ್ತನೆ, ಭರಮೈ ಹೆಗ್ಗಡೆಯವರ ಹೆಣ್ಣಿನ ದಾಹ. ಸುಬ್ಬಣ್ಣ ಹೆಗ್ಗಡೆಯವರ ಜಿಪುಣತನ, ತಿಮ್ಮಪ್ಪ ಹೆಗ್ಗಡೆಯ ಕಂತ್ರಿತನ ಐತ–ಪಿಂಚಲುವಿನ ಮುಗ್ಧತೆ ಕಾವೇರಿಯ ಬೆಡಗು ದೊಡ್ಡಮ್ಮ ಹೆಗ್ಗಡತಿಯರ ಮನಃಕ್ಲೇಶ, ದೇವಮ್ಮನ ಮಾತೃವಾತ್ಸಲ್ಯ, ದೇವಯ್ಯ ಗೌಡರ ಚಾಂಚಲ್ಯ, ಚಿನ್ನಮ್ಮ, ತಿಮ್ಮಿಯರ ಪ್ರಣಯ, ಸಾಹಸಗಳು, ಒಂದೊಂದು ಪಾತ್ರವೂ ಒಂದೊಂದು ವಿಶಿಷ್ಟ ಗುಣ ಆದರೆ ಮಾನವ ಪ್ರವೃತ್ತಿಗಳ ಮೂರ್ತಿರೂಪ. ಎಲ್ಲಾ ಪಾತ್ರಗಳ ಜೀವ ದ್ರವ್ಯವೂ ಮಣ್ಣಿನಿಂದಲೇ ಮೂಡಿಬಂದವುಗಳಾಗಿವೆ.

### ತಿರುಮಲಾಂಬಾ ಅವರ ಕಾದಂಬರಿಗಳಲ್ಲಿ ಆದರ್ಶ ಮತ್ತು ವಾಸ್ತವ

ತಿರುಮಲಾಂಬಾ ಅವರು ಸ್ತ್ರೀ ಜನಾಂಗದ ಪುರೋವೃದ್ಧಿಗೆ ಅವಶ್ಯಕವಾಗಿ ಬೇಕಾದ ರೀತಿ–ನೀತಿಗಳನ್ನು ತಿಳಿಸುವುದು ಹಾಗೂ ಆದರ್ಶಗಳ ಪರಿಕಲ್ಪನೆ ಪ್ರಮುಖವಾದುದು. ಗತಭಾರತದ

ಆದರ್ಶ 'ಆರ್ಯಕುಲಾಂಗನೆ'ಯ ಪ್ರತಿಮೆಯನ್ನು ಮಂಡಿಸುವುದು ಲೇಖಕಿಯಾಗಿ ತಮ್ಮ ಕರ್ತವ್ಯ ಎಂದು ಅವರು ತಿಳಿದಂತೆ ತೋರುತ್ತದೆ. ಆರ್ಯ ಮಹಿಳೆ ಅಥವಾ 'ಭಾರತ ಮಹಿಳೆ'ಯ ಗೀಳು ಆ ಕಾಲದಲ್ಲಿ ಸಾರ್ವತ್ರಿಕವಾಗಿ ಎನ್ನುವಂತೆ ಒಂದು ಬಾವುಕ ಕಲ್ಪನೆಯೇ ಆಗಿತ್ತು. ಪುರುಷ ಲೇಖಕರು ಮತ್ತೆ ಮತ್ತೆ ಅವನ್ನೇ ಹೇಳುತ್ತಿದ್ದರು. ಶೀಲವು ಅತ್ಯಂತ ಮುಖ್ಯ ಸತ್ವವಾಗಿ ಒಂದು ತೇಜಸ್ಸಾಗಿ ಶೋಭಿಸುವುದು ಆರ್ಯ ಮಹಿಳೆಯ ಮೂಲಭೂತ ಲಕ್ಷಣ. ಇಂತಹ ಆದರ್ಶವುಳ್ಳ ತಿರುಮಲಾಂಬಾ ಅವರಿಗೆ ವಿಧವಾ ವಿವಾಹ ಒಂದು ಸಮರ್ಥನೀಯ ವಿಷಯವಾಗಿ ಕಾಣುವುದಿಲ್ಲ. ತಿರುಮಲಾಂಬಾ ಅವರು ಹೇಳುವ ಸ್ತ್ರೀ ಶಿಕ್ಷಣ, ಆಕೆ ಕಲಿತು ಉದ್ಯೋಗ ಪಡೆದು ಸ್ವಾವಲಂಬಿಯಾಗುವುದಕ್ಕಲ್ಲ. ಹೊರಗೆ ದುಡಿಯುವ ಮಹಿಳೆ, ಮನೆಗೆಲಸದಲ್ಲಿ ಸಹಕರಿಸುವ ಗಂಡ ಈ ಕಲ್ಪನೆ ಅವರಿಗೆ ರುಚಿಸುವುದಿಲ್ಲ. ಸ್ತ್ರೀಗೆ ಬೇಕಾದ ವಿದ್ಯೆ ಎಂದರೆ ಅವರ ಪರಿಭಾಷೆಯಲ್ಲಿ ಹೇಳುವದಾದರೆ "ಭಗವದ್ಗುಣ ಸ್ವರೂಪ ಸಂಬಂಧಗಳ ಅನುಭವವನ್ನುಂಟು ಮಾಡಿಕೊಡಬಲ್ಲ ವಿದ್ಯಾಜ್ಞಾನವು ಅದೇನಿದ್ದರೂ ಸ್ತ್ರೀ ಜಾತಿಗೆ ಉಚಿತವಾಗಿ ನೇಮಿಸಲ್ಪಡುವ ಕಾರ್ಯಗಳನ್ನು ಕ್ಲುಪ್ತ ಕಾಲದಲ್ಲಿ ನೆರವೇರಿಸಿದ ಮೇಲೆ ಮಾತ್ರ."[೧೪]

ವಿವಾಹಿತೆಯಾದ ಹೆಣ್ಣೊಬ್ಬಳ ಪ್ರತಿಕೂಲ ಸನ್ನಿವೇಶದಲ್ಲೂ ಸತೀತ್ವರಕ್ಷಣೆ ಮಾಡಿದ ಆದರ್ಶ ಅವರ ಮೊದಲ ಪ್ರಕಟಿತ ಕಾದಂಬರಿ 'ಸುಶೀಲೆ'ಯಲ್ಲಿ ಕಾಣಬಹುದು. ಸುಶೀಲೆಯಲ್ಲಿ ವಿದ್ಯಾವತಿಯಾದ ಆಕೆ ದಾರಿ ತಪ್ಪಿದ ತನ್ನ ಗಂಡ ಹಾಗೂ ಇತರ ವಂಚಕರಿಂದ ಕಷ್ಟಕ್ಕೊಳಗಾಗುತ್ತಾಳೆ. ಕೊನೆಯಲ್ಲಿ ದುಷ್ಟರಿಗೆ ಶಿಕ್ಷೆಯಾಗಿ ಗಂಡನು ಸರಿದಾರಿಗೆ ಬಂದು ಸುಖಾಂತವಾಗುತ್ತದೆ. ವಿದ್ಯಾವಂತ ಮಹಿಳೆ ಸಮಾಜದ ಕುಹಕಕ್ಕೆ ಹೇಗೆ ಒಳಗಾಗುತ್ತಾಳೆ ಎನ್ನುವುದು ಕಾದಂಬರಿಯಲ್ಲಿ ಪ್ರಸ್ತಾಪ ಬಂದರೂ ವಾಸ್ತವದ ಹಿನ್ನೆಲೆಯಲ್ಲಿ ಅಲ್ಲಿಯ ನೆರೆಮನೆಯ ಪಂಚಾಂಗದ ಸಿದ್ಧಾಂತಿ ಹಾಗೂ ಹೆಂಡತಿ ಗಿರಿಯಮ್ಮಳು ಸುಶೀಲೆ ಓದುವುದನ್ನು ಕಂಡರೆ ಗಿರಿಯಮ್ಮನಿಗೆ ಮೈ ಉರಿ. ಸುಶೀಲೆಯ ಗಂಡ ವಿನೋದನಿಗೆ ಅವಳಿಲ್ಲದ ವೇಳೆಯಲ್ಲಿ ಗಂಡನಿಗೆ ನೀನಿಲ್ಲದ ವೇಳೆ ನಿಮ್ಮ ಮನೆಗೆ ಯಾರ್ಯಾರೋ ಬಂದು ಹೋಗುತ್ತಾರೆ ಎಂದು ಸಂಶಯದ ಕಿಡಿಯನ್ನು ವಿನೋದದ ತಲೆಯಲ್ಲಿ ತುಂಬುವುದು. ಆಗ ಸುಶೀಲೆಯನ್ನು ಹೊಡೆಯುವುದು. ವಾಸ್ತವಕ್ಕೆ ಹತ್ತಿರವಾದ ಸಂಗತಿಗಳನ್ನು ಬಿಚ್ಚಿಟ್ಟಿದ್ದಾರೆ. ಕೊನೆಗೆ ತಂತ್ರನಾಥನ ಕುತಂತ್ರಕ್ಕೆ ಬಲಿಯಾಗಿ ಸೆರೆಮನೆ ಸೇರಿದಾಗಲೂ ತಂತ್ರನಾಥನು ಸುಶೀಲೆಗೆ ನನ್ನೊಂದಿಗೆ ಬಂದು ಸುಖವಾಗಿರು ಎಂದು ಪೀಡಿಸುವುದು. ಸುಶೀಲೆ ಆದಾವುದಕ್ಕೂ ಜಗ್ಗದೇ ಧೈರ್ಯದಿಂದ ಎದುರಿಸಿ ತನ್ನ ಗಂಡನೊಂದಿಗೆ ಸಹಬಾಳ್ವೆ ಮಾಡುವುದು ವಾಸ್ತವ ಅಂಶಗಳಾದರೂ 'ಸುಶೀಲೆ'ಯ ಪಾತ್ರದ ಮೂಲಕ ಗಟ್ಟಿಯಾದ ನಿಲುವಿನ ಆದರ್ಶದ ಪಾತ್ರಗಳು ಚಿತ್ರಿಸಿದ್ದಾರೆ.

'ನಭಾ' ಕಾದಂಬರಿಯಲ್ಲಿ 'ಆದರ್ಶ ರಮಣಿ' ನಭಾಳ ಚರಿತ್ರೆ ಎಂದು ಲೇಖಕಿ ಹೇಳುತ್ತಾಳೆ. ನಭಾ ಕಾದಂಬರಿಯಲ್ಲಿ ಹದಿನೆಂಟರ ಹರೆಯದಲ್ಲಿ ವಿಧವೆಯಾದ ನಭಾ ತನ್ನ ಪಾವಿತ್ರ್ಯವನ್ನು ಶೀಲವನ್ನು ಉಳಿಸಿಕೊಂಡ ಕಥೆ ಇದೆ. ಬಹಳ ಕುತೂಹಲದ ವಿಚಾರವೆಂದರೆ ವೈಧವ್ಯ ಈ ಕಾದಂಬರಿಯ ಕೇಂದ್ರ ವಿಷಯವಾದರೂ ವಿಧವೆಯರ ಕಟ್ಟುಪಾಡುಗಳನ್ನು ಕಿತ್ತೊಗೆದು ಅವಳಿಗೆ ವಿವಾಹ ಮಾಡಬಯಸುವವರಿಗೆ ವಿರೋಧವಾದ ನಿಲುವು ಇಲ್ಲಿನದು. ವೈಧವ್ಯ ಎನ್ನುವುದು ಪೂರ್ವಾರ್ಜಿತ ಕರ್ಮಫಲ ಎಂಬ ಪ್ರಾಚೀನ ನಂಬಿಕೆಯೇ ಇಲ್ಲಿನ ವಾದ. ಇದನ್ನು ಒಪ್ಪಿಕೊಂಡು ಅದಕ್ಕನುಗುಣವಾಗಿ ಬಾಳುವುದೇ ಪರಮಧರ್ಮ ಎಂಬುವುದು ಇಲ್ಲಿನ ತತ್ವ ವಿಧವಾವಿವಾಹದ ವಿಷಯ ಕಾದಂಬರಿಯೊಳಗೆ ಚರ್ಚಿತವಾಗಿದ್ದು, ಸಂಪ್ರದಾಯವಾದಿ ನಿಲುವು ಸ್ಥಾಪಿತವಾಗುತ್ತದೆ. ಆದರೆ ಅದು ಕೇಶಮುಂಡನೆಯಂತಹ ಸಮಸ್ಯೆಗಳನ್ನು ವಿಧವೆಯರು ಹೇಗೆ ಎದುರಿಸಬೇಕಾಗುತ್ತಿತ್ತು ಎಂಬುದರ ವಾಸ್ತವ ಚಿತ್ರಣವಿದೆ. ಅದಕ್ಕಿಂತಲೂ ಮುಖ್ಯವಾಗಿ ಆಕೆಯ ಸ್ಥಿರ–ಚರ ಆಸ್ತಿಯನ್ನು ಕಬಳಿಸಲು ಬಂಧುಗಳು ಹೇಗೆ ಹೊಂಚು ಹಾಕುವರು ಎಂಬ ಮಾರ್ಮಿಕವಾದ ಸನ್ನಿವೇಶವಿದೆ. ವಿಧವೆಯಾದ ನಭಾಳನ್ನು ಮದುವೆಯಾಗ ಬಯಸುವ ರಾಜಶೇಖರ ಕಾಮಾತುರನಾಗಿ ವರ್ತಿಸಿದರೆ ನಭಾ ಅತ್ಯಂತ ದಿಟ್ಟತನದಿಂದ ತನ್ನ ಸತಿತ್ವವನ್ನು ಕಾಪಾಡುವ ದೃಶ್ಯ ಉಜ್ವಲವಾಗಿದೆ. "ಈ ಸಂದರ್ಭದಲ್ಲಿ ನಭಾಳು ರಾಜಶೇಖರನಿಗೆ ಹೇಳುವ ಮಾತೊಂದು 'ನಿನ್ನಂತವನ ಪಾಂಡಿತ್ಯ ಪ್ರಭೆಗೆ ಧಿಕ್ಕಾರವಿರಲಿ ಹೋಗು, ಹುಚ್ಚ! ನಿನಗಷ್ಟು ಉನ್ಮಾದವಿದ್ದರೆ ವಿಧವಾ ಶ್ರಮದ ಸ್ವಯಂ ಪ್ರಭುತ್ವದ ಮರೆ ಹೋಗು."[೧೫] ಇಲ್ಲಿ ನಭೆಯು ರಾಜಶೇಖರನೊಡನೆ ವೇಶಾಗೃಹಕ್ಕೆ ಹೋಗು ಎಂದು ಹೇಳದೆ ವಿಧವಾಶ್ರಮದ ಸ್ವಯಂ ಪ್ರಭುತ್ವದವರ ಮರೆ ಹೋಗು ಎಂದದ್ದನ್ನು ಗಮನಿಸಬೇಕಾಗಿದೆ. ಲೇಖಕಿ ನಭಾಳ ಮೂಲಕವಾಗಿ ಸಮಕಾಲೀನವಾದ ವಾಸ್ತವ ವಿದ್ಯಾಮಾನದ ಬಗ್ಗೆ ಪತ್ರಿಕ್ರಿಯೆಯನ್ನು ನೀಡುತ್ತಿರಬಹುದು ಎಂಬ ಅನುಮಾನ ಮೂಡುತ್ತದೆ. ಕೆಲವು ವಿಧವಾಶ್ರಮಗಳು ಅನೈತಿಕವಾಗಿ ನಡೆಯುತ್ತಿದ್ದಿರಬಹುದು ಅಥವಾ ಆ ಬಗೆಯ ಅಪವಾದವಾದರೂ ಹುಟ್ಟಿರಬಹುದು. ಕಥಾನಾಯಕಿ ನಭಾ ಯಾವುದೇ ಬಗೆಯ ಆಮಿಷ ಅಥವಾ ಚಾಪಲ್ಯಕ್ಕೊಳಗಾಗದೇ ತನ್ನ ಸ್ವಾಮಿಯನ್ನು ಸ್ಮರಿಸಿದ ಆದರ್ಶದ ಹೊರೆ ಇದೆ.

'ವಿರಾಗಿಣಿ' ಕಾದಂಬರಿಯಲ್ಲಿ ನಭಾಳೇ ವಿರಾಗಿಣಿ ಎಂಬ ಹೆಸರಿನಲ್ಲಿ ಕಾಣಿಸಿಕೊಳ್ಳುತ್ತಾಳೆ. ಇದರ ಮುನ್ನುಡಿಯಲ್ಲಿ ವಿಧವೆಯರು ಎದುರಿಸಿದ ಕಷ್ಟ–ಸಂಕಷ್ಟಗಳನ್ನು ಮಾನಸಿಕ ವೇದನೆಗಳನ್ನು ತೀವ್ರವಾಗಿ ದಾಖಲಿಸಲಾಗಿದೆ. ತನ್ನ ಬಂಧುವಾದ ರಘುನಾಥನ ಆಶ್ರಯದಲ್ಲಿ ವಿರಾಗಿಣಿ ವಿದ್ಯಾಭ್ಯಾಸವನ್ನು ಪೂರೈಸಿ ಅಧ್ಯಾಪನ ವೃತ್ತಿಯನ್ನು ಕೈಗೊಳ್ಳುವುದು, ತನ್ನ ಪರಿಸರದ ಕೆಡಕುಗಳನ್ನು

ನಿವಾರಿಸಲು ತನ್ನ ತೇಜೋಪೂರ್ಣ ವ್ಯಕ್ತಿತ್ವದಿಂದ ಶ್ರಮಿಸುವುದು ಇತ್ಯಾದಿ ವಿಚಾರಗಳನ್ನು ಈ ಕಾದಂಬರಿಯಲ್ಲಿ ವಾಸ್ತವಿಕ ನೆಲೆಯಲ್ಲಿ ಚಿತ್ರಿಸಿದ್ದಾರೆ. ವಿರಾಗಿಣಿ ಯಾವುದೇ ಧರ್ಮವಿರುದ್ಧವಾದ ಕಾರ್ಯವನ್ನು ಕೈಗೊಳ್ಳದೇ ತಪಸ್ವಿಯಾಗಿ ಬಾಳಿದಳು. ವಿಧವೆಯರಿಗೆ ಇರಬೇಕಾದ ಏಕೈಕ ಆಯ್ಕೆ ಎಂದರೆ ತಪಸ್ವಿನಿಯಾಗಿ ಬಾಳುವುದು ವಿರಾಗಿಣಿಯ ಪಾತ್ರದ ಮೂಲಕ ಕಾದಂಬರಿ ಸಾರುತ್ತದೆ. ರಘುನಾಥನ ತಮ್ಮ ಸೌಬಲನು ವಿರಾಗಿಣಿಯ ಸಹವಾಸದಲ್ಲಿ ತನ್ನ ತಪ್ಪನ್ನು ತಿದ್ದಿಕೊಂಡು ಒಳ್ಳೆಯವನಾಗುತ್ತಾನೆ. ತುಂಗೆ ಸಹ ತನ್ನ ತಪ್ಪನ್ನು ಒಪ್ಪಿಕೊಂಡು ತನ್ನ ಭವಿಷ್ಯಕ್ಕೆ ಸುಮಾರ್ಗ ತೋರೆಂದು ಪ್ರಾರ್ಥಿಸುತ್ತಾಳೆ. ವಿರಾಗಿಣಿ ಎಲ್ಲರಿಗೂ ಆದರ್ಶದ ಮಾದರಿಯಾಗಿ, ರಘುನಾಥ ಹೊಸದಾಗಿ ಕಟ್ಟಿಸಿದ 'ನವಾನಂದ ಮಂದಿರ' ಎಂಬ ಶಾಲಾ ಆಶ್ರಮಕ್ಕೆ ವಿರಾಗಿಣಿ ಮುಖ್ಯೋಪಾಧ್ಯಾಯಿನಿ ಮತ್ತು ಅಧ್ಯಕ್ಷಿಣಿಯಾಗಿ ಅಧಿಕಾರ ವಹಿಸಿಕೊಂಡು ಆದರ್ಶ ವ್ಯಕ್ತಿಯಾಗಿದ್ದಾಳೆ.

'ವಿದ್ಯುಲ್ಲತಾ'ದಲ್ಲಿ ಶಿಕ್ಷಣ ಸ್ತ್ರೀಧರ್ಮ, ಧ್ಯೇಯ, ಕರ್ತವ್ಯಗಳ ಕುರಿತಾದ ಸೂಕ್ಷ್ಮ ವಿಚಾರಗಳ ಪ್ರತಿಪಾದನೆ ಇದೆ. ಮಣಿಮಾಲೆ ಇದರ ಕಥಾ ನಾಯಕಿ. ಇವಳದೇ ಕತೆ ಮಣಿಮಾಲೆಯಲ್ಲಿ ಮುಕ್ತಾಯಗೊಳ್ಳುತ್ತದೆ. ಎರಡೂ ಕಾದಂಬರಿಯಲ್ಲಿ ಬದುಕಿನ ಮೂರು ಹಂತಗಳು ಪ್ರಕಟವಾಗುವಂತೆ ತಂತ್ರವಿದೆ. ಬಾಲ್ಯದಲ್ಲಿಯೇ ಮಕ್ಕಳನ್ನು ಹಿರಿಯರು ಅವಳು ನಿನ್ನ ಹೆಂಡತಿಯಾಗುವಳು, ಇವನು ನಿನ್ನ ಗಂಡನಾಗುವನು ಎನ್ನುತ್ತಾ ಬೆಳೆಸುವ ಪದ್ಧತಿ ತೊಲಗಬೇಕು ಎನ್ನುವುದು ಲೇಖಕಿಯ ಆಶಯ. ಆದರ್ಶಗಳಿಗೆ ಅನುಗುಣವಾಗಿ ಪಾತ್ರಗಳ ಸೃಷ್ಟಿಯಾಗಿದೆ. ಹೆಣ್ಣು ಅಬಲೆಯಲ್ಲ, ಸಮರ್ಥಳೂ, ಬಲಾಢ್ಯಳೂ ಆಗಿ ಚಿತ್ರಿತಳಾಗಿದ್ದಾಳೆ. ವಿವಾಹಿತೆ ಮಣಿಮಾಲೆಯನ್ನು ಒಲಿಸಿಕೊಳ್ಳುವ ಪ್ರಯತ್ನದಲ್ಲಿ ಅಮರನಾಥ ಸಫಲನಾಗುವುದಿಲ್ಲ. ಅವಳಿಗೆ ಚಳ್ಳೆ ಹಣ್ಣು ತಿನ್ನಿಸಿ ಕಣ್ಮರೆಯಾದ ಮಣಿಮಾಲೆ ಹರಿಣಿ ಎಂಬ ಹೆಸರು ಬದಲಾಯಿಸಿಕೊಂಡು, ಸಮಾಜ ಸುಧಾರಕ ಗೋಪಿ ನಾಥರಾಯರ ಬಳಿ ಆಶ್ರಯ ಪಡೆದು ವ್ಯಾಸಂಗ ಮುಗಿಸುವುದು ಆದರ್ಶದ ಪ್ರಮುಖ ಅಂಶ. ಇಲ್ಲಿ ಮಣಿಮಾಲೆ ಆತ್ಮವಿಶ್ವಾಸ ತುಂಬುವ ಕೆಲಸ ಮಾಡುತ್ತಾಳೆ.

'ಮಣಿಮಾಲಾ' ಕಾದಂಬರಿಯಲ್ಲಿ ರಾಮಾಯಣದಲ್ಲಿ ಸೀತೆ ತನ್ನ ಪಾತಿವ್ರತ್ಯವನ್ನು ಅಗ್ನಿಪ್ರವೇಶ ಮಾಡಿ ಸಾಬೀತುಗೊಳಿಸುವಂತೆ ಇಲ್ಲಿಯ ಕಥಾನಾಯಕಿ ಮಣಿಮಾಲೆ ಸಾಕ್ಷ್ಯಾಧಾರ ಸಮೇತ ತಾನು ನಿರಪರಾಧಿ, ಪರಿಶುದ್ಧೆ ಎಂಬುದನ್ನು ಗಂಡನಿಗೆ ಹಾಗೂ ಸಮಾಜಕ್ಕೆ ತೋರ್ಪಡಿಸುವುದೇ ಕಥಾ ಹಂದರ. ಅಮರನಾಥನಿಂದ ಅಪಹರಿಸಿಟ್ಟ ಮಣಿಮಾಲೆ ಅಡವಿಯಲ್ಲಿ ದರೋಡೆಕೋರರ ಕೈಗೆ ಸಿಕ್ಕುತ್ತಾಳೆ. ಆಕಸ್ಮಿಕವಾಗಿ ಪೊಲೀಸರ ಕಣ್ಣಿಗೆ ಬಿದ್ದು ಅಲ್ಲಿಂದ ತಪ್ಪಿಸಿಕೊಂಡು ಓಡಿ ಹೋಗುತ್ತಾಳೆ. ಆಶ್ರಯವಿತ್ತ ಗೋಪಿನಾಥರು ಅಭಿಮಾನದ ಪ್ರೇಮದ ಪುತ್ರಿ ಎಂದೇ ಭಾವಿಸಿ ಪ್ರೌಢ ವ್ಯಾಸಂಗಕ್ಕೆ ಅವಕಾಶ ಕಲ್ಪಿಸುತ್ತಾರೆ. ಮಣಿಮಾಲೆ ಹರಿಣಿ ಎಂದು ಹೆಸರು ಬದಲಾಯಿಸಿಕೊಂಡು ತನ್ನನ್ನು ತಾನು ರಕ್ಷಿಸಿಕೊಳ್ಳುವುದು ವಾಸ್ತವದ ಅಂಶ.

ದುಷ್ಟನೂ, ದುರಾಚಾರಿಯೂ, ಸ್ವಾರ್ಥಿಯೂ ಆದ ಅಮರನಾಥನಿಗೆ ಅವನ ತಪ್ಪಿನ ಅರಿವುಂಟು ಮಾಡಿ ತನ್ನ ಸಂಸಾರಿಕ ಜೀವನ ರಥ ಚಾಲನೆಗೊಳ್ಳಲು ಅವಳು ಎದುರಿಸುವ ಎಡರುತೊಡರುಗಳು, ಕಷ್ಟಗಳು, ನಿಭಾಯಿಸುವಲ್ಲಿ ಕೆಲಸದಲ್ಲಿ ತೋರುವ ದಕ್ಷತೆ ಇತ್ಯಾದಿ ಅಂಶಗಳು ಆದರ್ಶದ ಪ್ರತೀಕವಾಗಿ ಗೋಚರಿಸುತ್ತಾಳೆ ಮಣಿಮಾಲಾ.

'ಮಾತೃನಂದಿನಿ'ಯಲ್ಲಿ ಅವಿವಾಹಿತೆಯಿಂದ ತರುಣಿ ನಂದಿನಿ ಈ ಕಾದಂಬರಿಯ ನಾಯಕಿ, ವಿದ್ಯಾವಂತಳಾದ ಆಕೆ ತನ್ನ ಆಶ್ರಯದಾತ ನಾಗೇಶರಾಯನ ಜೊತೆ ಬಾಲ್ಯವಿವಾಹ, ವರದಕ್ಷಿಣೆ, ಮದುವೆಯ ದುಂದುವೆಚ್ಚ ಇತ್ಯಾದಿ ಸಮಸ್ಯೆಗಳ ವಿರುದ್ಧ ಹೋರಾಡುತ್ತಾಳೆ. ಅವರಿಬ್ಬರೂ ಗುರುಮಠದ ಬಹಿಷ್ಕಾರಕ್ಕೆ ಒಳಗಾದರೂ ಹಿಂಜರಿಯುವುದಿಲ್ಲ. ಹಾಗಾಗಿ ವಾಸ್ತವ ಮತ್ತು ಆದರ್ಶ ಒಟ್ಟೊಟ್ಟಿಗೆ ಸಮ್ಮಿಲನವಾಗಿದೆ. ಇಲ್ಲಿ ಉಪದೇಶ, ನೀತಿ, ಆದರ್ಶಗಳ ಭಾರದಿಂದ ಬಾಗಿರುವ ಈ ಕಥೆ ಅನೇಕ ಸಾಮಾಜಿಕ ಸುಧಾರಣೆಗಳನ್ನು ಪ್ರತಿಪಾದಿಸುತ್ತದೆ. ನಾಗೇಶರಾಯನು ಆದರ್ಶದ ಪ್ರತೀಕನಾಗಿ ಕಂಡುಬರುತ್ತಾನೆ. ಸತ್ಯ, ನ್ಯಾಯ, ಧರ್ಮ, ಹೋರಾಟ ನಡೆಯುವ ದಿಟ ಪಾತ್ರವಾಗಿ ಚಿತ್ರಿಸಿದ್ದಾರೆ. ಕಾದಂಬರಿಯ ಎಲ್ಲಾ ಪಾತ್ರಗಳೂ ನಂದಿನಿಯ ಪ್ರಭಾವಕ್ಕೆ ಸೆಳೆಯಲ್ಪಟ್ಟಿವೆ. ಆದರ್ಶ ಗೃಹಿಣಿಯಾದ ಚಿತ್ರಕಲೆ, ನಿರ್ಮತ್ಸರ, ಪ್ರೇಮಮಯಿಯಾದ ಚಂದ್ರಮತಿ ಇವರುಗಳ ಪಾತ್ರ ಆದರ್ಶಕ್ಕೆ ಸೋತು ಹೋಗಿವೆ. ಸನ್ನಿವೇಶ, ಸಂದರ್ಭವನ್ನು ಕಣ್ಣಿಗೆ ಕಟ್ಟುವಂತೆ ವರ್ಣನೆ ಮಾಡುವ ಪ್ರತ್ಯಕ್ಷ ವರದಿಯನ್ನು ಓದುಗರಿಗೆ ಬೇಸರವಾಗದಂತೆ ನೀಡುವ ಜಾಣ್ಮೆ, ವಾಸ್ತವವನ್ನು ಸೂಚಿಸುತ್ತದೆ.

'ಪೂರ್ಣಕಲಾ' ಕಾದಂಬರಿಯಲ್ಲಿ ಕೈ ತುಂಬಾ ಹಣ ಓಡಾಡುವ ಶ್ರೀಮಂತರ ಮಕ್ಕಳು ಓದುವುದರ ಕಡೆಗೆ ಗಮನ ಹರಿಸುವುದಿಲ್ಲ. ಅಂಕೆ ಶಂಕೆ ಇಲ್ಲದೇ ಹತೋಟಿ ಮೀರಿ ಹಾಳಾಗುತ್ತಾರೆ ಎಂಬುದನ್ನು ದೃಷ್ಟಾಂತದ ಮೂಲಕ ವಾಸ್ತವಿಕ ಅಂಶಗಳನ್ನು ನಿರೂಪಿಸಿರುವುದು ಕಂಡುಬರುತ್ತದೆ. ಅವರೇ ಪೂರ್ಣಕಲೆಯ ಮೂಲಕ ಉಪದೇಶ ನೀಡಿಸುತ್ತಾರೆ ಮಧುಮಿತ್ರನಿಗೆ. ಇಲ್ಲಿ ಸ್ತ್ರೀಯರಿಗೆ ಅವರ ಸ್ವರೂಪ, ಸ್ವಧರ್ಮ, ಧ್ಯೇಯ, ಕರ್ತವ್ಯಗಳನ್ನು ತಿಳಿಯುವ ಮಟ್ಟಿಗೆ ಶಿಕ್ಷಣವು ಆದರ್ಶಗಳನ್ನು ಲೇಖಕಿ ತಿಳಿಸುತ್ತಾರೆ. ವಿದ್ಯಾರ್ಥಿಗಳಿಗೆ ಬ್ರಹ್ಮಚರ್ಯದ ಮಹತ್ವವನ್ನು ಮನವರಿಕೆ ಮಾಡಿಕೊಟ್ಟಿದೆ.

**ಕಲ್ಯಾಣಮ್ಮನವರ ಕಾದಂಬರಿಗಳಲ್ಲಿ ಆದರ್ಶ ಮತ್ತು ವಾಸ್ತವ**

'ಪ್ರಿಯಂವದೆ' ಕಾದಂಬರಿಯ ಶೀರ್ಷಿಕೆಯ ಜೊತೆ ವರದಕ್ಷಿಣೆ ಪಿಡುಗಿನ ವ್ಯಾಪ್ತಿಯ ಬಗ್ಗೆ ಹೇಳುತ್ತಾರೆ. ಈ ಕಾದಂಬರಿಯಲ್ಲಿ ಸರಳವಾದ ಪ್ರೇಮಮಯ ದಾಂಪತ್ಯದ ಆದರ್ಶವನ್ನು

ಎತ್ತಿ ಹಿಡಿಯುತ್ತಾರೆ. ವರದಕ್ಷಿಣೆಗಾಗಿ ಅತ್ತೆಯಿಂದ ಪೀಡಿತಳಾದ ಪ್ರಿಯಂವದಾ ಕೊನೆಗೆ ತನ್ನ ವಿದ್ಯೆ ಹಾಗೂ ಪ್ರೀತಿಯ ಬಲಗಳಿಂದ ಗಂಡನ ಕುಟುಂಬದವರನ್ನು ತಿದ್ದಿ ಸಂಸಾರ ಸುಖವನ್ನು ಸಾಗಿಸುವುದು ಆದರ್ಶ ಪಾತ್ರದ ಮೂಲಕ ಚಿತ್ರಿಸುತ್ತಾರೆ.

'ನಿರ್ಭಾಗ್ಯ ವನಿತೆ' ಅಥವಾ 'ಇಂದಿರಾ' ಕಾದಂಬರಿಗಳಲ್ಲಿ ಲೇಖಕಿಯ ವೈಯಕ್ತಿಕ ಅನುಭವಕ್ಕೆ ಹತ್ತಿರವಾದದ್ದು. ಬಾಲ್ಯವಿವಾಹದ ದುರಂತ ಪರಿಣಾಮ, ವೈಧವ್ಯದ ಕಷ್ಟಗಳನ್ನು ಮಾರ್ಮಿಕವಾಗಿ ತೆರೆದಿಡಲು ಪ್ರಯತ್ನಿಸುವ ಕೃತಿ. ಬಾಲ್ಯವಿವಾಹದ ದುರಂತ ಚಿತ್ರಣದೊಂದಿಗೆ ವೈಧವ್ಯದ ಕಷ್ಟ ನಷ್ಟಗಳನ್ನು ಒಳಗೊಂಡು ವಿವೇಚನೆಗೆ ತೊಡಗಿ ವಿಧವೆಯ ಉದ್ಧಾರಕ್ಕಾಗಿಯೇ ಶ್ರಮಿಸುವುದು. ಆ ಕಾಲದ ವಾಸ್ತವ ಅಂಶಗಳಿಗೆ ಸ್ಪಂದಿಸಿರುವ ಅಂಶ ಕಾಣುತ್ತದೆ. ಕಥಾನಾಯಕಿ ಇಂದಿರೆ ಮತ್ತು ಸುಂದರೇಶ ಬಾಲ್ಯದ ನಿಕಟತೆ. ಅವರಿರ್ವರಲ್ಲಿ ಗಾಢ ಪ್ರೇಮವನ್ನು ಬೆಳೆಯಿಸಿದರೂ ಆಕೆ ಅವನ ವಧುವಾಗದೆ ದುರ್ಬಲನಾದ ನಾರಾಯಣನ ವಧುವಾಗುವಲ್ಲಿ ಇಂದಿರೆಯ ಅಜ್ಜಿಯ ಹಟ ಕಾರಣವಾಗುತ್ತದೆ. ಇಂದಿರೆ ನಾರಾಯಣನನ್ನು ವರಿಸಿದರೂ ಆಕೆಯ ಮನಸ್ಸೆಲ್ಲ ಸುಂದರೇಶನಲ್ಲಿ ಲೀನವಾಗಿದ್ದ ವಿಚಾರ ಕಾದಂಬರಿಯಲ್ಲಿ ಪ್ರಸ್ತಾಪಗೊಳ್ಳುತ್ತದೆ. ಮದುವೆಯಾದ ಬಳಿಕ ಆಕೆ ಸುಂದರೇಶನನ್ನು ಮರೆತಳು ಪತಿವ್ರತೆಯಾಗಿ ನಾರಾಯಣನನ್ನು ಧ್ಯಾನಿಸಿದಳು. ಇದು ಆದರ್ಶ ಪತಿಯ ಪಾತ್ರ ನಿರೂಪಣೆಗೆ ಸಾಕ್ಷಿಯಾಗುತ್ತದೆ.

ಆದರೇ ಇಲ್ಲಿ ಅದರ ತದ್ವಿರುದ್ಧ ಸುಂದರೇಶನನ್ನು ಜಪಿಸುವುದು, ಇಂದಿರೆಯು ಸುಂದರೇಶನಿಗೆ ಪತ್ರ ಬರೆದು ತನ್ನನ್ನು ಅವನ ಬಳಿ ಕರೆಸಿಕೊಳ್ಳುವಂತೆ ಕೇಳಿಕೊಳ್ಳುತ್ತಾಳೆ. ಇದು ವಾಸ್ತವದ ಹೆಣ್ಣಿನ ತುಮುಲಗಳನ್ನು ಚಿತ್ರಿಸಿದ್ದಾರೆ. 'ಸುಖಲತಾ' ಕಾದಂಬರಿಯಲ್ಲಿ ಕಾಲ್ಪನಿಕ ಕತೆಯೆನಿಸಿದರೂ ಸಮಕಾಲೀನ ವಿಚಾರಗಳ ಬಗ್ಗೆ ಸಾಂದರ್ಭಿಕವಾಗಿ ಟೀಕೆ ಟಿಪ್ಪಣಿಗಳಿವೆ. ತಾಯಿ ಇಲ್ಲದ ತಬ್ಬಲಿ ಸುಖಲತೆ ಮಲತಾಯಿಯಿಂದ ಅನುಭವಿಸುವ ಕಷ್ಟ, ಸುಖಲತೆಯ ತಂದೆ ಎಳೆಪ್ರಾಯದ ಹೆಂಡತಿಯ ಕೈಗೊಂಬೆಯಾಗಿರುವುದು. ಸುಖಲತೆಯ ಸುಖವನ್ನು ಕಡೆಗಣಿಸಿರುವುದು ಇತ್ಯಾದಿ ವಿಚಾರಗಳ ನಿರೂಪಣೆಯಲ್ಲಿ ವಾಸ್ತವತೆಯನ್ನು ನೈಜವಾಗಿ ಚಿತ್ರಿಸುವುದರ ಮೂಲಕ ಕಥೆ ಬಿಚ್ಚಿಟ್ಟಿದ್ದಾರೆ. ಸುಖಲತೆ ಮತ್ತು ಪದ್ಮಲತೆ ಇಲ್ಲಿ ಪ್ರಧಾನ ಪಾತ್ರಗಳಾಗಿವೆ. ಅದರಲ್ಲೂ ಜಾಣ್ಮೆ, ಕರ್ತೃತ್ವ ಶಕ್ತಿ ಸನ್ನಿವೇಶಗಳು ನಿಭಾಯಿಸುವ ಕೌಶಲ, ಅರ್ಪಣಾ ಮನೋಭಾವ, ಸ್ವಾರ್ಥ, ತ್ಯಾಗ ಇತ್ಯಾದಿ ಗುಣಗಳಿಂದ ಪದ್ಮಲತೆಯ ಪಾತ್ರ ಅತ್ಯಂತ ಕ್ರಿಯಾಶೀಲವಾಗಿದೆ. ಸುಖಲತೆಯನ್ನು ಇಂದಿನ ಮಹಿಳೆಯರಿಗೆ ಆದರ್ಶ ಪ್ರಾಯಳನ್ನಾಗಿ ಚಿತ್ರಿಸುವ ಉದ್ದೇಶ ಲೇಖಕಿಯದು. ಆಕೆ ಸತಿ ಧರ್ಮವನ್ನು ಪಾಲನೆ ಮಾಡುತ್ತಾಳೆ. ಸಾಮಾಜಿಕ ಕಾರ್ಯಗಳಲ್ಲಿ ಭಾಗಿಯಾಗುತ್ತಾಳೆ. ಹೀಗೆ ಆದರ್ಶ ಮತ್ತು ವಾಸ್ತವದ ಚಿತ್ರಣವನ್ನು ಲೇಖಕಿ ಸಮರ್ಥವಾಗಿ ನಿಭಾಯಿಸಿದ್ದಾರೆ.

**ಸದ್ಗುಣಿ ಕೃಷ್ಣಬಾಯಿ ಮತ್ತು ಉತ್ತಮ ಗೃಹಿಣಿ ಕಾದಂಬರಿಯಲ್ಲಿ ಆದರ್ಶ ಮತ್ತು ವಾಸ್ತವ**

ಶೀರ್ಷಿಕೆಯಲ್ಲಿಯೇ ಹದಿಬದೆಯ ಧರ್ಮಕ್ಕಿರುವ ಸಾಮ್ಯವನ್ನು ಗುರುತಿಸಬಹುದು. ಅದಕ್ಕನುಗುಣವಾಗಿ ಸದ್ಗೃಹಿಣಿ ಹೇಗಿರಬೇಕೆಂಬ ದೀರ್ಘವಾದ ವಿವರಣೆ ಪ್ರಸ್ತಾವನೆಯಲ್ಲಿದೆ. ಕಾದಂಬರಿಯ ಮುಖ್ಯ ಪಾತ್ರ ಕೃಷ್ಣಬಾಯಿಯು ಆದರ್ಶಕ್ಕೆ ಮಾದರಿಯಾಗಿದ್ದಾಳೆ.

ಕೃಷ್ಣಾಬಾಯಿ, ವಿದ್ಯಾವಂತಳು, ಮದುವೆಯ ಬಳಿಕ ಸಂಸಾರಕ್ಕೆ ಒದಗಿದ ಸಂಕಷ್ಟದ ಸಂದರ್ಭದಲ್ಲಿ ಸೋಲದೇ ತಾಳ್ಮೆಯನ್ನು ಚಾತುರ್ಯದಿಂದ ನಿಭಾಯಿಸುತ್ತಾಳೆ. ಹಣದ ವಿಚಾರದಲ್ಲಿ ಎಚ್ಚರಿಕೆಯಿಂದ ವ್ಯವಹರಿಸುವುದು, ಅಕ್ಕನ ಮಕ್ಕಳಿಗೆ ಯೋಗ್ಯ ಶಿಕ್ಷಣವನ್ನು ನೀಡುತ್ತಾಳೆ. ಹೆಣ್ಣನ್ನು ವಿವಾಹಕ್ಕೆ ಯೋಗ್ಯ ವಧುವಾಗಿಸುವ ಅಥವಾ ಗೃಹಿಣಿಯಾಗಿಸುವ ಶಿಕ್ಷಣ ಎಂಬ ಮಿತಿ ಇಲ್ಲಿನ ಸ್ತ್ರೀ ಶಿಕ್ಷಣದ ಆದರ್ಶಕ್ಕಿದೆ. ಹೆಣ್ಣಿನ ಅಥವಾ ಗೃಹಿಣಿಯ ಎರಡು ಮಾದರಿಗಳನ್ನು ಯಶೋಧಬಾಯಿ ಹಾಗೂ ಕೃಷ್ಣಾಬಾಯಿಯ ಪಾತ್ರಗಳಲ್ಲಿ ನೀಡಿ ಅವರಲ್ಲಿ ಇದು ಪಾಲಿಸಬೇಕಾದ ಆದರ್ಶ ಮಾದರಿ ಎಂಬ ನೀತಿಪಾಠವಿದೆ. ವಿನಯ, ವಿಧೇಯತೆ, ಆದರ್ಶಸತಿಯ ಸನಾತನ ಮಾದರಿಗೆ ಬುದ್ಧಿವಂತಿಕೆ, ವ್ಯವಹಾರ ಕುಶಲತೆ, ಧೈರ್ಯ, ಕರ್ತವ್ಯ ಶಕ್ತಿಯನ್ನು ಕೊನೆಗೊಳಿಸಿ ವಿದ್ಯಾವಂತೆ ಹೆಂಡತಿಯು ಗಂಡನ ವೃತ್ತಿ ಜೀವನದ ಯಶಸ್ಸಿಗೂ ಸಹಭಾಗಿಯಾಗುತ್ತಾಳೆಂಬ ಆದರ್ಶದ ಭರವಸೆ ತಾಯಿಯಲ್ಲಿ ಗುರುವನ್ನು ಕಾಣುವ ಸನಾತನ ಆದರ್ಶವನ್ನು ಬೆಂಬಲಿಸುವ ಲೇಖಕಿ ಒಬ್ಬ ಸುಗುಣಿಯಾದ ತಾಯಿಯು ನೂರಾರು ಶಿಕ್ಷಕರಿಗಿಂತ ಹೆಚ್ಚು. ಆಕೆಯ ಯೋಗ್ಯ ಶಿಕ್ಷಣವೇ ಮಕ್ಕಳ ಮುಂದಿನ ಕ್ಷೇಮಕ್ಕೆ ಅಥವಾ ಸುಖ-ದುಃಖಗಳಿಗೆ ಕಾರಣವು ಮತ್ತು ಆದರ್ಶ ಪತಿ-ಮಾತೆಯ ಕರ್ತವ್ಯಗಳನ್ನು ಎರಡು ಕಣ್ಣಾಗಿಸಿಕೊಂಡ ಹೆಣ್ಣು ಕುಟುಂಬಕ್ಕೆ ತನ್ನ ವಿದ್ಯೆ, ಬುದ್ಧಿ-ಪ್ರತಿಭೆ-ಶಕ್ತಿಯನ್ನು ಧಾರೆಯೆರೆದು ಸದ್ಗೃಹಿಣಿಯಾಗಿ ಸಾರ್ಥಕಳಾಗಬೇಕೆನ್ನುವ ಕಾದಂಬರಿಯ 'ಸ್ತ್ರೀ' ಧರ್ಮದ ಮಾದರಿಯ ಆದರ್ಶವನ್ನು ವಾಸ್ತವದ ಕತೆಗಳಿಂದ ನಿರೂಪಿಸಿರುವುದು ಪ್ರಮುಖವಾದ ಅಂಶವೆಂದು ಹೇಳಬಹುದು.

**ಕೊನೆಟಿಪ್ಪಣಿಗಳು**

೧. ಆಮೂರ ಜಿ.ಎಸ್., **ಕನ್ನಡ ಕಥನ ಸಾಹಿತ್ಯ ಕಾದಂಬರಿ,** ಪು.೪೮.

೨. ಶಿವರಾಮ ಪಡಿಕ್ಕಲ್, **ನಾಡುನುಡಿಯ ರೂಪಕ,** ಪು.೧೨.

೩. ಅದೇ, ಪು.೨೯.

೪. ವಿವೇಕ ರೈ ಬಿ.ಎ.(ಸಂ), **ಕನ್ನಡ ಮೊದಲ ಕಾದಂಬರಿಯ ಹೆಜ್ಜೆಗಳು,** ಪು.

೫. ಅಶೋಕ ಟಿ.ಪಿ., **ವಾಗ್ದೇವಿ,** ಪ್ರಸ್ತಾವನೆ.

೬. ಆಮೂರ ಜಿ.ಎಸ್., **ಕನ್ನಡ ಕಥನ ಸಾಹಿತ್ಯ ಕಾದಂಬರಿ,** ಪು.೩೯

೭. ಗಿರಡ್ಡಿ ಗೋವಿಂದರಾಜ(ಸಂ), **ಯುಗಧರ್ಮ ಹಾಗೂ ಸಾಹಿತ್ಯ ದರ್ಶನ,** ಪು.೨೧.

೮. ಅದೇ, ಪು.೨೦೫.

೯. ಹಳೆಮನೆ ರಾಜಶೇಖರ, **ಕನ್ನಡ ಕಾದಂಬರಿಯ ಚಾರಿತ್ರಿಕ ಬೆಳವಣಿಗೆ,** ಪು.೧೩.

೧೦. ಅಶೋಕ ಟಿ.ಪಿ.(ಸಂ), **ಶಿವರಾಮಕಾರಂತ,** ಪು.೧೧೦.

೧೧. ಕೀರ್ತನಾಥ ಕುರ್ತಕೋಟಿ, **ಸಾಹಿತ್ಯ ಮತ್ತು ಯುಗಧರ್ಮ,** ಪು.೩೧೦.

೧೨. ಮೀರಾ ಎಲ್.ಜಿ., **ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ,** ಪು.೨೭.

೧೩. ಕುವೆಂಪು, **ಮಲೆಗಳಲ್ಲಿ ಮದುಮಗಳು,** ಪು.೨೧೫.

೧೪. ತಿರುಮಲಾಂಬಾ, **ಅಬಲಾ ದೌರ್ಜನ್ಯ,** ಪು.೯೮.

೧೫. ವಿಜಯಾದಬ್ಬೆ(ಸಂ), **ಹಿತೈಷಿಣಿ ಹೆಜ್ಜೆಗಳು,** ಪು.೭೪.

ಅಧ್ಯಾಯ ಹತ್ತು

# ಕಾದಂಬರಿಗಳಲ್ಲಿ ಸಂಪ್ರದಾಯ ಮತ್ತು ಆಧುನಿಕತೆ

**ಇಂದಿರಾಬಾಯಿ** : ೧೮೯೯
**ವಾಗ್ದೇವಿ** : ೧೯೦೫
**ಇಂದಿರೆ** : ೧೯೦೮
**ಮಾಡಿದುಣ್ಣೋ ಮಹಾರಾಯ:** ೧೯೧೫

ಈ ಕಾದಂಬರಿಗಳನ್ನು ಆಯ್ದು ಒಂದೇ ಕಡೆ ಅಧ್ಯಯನಕ್ಕೆ ಒಳಪಡಿಸಲು ಕಾರಣವೇನೆಂದರೆ ಇವು ಮೊದಲ ಹಂತದಲ್ಲಿ ಕಾಣಿಸಿಕೊಂಡ ಸ್ವತಂತ್ರ ಸಾಮಾಜಿಕ ಕಾದಂಬರಿಗಳು. ಇವುಗಳ ಲೇಖಕರು ಮೊದಲ ತಲೆಮಾರಿನವರು. ಆಧುನಿಕ ಕನ್ನಡ ಕಾದಂಬರಿ ಸಾಹಿತ್ಯವನ್ನು ರಚಿಸುವುದರ ಮೂಲಕ ಬಲಪಡಿಸಿದವರು. ಬ್ರಿಟಿಷ್ ಆಡಳಿತವಿದ್ದ ಕಾಲಾವಧಿಯಲ್ಲಿ ಉಂಟುಮಾಡಿದ ಸಮಾಜದಲ್ಲಿಯ ಪರಿಣಾಮಗಳನ್ನು ಅನುಭವಿಸಿದವರು. ಇವರಿಗೆ ತಮ್ಮ ಸ್ಥಳೀಯ ಬದುಕು, ಸಂಪ್ರದಾಯ ಮತ್ತು ನಂಬಿಕೆಗಳ ಜೊತೆಗೆ ಬದುಕುತ್ತಿದ್ದಾಗ ಬ್ರಿಟಿಷ್ ವಸಾಹತುಶಾಹಿ ಆಧುನಿಕತೆಯನ್ನು ಸಮಾಜದಲ್ಲಿ ತರುವ ಪ್ರಯತ್ನ ಮಾಡಿದಾಗ ಅದರಿಂದ ಉಂಟಾದ ಸಂಘರ್ಷಗಳನ್ನು ಅನುಭವಿಸಿದವರು. ಸಂಪ್ರದಾಯ ಮತ್ತು ಆಧುನಿಕತೆಯ ಜೊತೆಗೆ ಸಾಮಾಜಿಕ ಬದ್ಧತೆಯನ್ನು ಗಮನದಲ್ಲಿಟ್ಟುಕೊಂಡು ಸಾಹಿತ್ಯವನ್ನು ರಚಿಸಿದವರು ಮತ್ತು ಸಾಮಾಜಿಕ ಸುಧಾರಣೆಯಲ್ಲಿ ಅತೀವ ಆಸಕ್ತಿಯನ್ನು ಹೊಂದಿದ್ದರು. ಇವರು ಸ್ತ್ರೀ ಸಮಸ್ಯೆಯನ್ನು ಸಹ ಅಷ್ಟೇ ಗಂಭೀರವಾಗಿ ಪರಿಗಣಿಸಿದ್ದರು. ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ವೈಧವ್ಯ, ಕೇಶಮುಂಡನೆ, ವಿಧವಾ ವಿವಾಹದಂತಹ ಹಲವು ಸಮಸ್ಯೆಗಳು ಕಾದಂಬರಿಯ ಮುಖ್ಯ ವಸ್ತುಗಳಾದವು.

## ಸಂಪ್ರದಾಯ ಮತ್ತು ಆಧುನಿಕತೆ

೧೯ನೇ ಶತಮಾನದ ಆರಂಭದಲ್ಲಿ ನಡೆಯುತ್ತಿದ್ದ ಸುಧಾರಣೆಗಳು ಈ ಲೇಖಕರ ಮೇಲೆ ಪ್ರಭಾವ ಬೀರಿವೆ. ಬ್ರಿಟಿಷ್ ಆಡಳಿತ ಹಾಗೂ ಶಿಕ್ಷಣದಿಂದಾಗಿ ಉದಯಿಸಿದ ಮಧ್ಯಮವರ್ಗ

ಹಳೆಯ ಸಾಮಾಜಿಕ ರೂಢಿಗಳ ಬಗ್ಗೆ, ಧಾರ್ಮಿಕ ಡಂಭಾಚಾರಗಳ ಬಗ್ಗೆ, ಹಿಂದೂ ಧರ್ಮದ ಅನಿಷ್ಟಗಳ ಬಗ್ಗೆ ಪ್ರಶ್ನೆ ಮಾಡತೊಡಗಿದವು. ಸುಶಿಕ್ಷಿತ ವರ್ಗವು ಸಾಮಾಜಿಕ ಸುಧಾರಣೆಯತ್ತ ಒಲಿಯಿತು. ಜೊತೆಗೆ ಶಿಕ್ಷಣ ಪಡೆದು ಬ್ರಿಟಿಷ್ ಆಡಳಿತದಲ್ಲಿ ಭಾಗಿಯಾಗಿದ್ದ ವಿದ್ಯಾವಂತ ವರ್ಗವು ಸಂಪೂರ್ಣ ಸಂಪ್ರದಾಯಕತೆಯನ್ನು ತಿರಸ್ಕರಿಸಲಿಲ್ಲ. ಆಡಳಿತದ ಹೆಸರಿನಲ್ಲಿ ಸಾಮಾನ್ಯ ಜನರನ್ನು ಶೋಷಣೆ, ಮೋಸ, ವಂಚನೆಗೆ ಒಳಪಡಿಸುತ್ತಿದ್ದರು. ಸುಧಾರಣಾವಾದಿಗಳ ಪ್ರಭಾವಕ್ಕೆ ಅನುಗುಣವಾಗಿ ಅಧಿಕಾರಿ ವರ್ಗದ ಭ್ರಷ್ಟತೆಯುನ್ನು ಗುಲ್ವಾಡಿಯವರು ಅನಾವರಣಗೊಳಿಸಿರುವರು. ಅದಕ್ಕೆ ಇಂದಿರಾಬಾಯಿ ಕಾದಂಬರಿಯಲ್ಲಿ ಧರ್ಮ ಮತ್ತು ಹೊಸದಾಗಿ ಹುಟ್ಟಿಕೊಂಡಿದ್ದ ಅಧಿಕಾರಿ ವರ್ಗದವರ ಶೋಷಣಾ ಕ್ರಮವನ್ನು ಗುಲ್ವಾಡಿಯವರು ಈ ಕಾದಂಬರಿಯಲ್ಲಿ ಚಿತ್ರಿಸುತ್ತಾರೆ.

ಈ ಸಂಪ್ರದಾಯವು ಆಚಾರ, ವಿಚಾರ, ನಂಬಿಕೆ, ನಿಷೇಧಗಳು, ಸ್ತ್ರೀಯರ ಸ್ವಭಾವ ಗುಣಲಕ್ಷಣಗಳನ್ನು ನೇತ್ಯಾತ್ಮಕವಾಗಿಯೇ ನಿರೂಪಿಸುವ ಪುರುಷ ಆಲೋಚನೆ ಮತ್ತು ನಿರ್ಣಯಗಳು ವಾಸ್ತವವನ್ನು ತಿರುಚಿದ ಸ್ವಹಿತಾಸಕ್ತಿಯ ಆರೋಪಿತ ಕಲ್ಪನೆಗಳಾಗಿರುವುದನ್ನು ಮೌಖಿಕ ಪರಂಪರೆಯ ಅನೇಕ ಸ್ತ್ರೀ ಮಾದರಿಗಳು ಖಚಿತಪಡಿಸುತ್ತವೆ. ಈ ಸಂಪ್ರದಾಯ ಎನ್ನುವುದು ನಂಬಿಕೆ, ಆಚರಣೆಗಳಿಗೆ ಸಂಬಂಧಿಸಿದ್ದು. ಸಂಪ್ರದಾಯದ ಹೆಸರಿನಲ್ಲಿ ಹೆಣ್ಣಿನ ರೂಪ, ಗುಣ, ಸ್ವಭಾವ, ಒಳಿತು, ಕೆಡುಕು, ಶುಭ, ಅಶುಭ, ಇತ್ಯಾದಿ ನಂಬಿಕೆಗಳ ಹಣೆಪಟ್ಟಿ ಅಂಟಿಸಿ, ಮಹಿಳೆಯರ ಒಟ್ಟು ಚಲನೆಯನ್ನು ನಿಯಂತ್ರಿಸುವುದಾಗಿದೆ. ಬಂಜೆತನವನ್ನು ಅಶುಭವೆಂದು, ಹೆಣ್ಣಿನ ದೇಹವನ್ನು ಮೈಲಿಗೆಯೆಂದು ಭಾವಿಸುವ, ಧಾರ್ಮಿಕ ಸಾಮಾಜಿಕ ಆಚರಣೆಗಳಿಂದ ಹೆಣ್ಣನ್ನು ದೂರವಿಡುವ ಅನೇಕ ಅಸಮಾನ, ಅವಾಸ್ತವ ನಂಬಿಕೆಗಳು ಹಿಂದಿನಿಂದಲೂ ಸಂಪ್ರದಾಯವನ್ನಾಗಿ ಆಚರಿಸಿ ಮಹಿಳೆಯನ್ನು ನಿರಾಕರಿಸುವುದು ಕಾದಂಬರಿಗಳಲ್ಲಿ ನೋಡಬಹುದು.

ಆಧುನಿಕತೆಯನ್ನೆವುದು ಇಂಗ್ಲೀಷಿನ Modernity ಎಂಬುದನ್ನು ಆಧುನಿಕತೆ ಎಂದು Modernism Modern ಎಂಬ ಒಂದೇ ಮೂಲದಿಂದ ಬಂದಿರುವುದರಿಂದ ಅವುಗಳ ಅರ್ಥದಲ್ಲಿ ಸ್ವಲ್ಪ ಗೊಂದಲವಾಗಿದೆ. ಆದರೂ ಅವುಗಳಿಗೆ ಪ್ರಚಲಿತ ಸಂಕಥನಗಳು ಬೇರೆ ಬೇರೆ ಅರ್ಥಗಳನ್ನು ನೀಡಿವೆ. ಈಗ Modernity Modernisation ಎಂಬ ಶಬ್ದಗಳನ್ನು ಆಧುನಿಕತೆ, ಆಧುನಿಕರಣ ಎಂದೂ ಕರೆಯಲಾಗುತ್ತದೆ. ೧೮ನೇ ಶತಮಾನದಲ್ಲಿ ಭಾರತದಲ್ಲಿ ಅನೇಕ ಬದಲಾವಣೆಗಳಾದವು. ಮುಖ್ಯವಾಗಿ ವೈದ್ಯಪದ್ಧತಿ, ಮನೋರಂಜನೆ, ರಸ್ತೆ, ಅಂಚೆ ಸೇವೆ, ದೂರಸಂಪರ್ಕ, ಶಿಕ್ಷಣ, ರೈಲ್ವೆ, ಬ್ಯಾಂಕ್, ವಿದೇಶಿ ವ್ಯಾಪಾರ, ಗಣಿ ಮತ್ತು ಕೈಗಾರಿಕೆ, ಮುದ್ರಣಯಂತ್ರ, ವಿಮಾಕಂಪನಿ ಮೊದಲಾದವುಗಳು ಈ ಎಲ್ಲವೂ ಆಧುನಿಕತೆಯ ರೂಪಗಳಾಗಿವೆ. ೧೮ ಮತ್ತು ೧೯ನೇ ಶತಮಾನದಲ್ಲಿ ಸೃಷ್ಟಿಗೊಂಡ ಕನ್ನಡ ಸಾಹಿತ್ಯ ತುಂಬಾ ವ್ಯಾಪಕವಾದುದು. ಅನೇಕ ದೃಷ್ಟಿಗಳಿಂದ

ಗಮನಾರ್ಹವಾಗಿವೆ. ವಸಾಹತುಶಾಹಿ ಪ್ರಭಾವಕ್ಕೆ ಕನ್ನಡ ಸಾಹಿತ್ಯ ಸಹ ಪ್ರತಿರೋಧ ವ್ಯಕ್ತಪಡಿಸಿದೆ. ಭಿನ್ನ ಸಂಸ್ಕೃತಿಯೊಂದು ಜೀವಂತ ಸಂಸ್ಕೃತಿಯ ಮೇಲೆ ಆಕ್ರಮಣ ಮಾಡಿದಾಗ ಉಂಟಾಗುವ ಘರ್ಷಣೆ ಅದಕ್ಕೆದುರಾಗುವ ಪ್ರತಿಕ್ರಿಯೆ ಈ ಅನುಸಂಧಾನ. ಪಶ್ಚಿಮದಲ್ಲಿ ಆಧುನಿಕತೆಯು ಸಂಪ್ರದಾಯಿಕ ಸಮಾಜದ ಮೇಲೆ ಉಂಟು ಮಾಡಿದ ಪರಿಣಾಮಗಳನ್ನು ವಾಸ್ತವವಾದದ ನೆಲೆಯಲ್ಲಿ ಕಟ್ಟಿಕೊಡಲು ಕನ್ನಡದಲ್ಲಿ ಕಾದಂಬರಿಗಳು ಹುಟ್ಟಿಬೆಳೆದವು. ನಂತರ ಸಮಾಜದಲ್ಲಿ ಕಾಣಿಸಿಕೊಂಡ ಹೊಸ ಬದಲಾವಣೆಗಳನ್ನು ಕನ್ನಡ ಕಥೆ–ಕಾದಂಬರಿಗಳು ಚಿತ್ರಿಸುವುದರ ಹಿನ್ನೆಲೆಯಲ್ಲಿ ಆಧುನಿಕತೆಯ ಬೇಕು–ಬೇಡಗಳ ಸಂಘರ್ಷವೂ ಕಾಣುತ್ತದೆ. ಕರ್ನಾಟಕದ ಕರಾವಳಿಗೆ ಬ್ರಿಟಿಷರ ಆಡಳಿತ ಮೊದಲು ಬಂದಿತು. ಅನೇಕ ಸಮಸ್ಯೆಗಳಿಂದ ಬಳಲುತ್ತಿದ್ದ ಈ ಪ್ರದೇಶ ಬ್ರಿಟಿಷರಿಂದ ಅವರ ಆಧುನಿಕ ತಿಳಿವಳಿಕೆಯಿಂದ ಪ್ರಯೋಜನ ಪಡೆಯಲು ಯತ್ನಿಸಿತು.

ಇಂದಿರಾಬಾಯಿ ಕಾದಂಬರಿಯು ಬ್ರಿಟಿಷ್ ಆಡಳಿತ ಮತ್ತು ಆಧುನಿಕತೆಯ ಜೊತೆಗೆ ಸಂಪ್ರದಾಯಸ್ಥ ಸಮಾಜವನ್ನು ಅನುಸಂಧಾನ ಮಾಡಲು ಯತ್ನಿಸುತ್ತದೆ. ಇಂದಿರಾಬಾಯಿ ಸಂಪ್ರದಾಯಸ್ಥ ಕುಟುಂಬದಲ್ಲಿ ಹುಟ್ಟಿ ಬೆಳೆದರೂ ಆಧುನಿಕ ವಿಚಾರಗಳನ್ನು ತಿಳಿದುಕೊಂಡು ಬದಲಾಗುತ್ತಾಳೆ. ವಿಧವೆಯಾದ ಇಂದಿರಾಬಾಯಿ ಸುಧಾರಣಾವಾದಿ ಚಿಂತನೆಗಳಿಗೆ ಮಾರು ಹೋಗಿ ಅದೇ ಹಾದಿಯಲ್ಲಿ ನಡೆದು, ಕ್ರಾಂತಿಕಾರಿಯಾಗಿ ಆಲೋಚಿಸಿ, ಕ್ರಿಯಾಶೀಲಳಾಗುತ್ತಾಳೆ. ಕಾದಂಬರಿಕಾರರು ಆಧುನಿಕತೆಯನ್ನು ತಿರಸ್ಕರಿಸದೆ ಅನುಮಾನಿಸದೆ ಆಶಾಭಾವನೆಯಿಂದ ಕಾಣುತ್ತಾರೆ. ಧರ್ಮಬೋಧನೆ ಎಂಬ ಹೆಸರಿನಲ್ಲಿ ವಿಧವೆಯನ್ನು ಶೋಷಣೆ ಮಾಡುತ್ತಿದ್ದ ಸಂತ ಮಂಡಲಿಗಳನ್ನು ಟೀಕಿಸುತ್ತಾರೆ ಮತ್ತು ಆಧುನಿಕತೆಯನ್ನು ವಿರೋಧಿಸುವ ಭೀಮರಾಯ–ಅಂಬಾಬಾಯಿ ಮತ್ತು ಆಧುನಿಕತೆ ಪರವಾಗಿರುವ ಅಮೃತರಾಯ ಹಾಗೂ ಜಲಜಾಕ್ಷಿ–ಭಾಸ್ಕರ, ಸುಂದರರಾಯರು ಇವರುಗಳ ನಡುವಿನ ಅನುಸಂಧಾನ ಪ್ರಮುಖ ಅಂಶ. ಎರಡು ಬಗೆಯ ಸದ್ಧರ್ಮದ ವಿಜಯವನ್ನು ಕಾದಂಬರಿ ಪ್ರತಿಪಾದಿಸುತ್ತದೆ. ಸದ್ಧರ್ಮ ವಿಜಯವನ್ನು ಸಾಬೀತುಗೊಳಿಸುವಂಥ ಅಂದರೆ ನೈತಿಕ ಇಲ್ಲವೆ ಧಾರ್ಮಿಕ ಉದ್ದೇಶವನ್ನು ಹೊಂದಿದಂತಹ ಸಾಹಿತ್ಯ ಕೃತಿಗಳು ಅಂತಿಮವಾಗಿ ಸಜ್ಜನರ ಗೆಲುವನ್ನು ಕಾಣಿಸಿ ಕೊನೆಗೊಳ್ಳುತ್ತದೆ. ಜೊತೆಗೆ ದುರ್ಜನರು ತಾವು ಮಾಡಿದ ಅಪರಾಧಗಳಿಗೆ ಶಿಕ್ಷೆ ಅನುಭವಿಸುತ್ತಾರೆ. ಇಲ್ಲವೇ ಅಪರಾಧಿಗಳಿಗಾಗಿ ಪಶ್ಚಾತ್ತಾಪ ಪಟ್ಟು ಸನ್ಮಾರ್ಗದಲ್ಲಿ ನಡೆಯುವ ಸಂಕಲ್ಪ ಮಾಡುತ್ತಾರೆ.

ನೀತಿಪರ ಅಥವಾ ಬೋಧನಪರ ಉದ್ದೇಶವಿರುವ ಕೃತಿಗಳಲ್ಲಿ ಇದು ಸಹಜ ಒಡಂಬಡಿಕೆ. ಆಧುನಿಕತೆಯನ್ನು ವಿರೋಧಿಸುವ ಸಂಪ್ರದಾಯಿಕ ಶಕ್ತಿಗಳೇ ಆಧುನಿಕತೆಯನ್ನು ಒಪ್ಪುವುದು ಕಂಡುಬರುತ್ತದೆ. ಇಂದಿರಾಬಾಯಿಯನ್ನು ಕೇಂದ್ರವಾಗಿಟ್ಟುಕೊಂಡು ಅವಳ ಸುತ್ತಲೂ ನಡೆಯುವ

ಸನ್ನಿವೇಶಗಳಲ್ಲಿ ಕೇವಲ ಇಂದಿರಾಬಾಯಿಯ ಹಾದಿ ತಪ್ಪಿದ ಜೀವನವನ್ನು ಮಾತ್ರ ಸುಧಾರಿಸಲು ಪ್ರಯತ್ನಿಸುವುದಿಲ್ಲ. ಇಡೀ ಕಾದಂಬರಿಯಲ್ಲಿ ವ್ಯಕ್ತಗೊಳ್ಳುವ ಘಟನೆ ಸನ್ನಿವೇಶಗಳು ತಮಷ್ಟಕ್ಕೆ ತಾವೇ ನಿರ್ದಿಷ್ಟ ಪ್ರಗತಿಯೊಂದರ ಬಗ್ಗೆ ಕಾಳಜಿ ಇಟ್ಟುಕೊಂಡಿವೆ. ಹಾಗಾಗಿ ಆಧುನಿಕತೆಯ ಅನುಭವ ಕೇವಲ ಇಂದಿರಾಬಾಯಿಯಂತಹ ಅಮಾಯಕ ಹೆಣ್ಣನ್ನು ಮಾತ್ರ ಪ್ರತಿನಿಧಿಸುವುದಿಲ್ಲ. ಅಮೃತರಾಯ, ಭಾಸ್ಕರ, ವಿಲಾಯಿತಿಯ ಸನ್ನಿವೇಶಗಳೂ ಈ ಅನುಭವ ವಿಭಿನ್ನವಾದ ಧಾರೆಯನ್ನು ಪ್ರತಿನಿಧಿಸುತ್ತವೆ.

ಇಂದಿರಾಬಾಯಿ ಬಾಲ ವಿಧವೆ ಸ್ವಂತ ತಂದೆ ತಾಯಿಗಳು ವಿಧಿಸುವ ನಿರ್ಬಂಧಗಳಿಂದ ಬೇಸತ್ತು ಮನೆಯಿಂದ ಪಲಾಯನಗೊಳ್ಳುತ್ತಾಳೆ. ಅಂದಿನ ದಿನಗಳಲ್ಲಿ ಇದೊಂದು ಸಾಹಸದ ಕೆಲಸ. ಆಮೃತರಾಯನ ಆಶ್ರಯದಲ್ಲಿದ್ದು ಮದ್ರಾಸಿನ ವಿಧವಾ ಗೃಹದಲ್ಲಿ ಮೆಟ್ರಿಕ್ಯುಲೇಶನ್ ಪಾಸು ಮಾಡಿದ ಇಂದಿರಾಬಾಯಿ ಪ್ರಗತಿಪರ ವಿಚಾರವಂತಳು. ಅಮೃತರಾಯರ ಆಶ್ರಯದಲ್ಲಿಯೇ ಬೆಳೆದ ಬಾಸ್ಕರನನ್ನು ಮೆಚ್ಚಿ ಮದುವೆಯಾಗಲು ನಿರ್ಧರಿಸುತ್ತಾಳೆ. ಅಂತೆಯೇ ತನ್ನನ್ನು ನೋಡ ಬಂದ ತಾಯಿಗೆ "ಮೃತ ಸುಂದರರಾಯನ ಮಗ ಭಾಸ್ಕರರಾಯನನ್ನು ತಾನು ಮದುವೆ ಯಾಗಲಿದ್ದೇನೆ"[೧] ಎಂದು ಹೇಳುವ ಇಂದಿರಾಬಾಯಿಯಲ್ಲಿ ದಿಟ್ಟತನವಿದೆ. ಆದರೆ ತಾಯಿ ಅಂಬಾಬಾಯಿ ತಂದೆ ಭೀಮರಾಯರಿಬ್ಬರೂ ವಿರೋಧಿಸುತ್ತಾರೆ. ಈ ವಿರೋಧಗಳ ನಡುವೆಯೇ ಕಲೆಕ್ಟರ್ ಭಾಸ್ಕರರಾಯನೊಂದಿಗೆ ವಿಧವೆ ಇಂದಿರಾಬಾಯಿಯ ಮದುವೆ ಅದ್ದೂರಿಯಿಂದ ನೆರವೇರುತ್ತದೆ. ಜಿ.ಎನ್.ರಂಗನಾಥರಾವ್ ಹೇಳುವಂತೆ "ವಿಧವಾ ವಿವಾಹ ಕಮಲಾಪುರದಲ್ಲಿ ಬಿರುಗಾಳಿ ಎಬ್ಬಿಸಿ ಧರ್ಮ ವಿಚಾರಕ ಭೀಮರಾಯನ ದೂರಿನ ಮೇಲೆ ಅನೇಕ ಬ್ರಾಹ್ಮಣರಿಗೆ ಮಠ ಬಹಿಷ್ಕಾರ ಹಾಕುತ್ತದೆ. ಆದರೆ ಜನ ಈ ಬಹಿಷ್ಕಾರಕ್ಕೆ ಸೊಪ್ಪು ಹಾಕುವುದಿಲ್ಲ. ಅಂಬಾಬಾಯಿ-ಭೀಮರಾಯರ ಕುಟೀಲ ತಂತ್ರಗಳು ಫಲಪ್ರದವಾಗುವುದಿಲ್ಲ. ಧರ್ಮ, ಮಠ, ಆಚಾರಗಳ ಬಗ್ಗೆ ಲೇವಡಿಯಾಗುತ್ತದೆ."[೨] ಇದು ಅಂದಿನ ವಾಸ್ತವಿಕ ಸ್ಥಿತಿ. ಮನುಷ್ಯ ಕಾಲಕ್ಕನುಗುಣವಾಗಿ ಹೊಂದಿಕೊಳ್ಳಬೇಕಾದ ಅನಿವಾರ್ಯತೆ ಇಲ್ಲಿ ಕಂಡುಬರುತ್ತದೆ.

ಈ ಕಾದಂಬರಿಯ ಬೆನ್ನ ಹಿಂದೆಯೇ ರಚನೆಯಾದ ಬೋಳಾರ ಬಾಬುರಾಯರ 'ವಾಗ್ದೇವಿ' ಕಾದಂಬರಿಯು ಆಧುನಿಕತೆಯ ಪರಿಣಾಮಗಳನ್ನು ವಾಸ್ತವವಾದದ ನೆಲೆಯಲ್ಲಿ ಚಿತ್ರಿಸಿದೆ. ಚಂಚಲನೇತ್ರ ಎಂಬ ಕಪಟ ಸನ್ಯಾಸಿ ಮತ್ತು ಸಾತ್ವಿಕನಾದ ವೇದವ್ಯಾಸ ಇವರ ನಡುವೆ ನಡೆಯುವ ಸಂಘರ್ಷ, ಭ್ರಷ್ಟ ವ್ಯವಸ್ಥೆಯೊಂದು ಬಯಲಿಗೆ ಬರುತ್ತದೆ. ಮಠದ ಪಾವಿತ್ರ್ಯವನ್ನು ಪುನಃ ಸ್ಥಾಪಿಸಬೇಕೆಂದು ವೇದವ್ಯಾಸನು ಚಂಚಲನೇತ್ರನ ವಿರುದ್ಧ ಮಠಾಧೀಶರ ಮೊರೆ ಹೋಗುತ್ತಾನೆ. ಅಲ್ಲಿ ನ್ಯಾಯ ಸಿಗುವುದಿಲ್ಲ. ಮುಂದೆ ನ್ಯಾಯಕ್ಕಾಗಿ ಪೇಷ್ಕರ, ತಿಮ್ಮಯ್ಯ,

ಕೊತ್ವಾಲ, ಭೀಮಾಜಿ, ಫೌಜುದಾರ, ಕಾರಬಾರಿ ಶಾಂಬಯ್ಯ, ಪುನರ್ವಿಮರ್ಶಾಧಿಕಾರಿ, ಕಿರಿಯ ದಿವಾನ ಮುಂದೆ ಹೋಗಿ ಸೋಲುತ್ತಾನೆ. ಅಂತಿಮವಾಗಿ ರಾಜನಲ್ಲಿಗೆ ಹೋಗಿ ಪುನಃ ಸ್ಥಾನ ಸಿಗುವಂತೆ ನ್ಯಾಯ ಪಡೆಯುತ್ತಾನೆ. ವೇದವ್ಯಾಸನ ಈ ಹೋರಾಟದಲ್ಲಿಯೇ ಆಡಳಿತದ ಸ್ವರೂಪ ಹೇಗೆ ಭ್ರಷ್ಟವಾಗಿದೆ ಎಂದು ತಿಳಿಯಲು ಸಾಧ್ಯವಾಗುತ್ತದೆ. "ಆಧುನಿಕ ಇಂಗ್ಲೀಷ್ ಶಿಕ್ಷಣ, ಮಿಶನರಿ ಚಟುವಟಿಕೆ, ಆರ್ಯಸಮಾಜ, ಬ್ರಹ್ಮಸಮಾಜಗಳ ಪುನರುತ್ಥಾನ ಕಾರ್ಯಗಳು, ಸಂಪ್ರದಾಯ, ಆಧುನಿಕತೆ ಎರಡೂ ಮೇಳೈಸಿರುವ, ಯಕ್ಷಗಾನ ಇವೆಲ್ಲವುಗಳ ಪ್ರಭಾವದಿಂದ ರೂಪುಗೊಂಡ ಸುಧಾರಣಾವಾದಿ ಕಾದಂಬರಿ ಮೊದಲು ಕರಾವಳಿಯಲ್ಲಿ ಬೇರುಬಿಟ್ಟು, ಆನಂತರ ಅನೇಕ ದಶಕಗಳ ಕಾಲ ಕನ್ನಡ ಕಾದಂಬರಿ ಲೋಕದಲ್ಲಿ ಸಮೃದ್ಧಿಯಾಗಿ ಬೆಳೆಯಿತು."[೩] ವಾಗ್ದೇವಿ ಕಾದಂಬರಿಯಲ್ಲಿ ಲೇಖಕರು ಒಂದು ಬ್ರಾಹ್ಮಣ ಮಠವನ್ನು ಕೇಂದ್ರವಾಗಿರಿಸಿಕೊಂಡು ಅದರ ಸುತ್ತ ಪರಂಪರಾಗತ ಹಾಗೂ ಸಂಪ್ರದಾಯ ಶರಣ ಸಮಾಜದ ಉಗ್ರವಿಮರ್ಶೆಯನ್ನು ಮಾಡುತ್ತಾರೆ. ವಾಗ್ದೇವಿ ಮೇಲ್ನೋಟಕ್ಕೆ ಧಾರ್ಮಿಕ ವಿಡಂಬನೆಯ ಹಾಗೆ ಕಂಡುಬಂದರೂ ಅದು ಸಾಮಾಜಿಕ ವಿಡಂಬನೆಯತ್ತ ಮುಖ ಮಾಡಿದೆ. ನ್ಯಾಯ, ವಿಚಾರಣೆ, ಅಹವಾಲು, ಕಾನೂನು, ಮನವಿ, ಸಂಚು, ಪ್ರತಿಸಂಚುಗಳು ತುಂಬಿಕೊಂಡಿವೆ. ಚಂಚಲನೇತ್ರ ಮತ್ತು ವಾಗ್ದೇವಿಯರ ಅನೈತಿಕ ಸಂಬಂಧವನ್ನು ಪ್ರಶ್ನಿಸಿ ಧಾರ್ಮಿಕ, ರಾಜಕೀಯ ಅಧಿಕಾರ ಸ್ಥಾನಗಳಲ್ಲಿ ನ್ಯಾಯಕ್ಕಾಗಿ ಹೋರಾಡುವ ವೇದವ್ಯಾಸನ ವಿವರಗಳು ಹೆಚ್ಚು ಅವಲಂಬಿತವಾಗಿವೆ. ಧರ್ಮ, ರಾಜಕೀಯ ಮತ್ತು ನ್ಯಾಯ ವ್ಯವಸ್ಥೆಯ ಎಲ್ಲಾ ಹಂತಗಳು ಭ್ರಷ್ಟಗೊಂಡ, ಅಪ್ರಮಾಣಿಕಗೊಂಡ ಕಥನ ವಾಗ್ದೇವಿಯ ಕಥನದೊಂದಿಗೆ ಹೆಣೆದುಕೊಂಡಿದೆ. ಹಣಬಲ, ಅಧಿಕಾರಬಲಗಳು ಸಾಮಾಜಿಕ ನೈತಿಕ ಅಧಃಪತನಕ್ಕೆ ಕಾರಣವಾದವನ್ನು ಬೆಳೆಸುವ ಈ ಕಾದಂಬರಿ ಬಡತನದಿಂದಾಗಿ ಚಂಚಲನೇತ್ರರನ್ನು ಆಕ್ರಮಿಸುವ ವಾಗ್ದೇವಿ, ಮಠದ ಎಲ್ಲಾ ವ್ಯವಹಾರ ನಿಯಂತ್ರಿಸುತ್ತಾ ಅನ್ಯಾಯವೆಂದು ಪ್ರತಿಭಟಿಸಿದವರನ್ನು ಬಗ್ಗು ಬಡಿಯುತ್ತಾ ಎಲ್ಲದರಲ್ಲಿಯೂ ಜಯ ಪಡೆಯುತ್ತ ಸಾಗಿದರೂ ಕೊನೆಗೆ ಕಾಲದ ನಿರ್ಣಯಕ್ಕೆ ತಲೆಬಾಗುವುದು ಮುಖ್ಯವಾಗುತ್ತದೆ. ಆಕೆಯ ಮಗ ಸೂರ್ಯನಾರಾಯಣನು ಶೂದ್ರ ಕನ್ಯೆಯನ್ನು ಅಪಹರಿಸಿಕೊಂಡು ಹೋಗಿ ವಿವಾಹವಿಲ್ಲದೆ ಸಂಸಾರಿಯಾಗಿ ಬದುಕುವುದು, ಅವರಲ್ಲಿ ವಾಗ್ದೇವಿ ಆಶ್ರಯ ಪಡೆಯುವುದು. ಹೀಗೆ ಕಾದಂಬರಿ ತನ್ನದೇ ಆದ ವಿಲಕ್ಷಣ ಪ್ರತಿಭಟನಾ ವಿನ್ಯಾಸದ ಆಧುನಿಕತೆಯ ಅನುಭವ ನೀಡುತ್ತದೆ. "ಆರ್ಯ ಸಮಾಜದ ಆದರ್ಶದಲ್ಲಿ ರೂಪುಗೊಂಡ ಕಾದಂಬರಿ ನಿಷ್ಠುರ ಸಾಮಾಜಿಕ ವಿಮರ್ಶೆಯನ್ನು ಚಿತ್ರಿಸುತ್ತದೆ"[೪] ಎಂದು ಸಿ.ಎನ್.ರಾಮಚಂದ್ರನ್ ಅಭಿಪ್ರಾಯಪಟ್ಟಿರುವುದು ಸರಿಯಾಗಿದೆ. ಕರಾವಳಿ ಪ್ರದೇಶದಿಂದ ಮೂಡಿಬಂದ ಕಥೆ-ಕಾದಂಬರಿಗಳು ಆಧುನಿಕತೆಯ ಬೆಳವಣಿಗೆಯನ್ನು ಆಶಾಭಾವದಿಂದ ಚಿತ್ರಿಸುತ್ತದೆ.

ಉತ್ತರ ಕರ್ನಾಟಕದ ಪೇಶ್ವೆಗಳ ಆಡಳಿತವಿದ್ದ ಪ್ರಾಂತ್ಯದಿಂದ ಪ್ರಕಟವಾದ ಕಾದಂಬರಿ 'ಇಂದಿರೆ' ಇದನ್ನು ಕೆರೂರು ವಾಸುದೇವಾಚಾರ್ಯರು ಬರೆದಿದ್ದಾರೆ. ಇವರು ವೈದಿಕರಾಗಿದ್ದು, ಬ್ರಿಟಿಷ್ ಆಡಳಿತದಲ್ಲಿ ಸೇವೆ ಮಾಡಿದವರು. 'ಇಂದಿರೆ' ಕಾದಂಬರಿ ಆಧುನಿಕತೆಯ ಪ್ರಭಾವದಿಂದ ರಚನೆಯಾದದ್ದು ನಿಜ. ಆದರೆ ಆಧುನಿಕತೆಯನ್ನು ಅನುಮಾನದಿಂದ ನೋಡುತ್ತಾರೆ. ವಿಧವಾ ವಿವಾಹವನ್ನು ನಿರಾಕರಿಸಿದಂತಿದೆ. ಕಾದಂಬರಿಯಲ್ಲಿ ಬರುವ ದೇವಯಾನಿ ವಿಧವೆ. ಇವಳು ಸುಧಾರಣಾವಾದಿ ನಿಲುವಿನವಳು. ಸಮಾಜದ ಅನಿಷ್ಟಗಳ ವಿರುದ್ಧ ದನಿ ಎತ್ತಿದರೂ, ತನ್ನ ಜೀವನದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳದ ದೇವಯಾನಿ ಸಮಾಜದ ಸಮಸ್ಯೆಗಳನ್ನೇನೂ ಸುಧಾರಿಸಬಲ್ಲಳು ಎಂಬ ನಿಲುವು ಕಾದಂಬರಿಕಾರರದಾಗಿದೆ. ಆಧುನಿಕತೆಯ ಪ್ರಭಾವದಿಂದ ನಡೆದ ಸುಧಾರಣಾ ಚಳುವಳಿಯನ್ನು ಈ ಕಾದಂಬರಿ ನಿರಾಕರಿಸಿದಂತೆ ಕಾಣುತ್ತದೆ.

ಪ್ರಧಾನ ಕಥನದಲ್ಲಿ ಬರುವ ಪಾತ್ರಗಳು ವೃತ್ತಿ ಸಂಬಂಧ, ವ್ಯವಹಾರ, ನಿತ್ಯದ ಬದುಕಿನಲ್ಲಿ ಸಕ್ರಿಯವಾಗಿದೆ. ವಿದ್ಯಾಭ್ಯಾಸ, ಪ್ರಗತಿ, ಅಭಿವೃದ್ಧಿಯ ಕಲ್ಪನೆ, ಆ ಪಾತ್ರಗಳಿಗಿವೆ. ಆದರೆ ಸಂಪ್ರದಾಯಿಕ ಬದುಕಿನ ಜಡ ವಿಚಾರಗಳಿಂದ ಅವು ಪೂರ್ತಿ ಪಾರಾಗಲು ಸಾಧ್ಯವಿಲ್ಲ. ಸಚ್ಚಾರಿತ್ರ್ಯದ ತರುಣ ತರುಣಿಯರಾದ ರಮಾಕಾಂತ ಮತ್ತು ಇಂದಿರೆ ಇಬ್ಬರೂ ತಮ್ಮ ಪರಿಸರದಲ್ಲಿ ಸುಶಿಕ್ಷಿತರೂ, ವಿವೇಕಿಗಳೂ ಸ್ವತಂತ್ರ ಆಲೋಚನೆ ಹೊಂದಿದವರಾಗಿಯೇ ಕಾಣಿಸುತ್ತಾರೆ. ಆದರೆ ಅವರ ಮಿತಿಗಳು ಸ್ಪಷ್ಟವಾಗಿವೆ. ಒಂದೆಡೆಗೆ ರಾಧಾಬಾಯಿಯು ಪುನರ್ವಿವಾಹ, ಪ್ರಬುದ್ಧ ಕನ್ಯಾವಿವಾಹ, ಸ್ತ್ರೀ ಶಿಕ್ಷಣಗಳ ಬಗ್ಗೆ ರಮಾಕಾಂತನ ಅಭಿಪ್ರಾಯ ಕೇಳುತ್ತಾಳೆ. ಅದಕ್ಕೆ ಅವನು ನೀಡುವ ಉತ್ತರವಿದು. "ಇವುಗಳ ಬಗ್ಗೆ ನಾನು ಓದಿರುವೆನು. ಆದರೆ ನನ್ನ ಮತವು ಈ ಕಾಲಕ್ಕೆ ಹೀಗೆ ಇರುವುದೆಂದು ಹೇಳಲಾರೆನು, ಸ್ತ್ರೀಯರು ಉಚ್ಚ ಪ್ರೀತಿಯ ಶಿಕ್ಷಣ ಹೊಂದುವುದು ಅವಶ್ಯ. ಅವರ ಸ್ವತಂತ್ರ್ಯಾತಿಶಯವು ಮಾತ್ರ ನನಗೆ ಸಹಿಸದು"[೫] ಎಂದು ಹೇಳುವುದು ಗಮನಾರ್ಹವಾಗಿದೆ. ಅದೇ ಸಮಯದಲ್ಲಿ ಇಂದಿರೆ ಕೂಡ ರಮಾಕಾಂತನ ದಾಟಿಯಲ್ಲಿ ಹೇಳುತ್ತಾಳೆ. "ನೀವು ಯಾತಕ್ಕೆ ಸ್ವಾತಂತ್ರ್ಯವೆಂದೆನ್ನುತ್ತೀರೋ ತಿಳಿಯದು..... ನಾವು ಯಾರಿಂದ ಸ್ವತಂತ್ರರಾಗಿರಬೇಕು? ತಮ್ಮ ಪ್ರಾಣಕ್ಕಿಂತಲೂ ಹೆಚ್ಚಾಗಿ ನಮ್ಮನ್ನು ಸಂರಕ್ಷಿಸುವ ಪ್ರಾಣೇಶ್ವರರ ಕೂಡ ಹುರ್‍ರೆಂದು ಜಗಳಾಡುವುದು ಸ್ವಾತಂತ್ರ್ಯವೇನು?"[೬] ಮುಂದುವರೆದು ಅವಳು ಪತಿಯ ಅನುಸರಿಸಿ ನಡೆಯುವುದೇ ನಾರಿಗೆ ಸುಖ, ಮೊಂಡಾಟದ ಹೆಂಡತಿಯನ್ನು ಪತಿ ಹೊಡೆಯಬಹುದು ಎಂದು ಅಭಿಪ್ರಾಯಪಡುತ್ತಾಳೆ. ಇಲ್ಲಿ ಅವರಿಬ್ಬರ ನಿಲುವುಗಳು ಕಾದಂಬರಿಕಾರರ ನಿಲುವುಗಳಾಗಿದ್ದು, ಅವು ಪ್ರಗತಿವಿರೋಧಿ ಎನಿಸುವುದರಿಂದ ಪ್ರಶ್ನಾರ್ಹವಾಗುತ್ತವೆ.

ಇನ್ನೊಂದೆಡೆಗೆ ಇಂದಿರೆ ಸ್ತ್ರೀಯರಿಗೇಕೆ ಮಹತ್ವಾಕಾಂಕ್ಷೆ ಎಂದು ಹೇಳಿ ಪುರುಷರಲ್ಲಿ ಮಹಾತ್ವಾಕಾಂಕ್ಷೆ ಎಂದರೆ ಒಂದರ್ಥದಿಂದ ಒಪ್ಪುವಂತಿದೆ. ಆದರೆ ಸುಕುಮಾರಿಯರೆಂದೆನ್ನಿಸಿಕೊಳ್ಳುವ

ನಮ್ಮ ಹೆಂಗಸರಲ್ಲಿ ಮಹಾತ್ವಾಕಾಂಕ್ಷೆಯಿರುವುದೆಂದರೆ ನನಗೆ ಚಮತ್ಕಾರವೆನಿಸುತ್ತದೆ ಎಂದು ಹೇಳುತ್ತಾಳೆ. ಅವಳ ಮಾತು, ವಿಚಾರಗಳನ್ನು ಪುರುಷ ಪ್ರಧಾನ ವ್ಯವಸ್ಥೆ ನಿಯಂತ್ರಿಸಿರುವುದು ಸುಸ್ಪಷ್ಟ. ಸುಧಾರಣಾವಾದದ ಪ್ರಬಲ ಸಮರ್ಥನೆ ಮಾಡಿ ಸಾಮಾಜಿಕ ಬದಲಾವಣೆಯನ್ನು ಸ್ತ್ರೀ ಸಮಾನತೆಯನ್ನು ಸಾಧಿಸಲು ಪ್ರಯತ್ನಿಸುವ ಪಂಡಿತೆ ರಾಮಾಬಾಯಿಯ ವೈವಾಹಿಕ ಜೀವನವು ಯಶಸ್ವಿಯಾಗಿಲ್ಲ. ಹಾಸ್ಯಾಸ್ಪದವಾಗಿದೆ. ಶಾಸ್ತ್ರಿಗಳನ್ನು ಮೊದಲು ವಿವಾಹವಾಗುವ ಆಕೆ ಸಂಪ್ರದಾಯಿಕ ಬ್ರಾಹ್ಮಣ ಆಭರಣಗಳಿಗೆ ಬೇಸರಪಡುವುದು, ಪತಿ ಮರಣ ಹೊಂದಿದ ನಂತರ ಸ್ವತಂತ್ರ ಪಡೆಯುವುದು ಅವಳ ಮಾತಿನಲ್ಲಿ ವಿಧಿತವಾಗಿದೆ.

ಕಮಲಾಬಾಯಿ ವಿಧವೆ ಮತ್ತು ತರುಣಿ. ಮರುವಿವಾಹ ಬಯಸುತ್ತಿರುವ ಆಧುನಿಕ ವಿಚಾರದ ಸುಶಿಕ್ಷಿತೆ. ಅವಳು ರಾಧಾಬಾಯಿಯೊಂದಿಗೆ ಸಾರ್ವಜನಿಕ ಅರಿವು ಮೂಡಿಸುವ ಕಾರ್ಯದಲ್ಲಿ ತೊಡಗಿದ್ದಾಳೆ. ರಾಧಾಬಾಯಿ, ಕಮಲಾಬಾಯಿ, ಭಾಸ್ಕರ ಈ ಮೂವರೂ ಕಾದಂಬರಿಯಲ್ಲಿ ಪ್ರತಿಪಾದಿಸುವ ವಿಚಾರಗಳು ಯಾವುವುವೆಂದರೆ, ಎಲ್ಲಾ ಸ್ತ್ರೀಯರು ಓದು, ಬರಹ ಕಲಿಯಬೇಕು, ಬಾಲ್ಯವಿವಾಹ ತಿರಸ್ಕರಿಸಬೇಕು. ವಿಧವಾ ವಿವಾಹ, ಪುನರ್‌ವಿವಾಹ ಆಗಬೇಕು, ಸ್ತ್ರೀಯರು ಸ್ವಾತಂತ್ರ್ಯ, ಸಮಾನತೆ ಪಡೆಯಬೇಕು ಎಂಬ ಅಂಶ ಪ್ರಮುಖವಾದುದು ಇದು ಆಧುನಿಕತೆಯ ಪ್ರತೀಕ ಎಂದು ಹೇಳಬಹುದು.

ರಮಾಕಾಂತ ಮತ್ತು ಇಂದಿರೆಯ ಪ್ರೇಮ ಕಥನದಲ್ಲಿ ಎಲ್ಲಿಯೂ ಸ್ತ್ರೀ ಶಿಕ್ಷಣ, ಸಮಾನತೆ, ವಿಧವಾ ವಿವಾಹಗಳ ಚರ್ಚೆ ವಿಚಾರ ವಿನಿಮಯ ಅಭಿಪ್ರಾಯ ವಿನಿಮಯಗಳು ಬರುವುದಿಲ್ಲ. ಇಬ್ಬರೂ ಶ್ರೀಮಂತ ಕುಟುಂಬಗಳಿಂದ ಬಂದವರು. ರಮಾಕಾಂತನು ನವರಸಪುರದ ಜಮೀನ್ದಾರರ ಏಕೈಕ ಪುತ್ರ, ಎಂಜನೀಯರಿಂಗ್ ವಿದ್ಯಾಭ್ಯಾಸ ಪೂರೈಸಿ ಬೆಂಗಳೂರಿಗೆ ಬಂದವನು. ಇಂದಿರೆ ಶ್ರೀಮಂತ ತಂದೆಯ ಅಕ್ಕರೆ ಏಕಮಾತ್ರ ಪುತ್ರಿ. ಅವಳೂ ಸುಶಿಕ್ಷಿತಳೇ. ರಮಾಕಾಂತನ ತಂದೆ ಕಮಲಾಕಾಂತ, ಇಂದಿರೆಯ ತಂದೆ ಜಯರಾಮ ಇಬ್ಬರೂ ವಿವಾಹ ಪೂರ್ವದಲ್ಲಿ ವಿದ್ಯಾಭ್ಯಾಸದಲ್ಲಿ ಸಹಪಾಠಿಗಳಾಗಿದ್ದರು. ಅವರಿಬ್ಬರೂ ಪೂನಾ, ಮುಂಬಯಿಗಳ ಆಧುನಿಕತೆಗೆ ತೆರೆದುಕೊಂಡವರು. ಕಮಲಾಕಾಂತನು ತರುಣನಾಗಿದ್ದಾಗ ದೇವಯಾನಿ ಎಂಬ ವಿಧವೆಯನ್ನು ಮೋಹಿಸಿ ವಿವಾಹವಾಗ ಬೇಕೆಂದು ಯೋಚಿಸಿದರೂ ಜಯರಾಮನ ಮಾತ್ಸರ್ಯದಿಂದ ವಿಫಲವಾಗುತ್ತದೆ. ಇದು ಕಾದಂಬರಿಕಾರರ ವಿಚಾರದಲ್ಲಿ ಮಹತ್ವದ ಅಂಶ. ವಿಧವಾ ವಿವಾಹದ ಬಗ್ಗೆ ಬಹುದೊಡ್ಡ ಅರಿವು, ಪ್ರಚಾರ, ಎಚ್ಚರ ಕಾಣಿಸಿಕೊಳ್ಳುತ್ತಿದ್ದ ಕಾಲದಲ್ಲಿ ಬರೆದ ಈ ಕಾದಂಬರಿಯಲ್ಲಿ ಪೂರಕವಾದ ಸಂದರ್ಭಗಳೆಲ್ಲಾ ವಿಫಲಗೊಂಡು ವಿಧವಾ ವಿವಾಹ ಸರಿಯಾಗಿ ನಡೆಯುವುದಿಲ್ಲ. ತನ್ನನ್ನು ವಿವಾಹವಾಗುವ ಕಮಲಾಕಾಂತನ ನೆನಪಿನಲ್ಲಿ ವಿಧವೆ ದೇವಯಾನಿ ಹಾಗೇ ಉಳಿದು ಪ್ರಿಯಕರನ

ಮಗನಾದ ರಮಾಕಾಂತನನ್ನು ಮಗನಂತೆಯೇ ಕಂಡು ಜಯರಾಮನ ಮಗಳೊಂದಿಗೆ ವಿವಾಹವಾಗುವ ಹಾಗೆ ಏರ್ಪಡಿಸಿ ತನ್ನ ಸೇಡು ಪೂರ್ಣಗೊಳಿಸಿ ಕೊಳ್ಳುತ್ತಾಳೆ. ಹಾಗೆಯೇ ರಮಾಕಾಂತನ ಮದುವೆ ಸಂಪ್ರದಾಯದ ಮಡುವಿನಲ್ಲಿ ಅದ್ದೂರಿಯಾಗಿ ನೆರವೇರುತ್ತದೆ. ಕೊನೆಯಲ್ಲಿ ರಮಾಕಾಂತ, ಇಂದಿರೆಯರ ದೈವಿಶ್ರದ್ಧೆಯ ಗಾಢ ಭಾವದಲ್ಲಿ ಕಾದಂಬರಿ ವಿರಾಮ ಪಡೆಯುವುದನ್ನು ಗಮನಿಸಬೇಕು. ರುಕ್ಮಿಣೀ ಸ್ವಯಂವರದ ವಿಚಾರವಿರುವ ಪದವನ್ನು ಇಂದಿರೆ ಹಾಡುತ್ತಾಳೆ. ಸಂಪ್ರದಾಯದ ಆಚರಣೆಗಳಿಗೆ ಮೊರೆ ಹೋಗಿ ಸತ್ಯನಾರಾಯಣ ವ್ರತವನ್ನು ಮಾಡುವೆನೆಂದು ಇಂದಿರೆ ಹೇಳಿದಾಗ ನಾಳೆಗೆ ಮಾಡೋಣ ಎಂದು ರಮಾಕಾಂತನು ಪ್ರಭುವಿನ ವ್ರತಾಚರಣೆಯಿಂದ ಮನುಷ್ಯ ಮಾತ್ರಕ್ಕೆ ನಿತ್ಯದಲ್ಲಿಯೂ ಶುಭಗಳಾಗುತ್ತವೆ ಎಂಬ ವಿಚಾರದ ಆಶಯದೊಂದಿಗೆ ಕಥನ ಮುಕ್ತಾಯವಾಗುತ್ತದೆ. ಹೀಗೆ ಸಂಪ್ರದಾಯ ಹಾಗೂ ಆಧುನಿಕತೆ ನಡುವೆ ಸಂಘರ್ಷ ಕಾಣಬಹುದು.

ಎಂ.ಎಸ್.ಪುಟ್ಟಣ್ಣನವರ 'ಮಾಡಿದುಣ್ಣೊ ಮಹಾರಾಯ' ಕಾದಂಬರಿ ಮಹತ್ವದ್ದು. ಕೃಷ್ಣರಾಜ ಒಡೆಯರ ಕಾಲದ ಹಳೆಯ ಮೈಸೂರು ಪ್ರದೇಶದ ಜನಜೀವನವನ್ನು ಚಿತ್ರಿಸುವ ಈ ಕಾದಂಬರಿಯು ತನ್ನ ಒಡಲಲ್ಲಿ ನೀತಿ ಬೋಧನೆಯನ್ನು ಇಟ್ಟುಕೊಂಡಿದೆ. ರಾಮಾಯಣದ ಕಥಾವಸ್ತುವನ್ನು ಹೋಲುವ ಈ ಕಾದಂಬರಿ ನಂಜನಗೂಡನ್ನು ಕೇಂದ್ರೀಕರಿಸಿ ಸದಾಶಿವ ದೀಕ್ಷಿತ–ಸೀತಮ್ಮ ಸದ್ಗುಣ ದಂಪತಿಗಳು. ಪೂಜಾರಿ ಅಪ್ಪಾಜಿ ಸೀತಮ್ಮನನ್ನು ಮಾನಭಂಗ ಮಾಡಲು ಯತ್ನಿಸಿ ಆಕೆಯನ್ನು ಸಂಕಷ್ಟದಲ್ಲಿ ಸಿಲುಕಿಸುತ್ತಾನೆ. ಬಟಜಿ ಎಂಬ ವ್ಯಕ್ತಿಯಿಂದ ಸೀತಮ್ಮ ತನಗೊದಗಿದ ದುರಂತದಿಂದ ಪಾರಾಗುತ್ತಾಳೆ. ರೆಡ್ಡಿ, ಸುಬೇದಾರ, ನಾರಪ್ಪಯ್ಯ ಅಮಾಸೆ ಮುಂತಾದ ವ್ಯಕ್ತಿಗಳು ತಮ್ಮ ಕಳಂಕ ವ್ಯಕ್ತಿತ್ವದಿಂದ ಸಮಾಜದ ಅವನತಿಗೆ ಕಾರಣರಾಗುತ್ತಾರೆ. ಕಾದಂಬರಿಯಲ್ಲಿ ಹಳೆಯ ವ್ಯವಸ್ಥೆಯನ್ನು ಅದರ ದುರ್ಗತಿಯನ್ನು ತೋರಿಸಲಾಗಿದೆ. ಕಾದಂಬರಿಯು ಸದ್ಗುಣಗಳಿಂದ ಕೂಡಿದೆ. ಮುಮ್ಮಡಿ ಕೃಷ್ಣರಾಜ ಒಡೆಯರು ವೈಯಕ್ತಿಕವಾಗಿ ಒಳ್ಳೆಯ ವ್ಯಕ್ತಿಯಾಗಿದ್ದು ಧಾರ್ಮಿಕ ಸ್ವಭಾವದವರಾಗಿದ್ದರು. ತಮ್ಮ ಮುಗ್ಧತೆಯಿಂದಾಗಿ ರಾಜ್ಯದಲ್ಲಿನ ಲಂಚಗುಳಿತನವನ್ನು, ಜಾತಿಗಳ ನಡುವಿನ ಜಗಳವನ್ನು ಸಜ್ಜನರಿಗಾಗುತ್ತಿದ್ದ ಅನ್ಯಾಯ ಅಪಮಾನಗಳನ್ನು ತಪ್ಪಿಸಲಾಗದ ಅದಕ್ಷ, ಅಸಹಾಯಕ ವ್ಯಕ್ತಿಯಾಗಿ ಚಿತ್ರಿತರಾಗಿದ್ದಾರೆ. ಹಳೆಯ ಕಾಲದ ಶಿಕ್ಷಣ ಪದ್ಧತಿಯನ್ನು ಇಲ್ಲಿ ತೋರಿಸಿ ಅದರ ದುಃಸ್ಥಿತಿಯ ಮುಖವನ್ನು ಎತ್ತಿ ಹಿಡಿದಿದ್ದಾರೆ. ಒಟ್ಟಿನಲ್ಲಿ ಈ ಕಾದಂಬರಿ ಸಾಮಾಜಿಕ ಜೀವನದ ದುರಂತವನ್ನು ಚಿತ್ರಿಸಿರುವುದು ಆಧುನಿಕತೆಯ ಪರಿಣಾಮವಾಗಿ. ಕಾದಂಬರಿಯ ಮುಖ್ಯಪಾತ್ರದ ಹೆಸರು ಸೀತೆ ಎಂದು ಉದ್ದೇಶಪೂರ್ವಕವಾಗಿ ಬಳಸಲಾಗಿದೆ. ಸೀತೆಯ ಪರಂಪರಾಗತವಾದ ಅತ್ತೆ ಬೈಗುಳಗಳನ್ನೆಲ್ಲ ಸಹಿಸಿ ತನ್ನನ್ನು ಮೈಸೂರು ಸೂಳೆಗೆ ಹೋಲಿಸಿದಾಗ ಪ್ರತಿಯಾಗಿ ಉತ್ತರ ಕೊಟ್ಟಳು.

ಚಾರಿತ್ರಿಕವಾಗಿ ಬದುಕಿನಲ್ಲಿ ಬದಲಾವಣೆಯೊಂದು ಆರಂಭವಾಗಿದೆ. ಸಂಪ್ರದಾಯಿಕವಾದ ಜೀವನ ಕ್ರಮದಲ್ಲಿ ಪಲ್ಲಟವೊಂದು ತಲೆದೋರುತ್ತಿದೆ. ಹೊಸ ವಿದ್ಯಾವಂತ ವರ್ಗ ಹುಟ್ಟಿದೆ. ಒಂದೆಡೆ ಪಾಶ್ಚಿಮಾತ್ಯ ವೈಚಾರಿಕತೆಯನ್ನು ಮೈಗೂಡಿಸಿಕೊಂಡ ಹೊಸ ವಿದ್ಯಾವಂತ ವರ್ಗದಿಂದ ದೇಸೀ ಸಂಪ್ರದಾಯಿಕ ಆದರ್ಶವು ವಿಡಂಬನೆಗೆ, ಟೀಕೆಗೆ ಒಳಗಾಗುತ್ತದೆ. ಆದರೆ ಸಂಪ್ರದಾಯಿಕ ಜೀವನ ಕ್ರಮ ದೇಸಿ ಸಂಸ್ಕೃತಿ ಇದರ ಪರಿಣಾಮವಾಗಿ ಸಂಪ್ರದಾಯಿಕ ಮೌಲ್ಯಗಳು ಶಿಥಿಲ ಗೊಳ್ಳುತ್ತಿವೆ. ವಿದ್ಯಾವಂತ ಮತ್ತು ಶ್ರದ್ಧಾವಂತ ಮನಸ್ಸು ಈ ಬದಲಾವಣೆಗಳಿಗೆ ಪ್ರತಿಕ್ರಿಯಿಸಿದ ರೀತಿಯಿಂದ ಪುಟ್ಟಣ್ಣನವರ ಈ ಕಾದಂಬರಿಯಲ್ಲಿ ನೋಡಬಹುದು. ಹಳೆಯ ಬದುಕಿನ ಅನೇಕ ಉತ್ತಮ ಅಂಶಗಳು ಮರೆಯಾಗಿ ಹೋಗುತ್ತವೆ. ಅವುಗಳನ್ನು ಉಳಿಸುವುದು ಸಾಧ್ಯವಿಲ್ಲ ಎಂಬ ಅಂಶ ಅವರ ಕಾದಂಬರಿಯಲ್ಲಿ ನೋಡಬಹುದು.

**ನಿಸರ್ಗ : ಮಿರ್ಜಿ ಅಣ್ಣಾರಾಯ(೧೯೪೦)**

**ಸುಬ್ಬಣ್ಣ : ಮಾಸ್ತಿ ವೆಂಕಟೇಶ ಐಯ್ಯಂಗಾರ(೧೯೨೮)**

ರಾಷ್ಟ್ರೀಯವಾದದ ನೇರ ಪ್ರಭಾವಕ್ಕೊಳಗಾದ ಕಾದಂಬರಿಕಾರ ಮಿರ್ಜಿ ಅಣ್ಣಾರಾಯರು. ಇವರ 'ನಿಸರ್ಗ' ಕಾದಂಬರಿ ಸಮಕಾಲೀನ ಸಾಮಾಜಿಕ ರೂಢಿ ಕಂದಾಚಾರಗಳಿಗೆ ಕನ್ನಡಿ ಹಿಡಿಯುತ್ತದೆ. ಬಾಲ್ಯ ವಿವಾಹವು ಹಳ್ಳಿಯ ಸಾಮಾಜಿಕ ಬದುಕಿನಲ್ಲಿ ಬಳಕೆಯಲ್ಲಿದೆ. ಅಂಧಶ್ರದ್ಧೆಗಳು ಮೂಡನಂಬಿಕೆ, ಗ್ರಹಚಾರ, ಶಕುನ, ನಂಬುಗೆಗಳು ಅಲ್ಲಿ ಬೇಕಾದಷ್ಟಿವೆ. "ಪತಿಯೆಂದರೆ ದೇವರ ಸಮಾನವೆಂದು ನಿರಂಕುಶ ಪ್ರಭುವೆಂದು ಪರಿಗಣಿಸುವ, ಸತಿ ಎಂದರೆ ಸ್ವತಂತ್ರ ಅಸ್ತಿತ್ವವಿಲ್ಲದ ಪತಿಯ ನೆರಳು ಎಂದು ಭಾವಿಸಲ್ಪಡುವ ರೂಢಿಯೂ ಇದೆ."[೭] ಈ ರೀತಿಯ ನಂಬಿಕೆಗಳು ನಿಸರ್ಗದ ವಸ್ತುವೇ ಆಗಿದೆ. ಇಂದಿರೆಯ ಬಾಲ್ಯ ವಿವಾಹ ಹಾಗೂ ತಾರಾಳಿಗೆ ಸೊಸೆಯನ್ನಾಗಿಸಿ ಅವಳಿಗೆ ಅತ್ತೆಯ ಮನೆಯಲ್ಲಿ ವಿಧೇಯಳಾಗಿರಬೇಕೆಂದು ತಾರಾಳಿಗೆ ಬೋಧನೆ, ಸಂಪ್ರದಾಯಿಕ ವಿವಾಹಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿದೆ. (ಅನಂತ-ತಾರಾ) ಪ್ರೇಮಕ್ಕೆ ಇಲ್ಲಿ ಬೆಲೆಯಿಲ್ಲ. ಇಲ್ಲಿ ತಾರೆಯ ವಿವಾಹ ಬರಮನ ಜೊತೆ ಆಗಿಹೋಗಿದೆ. ಆದರೂ ಅನಂತನ ಜೊತೆ ಹುಟ್ಟಿದ ಪ್ರೇಮ ಮರೆಯಲಾರಳು. ನಿಜವಾದ ಪ್ರೇಮದ ಪಥವು ಎಂದೂ ಸುಗಮವಾಗಿ ಸಾಗುವುದಿಲ್ಲ ಎಂಬ ಷೇಕ್ಸ್‌ಪಿಯರ್ ಮಹಾಕವಿಯ ಮಾತು ಇಲ್ಲಿ ಅಕ್ಷರಶಃ ಸತ್ಯವಾಗುತ್ತದೆ. ಇದೇ ಕಾಲಘಟ್ಟದಲ್ಲಿ ರಚನೆಯಾದ 'ಇಂದಿರಾಬಾಯಿ' ಕಾದಂಬರಿಯಲ್ಲಿ ಬಾಸ್ಕರನು ಇಂದಿರಾಬಾಯಿ ವಿವಾಹವಾಗುವುದು ಒಂದೇ ಕಾಲ ಘಟ್ಟದಲ್ಲಿ ಈ ರೀತಿ ಎರಡು ವಿಭಿನ್ನ ಬಿಕ್ಕಟ್ಟುಗಳು ಕಾಣಬಹುದು. ಮಿರ್ಜಿ ಅಣ್ಣಾರಾಯರು ಆಧುನಿಕತೆಗೆ ಮೊರೆ ಹೋಗದೆ ಸಂಪ್ರದಾಯವನ್ನು ಗಟ್ಟಿಗೊಳಿಸುವ ನೆಲೆಯಲ್ಲಿ ಕಾದಂಬರಿಯ ಪಾತ್ರಗಳನ್ನು ನೋಡಬಹುದು.

ತಾರಾಳಿಗೆ ಊಡಿಕೆ ಮದುವೆ ಮಾಡುವುದು. ಅದು ನಲ್ವತ್ತರ ಹರೆಯದ ಅಪ್ಪಣ್ಣನೊಂದಿಗೆ. ಆದರೆ ಇಲ್ಲಿ ಅಪ್ಪಣ್ಣ ಸೋನಾಳೊಂದಿಗಿನ ಅನೈತಿಕ ಸಂಬಂಧ, ಅವಳಿಗೊಂದು ಹೆಣ್ಣು ಮಗುವಿದ್ದುದ್ದು, ಈ ಅನೈತಿಕ ಸಂಬಂಧದ ಫಲವಾಗಿ ರೋಗದಿಂದ ಬಳಲಿರುವುದು ಎಲ್ಲವನ್ನೂ ಅರಿತಾಗ ತಾರಾಳಿಗೆ ಸುಖವೆಂಬುದು ಕನಸಿನ ಬುತ್ತಿಯಾಗುತ್ತದೆ. ಅವರ ಸಂಪ್ರದಾಯಕ್ಕೆ ಕಟ್ಟುಬಿದ್ದು ಜೀವನ ಸಾಗಿಸುವ ಪರಿ ಶ್ಲಾಘನೀಯವಾದರೂ ಸಂಪ್ರದಾಯಿಕ ನೆರಳಿನಲ್ಲಿ ಸ್ತ್ರೀಯನ್ನು ಶೋಷಿಸಿರುವುದು ಸ್ವಾತಂತ್ರ್ಯಪೂರ್ವಕಾಲದ ಮಹತ್ವಗಳಲ್ಲಿ ಒಂದು ಎನ್ನಬಹುದು.

**ಸುಬ್ಬಣ್ಣ**

ಮಾಸ್ತಿಯವರ ಸಾಹಿತ್ಯದ ಪ್ರಸ್ತುತತೆಯಿರುವುದು ಅದು ಸಂಪ್ರದಾಯ ಮತ್ತು ಆಧುನಿಕತೆಗಳ ನಡುವೆ ಕಟ್ಟುವ ಸೇತುವೆಗಳಲ್ಲಿ. ತಮ್ಮ ಜೀವನದ ಕೊನೆಯವರೆಗೂ ಮಾಸ್ತಿಯವರು ಸಂಪ್ರದಾಯಿಕ ಮೌಲ್ಯಗಳನ್ನುಳಿಸಿಕೊಂಡು ಬಂದವರು. ಆದರೆ ಆ ಮೌಲ್ಯಗಳನ್ನು ಮೇಲಿಂದ ಮೇಲೆ ಆಧುನಿಕ ಅನುಭವದ ಪರೀಕ್ಷೆಗೆ ಒಳಪಡಿಸಿದರು. ನಾರಾಯಣಶಾಸ್ತ್ರಿಗಳ ಸಂಸಾರದ ಚಿತ್ರ, ಅರಮನೆಗೆ ಸಂಬಂಧಿಸಿದ ವಿವರಗಳು, ನೀಲಾಸಾನಿಯ ಪಾತ್ರ, ಸುಬ್ಬಣ್ಣನ ಕಲ್ಕತ್ತೆ, ಮುಂಬೈಗಳ ದಿನಗಳು, ಅವನ ಪ್ರಯಾಣದ ವರ್ಣನೆ ಇವೆಲ್ಲಾ ಸ್ವಂತದ ಸೃಷ್ಟಿ. ಅನುಭವದ ಬೇರೆ ಬೇರೆ ನೆಲೆಗಳಿಂದ ದೊರಕಿಸಿದ ಈ ಎಲ್ಲಾ ಸಾಮಾಗ್ರಿಯ ವಿಶ್ವಾಸರ್ಹತೆ ಒಂದೇ ಬಗೆಯದಾಗಿಲ್ಲ. ಎನ್ನುವುದು ಸ್ಪಷ್ಟವಾಗಿದೆ.

ಕತೆಗಾರರಾಗಿ ತಮ್ಮ ಅನುಭವವನ್ನು ವಿವರಿಸುತ್ತಾ ಕತೆಗಳಿಂದ ತಮಗೆ ದೊರಕಿದ ಆನಂದದ ಮೂಲ ಬೇರೆ ಜೀವನವನ್ನು ಅರಿತು ಅದರ ಜೊತೆ ಸೇರುವುದರಲ್ಲಿದೆ ಎಂದು ಮಾಸ್ತಿ ಹೇಳಿದ್ದಾರೆ. 'ಸುಬ್ಬಣ್ಣ' ಕಾದಂಬರಿಯ ಮಟ್ಟಿಗಂತೂ ಈ ಮಾತು ಸಂಪೂರ್ಣವಾಗಿ ನಿಜವಾಗಿದೆ. ಸುಬ್ಬಣ್ಣನ ಜೀವನವನ್ನು ಪ್ರತ್ಯಕ್ಷ ಕಂಡಿರದಿದ್ದರೂ ರಾಮರಾಯರಿಂದ ದೊರೆತ ವಿವರಗಳನ್ನು ಉಪಯೋಗಿಸಿಕೊಂಡು ಅವರು ಅವನ ಇಡೀ ಬದುಕನ್ನು ಅದರ ವೈಯಕ್ತಿಕ ಕೌಟುಂಬಿಕ ಹಾಗೂ ಸಾಮಾಜಿಕ ಹಿನ್ನಲೆಗಳಲ್ಲಿ ಚಿತ್ರಿಸಿದ್ದಾರಲ್ಲದೆ ಕತೆಯ ಮೂಲಕ ತಮ್ಮದೇ ಆದ ಜೀವನ ದರ್ಶನವನ್ನು ಬಿಂಬಿಸಲು ಯತ್ನಿಸಿದ್ದಾರೆ. ಅನಿವಾರ್ಯವಾದ ಮಿತಿಗಳನ್ನು ಮೀರಲೂ ಮತ್ತು ತಮ್ಮ ಕಲಾ ಪ್ರಾಮಾಣಿಕತೆಯನ್ನು ಉಳಿಸಿಕೊಳ್ಳಲು ಮಾಸ್ತಿಯವರು ತಮ್ಮ ಕಾದಂಬರಿಯಲ್ಲಿ ಉಪಯೋಗಿಸುವ ವಿಧಾನಗಳು ಗಮನಾರ್ಹವಾಗಿವೆ. ನಿರೂಪಕನ ಮನೋಧರ್ಮ ಮುಖ್ಯಾಂಶಗಳಲ್ಲಿ ಸಂಪ್ರದಾಯಿಕವಾದರೂ ಇಷ್ಟಕ್ಕೆ ಕೆಡುವುದೆಂದರೇನೋ ನಾ ಕಾಣೇ ಇಂಥ ಹೇಳಿಕೆಗಳು ಅದು ಸಂಪೂರ್ಣವಾಗಿ ಮುಚ್ಚಿಕೊಂಡ ಮನೋಧರ್ಮವಲ್ಲ ಎಂಬುದನ್ನು ಸೂಚಿಸುತ್ತದೆ. ಲೋಕಾಚಾರಗಳ ಬಗ್ಗೆ ನಿರೂಪಕ ನೀಡುವ ಅಭಿಪ್ರಾಯಗಳು, ಪಾತ್ರಗಳು

ಸ್ವಭಾವ ದರ್ಶನದಲ್ಲಿ ತೋರುವ ಎಚ್ಚರ, ಘಟನೆಗಳನ್ನು ಅರ್ಥೈಸುವ ರೀತಿ, ಕಾದಂಬರಿಯನ್ನು ಅರ್ಥೈಸುವ ಒಂದು ನೆಲೆಯನ್ನು ನಿರ್ಮಿಸುತ್ತದೆ.

'ಸುಬ್ಬಣ್ಣ' ಕಾದಂಬರಿಯು 'ಮಾಡಿದುಣ್ಣೊ ಮಹಾರಾಯ' ಕಾದಂಬರಿಯಂತೆ ಒಂದು ಸಂಸ್ಕೃತಿಯ ತಿರುಳನ್ನೇ ಹಿಡಿಯುವ ಮಹತ್ವಾಕಾಂಕ್ಷೆಯನ್ನು ಹೊಂದಿದೆ. "ಸುಬ್ಬಣ್ಣನ ಕೊನೆಯ ದಿನಗಳ ಮನೋಧರ್ಮ ಒಂದು ಆದರ್ಶ ಮನೋಧರ್ಮ ಎಂದು ನನ್ನ ತಿಳುವಳಿಕೆ"[೮] ಎಂಬ ಮಾಸ್ತಿಯವರ ಹೇಳಿಕೆಯಲ್ಲಿ ಕಾದಂಬರಿಯ ಅಂತಃಸ್ವರೂಪದ ಸೂಚನೆಯಿದೆ. ಈ ಮನೋಧರ್ಮ ಸುಬ್ಬಣ್ಣನ ಸಾಧನೆ. ಸುಬ್ಬಣ್ಣನು ಸಂಗೀತವನ್ನು ಆಯ್ದುಕೊಂಡಾಗ ಈ ಆಯ್ಕೆ ಆಧುನಿಕತೆಯ ಪರಿಣಾಮವೆನ್ನುವುದು ಪ್ರಮುಖವಾದ ಅಂಶ. ಆತ ಸಾಮಾಜಿಕ ವ್ಯವಸ್ಥೆಯನ್ನು ಅಲುಗಾಡಿಸುತ್ತಾನೆ. ಅವನ ಕೃತಿಯಿಂದಾಗಿ ಏಕತ್ರ ಕುಟುಂಬ ಒಡೆದು ಎಲ್ಲರೂ ದುಃಖ ಅನುಭವಿಸುತ್ತಾರೆ. ಆದರೆ ಸುಬ್ಬಣ್ಣ ತನ್ನ ಜೀವನದ ಸಾರ್ಥಕತೆಯನ್ನು ಪಡೆಯುವುದು ಸನಾತನ ಮೌಲ್ಯಗಳ ಆಶ್ರಯದಲ್ಲಿಯೇ. "ಸುಬ್ಬಣ್ಣನ ಮುಂಬೈ, ಮೈಸೂರು, ಕಲ್ಕತ್ತದ ಜೀವನದ ಬಗ್ಗೆ ನಿರೂಪಕನಿಗೆ ನೇರವಾದ ಪರಿಚಯವಿಲ್ಲ. ಅದನ್ನವನು ಸುಬ್ಬಣ್ಣ ಮತ್ತು ಇತರರಿಂದ ಕೇಳಿ ತಿಳಿದದ್ದು. ಆದರೆ ನಿರೂಪಕ ಸೀಮಿತ ಅರ್ಥದಲ್ಲಿ ಕಾದಂಬರಿಯ ಪಾತ್ರವೂ ಆಗಿರುವುದರಿಂದ(ನಿರೂಪಕನ ಮಾವ ಸುಭೇದಾರರ ಮನೆತನದೊಂದಿಗೆ ಸುಬ್ಬಣ್ಣನ ನಿಕಟ ಸಂಬಂಧವಿದೆಯಾದ್ದರಿಂದ) ಅವನಿಗೆ ಸುಬ್ಬಣ್ಣನನ್ನು ಸಮೀಪದಿಂದ ನೋಡುವುದು ಸಾಧ್ಯವಾಗಿದೆ. ನಿರೂಪಕನ ನಿಲುವಿನಲ್ಲಿಯೂ ಅನುಮಾನದ ಅಂಶಗಳು ಅವನ ವಿಶ್ವಾಸರ್ಹತೆ ಹೆಚ್ಚುವುದಕ್ಕೆ ಕಾರಣವಾಗುತ್ತವೆ. ಇದು ಕಾದಂಬರಿಯಲ್ಲಿಯ ತಂತ್ರದ ಆಧುನಿಕತೆಯ ಒಂದು ಲಕ್ಷಣ."[೯]

ಸಂಪ್ರದಾಯದ ಪಾತ್ರಗಳಲ್ಲಿ ಸಾಂಕೇತಿಕತೆಯೂ ಅರ್ಥಪೂರ್ಣವಾದಷ್ಟು ಲಲಿತೆಯ ಸಹನೆ, ವಿವೇಕ, ಭಕ್ತಿಗಳು, ಯಜಮಾನಿಯ ಹಟ, ಪಕ್ಷಪಾತ, ಕಾಠಿಣ್ಯ, ಶಾಸ್ತ್ರಿಗಳ ತೂಕದ ನಡತೆ, ನೀಲಾಸಾನಿಯ ಔದಾರ್ಯ ಇವು ಆಧುನಿಕತೆಯೊಂದಿಗೆ ಸಮ್ಮಿಲನವಾಗಿರುವುದು ಪ್ರಮುಖವಾದ ಅಂಶ.

ಈ ಭಾಗದಲ್ಲಿ ಕಾರಂತರು ಹಾಗೂ ಕುವೆಂಪು ಅವರ ಕಾದಂಬರಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

೧. ಚೋಮನದುಡಿ
೨. ಸರಸಮ್ಮನ ಸಮಾಧಿ
೩. ಮರಳಿ ಮಣ್ಣಿಗೆ
೪. ಬೆಟ್ಟದಜೀವ
೫. ಕಾನೂರು ಸುಬ್ಬಮ್ಮ ಹೆಗ್ಗಡಿತಿ

'ಚೋಮನದುಡಿ' ಕಾದಂಬರಿಯ ಯಶಸ್ಸು ಅಸಾಧಾರಣವಾದದ್ದು. ಅಸ್ಪೃಶ್ಯ ಜಾತಿಗೆ ಸೇರಿದವನೊಬ್ಬನಿಗೆ ಭೂಮಿಯ ಒಡೆತನದ ಆಸೆ ಹುಟ್ಟಿದ್ದು, ಅದರಿಂದ ಎದ್ದ ಪ್ರಶ್ನೆಗಳು ಭಾರತೀಯ ಜಾತಿ ವ್ಯವಸ್ಥೆಯ ಸಂದರ್ಭದಲ್ಲಿ ಪರಂಪರಾಗತ ಮೌಲ್ಯಗಳಿಗೆ ಮಾತ್ರ ಮುಖಾಮುಖಿಯಾಗದೆ ವಸಾಹತುಶಾಹಿ ಮೌಲ್ಯಗಳಿಗೂ ಒಂದು ಮಟ್ಟದಲ್ಲಿ ಮುಖಾಮುಖಿ ಯಾಗುವುದು ಈ ಕೃತಿಯ ವೈಶಿಷ್ಟ್ಯ. ತನ್ನ ಕಾಲ ದೇಶಗಳಿಂದ ತುಂಬ ಮುಂದೆ ಇರುವಂತ ಆಸೆ ಚೋಮನದು. "ಚೋಮ ಮೀಸೆ ಹಣ್ಣಾಗುವ ತನಕ ತನ್ನನ್ನು ನಂಬಿ ಬಂದು ಈಗ ಸಾಯುವ ಮೂರು ದಿನಕ್ಕೆ ಮುಂಚೆ, ನನ್ನನ್ನು ಬಿಟ್ಟು ಪಾದ್ರಿಯ ಹಿಂದೆ ಓಡುತ್ತೀಯೋ?"[೧೦] ಎಂದು ಕೇಳಿದಂತೆಯು ಅನಿಸಿತು. ಅವನ ಮೈಯಲ್ಲಿ ರೋಮಾಂಚನವಾಯಿತು. ತಲೆಮಾರುಗಳಿಂದ ನಂಬಿ ಬಂದಿರುವ ದೇವರನ್ನು ಮರೆತು ತಾನಿಂಥ ಉದ್ಧಟ ಕೆಲಸವನ್ನು ಮಾಡುವುದು ಸರಿಯಲ್ಲವೆನಿಸಿತು. ಪಾದ್ರಿ ಮತದವರು ಸಾಯುವುದಿಲ್ಲವೇ? ಕಷ್ಟ, ಸುಖ, ಒಂದಲ್ಲ ಒಂದು ರೀತಿಯಿಂದ ಕ್ರಿಸ್ತೀಯನ್ನವರಿಗೂ ತಪ್ಪದುಂಟೆ ಎಂಬ ವಿಚಾರ ಲಹರಿಯು ಮೂಡಿತು. ಇತ್ತ ತಾನು ನಂಬಿದ ಭೂತವನ್ನು ಮರೆತರೆ ಸಾಯುವ ತನಕ ಅದರ ಉಪದ್ರವ ತಪ್ಪಲಾರದು ಎಂದು ಭೀತಿ ಉಂಟಾಯಿತು. ಅಲ್ಲೇ ವಿಚಾರ ಮಾಡಿದ. ಕೊನೆಗೆ ಧೈರ್ಯದಿಂದ "ಏನೇ ಇರಲಿ ಇದ್ದಂತೆಯೇ ಇದ್ದು, ಬಂದದ್ದನ್ನು ಅನುಭವಿಸುತ್ತೇನೆ ಎಂದು ನೆನೆದು, ಮನೆಗೆ ಮರಳಿದ."[೧೧] ಈ ಪ್ರಸಂಗ 'ಚೋಮನದುಡಿ'ಯ ಅತ್ಯಂತ ಕುತೂಹಲಕಾರಿಯಾದ ಭಾಗಗಳಲ್ಲಿ ಒಂದು. ಈ ಆಧುನಿಕತೆಯ ಬಗ್ಗೆ ಚೋಮನಿಗಿರುವ ಎಲ್ಲ ಭಯ, ಆತಂಕಗಳನ್ನು ಸೂಕ್ಷ್ಮವಾಗಿ ದಾಖಲು ಮಾಡುತ್ತದೆ. ಇಲ್ಲಿ ಕಾರಂತರು ಪಂಜುರ್ಲಿ ಭೂತವನ್ನು ತಂದಿರುವುದರಿಂದ ಚೋಮನ ಬಳಿ ಮನಸ್ಸನ್ನು ಸುಪ್ತ ಪ್ರಜ್ಞೆಯನ್ನು ಅರಿಯಲು ಸಾಧ್ಯವಾಗುತ್ತದೆ. ಆಧುನಿಕತೆಯ ಬಗ್ಗೆ ಈ ಸಂದರ್ಭದಲ್ಲಿ ಮತಾಂತರ ಮತ್ತು ಅದರ ಪರಿಣಾಮದ ಬಗ್ಗೆ ಚೋಮನ ನಿಲುವು ಒಂದು ನಿಲುವು ಮಾತ್ರ. ಗುರುವನ ನಿಲುವನ್ನು ಕಾದಂಬರಿ ಗಮನಿಸಿದೆ. ಇದೇ ರೀತಿ ಸಂಕಪ್ಪಯ್ಯ ಮತ್ತು ಅವನ ತಾಯಿಯ ಧೋರಣೆಗಳಲ್ಲೂ ವ್ಯತ್ಯಾಸಗಳಿದ್ದೇ ಇದೆ. ಬೆಳ್ಳಿಯ ನಿಲುವುಗಳಲ್ಲೂ ದ್ವಂದ್ವಗಳಿವೆ. ಇವುಗಳನ್ನೆಲ್ಲಾ ಒಂದು ವಿನ್ಯಾಸದಲ್ಲಿ ನೋಡಿದಾಗ 'ಚೋಮನ ದುಡಿ' ಕಾದಂಬರಿಯಲ್ಲಿ ಆಧುನಿಕರಣದ ಪ್ರಕ್ರಿಯೆಯ ಒಂದು ಸಂಕೀರ್ಣ ಚಿತ್ರ ಕಣ್ಣಿಗೆ ಬರುತ್ತದೆ. ದಲಿತ ವಿಮೋಚನೆಯ ಒಂದು ಸಾಧ್ಯತೆಯನ್ನಾಗಿ ಗಮನಿಸುತ್ತಿರುವ ಕಾದಂಬರಿ ಆ ಸಾಧ್ಯತೆಯನ್ನು ಪರಮವೆಂಬಂತೆ ನೋಡುತ್ತಿಲ್ಲ. ಮತಾಂತರದ ಚಟುವಟಿಕೆಗಳ ಹಿಂದಿನ ಸಾಮ್ರಾಜ್ಯಶಾಹಿ, ವಸಾಹತುಶಾಹಿ, ರಾಜಕಾರಣವನ್ನು ಕಾದಂಬರಿ ಗಮನಿಸದೇ ಬಿಟ್ಟಿಲ್ಲ. ಪಾದ್ರಿ, ಮಿಂಗೇಲ, ದೊರೆ ಮನ್ವೇಲರ ವರ್ತನೆಗಳನ್ನು ಕಾದಂಬರಿ ಇತ್ಯಾತ್ಮಕವೆಂಬಂತೆ ನೋಡುವುದಿಲ್ಲ. ಮತಾಂತರ ಹೆಚ್ಚೆಂದರೆ ಒಂದು ಅನಿವಾರ್ಯ ಸಾಧ್ಯತೆ ಅಷ್ಟೇ.

'ಚೋಮನದುಡಿ' ಕಾದಂಬರಿಯಲ್ಲಿ ಕಾಣುವಂತೆ ಆಧುನಿಕ ಮೌಲ್ಯಗಳು ಜಡಗೊಂಡ ಸಮಾಜವೊಂದನ್ನು ಆಘಾತಗೊಳಿಸಿದ ಪರಿ ಕುತೂಹಲಕಾರಿಯಾಗಿದೆ. ಈ ಪ್ರಕ್ರಿಯೆಯಲ್ಲಿ ಹಲವು ಬಗೆಯ ಪ್ರತಿಕ್ರಿಯೆಗಳು ದಾಖಲಾಗಿರುವುದು ತೀರ ಸಹಜವಾಗಿದೆ. ಈ ವಿರುದ್ಧ ಪ್ರತಿಕ್ರಿಯೆಗಳ ವಿನ್ಯಾಸ ಕಾದಂಬರಿಯನ್ನು ಕಟ್ಟಿದೆ. ಆದ್ದರಿಂದಲೇ ಕಾದಂಬರಿಯನ್ನು ಸೂಕ್ಷ್ಮವಾಗಿ ಅಭ್ಯಾಸ ಮಾಡಿದಾಗ ಕಾರಂತರು, ಇಲ್ಲಿ ಚೋಮನ ದುರಂತದ ಕಥೆಯನ್ನು ಮಾತ್ರ ಹೇಳುತ್ತಿಲ್ಲ. ಭಾರತೀಯ ಸಮಾಜದ ನಿರ್ದಿಷ್ಟ ಐತಿಹಾಸಿಕ ಸಂದರ್ಭವೊಂದನ್ನು ಕಟ್ಟಿಕೊಟ್ಟಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಚೋಮನ ಸಮಸ್ಯೆ ಇತ್ಯಾರ್ಥವಾಗಬೇಕು. ಆದರೆ ಅದು ವಸಾಹತುಶಾಹಿ ಆಡಳಿತವನ್ನು ಅಧಿಕೃತಗೊಳಿಸುವಲ್ಲಿ ಪರ್ಯಾವಸನಗೊಳ್ಳಬಾರದು ಎಂಬುವುದು ಕಾದಂಬರಿಯ ಒಟ್ಟಾರೆ ದರ್ಶನವಾಗಿದೆ.

"ಆಧುನಿಕತೆ ಪ್ರದೇಶದಿಂದಾಗಿ ಜಡಗೊಂಡ ಸಮಾಜವೊಂದು ಚಲಿಸಲು ಪ್ರಾರಂಭಿಸುವ ಮಹಾದರ್ಶನ ಇದೆ. ಚೋಮನ ಸಮಸ್ಯೆ ಬಗೆಹರಿಯಲೇ ಬೇಕಾದ ಒತ್ತಾಯ ಇದೆ. ಹಿಂದು ಸಂಸ್ಕೃತಿ ಸಂಪ್ರದಾಯ ಇನ್ನುಂದೆ ಕಣ್ಣು ಮುಚ್ಚಿ ನಿರಾತಂಕವಾಗಿ ಕುಳಿತಿರಲು ಸಾಧ್ಯವೇ ಇಲ್ಲ ಎನ್ನುವ ಸ್ಫೋಟಕ ಪರಿಸ್ಥಿತಿಯ ಮುನ್ನೋಟ ಇದೆ. ಹಿಂದೂ ಸಂಸ್ಕೃತಿ ಸಡಿಲಗೊಳ್ಳಬೇಕು, ಹೆಚ್ಚು ಉದಾರವಾಗಬೇಕು ಎನ್ನುವ ಎಚ್ಚರ ಇದೆ. ಹಿಂದೂ ಸಮಾಜ ಎಚ್ಚರಗೊಳ್ಳದಿದ್ದರೆ ತನ್ನ ಎಲ್ಲಾ ಶ್ರೇಣೀಯ ಜನಗಳ ಆಶೋತ್ತರಗಳಿಗೆ ಸ್ಪಂದಿಸದಿದ್ದರೆ, ಎಲ್ಲಾ ಜನರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದಿದ್ದರೆ ಸಂಭವಿಸುವ ವಿನಾಶದ ಆತಂಕ ಇದೆ. ಹಿಂದೂ ಸಮಾಜ ಈ ಸಮಸ್ಯೆಗಳಿಗೆ ಪ್ರತಿಕ್ರಿಯಿಸಲೇಬೇಕಾಗಿದೆ. ಸುಮ್ಮನೇ ಕೂಡಲು ಸಾಧ್ಯವೇ ಇಲ್ಲ. ಹಾಗಾಗಿ 'ಚೋಮನದುಡಿ' ಇಂಡಿಯಾದ ಭೂತ, ವರ್ತಮಾನಗಳ ಬಗ್ಗೆ ಮಾತ್ರ ಹೇಳುತ್ತಿಲ್ಲ. ಅದರ ಭವಿಷ್ಯವನ್ನು ಕಾಣಿಸುತ್ತದೆ. ವಸಾಹತುಶಾಹಿ ಮೂಲಕ ಪ್ರವೇಶಗೊಂಡ ಆಧುನಿಕತೆ ಹುಟ್ಟು ಹಾಕಿರುವ ಹೊಸ ಸಂಘರ್ಷದಲ್ಲಿ ಹುಟ್ಟಲಿರುವ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಚಳುವಳಿಗಳ ಒಂದು ಮುನ್ನೋಟವನ್ನು ಕಾದಂಬರಿ ಕೊಡುತ್ತದೆ."[೧೨] ನಮ್ಮ ಸಂಸ್ಕೃತಿಯನ್ನು ಉಗ್ರವಾಗಿ ಖಂಡಿಸುತ್ತಲೇ ವಸಾಹತುಶಾಹಿ ವಿರೋಧಿ ಧ್ವನಿಯನ್ನು ಹೊರಡಿಸುತ್ತಾ ಇಂಡಿಯಾ ಬದಲಾಗಬೇಕಾದ ಅಗತ್ಯವನ್ನು ಬದಲಾಗಲಿರುವ ಸೂಚನೆಯನ್ನು ನೀಡುತ್ತದೆ. ಸುಧಾರಣೆ ಮತ್ತು ಹೋರಾಟ ಎರಡೂ ಸಾಧ್ಯತೆಗಳು ಕಾಣಿಸುತ್ತದೆ. ಹಾಗಾಗಿ ಆಧುನಿಕತೆಯ ಬಗ್ಗೆ ಇಲ್ಲಿ ಸರಳ ನೈತಿಕ ನಿಲುವುಗಳು ಮುಖ್ಯವಾಗದೇ ಆಧುನೀಕರಣದ ಪ್ರಕ್ರಿಯೆಯಲ್ಲಿ ಅನಿವಾರ್ಯವಾಗಿ ಬದಲಾಗುವ ಬದುಕಿನ ಸ್ವರೂಪ ಕುರಿತ ಗಾಢ ಎಚ್ಚರ ಕುತೂಹಲಗಳು ತುಂಬಿಕೊಳ್ಳುತ್ತವೆ.

'ಬೆಟ್ಟದಜೀವ'ದಂತ ಶ್ರೇಷ್ಠ ಕಾದಂಬರಿಯಲ್ಲೂ ಗೋಪಾಲಯ್ಯ ಮತ್ತು ಶಂಕರಮ್ಮ ಪರಂಪರೆಯ ಎಲ್ಲಾ ಸತ್ವದಿಂದ ಬೆಳಗಿದರೆ ಅವರ ಮಗ ಶಂಭು ಆಧುನೀಕತೆಯ ಕಾಂತಿಯನ್ನು

ಹೊಮ್ಮಿಸುವಂಥ ಪಾತ್ರವಾಗುವುದಿಲ್ಲ. ಆಧುನಿಕತೆಯ ಕುರೂಪ ಮತ್ತು ದೌರ್ಬಲ್ಯಗಳನ್ನಷ್ಟೇ ಅವನು ತೋರುತ್ತಾನೆ. ಹಾಗಾಗಿ ಸಂಘರ್ಷ ತೆಳುವಾಗುತ್ತದೆ. ಶಂಭುವನ್ನು ನಿರಾಕರಿಸುವುದು ಸುಲಭವಾಗುತ್ತದೆ. ಶಂಭುವಿನ ನಿರ್ಗಮನಕ್ಕೆ ದುರ್ಬಲ ಲೈಂಗಿಕ ಕಾರಣವೂ ಸೇರಿ ಸೈದ್ಧಾಂತಿಕ ಸಂಘರ್ಷಕ್ಕಿಂತ ಹೆಚ್ಚಾಗಿ ಸರಳ ನೈತಿಕ ನಿಲುವುಗಳು ವಿಜೃಂಭಿಸುತ್ತವೆ. ಹಾಗೆ ನೋಡಿದರೆ ಕಾರಂತರ ಬಹಳಷ್ಟು ಆಧುನಿಕತೆಯನ್ನು ಪ್ರತಿನಿಧಿಸುವಂತ ಪಾತ್ರಗಳಲ್ಲಿ ಈ ಸಮಸ್ಯೆ ಇದೆ. ಗೋಪಾಲಯ್ಯನೊಬ್ಬನೇ ಇಲ್ಲಿಯ ಮುಖ್ಯ ಪಾತ್ರವಲ್ಲ, ಗೋಪಾಲಯ್ಯ ಗ್ರಾಮ ಸಂವೇದನೆಯ ಗ್ರಾಮ ಮೌಲ್ಯಗಳ ಪ್ರತಿನಿಧಿಯಾಗಿ ನಮ್ಮೆದುರಿಗಿದ್ದರೆ, ನಾಗರಿಕ ಪ್ರಜ್ಞೆಯ ಪ್ರತಿನಿಧಿಯಾಗಿ ಶಿವರಾಮಯ್ಯ ಕತೆಯನ್ನು ಪ್ರವೇಶಿಸುತ್ತಾನೆ. ಆತ್ಮವೃತ್ತಾಂತದ ತಂತ್ರವನ್ನು ಕಾರಂತರು ಉಪಯೋಗಿಸುವುದು ನಿಮಿತ್ತವಲ್ಲ. ಕತೆಯ ದೃಷ್ಟಿಕೋನ ಶಿವರಾಮಯ್ಯನ ದೃಷ್ಟಿಕೋನ, ಶಿವರಾಮಯ್ಯ ನಗರವಾಸಿಯಾದರೂ ಅವನ ವೈಯಕ್ತಿಕ ಗುಣಗಳಿಂದಾಗಿ ಅವನಲ್ಲಿ ಗ್ರಾಮ ಜೀವನವನ್ನು ಅರ್ಥೈಸಿಕೊಳ್ಳುವ ಶಕ್ತಿ ಇದೆ. ಶಿವರಾಮಯ್ಯ ಅವರು ಸಂಕೇತಿಸುವ ಸಂವೇದನೆ ಜೀವನ ದೃಷ್ಟಿಗಳ ಸಂಬಂಧದಲ್ಲಿಯೇ ಈ ಕತೆಯ ವಸ್ತುವನ್ನು ನಾವು ಗುರುತಿಸಬೇಕಾಗುತ್ತದೆ. ಇಲ್ಲಿ ನಾಗರಿಕ ಜೀವನ ಮೌಲ್ಯಗಳು ಮತ್ತು ಗ್ರಾಮ ಜೀವನ ಮೌಲ್ಯಗಳು ಇವುಗಳ ನಡುವೆ ನಡೆದ ತಾಕಲಾಟ ಕಾಣುತ್ತೇವೆ. ನಗರ ಜೀವನದ ಒತ್ತಡಗಳಿಂದ ತಪ್ಪಿಸಿಕೊಂಡು ಬಂದ ಶಿವರಾಮಯ್ಯನಿಗೆ ಇದು ಸಹಜವಾದ ಭಾವನೆ. ಗೋಪಾಲಯ್ಯ ನಿಸರ್ಗದೊಡನೆ ನಡೆಸಿದ ಹೋರಾಟ. ಹೆಚ್ಚಾಗಿ ಭೂತಕಾಲಕ್ಕೆ ಸಂಬಂಧಿಸಿದ್ದು. ಮುಖ್ಯವಾಗಿ ನಾವಿಲ್ಲಿ ಕಾಣುವುದು ಶಿವರಾಮಯ್ಯನ ನಾಗರಿಕ ಸಂವೇದನೆ. ಗ್ರಾಮ ಜೀವನದ ವಾತಾವರಣದಲ್ಲಿ ಸೃಷ್ಟಿಸುವ ಅನುಭವ, ಆ ಅನುಭವದ ಮೂಲಕ ವ್ಯಕ್ತವಾಗುವ ಅರ್ಥ-ಪರಂಪರೆ ಪ್ರಮುಖವಾದವು. ಶಿವರಾಮಯ್ಯ ಗ್ರಾಮಜೀವನಕ್ಕೆ ಆಕರ್ಷಿತನಾಗುವ, ಹೊಂದಿಕೊಳ್ಳುವ ಕ್ರಿಯೆ ಪ್ರಾರಂಭವಾಗುತ್ತದೆ. ಈ ಕ್ರಿಯೆಯ ಏರಿಳಿತಗಳೇ ಕಾದಂಬರಿಯನ್ನು ರೂಪಿಸುವ ಮುಖ್ಯ ಅಂಶಗಳು. ಶಿವರಾಮಯ್ಯ ಗ್ರಾಮಜೀವನದ ಅನುಭವವನ್ನು ತನ್ನಲ್ಲಿ ಅರ್ಥವತ್ತಾಗಿ ಸೇರಿಸಿಕೊಳ್ಳುತ್ತಾನಷ್ಟೇ. ಅಲ್ಲದೆ ತನ್ನ ಸ್ವಭಾವ ಸಹಜವಾದ ಅನುಕಂಪದ ಮೂಲಕ ನಗರ ಜೀವನದ ತನ್ನ ವಿಶಾಲವಾದ ಅನುಭವದ ಮೂಲಕ ಅವರ ದುಃಖವನ್ನು ನಿವಾರಿಸಲು ಶಕ್ತನಾಗುತ್ತಾನೆ. ಶಿವರಾಮಯ್ಯ ಕೆಳಬೈಲಿನ ಹೊಳೆಯಲ್ಲಿ ಮೀಯುವುದು, ಇದು ಅವನಿಗಾಗುವ ಗ್ರಾಮಜೀವನದ ಸಂಸ್ಕಾರದ ಒಂದು ಪ್ರತೀಕ. "ನಿಮ್ಮ ಊರು ಕೈಲಾಸವಯ್ಯ ಎಂದು ಕೆಳಬೈಲನ್ನು ಹೊಗಳಿದರೂ ನನ್ನಂಥವನಿಗೆ ತಿಂಗಳಿಗೆ ನೂರು ರೂಪಾಯಿ ಕೊಡುತ್ತೇನೆಂದರೂ ಇಲ್ಲಿಯೇ ಇದ್ದು ಆರು ತಿಂಗಳ ಸಮಯವನ್ನು ಕಳೆಯಲಾರೆ"[೧೩] ಎಂದು ಶಿವರಾಮಯ್ಯ ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾನೆ. ಈ ರೀತಿಯ ಸಂದಿಗ್ಧತೆ ಅವನ ವೈಚಾರಿಕ, ಬಾವುಕ ಜೀವನಕ್ಕೆ ಸಂಬಂಧಪಟ್ಟ ಒಂದು ಮುಖ್ಯವಾದ

ನಾಗರಿಕ ಅಂಶ. ಗೋಪಾಲಯ್ಯ ಶಂಕರಮ್ಮನೊಡನೆ ಅವನು ಬೆಳೆಯಿಸಿಕೊಂಡು ಬಂದ ಮಧುರ ಸಂಬಂಧ ಶಿವರಾಮಯ್ಯ ಅನುಭವಿಸುವ ಸಂಪ್ರದಾಯದ ಅಂಶಗಳು, ಉದಾ. ಶಿವರಾಮಯ್ಯನಿಗೆ ಗೋಪಾಲಯ್ಯನವರ ಹಸ್ತದಿಂದ ಅಭ್ಯಂಜನ ನಡೆಯುತ್ತದೆ. ಬೆಟ್ಟದ ಜೀವದ ಆಧುನಿಕ ತಂತ್ರ ನಮಗೆ ಆಶ್ಚರ್ಯವನ್ನುಂಟು ಮಾಡುತ್ತದೆ. ಇಲ್ಲಿನ ತಂತ್ರ, ಕತೆಯ ಹುಟ್ಟು, ಬೆಳವಣಿಗೆ ಮುಕ್ತಾಯವು ಸಂಪ್ರದಾಯಿಕ ಬಂಧನದಿಂದ ದೂರ ಸರಿದು ತನ್ನದೇ ಆದ ಬಂಧವನ್ನು ಸಿದ್ಧಪಡಿಸಿಕೊಳ್ಳುತ್ತದೆ. ಪಾತ್ರ, ಘಟನೆ, ಆಚರಣೆಗಳ ವಾಸ್ತವಿಕತೆ, ಅವುಗಳನ್ನೊಂದು ನಿಯಂತ್ರಿತ ಉದ್ದೇಶಕ್ಕಾಗಿ ಬಳಸಿಕೊಂಡ ಜಾಣ್ಮೆ ಎನ್ನಬಹುದು.

'ಸರಸಮ್ಮನ ಸಮಾಧಿ' ಕಾದಂಬರಿಯಲ್ಲಿ ಅಪಾರ ಜೀವನಶ್ರದ್ಧೆ ಉಳ್ಳ ಮತ್ತು ಪರಂಪರಾನುಗತ ಮೌಲ್ಯಗಳನ್ನು ನಂಬುವ ಪಾತ್ರಗಳು ಸೀತಕ್ಕ, ಜಾನಕಿ..... ಮುಂತಾದ ಪಾತ್ರಗಳು ಈ ವರ್ಗಕ್ಕೆ ಸೇರುತ್ತವೆ. "ದೇವರ ಮುಂದೆ ಮನುಷ್ಯನ ಆಟವೇ ಎಂದು ಪ್ರಕೃತಿಯ ಸ್ವಾಮಿತ್ವವನ್ನು ಒಪ್ಪಿಕೊಳ್ಳುವ ರೀತಿಯಲ್ಲಿ ಸಮಾಜದಲ್ಲಿ ಪರಂಪರಾನುಗತವಾದ ಮೌಲ್ಯಗಳ ಪ್ರಭುತ್ವವನ್ನು ಇಲ್ಲಿ ಎಲ್ಲರೂ ಸ್ವೀಕರಿಸುತ್ತಾರೆ."[೧೪] ಸರಸಮ್ಮ ಮಹಾಸತಿಯಾಗಿ ಇತರರಿಂದ ಪೂಜೆಗೊಳ್ಳುವ ಹಿನ್ನಲೆಯಲ್ಲಿ ಅವಳ ಬದುಕೊಂದು ಬಯಕೆಯ ಕತೆಯಾಗಿರುವ ಗೌಪ್ಯವಿದೆ. ಸಂಪ್ರದಾಯಸ್ಥ ಮನೆತನದ ಹಿರಣಯ್ಯ ಭಾಗೀರಥಿ ಮದುವೆಯಾದ ಹೊಸದರಲ್ಲಿ ಮುಕ್ತ ಪ್ರಣಯಕ್ಕಾಗಿ ಹಾತೊರೆದು ತಂದೆ ವೆಂಕಟರಮಣಯ್ಯನ ಕೋಪಕ್ಕೆ ಗುರಿಯಾಗುತ್ತಾರೆ. ಸುನಾಲಿನಿಯಂಥ ವಿದ್ಯಾವಂತೆಗೆ ಕೇವಲ ಮೈ ಒಪ್ಪಿಸಿಬಿಡುವುದರಿಂದಲೇ ಸುಖವಿಲ್ಲ, ಮನಸ್ಸು ಒಪ್ಪಬೇಕು ಎಂಬುದು ಅವಳ ತೀರ್ಮಾನ. ರಾತ್ರಿ ಮೌನವಾಗಿಯೇ ಕಳೆಯುವ ಗಂಡನ ಬಗೆಗೆ ಅವಳಿಗೆ ಅಸಮಧಾನವಿದೆ. ಒಂದು ಪಕ್ಷ ಅಣ್ಣಪ್ಪಯ್ಯ ಬಾಯಿ ತೆರೆದನೆಂದರೆ ಅಂಗಡಿಧಾರಣೆ–ಮಂಗಳೂರಿನಲ್ಲಿ ಗೋಟಡಿಕೆ ದರ, ಬೊಂಬಾಯಿಯಲ್ಲಿ ಜಿಂಕ್‌ಶೀಟಿನವರ ಇವೇ ಹೊರತು ಬೇರೆ ಸುದ್ದಿಯಿಲ್ಲ. ಸಕ್ಕರೆಯಂಥ ಮಾತಾದರೂ ಅಪಚಾರವೇ ಎಂದು ಸುನಾಲಿನಿ ಕೊರಗುತ್ತಾಳೆ. ಹೆಂಡತಿ ಮೆಟ್ರಿಕ್ ಕಲಿತಿದ್ದಾಳೆ. ತನಗೆ ವಿದ್ಯೆ ಇಲ್ಲ ಆದ್ದರಿಂದಲೇ ಅವಳ ಚುಚ್ಚುಮಾತುಗಳನ್ನು ಕೇಳಬೇಕಾಗಿದೆ ಎಂದು ಅಣ್ಣಪ್ಪಯ್ಯ ಸಿಟ್ಟುಗೊಳ್ಳುತ್ತಾನೆ. ಈ ಹುಂಬುತನ ಕಂಡು ಸುನಾಲಿನಿಗೆ ನಗು ಬರುತ್ತದೆ. ವಿವಾಹವೆಂಬ ಸಂಸ್ಕಾರದ ಹಿಂದೆ ಅಡಗಿರುವ ಹಿರಿಯರ ಮೌಢ್ಯದ ಬಗೆಗೆ ಅವಳಿಗೆ ತಿರಸ್ಕಾರವಿದೆ. ಕುಟುಂಬ ವ್ಯವಸ್ಥೆಯೊಳಗೆ ಅಸಂತುಷ್ಟಿ ಹೊರಗೆ ಸ್ಫೋಟಗೊಳ್ಳದೇ ಒಳಗೊಳಗೆ ಕುದಿಯುತ್ತಿರುವ ಆವಿಗೆಯ ಬೆಂಕಿಯಂತೆ ತಿಮ್ಮಪ್ಪಯ್ಯನ ಹೆಂಡತಿ ಜಾನಕಿ, ರಾಮಣ್ಣಯ್ಯನ ಮಗಳು ಜಲಜಾಕ್ಷಿ, ಅಣ್ಣಪ್ಪ, ಕಮ್ತಿಯ ಹೆಂಡತಿ ಸುನಾಲಿನಿ, ಸೀತಾರಾಮನ ಪತ್ನಿ ನಾಗವೇಣಿ ಕಾಣಿಸಿಕೊಳ್ಳುತ್ತಾರೆ. ಸುನಾಲಿನಿ ಪ್ರಗತಿಗಾಮಿ ವಿಚಾರಗಳುಳ್ಳ, ಪ್ರತಿಭಟನೆಯ ಕೀರಲು ಧ್ವನಿಯಂತೆ ಕಂಡರೂ ಅದು ಸ್ಫೋಟಗೊಳ್ಳದೆ ಸಂಪ್ರದಾಯದ ಮಡುವಿನಲ್ಲಿಯೇ ಇರುವುದು ಕಾಣಬಹುದು.

'ಮರಳಿ ಮಣ್ಣಿಗೆ' ಈ ಕಾದಂಬರಿಯ ರಾಮೈತಾಳರಿಗೆ ಹಳೆಯ ತಲೆಮಾರಿನ ಎಲ್ಲಾ ಗುಣಾವಗುಣಗಳೂ ಇವೆ. ಅವರು ಹೆಂಡತಿಯೊಂದಿಗೆ ಪಟ್ಟಾಂಗ ಹೊಡೆಯುವವರಲ್ಲಿ ತಾವು ಸತ್ತ ಮೇಲೆ ಪಿಂಡ ಹಾಕಿ ಸದ್ಗತಿ ಕಾಣಿಸಲೆಂದು ಮೊದಲ ಹೆಂಡತಿ ಪಾರ್ವತಿ ಬದುಕಿರುವಾಗಲೇ ಎರಡನೇ ಹೆಂಡತಿಯಾಗಿ ಸತ್ಯಭಾಮೆಯನ್ನು ಮನೆತುಂಬಿಸಿಕೊಳ್ಳುತ್ತಾರೆ. ಪುರುಷ ಪ್ರಧಾನ ವ್ಯವಸ್ಥೆಯ, ಸಂಪ್ರದಾಯನಿಷ್ಠ ಸಮಾಜದ ಮೌಲ್ಯಗಳು ಇವರ ವ್ಯಕ್ತಿತ್ವದಲ್ಲಿ ಸೇರಿ ಹೋಗಿವೆ. ರಾಮೈತಾಳರು ಹಳೆ ತಲೆಮಾರಿನ ಹಿಂದೂಧರ್ಮದ ಮೌಲ್ಯಗಳ ಪ್ರತಿರೂಪವಾದವರು. ಜಾತಿ ಪದ್ಧತಿ, ಅಸ್ಪೃಶ್ಯತೆಯನ್ನು ಶ್ರದ್ಧೆಯಿಂದ ಅನುಸರಿಸುವವರು. ಸ್ತ್ರೀ ಬುದ್ಧಿ ಪ್ರಳಯಾಂತಕ ಎಂದು ನಂಬಿದವರು. ಹೆಣ್ಣು ಮಕ್ಕಳಿಗೆ ಚಿಕ್ಕಾಸು ಕೊಟ್ಟವರಲ್ಲ. ಅವರೆನಿದ್ದರೂ ದುಡಿಯಲಿಕ್ಕೆ ಇರುವ ಜೀವಿಗಳೂ. ಅದರ ಆಚೆಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಸ್ವಾತಂತ್ರ್ಯವಿದ್ದರೂ ಗಂಡಸರ ಮನಸ್ಸಿಗನುಗುಣವಾಗಿ ಗರ್ಭಧರಿಸಿ ಹೆರಲಿಕ್ಕೆ ಮಾತ್ರ ಅವರಿಗೆ ಆರ್ಥಿಕ, ಸಾಮಾಜಿಕ ಸ್ವಾತಂತ್ರ್ಯವಿಲ್ಲ. ಕೌಟುಂಬಿಕ ಸ್ವಾತಂತ್ರ್ಯವಿದ್ದರೂ ಚೆನ್ನಾಗಿ ರಾಮೈತಾಳರಿಗೆ ಅಡುಗೆ ಮಾಡಿ ಹಾಕುವುದರಲ್ಲಿ ಮಾತ್ರ ಹೆಂಡತಿ ಪಾರ್ವತಿ ಹಳೇ ಸನಾತನ ಸಂಪ್ರದಾಯಿಕ ಪರಂಪರೆಯವಳು. ಗಂಡನ ಸೇವೆಯೇ ಪತ್ನಿಯ ಸ್ವರ್ಗ ಎಂದೇ ನಂಬಿದವಳು. ಗಂಡನಿಗೆ ಒಂದು ಪ್ರತಿ ಮಾತಾಡದೇ ಆದಷ್ಟು ಆತನನ್ನು ಮೆಚ್ಚಿಸುವುದರಲ್ಲಿಯೇ ಬದುಕಿನ ಸಾರ್ಥಕತೆಯನ್ನು ಅನುಭವಿಸುತ್ತಾಳೆ. ಈಕೆಯ ಸೊಸೆಯಾಗಿ ಬಂದ ಎರಡನೆಯ ತಲೆಮಾರಿನ ನಾಗವೇಣಿಯೂ ಕೂಡ ಸಂಪ್ರದಾಯಿಕ ಪರಂಪರೆ ಮೌಲ್ಯಗಳ ಕಟ್ಟಳೆಯನ್ನು ದಾಟುವುದಿಲ್ಲ. ಏನೇ ಬದಲಾವಣೆ ಸಂಭವಿಸಿದರೂ ಪಾರ್ವತಿಯ ಮನೋಭಾವವೇ ನಾಗವೇಣಿಯಲ್ಲಿ ಮುಂದುವರೆಯುತ್ತದೆ. ರಾಮೈತಾಳರ ಮಗ ಲಚ್ಚ ತನ್ನ ಪರಂಪರೆಯ ವಿರುದ್ಧ ಸಂಘರ್ಷಕ್ಕಿಳಿದಂತೆ ನಾಗವೇಣಿ ತನ್ನ ಗಂಡನೊಂದಿಗೆ ಸಂಘರ್ಷಕ್ಕಿಳಿಯುವುದಿಲ್ಲ.

ರಾಮೈತಾಳರ ತಲೆಮಾರಿನವರೇ ಆದ ಶೀನಮಯ್ಯನು ಇವರ ಜೊತೆಗೆ ವಾಸ ಮಾಡುತ್ತಾರೆ. ಶೀನಮಯ್ಯನು ಬ್ರಾಹ್ಮಣ ಈತ ಆಧುನಿಕತೆಗೆ ಬೇಗನೆ ಹೊಂದಾಣಿಕೆ ಮಾಡಿಕೊಂಡು ಅನುಕೂಲ ಪಡೆಯುತ್ತಾನೆ. ಆದರೆ ರಾಮೈತಾಳರು ಆಧುನಿಕತೆಯನ್ನು ಶೀನಮಯ್ಯನಿಗಿಂತ ಭಿನ್ನವಾಗಿ ಆಲೋಚಿಸಿ ಸ್ವೀಕರಿಸುತ್ತಾರೆ. ಸಂಪ್ರದಾಯಿಕ ಮೌಲ್ಯಗಳಲ್ಲಿ ನಿಷ್ಠೆ ಇಟ್ಟವರಾಗಿದ್ದರಿಂದ ಮಗ ಲಚ್ಚನೊಂದಿಗೆ ಸಂಘರ್ಷ ಪ್ರಾರಂಭವಾಗುತ್ತದೆ. ಶೀನಮಯ್ಯ ತನ್ನ ಮಕ್ಕಳು ಆಧುನಿಕ ಪರಿಸ್ಥಿತಿಗೆ ಹೊಂದಿಕೊಂಡಿದ್ದನ್ನು ನೋಡಿ ಸಂತೋಷಪಡುತ್ತಾನೆ. ಹಣವನ್ನು ಗಳಿಸುತ್ತಾನೆ. ಶೀನಮಯ್ಯ ಇಷ್ಟಪಡುವ ಬದುಕನ್ನು ರಾಮೈತಾಳರು ತಿರಸ್ಕರಿಸುತ್ತಾರೆ. ರಾಮೈತಾಳರು ಜೀವನ ನಡೆಸುವುದು ಪೌರೋಹಿತ್ಯ ಮತ್ತು ತೃಪ್ತಿಯಿಂದ. ಪೌರೋಹಿತ್ಯ ಮತ್ತು ಕೃಷಿ ಪರಂಪರೆಯಿಂದ ಬಳುವಳಿಯಾಗಿ ಬಂದದ್ದು ಎಲ್ಲಾ ದೃಷ್ಟಿಯಿಂದಲೂ ಗ್ರಾಮೀಣ ಸಂಪ್ರದಾಯಿಕ ಭಾರತೀಯ ಜೀವನ. ರಾಮೈತಾಳರಿಗೆ

ಬದಲಾವಣೆ ಬೇಕು. ಸಾಮಾಜಿಕ ರಾಜಕೀಯ ಬದಲಾವಣೆಯಲ್ಲಿ ಅದೇನಿದ್ದರೂ ವೈಯಕ್ತಿಕ ಲಾಭ ತರುವ ಆರ್ಥಿಕ ಬದಲಾವಣೆ, ಸಮಾಜದಲ್ಲಿ ಒಳ್ಳೆ ಸ್ಥಾನ ನೀಡುವ ಶ್ರೀಮಂತಿಕೆ. ಲಚ್ಚನು ಅನುಭವಿಸುವ ಆಧುನಿಕತೆ, ವೈಯಕ್ತಿಕ ಲೋಭ, ನೈತಿಕ ಅಧಃಪತನದಿಂದ ಕೂಡಿದ್ದು. ಆ ಅಧಃಪತನದಲ್ಲಿ ಸನಾತನ ಮೌಲ್ಯಗಳನ್ನು ಮುರಿಯುವ ಮನಸ್ಥಿತಿ. ಅದು ಯಾವುದಕ್ಕೂ ಉಪಯೋಗವಿಲ್ಲದ್ದು ಮತ್ತು ಸಮಾಜಕ್ಕೆ ಮತ್ತಷ್ಟು ಮಾರಕವಾದದ್ದು. ಅವನ ಸಂಘರ್ಷ ವೈಯಕ್ತಿಕ ಅವಸಾನದಲ್ಲಿಯೇ ಮುಗಿಯುತ್ತದೆ. ಆದರೆ ಹೂವಯ್ಯನವರು ಸಾರಾಸಗಟಾಗಿ ಹಳೆಯ ವ್ಯವಸ್ಥೆಯನ್ನು ಕಿತ್ತೊಗೆದು ಹೊಸ ಜಗತ್ತನ್ನು ಕಟ್ಟುವ ಆದರ್ಶವಾಗಿ ಕ್ರಿಯಾಶೀಲತೆಯುಳ್ಳದ್ದು. ಈ ಇಬ್ಬರೂ ಬ್ರಿಟಿಷ್ ಶಿಕ್ಷಣ ಆಧುನಿಕತೆಗೆ ಒಳಗಾಗಿ ಬೆಳೆದವರು. ಲಚ್ಚ ಆಧುನಿಕತೆಯನ್ನು ಕರಗಿಸಿಕೊಂಡ ಒಂದು ಬಗೆಯಾದರೆ, ಹೂವಯ್ಯ ಆಧುನಿಕತೆಯನ್ನು ಕರಗಿಸಿಕೊಂಡು ಮತ್ತೊಂದು ಸೃಷ್ಟಿಸುವುದರ ಬಗೆಯಾಗುತ್ತಾನೆ. ಹಳೆಯವರ ವಿರುದ್ಧ ಆಧುನಿಕ ಮನಸ್ಸು ಕ್ರಿಯಾಶೀಲವಾದಾಗಲೇ ಸಂಘರ್ಷ ಹುಟ್ಟುವುದು. ವಸಾಹತುಶಾಹಿಯ ಆಧುನಿಕತೆಯು ರಾಮೈತಾಳರಂತಹವರಿಗೆ ಅರಿಗಿಸಿಕೊಳ್ಳಲಾರದ ಮೌಲ್ಯವಾಗಿ ಕಾಣುತ್ತದೆ. ಮಗ ಲಚ್ಚ ರಾಮೈತಾಳರ ಕನಸಿನಂತಾಗಿದ್ದರೆ ಆಧುನಿಕತೆಯ ಬಗ್ಗೆ ಯಾವ ತಕರಾರು ಇರುತ್ತಿರಲಿಲ್ಲ. ಲಚ್ಚನ ವೈಯಕ್ತಿಕ ಸೋಲು ರಾಮೈತಾಳ ಸರಸ್ವತಿ–ಪಾರ್ವತಿ ನಾಗವೇಣಿಯರಲ್ಲಿ ವಿಷಾಧ ಹುಟ್ಟಿಸುತ್ತದೆ. ಸೂಕ್ಷ್ಮವಾಗಿ ನೋಡಿದರೆ, ರಾಮೈತಾಳರ ಪರಂಪರಾಗತ ಮೌಲ್ಯಗಳ ಬಂಧನವೇ ಲಚ್ಚನ ಲೋಭತನಕ್ಕೆ, ಸೋಲಿಗೆ, ಅನೈತಿಕತೆಗೆ ಈಡು ಮಾಡುತ್ತದೆಂದು ಅನಿಸುತ್ತದೆ.

ಕೋಡಿ ಗ್ರಾಮದಲ್ಲಿ ವಾಸ ಮಾಡುವ ರಾಮೈತಾಳರು ಮತ್ತು ಶೀನಮಯ್ಯರು ಆಗಲೇ ಇಂಗ್ಲೀಷ್ ಶಿಕ್ಷಣ ಆಧುನಿಕತೆ ಬೇರೆ ಪ್ರದೇಶಗಳಲ್ಲಿ ಕಾಲಿಟ್ಟು ಕ್ರಿಯಾಶೀಲವಾಗಿರುವುದನ್ನು ನೋಡಿದ್ದಾರೆ. "ಬೆಂಗಳೂರು, ಮೈಸೂರು, ಮದ್ರಾಸ್ ಬಾಂಬೆಯಂತಹ ನಗರಗಳು ಸೃಷ್ಟಿಯಾಗಿವೆ. ಈ ನಗರಗಳಿಗೂ ರಾಮೈತಾಳರಂತಹವರು ಪರಂಪರಾಗತ ವೃತ್ತಿಯನ್ನು ತ್ಯಜಿಸಿ ಬೇರೆ ವೃತ್ತಿಯಿಂದ ಜೀವನವನ್ನು ಪ್ರಾರಂಭಿಸಿ ಯಶಸ್ಸನ್ನು ಪಡೆದಿದ್ದಾರೆ. ಉಡುಪಿ, ಕುಂದಾಪುರ, ಮಂಗಳೂರು, ಮೈಸೂರು, ಬೆಂಗಳೂರು, ಮುಂಬಯಿ ನಗರಗಳಲ್ಲಿ ಇವರ ಜಾತಿಯವರು ಬೇರೆ ವೃತ್ತಿಗಳಲ್ಲಿ ತೊಡಗಿ ಶ್ರೀಮಂತಿಕೆ ಪಡೆದಿದ್ದಾರೆ. ಇವರು ಅನ್ನದಾನವನ್ನು ಮತ್ತು ಸಂಸ್ಕೃತ ವಿದ್ಯೆಯನ್ನು ಶ್ರೇಷ್ಠವಾದುದೆಂದು ನಂಬಿದವರು"[೧೫] ಈಗ ಹೊಟ್ಟೆಲಿಟ್ಟು ಅನ್ನವನ್ನು ಮಾರಿ ಸಂಪಾದಿಸುತ್ತಿದ್ದಾರೆ. ಸಂಸ್ಕೃತ ಭಾಷೆಯನ್ನು ಬದಿಗಿಟ್ಟು ಇಂಗ್ಲೀಷ್ ಕಲಿತು ದೊಡ್ಡ ಹುದ್ದೆಗಳನ್ನು ಪಡೆದಿದ್ದಾರೆ. ಆಧುನಿಕತೆಯ ಪ್ರವೇಶ ಹಳೆಯ ಮೌಲ್ಯಗಳೊಂದಿಗೆ ಸೆಣಸಾಡಿ ಜಯ ಪಡೆದಿದೆ. ಈ ಸಂಘರ್ಷದಲ್ಲಿ ರಾಮೈತಾಳರ ಹೊಂದಾಣಿಕೆ ಕಾಣುತ್ತೇವೆ.

ಲಚ್ಚನ ಬೇಜವಾಬ್ದಾರಿಯೂ ಪ್ರತ್ಯೇಕತೆಯ ಪರಿಣಾಮ ಆಗುವುದು ನಾಗವೇಣಿಯ ಮೇಲೆ, ಮರಳಿ ಮಣ್ಣಿಗೆಯಲ್ಲಿಯ ಪಾತ್ರಗಳಲ್ಲೆಲ್ಲಾ ಹೆಚ್ಚು ಸಂಕೀರ್ಣತೆಯನ್ನು ಹೊಂದಿದ ಪಾತ್ರ ನಾಗವೇಣಿಯದು. ಒಂದು ರೀತಿಯಿಂದ ಅವಳು ಸರಸ್ವತಿ, ಪಾರ್ವತಿಯರು ನೆಚ್ಚಿಕೊಂಡು ಬಂದ ಸಂಪ್ರದಾಯಿಕ ಮೌಲ್ಯಗಳನ್ನೆ ಪ್ರತ್ಯೇಕಿಸಿದರೆ, ಇನ್ನೊಂದು ರೀತಿಯಿಂದ ರಾಮನು ಪ್ರತಿನಿಧೀಕರಿಸುವ ಹೊಸ ಮೌಲ್ಯಗಳು ರೂಪುಗೊಳ್ಳುವುದಕ್ಕೆ ಕಾರಣಳಾಗುತ್ತಾಳೆ. ಲಚ್ಚನಿಂದ ಅವಳ ಜೀವನಾನುಭವ ಜಟಿಲವಾಗುತ್ತದೆ. ಆದರೂ ಧೃತಿಗೆಡದೆ ದಡವನ್ನು ತಲುಪುತ್ತಾಳೆ. ನಾಗವೇಣಿಯಲ್ಲಿ ಕಂಡುಬರುವ ಅಂತರ್ಮುಖತೆ ಅವಳಲ್ಲಿ ಸದಾ ಜಾಗೃತವಾಗಿರುವ ವಿವೇಕದ ಒಂದು ಕುರುಹು. ಈ ಅಂಶ ಎಂತಹ ಪರಿಸ್ಥಿತಿಯಲ್ಲಿಯೂ ಅವಳು ಧೈರ್ಯವನ್ನು ಕಾಯ್ದುಕೊಂಡು ಬರುವುದಕ್ಕೆ ಕಾರಣವಾಗುತ್ತದೆ. ನನ್ನ ಬಾಳ್ವೆ ಕೆಡಿಸಲು ಬಂದ ಪ್ರಾಣಿ ಎಂದು ಅವಳು ತನ್ನ ಗಂಡನನ್ನು ತಿಳಿದರೂ ಅವನನ್ನು ಒಬ್ಬ ಮನುಷ್ಯನನ್ನಾಗಿ ಮಾಡುವುದಕ್ಕೆ ಎಷ್ಟು ಸಾಧ್ಯವಿದೆಯೋ ಅಷ್ಟೆಲ್ಲವನ್ನೂ ಮಾಡುತ್ತಾಳೆ. ತನ್ನ ಅತ್ತೆಯನ್ನು ನಿರ್ಗತಿಕಳನ್ನಾಗಿ ಬಿಟ್ಟು ಹೋಗುವ ದುರ್ಬಲ ಪರಿಸ್ಥಿತಿಯನ್ನು ಎದುರಿಸಲಾರದೆ ಕೊರಗುತ್ತಾಳೆ. ನಂತರ ಸಂಪೂರ್ಣ ಹೊಣೆಯನ್ನು ಹೊರುವ ನಿರ್ಧಾರ ಶಕ್ತಿ ಅವಳಲ್ಲಿದೆ ಎಂತಲೇ ಎಷ್ಟೇ ಸಂಪ್ರದಾಯಿಕ ಮೌಲ್ಯಗಳು ಒಪ್ಪಿಕೊಂಡರೂ, ಅವಳು ಆಧುನಿಕತೆಯ ಪ್ರತೀಕವೇ. ನಿಜವಾಗಿ ನೋಡಿದರೆ ನಾಗವೇಣಿ ಸಂಪ್ರದಾಯ ಮತ್ತು ಆಧುನಿಕತೆ ಎರಡಕ್ಕೂ ಭದ್ರವಾದ ಸೇತುವೆಯನ್ನು ಕಟ್ಟುತ್ತಾಳೆ.

ಸಂಪ್ರದಾಯದ ರಾಮೈತಾಳರು ಒಂದು ಕಡೆ, ಆಧುನಿಕ ಪ್ರವಾಹದಲ್ಲಿ ಮುಳುಗಿದ ಮಗ ಲಚ್ಚ ಇನ್ನೊಂದು ಕಡೆ, ಇವರ ವಂಶದ ಕುಡಿ ರಾಮ ಅದೇ ಆಧುನಿಕತೆಯನ್ನು ಅರಿತು ಅದು ಹೇಗೆ ಬಳಸಿಕೊಳ್ಳಬೇಕೆಂಬ ಅರಿವಿದ್ದು, ಅದರಿಂದ ಒಳ್ಳೆಯ ವ್ಯಕ್ತಿಯಾಗಿ ಮಾದರಿಯಾಗುತ್ತಾನೆ. ಲಚ್ಚ ಆಧುನಿಕತೆಯ ಕೆಡುಕಿನ ಒಂದು ಭಾಗ ಮಾತ್ರ ಆಗುತ್ತಾನೆ. ಅದೇ ಆಧುನಿಕತೆಯಿಂದ ಲಚ್ಚನ ಮಾವ ಸದಾಶಿವ, ನಾಗವೇಣಿಯ ತಂಗಿ ಗಂಡ ಮಾಧವ ಚೆನ್ನಾಗಿ ಓದಿ ಉದ್ಯೋಗ ಸೇರಿ ಗೌರವಯುತ ಜೀವನ ಸಾಗಿಸುತ್ತಾರೆ. ಶೀನಮಯ್ಯನ ಹಿರಿಯ ಮಕ್ಕಳು ಉತ್ತಮ ಜೀವನ ರೂಡಿಸಿಕೊಂಡಿದ್ದಾರೆ. ಆದರೆ ಲಚ್ಚ ಮಾತ್ರ ಹಾಳಾಗಿ ಹೋಗುತ್ತಾನೆ.

ರಾಮೈತಾಳರ ಮೊಮ್ಮಗ ರಾಮನ ಕಾಲಕ್ಕೆ ಆಧುನಿಕತೆ ಮತ್ತು ಸಂಪ್ರದಾಯಗಳ ನಡುವಿನ ಮುಖಾಮುಖಿ ಸ್ವಲ್ಪಮಟ್ಟಿಗೆ ಶಮನಗೊಂಡು ಆಧುನಿಕತೆಯ ಅನುಕೂಲ ಸೌಲಭ್ಯತೆಗಳನ್ನು ಭಾರತೀಯರು ಅನುಭವಿಸಿದರು. ಆಧುನೀಕರಣ ವಿಸ್ತರಿಸಿದಂತೆ ಹೊಸ ಸಮಸ್ಯೆಗಳು ಬೆಳೆಯ ತೊಡಗಿದ್ದವು. ಮುಖ್ಯವಾದುದು ರಾಮನ ನಿರುದ್ಯೋಗ, ರಾಮ ವಿದ್ಯಾವಂತನಾಗಿದ್ದು, ರಾಮೈತಾಳರಂತೆ ಜೀವನವನ್ನು ಎದುರಿಸಲಾರ. ಪಾರ್ವತಿ ಸರಸ್ವತಿಯರಂತೆ ನಿಷ್ಠುರ ದುಡಿಮೆ ಸಾಧ್ಯವಾಗದು ಮತ್ತು ಕೋಡಿಯಲ್ಲಿ ಯಾರು ಜೀವನ ಮಾಡಲು ಬಯಸುತ್ತಿಲ್ಲ. ಎಂತದೋ

ಕೆಲಸ ಹುಡುಕಿಕೊಂಡು ನಗರಕ್ಕೆ ವಲಸೆ ಹೋಗುತ್ತಿದ್ದಾರೆ. ಊರು ಖಾಲಿಯಾಗುತ್ತದೆ. ಸೂರಪ್ಪ, ಬಚ್ಚಿಯಂತವರು ಇನ್ನು ಒಕ್ಕಲುಗಳಾಗಿ ಕಾಲ ದೂಡುತ್ತಿದ್ದಾರೆ. ಈ ಸಂದರ್ಭದಲ್ಲಿ ರಾಮನ ಆಯ್ಕೆ ಕಠಿಣವಾಗುತ್ತದೆ. ಆದರು ವಿದ್ಯಾಭ್ಯಾಸ ಅವನಿಗೆ ರಾಷ್ಟ್ರೀಯ ಪ್ರಜ್ಞೆ ತಂದು ಕೊಡುತ್ತದೆ. ಆಧುನಿಕತೆ ಶಿಕ್ಷಣವು ವಿದ್ಯಾವಂತರ ಸಂಖ್ಯೆಯನ್ನು ಹೆಚ್ಚಿಸಿದಂತೆ ನಗರಗಳು ಬೆಳೆದಂತೆ ಹೊಸ ಆಯಾಮ ಪಡೆಯುತ್ತದೆ. ರಾಮ ಬಹಳ ಎಚ್ಚರದಿಂದ ತಾತ ಮತ್ತು ತಂದೆಗಿಂತ ಭಿನ್ನವಾದ ದಾರಿಯನ್ನು ಕಾಣಬೇಕಾಗಿದೆ. ತನ್ನ ದಾರಿ ಯಾವುದೆಂಬುವುದು ಸ್ಪಷ್ಟವಾಗುತ್ತಿಲ್ಲ. ಹೊಸ ತಲೆಮಾರಿನವರ ಪ್ರತಿನಿಧಿಯಾಗಿ ರಾಮ ಕಂಡುಬರುತ್ತಾನೆ. ಏಕೆಂದರೆ ಹೊಸ ಪೀಳಿಗೆಗೆ ಹಿಂದಿನದನ್ನು ಅರಗಿಸಿಕೊಳ್ಳುವ ಮನಸ್ಥಿತಿ ಇಲ್ಲ. ವಾಸ್ತವ ಸಮಸ್ಯೆಗಳನ್ನು ಎದುರಿಸುವ ಧೈರ್ಯವೂ ಇಲ್ಲ. ಅಂತಹ ಕಠಿಣ ಸಂದಿಗ್ಧ ಸ್ಥಿತಿಯಲ್ಲಿ ರಾಮ ನಿಂತಿದ್ದಾನೆ.

"ಅನೈತಿಕತೆ, ವಂಚನೆ, ಮೋಸ, ಭ್ರಷ್ಟಾಚಾರ, ಅಪನಂಬಿಕೆ, ಪರಸ್ಪರ, ಅನುಮಾನ, ಶ್ರೀಮಂತ ದೇಶಗಳ ಪರೋಕ್ಷ ಸುಲಿಗೆ–ಆಧುನಿಕತೆಯ ನಾನಾ ಮುಖಗಳು ರಾಮನಂತವರಿಗೆ ಮಂಕು ಹಿಡಿದಿವೆ. ಪರಂಪರೆ ಆಧುನಿಕತೆಯ ಗೊಂದಲ ಕಾಡುತ್ತಲೇ ಇದೆ. ರಾಮ ಹಲವು ಸಾಧ್ಯತೆಗಳನ್ನು ರೂಢಿಸಿಕೊಂಡಿದ್ದಾನೆ. ಮಾಸ್ತರನಾಗುತ್ತಾನೆ. ಪೀಡಿಲು ನುಡಿಸುತ್ತಾನೆ, ಚಿತ್ರಕಲೆ ಬಲ್ಲವನಾಗಿದ್ದಾನೆ. ರಾಷ್ಟ್ರೀಯ ಚಳುವಳಿಯಲ್ಲೂ ಭಾಗವಹಿಸಿದ್ದಾನೆ. ಹೋಟೇಲಿನಲ್ಲಿ ಕೆಲಸ ಮಾಡಿದ್ದಾನೆ. ತಂದೆಯ ಅವನತಿಯನ್ನು ಕಣ್ಣಾರೆ ನೋಡಿದ್ದಾನೆ. ಬಡತನ ಅನುಭವಿಸಿದ್ದಾನೆ. ರಾಮ ಮಣ್ಣಿಗೆ ಮರಳುತ್ತಾನೆ. ಇದು ಪರಿಸ್ಥಿತಿಯ ಆಯ್ಕೆ."[೧೬] ತನ್ನ ಕೆಲಸಕ್ಕಾಗಿ ನಗರಗಳನ್ನು ಅಲೆಯುತ್ತಾನೆ. ಎಲ್ಲಾ ಕಡೆಯೂ ನಿರುದ್ಯೋಗದ ಸಮಸ್ಯೆ ತಲೆ ಎತ್ತಿ ನಿಂತಿದೆ. ಈ ಮೂರು ತಲೆಮಾರುಗಳ ಬೆಳವಣಿಗೆ ನೆಲೆಯಲ್ಲಿಯೇ ಹೊಸ ಆಯ್ಕೆಯ ಇಕ್ಕಟ್ಟುಗಳನ್ನು ಬಿಟ್ಟಿದೆ. ಆಧುನಿಕತೆಯ ಮೊದಲ ಪ್ರಕ್ರಿಯೆ ಪರಂಪರೆಯೊಂದಿಗೆ ಹೋರಾಡುವ ಜೀವನ ಪ್ರೀತಿಯಾಗಿ ಸಂವಾದ ನಡೆಸುವ ಸಾಧ್ಯತೆಯಿಂದ ದೂರ ಸರಿದು ಹೋಳಾಗುತ್ತದೆ. ಇದನ್ನು ಮತ್ತೆ ಕೂಡಿಸುವ ಪ್ರಯತ್ನ ಸಾಧ್ಯವಾಗುವುದೇ ಇಲ್ಲ. ಆದರೆ ವೈಯಕ್ತಿಕ ನೆಲೆಯಲ್ಲಿ ಅಸ್ತಿತ್ವ ಕಾಣಲು ಪ್ರಯತ್ನಿಸುವ ರಾಮೈತಾಳರು, ಅದೇ ಸ್ಥಿತಿಯ ಲಚ್ಚನಷ್ಟು ವಿಘಟನೆಯ ನೆಲೆಗೆ ಯಾಕೆ ದೂಡಲ್ಪಡುವುದಿಲ್ಲವೆಂದರೆ ಅವರು ಹಿರಿದಾದುದರ ಬಗೆಗೆ ಸ್ವಲ್ಪಮಟ್ಟಿಗಾದರೂ ಶ್ರದ್ಧೆ ಗೌರವವನ್ನು ಉಳಿಸಿಕೊಂಡಿದ್ದರು ಎಂಬುವುದೇ ಆಗಿದೆ. ತಾವು ಬೆಳೆದು ಬಂದ ವೈದಿಕ ಪರಂಪರೆಯಲ್ಲಿ ನಂಬಿಕೆ ಇರಿಸಿಕೊಂಡಿದ್ದರು. ರಾಮೈತಾಳರ ಬಗೆಯ ಶ್ರದ್ಧೆ ನಂಬಿಕೆಗಳು ಸಿಡಿದು ಬೀಳುವ ಸಂದರ್ಭದಲ್ಲಿ ಸಹನೆಯಿಂದ ಸ್ವೀಕರಿಸುವಂತೆ ಮಾಡುತ್ತವೆ. ಪ್ರಾಯಶಃ ಆಧುನಿಕ ಮೌಲ್ಯಗಳಿಗೂ, ಆ ಸಂಪ್ರದಾಯ ಪರಂಪರೆ ಮೌಲ್ಯಗಳಿಗೂ ಇರುವ ಮುಖ್ಯ ವ್ಯತ್ಯಾಸ ಮತ್ತು ಅನುಸಂಧಾನ ಇರುವುದು ಇಲ್ಲೆ ಅನಿಸುತ್ತದೆ. ಆದ್ದರಿಂದ ಆಧುನಿಕತೆಯ ಕೆಟ್ಟ ಪ್ರತಿನಿಧಿಯಾದ ಲಚ್ಚ ಪರಂಪರೆಯ ಮೌಲ್ಯಗಳಿಗೆ ಮತ್ತು

ಮಾನವೀಯ ಅಂತಕರಣಕ್ಕೆ ವಿದ್ರೋಹಿ ನೆಲೆಯಿಂದಲೇ ಪ್ರತಿಕ್ರಿಯಿಸುತ್ತಾನೆ. ಆದರೆ ಮುಂದುವರೆ ಯುವ ರಾಮ ಪರಂಪರೆ ಮತ್ತು ಆಧುನಿಕತೆಗಳ ಪ್ರಬುದ್ಧ ಮೀಮಾಂಸಕನಾಗುತ್ತಾನೆ.

**ಕಾನೂರು ಹೆಗ್ಗಡಿತಿ ಹಾಗೂ ಮಲೆಗಳಲ್ಲಿ ಮದುಮಗಳು**

'ಕಾನೂನು ಹೆಗ್ಗಡಿತಿ' ಕಾದಂಬರಿಯಲ್ಲಿ ಆಧುನಿಕ ಶಿಕ್ಷಣ ಪಡೆದ ಹೂವಯ್ಯ, ರಾಮಯ್ಯ ಒಂದು ನೆಲೆಯಲ್ಲಿದ್ದರೆ, ಅವರ ಮನೆತನ, ಊರು, ಚಂದ್ರೇಗೌಡ, ಮನೆ ಮಂದಿ, ದುಡಿಯುವ ವರ್ಗ ಇನ್ನೊಂದು ಕಡೆಗಿದ್ದಾರೆ. ಜಮೀನ್ದಾರಿ ಆಳ್ವಿಕೆ ದುಡಿಯುವ ವರ್ಗಗಳ ನಡುವಿನ ಶೋಷಣೆ, ಪುರೋಹಿತಶಾಹಿ ಹಿಡಿತದಿಂದ ಇಡೀ ಸಮಾಜ ಮೌಢ್ಯಗಳಿಂದ ತುಂಬಿ ಹೋಗಿದ್ದನ್ನು ಹೂವಯ್ಯ ಎದುರುಗೊಳ್ಳುತ್ತಾನೆ. ವೈಜ್ಞಾನಿಕ ಮನೋಧರ್ಮದ ಹೂವಯ್ಯ ತನ್ನ ಊರಿನ ಜನರ ಮೌಢ್ಯ, ಅಜ್ಞಾನ, ಶೋಷಣೆಯಿಂದ ಪಾರಾಗಲು ಯತ್ನಿಸಿದಂತೆ ಸಮಾಜವನ್ನು ಮುನ್ನಡೆಸಲು ಪ್ರಯತ್ನಿಸುತ್ತಾನೆ. ಆದರೆ ಹೂವಯ್ಯನ ಶಕ್ತಿ, ಪರಂಪರಾಗತವಾಗಿ ಬೆಳೆದು ಮೌಢ್ಯ, ಅಜ್ಞಾನವನ್ನು ತೊಡೆದು ಹಾಕಲು ಸಾಧ್ಯವಾಗುವುದಿಲ್ಲ. ಕುವೆಂಪು ಆಧುನಿಕತೆಯನ್ನು ಇಂಗ್ಲೀಷ್ ಶಿಕ್ಷಣವನ್ನು ಮತ್ತು ವಿಜ್ಞಾನವನ್ನು ಇಷ್ಟಪಡುತ್ತಾರೆ.

'ಮಲೆಗಳಲ್ಲಿ ಮದುಮಗಳು' ಕಾನೂರು ಹೆಗ್ಗಡಿತಿ ಕಾದಂಬರಿಗಳಲ್ಲಿ ಸ್ಪಷ್ಟವಾಗಿ ವಸಾಹತುಶಾಹಿ ಶಿಕ್ಷಣ ಮತ್ತು ಆಧುನಿಕತೆಗಳ ಪ್ರಭಾವ ಪರಿಣಾಮ ದಟ್ಟವಾಗಿದೆ. ಸಾಹಿತ್ಯ ರಚನೆಯಲ್ಲಿ ಆಸ್ಪದವೇ ಇಲ್ಲದ ಲೋಕವೊಂದರ ಅನಾವರಣ ಈ ಕೃತಿಯಲ್ಲಾಗುತ್ತದೆ. ವಸಾಹತುಶಾಹಿ ಅನೇಕ ಸುಧಾರಣೆಯೊಂದಿಗೆ ಮಲೆನಾಡು ಪ್ರದೇಶವನ್ನು ಪ್ರವೇಶ ಮಾಡುತ್ತಿತ್ತು. ಈ ಕೃತಿಗಳು ಮುಖ್ಯವಾಗಿ ಪುರೋಹಿತಶಾಹಿಯಿಂದ ಬಿಡುಗಡೆಯಾಗಲು ವಸಾಹತುಶಾಹಿಯ ಸುಧಾರಣೆಗಳನ್ನು ಶೂದ್ರರು, ದಲಿತರು, ಆದರದಿಂದ ಸ್ವೀಕರಿಸುತ್ತಾರೆ. ಸೈಕಲ್, ಕಂದೀಲು ಬಂದಾಗ ಅವುಗಳನ್ನು ಮಾಯೆಯಂತೆ ನೋಡಿದರೂ ಅವುಗಳ ಅನುಕೂಲತೆಯನ್ನು ಸ್ವೀಕರಿಸುತ್ತಾರೆ. ಅಂತಮ್ಮನ ಹೋಟೇಲು, ಕಾಫಿ ಬದುಕಿನ ಮುಖ್ಯ ಭಾಗವೇ ಆಗುತ್ತದೆ. ದೇವಯ್ಯ ಕ್ರೈಸ್ತಧರ್ಮದ ವಿಚಾರಗಳಿಗೆ ಒಲಿಯುವುದೇ ಪುರೋಹಿತಶಾಹಿಯ ರೀತಿಗಳನ್ನು ಬುಡಮೇಲು ಮಾಡುವುದಕ್ಕೆ. ವಸಾಹತುಶಾಹಿಯ ಶಿಕ್ಷಣ ಆಧುನಿಕತೆಯಿಂದ ಶೂದ್ರರು ಅಕ್ಷರ ಕಲಿತು ಹಳೇ ತಲೆಮಾರಿನ ಅಸಮಾನ ಮೌಲ್ಯಗಳ ವಿರುದ್ಧ ಬಂಡೇಳಲು ಸಾಧ್ಯವಾಗುತ್ತದೆ. ದೇವಯ್ಯನಲ್ಲಿ ಪರಂಪರಾಗತ ಮೌಲ್ಯಗಳನ್ನು ವಿರೋಧಿಸುವ ಗುಣ ಬೆಳೆಯುತ್ತಿರುವುದು ಹೂವಯ್ಯನಲ್ಲಿ ಹೆಮ್ಮರವಾಗಿ ಬೆಳೆಯುತ್ತದೆ. ವಸಾಹತುಶಾಹಿ ನೀಡಿದ ಶಿಕ್ಷಣದಿಂದ ಹೂವಯ್ಯ ರೂಪುಗೊಂಡಿದ್ದಾನೆ. ಈ ಶಿಕ್ಷಣವಿಲ್ಲದಿದ್ದರೆ ಹೂವಯ್ಯ ಚಂದ್ರೇಗೌಡರೋ, ಕಲ್ಲೆಗೌಡರೋ, ಸುಬ್ಬಣ್ಣ ಹೆಗ್ಗಡೆಯವರೋ ಆಗಿ ಗುತ್ತಿಯ ಸಂತತಿಯ ರಕ್ತ ಹೀರುವ ಜಿಗಣೆಯಾಗುತ್ತಿದ್ದರು. ಮಂಜಯ್ಯಭಟ್ಟರಿಗೆ, ವೆಂಕಪ್ಪಯ್ಯ ಜೋಯಿಸರಿಗೆ

ತಲೆಬಾಗಿ ಅವರ ಮೌಢ್ಯದ ಕೂಪದಲ್ಲಿ ನರಳುತ್ತಿದ್ದನು. ಶೂದ್ರರಿಗೆ, ದಲಿತರಿಗೆ ಧ್ವನಿ ಬಂದದ್ದೇ ಬ್ರಿಟಿಷ್ ಶಿಕ್ಷಣದಿಂದ. ಅವರು ಕೊಟ್ಟ ವೈಚಾರಿಕತೆಯಿಂದ. "ಇಂಗ್ಲಿಷಿನವರು ಇಂಡಿಯಾಕ್ಕೆ ಬರದಿದ್ದರೆ ನಾನು ಕುಪ್ಪಳ್ಳಿಯಲ್ಲಿ ಸಗಣಿ ತಟ್ಟಿಕೊಂಡು ಬ್ರಾಹ್ಮಣರ ಗದ್ದೆ ಉತ್ತುಕೊಂಡು ಇರುತ್ತಿದ್ದೆ. ಅವರೊಡನೆ ಕ್ರೈಸ್ತ ಮಿಶನರಿಗಳು ಬರದಿದ್ದರೆ ನಾನು ಶ್ರೀರಾಮಾಯಣದರ್ಶನಂ ಬರೆದ ಕವಿಯಾಗುತ್ತಿರಲಿಲ್ಲ. ವೈದಿಕ ಮತ ಮೌಢ್ಯದ ಕೆಸರು ಸಂಧಿಯಲ್ಲಿ ಒದ್ದಾಡುವ ಮೂಢ ಶೂದ್ರ ಹಂದಿಯಾಗಿರುತ್ತಿದ್ದೆ"[೧೭] ಎಂಬ ನಿಲುವು ಹೂವಯ್ಯನ ವ್ಯಕ್ತಿತ್ವವನ್ನು ಕಟ್ಟಿಕೊಟ್ಟಿದೆ. ಈ ವೈಚಾರಿಕತೆ ಎರಡು ಕೃತಿಗಳಲ್ಲಿ ಪ್ರಧಾನ ಧಾರೆಯಾಗಿ ಹರಿದುಬರುತ್ತದೆ. ಅದು ಶೂದ್ರರ, ದಲಿತರ ಬದುಕಿನ ಸ್ವರೂಪದೊಂದಿಗೆ ಸಂಘರ್ಷ ಹೂಡುತ್ತಾ ಮುನ್ನಡೆಯುತ್ತದೆ. ಈ ವೈಚಾರಿಕತೆಯಿಂದ ಮೊದಲ ಹೊಡೆತ ಬೀಳುವುದೇ ಪುರೋಹಿತಶಾಹಿಗೆ. ಪುರೋಹಿತಶಾಹಿಯ ಹಿಡಿತದಲ್ಲಿದ್ದ ಸಮುದಾಯಗಳಿಗೆ ಹೂವಯ್ಯನ ಆಧುನಿಕ ವ್ಯಕ್ತಿತ್ವದಿಂದ ಗೊಂದಲ, ಭಯ, ಆತಂಕ ಉಂಟಾಗುತ್ತದೆ. ಆ ವ್ಯಕ್ತಿತ್ವ ಬೆಳೆದಂತೆ ಅವು ನಿವಾರಣೆಯಾಗಿ ತಿಳುವಳಿಕೆ ಮೂಡುತ್ತದೆ. ಹೂವಯ್ಯನ ಸುಧಾರಣೆ, ವೈಚಾರಿಕ ಮನಸ್ಸು ಪ್ರಧಾನವಾಗಿ ವಿರೋಧಿಸುವುದು ವೈದಿಕ ಅನುವಂಶೀಕ ಶ್ರೇಷ್ಠತೆ, ಹೂವಯ್ಯ ಹಳೇ ತಲೆಮಾರಿನ ಜಿಡ್ಡುಗಟ್ಟಿದ ಮೌಲ್ಯಗಳ ಜೊತೆಗೆ ಜಮೀನುದಾರಿಕೆ ವ್ಯವಸ್ಥೆಯ ಜೊತೆಗೆ ಹೋರಾಡುತ್ತಾನೆ. ಏಕೆಂದರೆ ಹೂವಯ್ಯನ ತಲೆಮಾರು ಸಹ ಅಜ್ಞಾನ, ಅನಕ್ಷರತೆ, ಮೂಢನಂಬಿಕೆಗಳಿಂದ ಇಂದಿಗೂ ವೈದಿಕ ಕುತಂತ್ರಕ್ಕೆ ಬಲಿಯಾಗಿರುವರು. ಬ್ರಿಟಿಷ್ ಶಿಕ್ಷಣದಿಂದ ಹೂವಯ್ಯ ಹೊಸ ಪ್ರಜ್ಞೆ ಪಡೆದಿದ್ದಾನೆ.

ಕುವೆಂಪು ಕಾದಂಬರಿಗಳಲ್ಲಿ ನೇರವಾಗಿ ಇಂಥ ಅಪಾರ ಜನಶಕ್ತಿಯ ರಾಷ್ಟ್ರೀಯತೆಯ ಅನುಭವವಾಗುವುದಿಲ್ಲ. ತುಂಬಾ ಕುತೂಹಲಕಾರಿಯಾದ ಸಂಗತಿಯೆಂದರೆ ಕುವೆಂಪು ಕಾದಂಬರಿಗಳಲ್ಲಿ ಕಾಣಿಸಿಕೊಳ್ಳುವ ಶುದ್ರಾತಿಶೂದ್ರ, ಬಡವ ಜನಸಮೂಹ ಇಂಥ ರಾಷ್ಟ್ರೀಯತೆಗೆ ಎದುರಾದದ್ದು. ಗುತ್ತಿಗೆ ಯಾವ ಊರಿನ ನೆಲೆಯೂ ಅಲ್ಲ. ಅವನದೇ ಆದ ದೇಶ, ಊರು, ಮನೆಯೆಂಬುದಿಲ್ಲ, 'ಕಾನೂರು ಹೆಗ್ಗಡಿತಿ' ಕಾದಂಬರಿಯ ಓಬಯ್ಯ ಕೂಡಾ ಒಕ್ಕಲಾಗಿದ್ದರೂ ಅವನಿಗೆ ನೆಲೆಯೂರುವ ಪರಿಕಲ್ಪನೆಯಿಲ್ಲ. ಹೀಗೆ ಎಲ್ಲಾ ಶೂದ್ರ ವರ್ಗದವರು ಒಟ್ಟಾಗಿ ಹೋರಾಟ ಮಾಡುವ ವಿಧಾನ ಪರೋಕ್ಷವಾಗಿ ಕಾಣಬರದಿದ್ದರೂ ಅವರ ಸಿಟ್ಟು ರೋಷ ಮುಂತಾದವುಗಳು ರಾಷ್ಟ್ರೀಯತೆಯ ವಿರುದ್ಧ ಸಂಕೇತಗಳಾಗಿವೆ. ಹಾಗಾಗಿ ಗಾಂಧಿ ಚಿಂತನೆ, ವಿವೇಕನಂದ, ರಾಮಕೃಷ್ಣ ಪರಮಹಂಸರ ಪ್ರಭಾವ ರಾಷ್ಟ್ರೀಯತೆಯೇ ಕುವೆಂಪು ಕಾದಂಬರಿಗಳ ಮುಖ್ಯ ನೆಲೆಯಾಗಿದೆ.

ರಾಜರಾಮ ಮೋಹನರಾಯರ ವೈಚಾರಿಕತೆ ಮತ್ತು ರಾಜಕೀಯ ನೆಲೆಗಳು ಕನ್ನಡದ ಇಂದಿರಾಬಾಯಿಯಲ್ಲಿ ಪ್ರವೇಶಿಸಿದಂತೆ 'ಕಾನೂರು ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು'

ಕಾದಂಬರಿಗಳಲ್ಲಿ ಪ್ರವೇಶಿಸಿಲ್ಲ. ಇನ್ನೂ ಆಶ್ಚರ್ಯವೆಂದರೆ 'ಇಂದಿರಾಬಾಯಿ' ಕಾದಂಬರಿಯಲ್ಲಿ ವಿಧವೆಯ ಮರುವಿವಾಹ ನಡೆದರೆ 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಸುಬ್ಬಮ್ಮ ಎನ್ನುವ ಯಜಮಾನಿ ವಿಧವೆಯ ಸಾವು ಸಂಭವಿಸುತ್ತದೆ. ಬಾಲ್ಯವಿವಾಹ, ಸತಿ ನಿಷೇಧದಂತಹ ಪರಿಕಲ್ಪನೆಗಳು, ಮಸೀದೆ, ಚರ್ಚುಗಳ ಚರ್ಚೆ ವಿಚಾರ ಕ್ರಾಂತಿಗೆ ಆಹ್ವಾನಿಸಿರುವ ದಿಟ್ಟತನಗಳು ಕನ್ನಡದಲ್ಲಿ ರೂಪುಗೊಂಡಿರುವುದೇ ಅನೇಕ ವೈರುಧ್ಯಗಳ ಮೂಲಕ. ಈ ರೀತಿಯ ವಿಚಾರಧಾರೆಗಳು ಒಂದೆಡೆಯಿಂದ ಸಂಸ್ಕೃತಿಯ ಜೊತೆಗೆ ಸಂವಾದ ನಡೆಸುತ್ತಿರುತ್ತದೆ. ಈ ಸಾಂಸ್ಕೃತಿಕ ಪುನರ್ ನಿರ್ಮಾಣ ಜನರನ್ನು ನಾಗರೀಕರನ್ನಾಗಿ, ಹಸನ್ಮುಖಿಗಳನ್ನಾಗಿ ಮಾಡುತ್ತದೆ ಎಂದು ನಂಬಿದ ಬುದ್ಧಿ ಜೀವಿಗಳು ವಸಾಹತುಶಾಹಿ ಸಂಸ್ಕೃತಿ ನಿರ್ಮಿಸಿದ ವೈಚಾರಿಕ ಚೌಕಟ್ಟಿನಲ್ಲಿ ಯೋಚಿಸಿದರು. "ಕುವೆಂಪು, ಬೇಂದ್ರೆ, ಮಾಸ್ತಿ ಮೊದಲಾದವರು ಸಾಂಸ್ಕೃತಿಕ ಪುನರ್ ನಿರ್ಮಾಣಗಳನ್ನು ಪ್ರಧಾನವಾಗಿ ತಮ್ಮ ಬರಹಗಳಲ್ಲಿ ಪ್ರತಿಪಾದಿಸಿದ್ದಾರೆ. ಕುವೆಂಪು ಅವರ ರಾಷ್ಟ್ರೀಯತೆಯಲ್ಲಿ ಗಾಂಧಿಯ ಧರ್ಮದ ರಾಜ್ಯವೇ ಮುಖ್ಯವಾಗುತ್ತದೆ. ಗಾಂಧಿ ಧರ್ಮರಾಜ್ಯದ ಪರಿಕಲ್ಪನೆಯಲ್ಲಿ ಆದರ್ಶ ಜಮೀನ್ದಾರನು ಕೂಡಾ ತನ್ನ ತ್ಯಾಗದಿಂದ ಅರ್ಥಪೂರ್ಣವಾಗಬಲ್ಲ. ಈ ನಿಲುವು ವರ್ಗ ಸಮರವನ್ನು ವಿರೋಧಿಸುವ ನಿಲುವಾಗಿದ್ದರೂ ಗಾಂಧಿಯ ಈ ವಾದ ಈ ಸಂದರ್ಭದಲ್ಲಿ ಹೆಚ್ಚು ಪ್ರಚಾರಕ್ಕೆ ಬಂತು. ಹಾಗಾಗಿಯೇ ಕುವೆಂಪು ಅವರ ಜಮೀನ್ದಾರ ಕೂಡಾ ರಾಷ್ಟ್ರೀಯತೆಯನ್ನು ಆರಾಧಿಸಬಲ್ಲ ಮೌಲ್ಯಾಧಾರಕನಾಗುತ್ತಾನೆ."[೧೮] ಕಾನೂರು ಚಂದ್ರೇಗೌಡರ ಮನೆಯ ದರ್ಬಾರನ್ನು ವರ್ಣಿಸುವಲ್ಲಿಯೇ ಈ ಅನುಭವ ವ್ಯಕ್ತವಾಗಿದೆ.

"ಅಂಗಳದ ಮೂಲೆಯಲ್ಲಿ ಅಡಿಗೆ ಒಲೆ, ಪಕ್ಕದಲ್ಲಿ ಮಣ್ಣಾದ ನೇಗಿಲು, ಜಗುಲಿಯ ಮೇಲೆ ಒಂದು ಹೆಗ್ಗಡಿಯಾರದ ಸುತ್ತಲೂ ತಿರುಪತಿಯ ಬಣ್ಣದ ಚಿತ್ರಗಳಿದ್ದವು. ಜೊತೆಗೆ ರವಿವರ್ಮನ ಬಣ್ಣದ ದೇವತೆಗಳೂ ಕುಳಿತಿದ್ದರು. ಒಬ್ಬಬ್ಬರ ದೇಶ ಭಕ್ತರ ಪಟಗಳು ಭಾರತಾಂಭೆಯ ಚಿತ್ರಪಟವೂ ಅಲ್ಲಿದುದು ಸರ್ವವ್ಯಾಪಿಯಾಗುತ್ತಿದ್ದ ರಾಷ್ಟ್ರೀಯ ಮಹಾಸಭೆಯ ಪ್ರಭಾವವು ತನ್ನ ಕ್ಷೇಮಕರವಾದ ಆಶೀರ್ವಾದ ಹಸ್ತವನ್ನು ಆ ಮಲೆನಾಡಿನ ಮೂಲೆಗೂ ಚಾಚಿತ್ತು ಎಂಬುದಕ್ಕೆ ಸ್ಪಷ್ಟವಾಗಿ ಸಾಕ್ಷಿಯಾಗಿ ಆ ಮನೆಯಲ್ಲಿ ಪ್ರಾಚೀನ ನವೀನಗಳ ಸ್ನೇಹವೋ, ಸಮರವೋ ನಡೆಯತೊಡಗಿದ್ದಂತೆ ತೋರುತ್ತಿತ್ತು"[೧೯] ಸಂಘರ್ಷದ ಸ್ಥಿತಿಯೇ ಇಲ್ಲದ ಈ ವ್ಯವಸ್ಥೆಯಲ್ಲಿ ರಾಷ್ಟ್ರೀಯತೆಯನ್ನು ಅತ್ಯಂತ ಗೌರವದಿಂದ ಸ್ವೀಕರಿಸುವ ಗೌಡರು ಆಧುನಿಕ ರಾಷ್ಟ್ರದ ಎಲ್ಲ ಮೌಲ್ಯಗಳನ್ನು ಪ್ರತಿನಿಧಿಸುತ್ತಾರೆ.

ಆದರೆ ಕಾನೂರು, ಮುತ್ತಳ್ಳಿ, ಕೆಳಕಾನೂರು, ಸೀತೆಮನೆ, ನೆಲ್ಲುಹಳ್ಳಿಗಳು, ಜಮೀನುದಾರಿಕೆಯ ಪುರೋಹಿತಶಾಹಿಯ ಪರಂಪರಾಗತ ಹಿಂದೂ ಮೌಲ್ಯಗಳಲ್ಲಿಯೇ ತೊಳೆಯುತ್ತಿದ್ದವು. ಆಗೊಮ್ಮೆ ಈಗೊಮ್ಮೆ ಪೊಲೀಸರು, ಅಧಿಕಾರಿಗಳು ಬರುತ್ತಿದ್ದರು. ಬೇರೆ ವಿಚಾರಗಳು ಸುಳಿಯುತ್ತಿರಲಿಲ್ಲ.

ಮೀನುಬೇಟೆ, ಕಾಡುಹಂದಿಗಳ ಬೇಟೆ, ಏಡಿ ಶಿಕಾರಿ, ಮರ ಕುಯ್ಯುವುದು, ಗದ್ದೆ ಊಳುವುದು, ಇಲ್ಲಿಯ ನಿತ್ಯ ಜೀವನದ ಕಾರ್ಯಗಳಾಗಿದ್ದವು. ಹಾಗೂ ದೆವ್ವ, ದೇವರನ್ನು ಬಲವಾಗಿ ನಂಬಿದ್ದರು. ದೇವರು ಮತ್ತು ದೆವ್ವವನ್ನು ಸಮಾಧಾನ ಮಾಡಲು ಮೂಢನಂಬಿಕೆಗಳಿಗೆ ಸಂಪ್ರದಾಯಗಳಿಗೆ ಬಲಿಯಾಗಿದ್ದರು. ದೇವರ ಹೆಸರಿನಲ್ಲಿ ವೆಂಕಪ್ಪಯ್ಯ ಜೋಯಿಸರಿಗೆ ಕಪ್ಪಕಾಣಿಕೆ ಸಲ್ಲಿಸುತ್ತಿದ್ದರು. ಒಂದೇ ತಲೆಮಾರಿನಲ್ಲಿ ಎರಡು ದಿಕ್ಕುಗಳನ್ನು ಕಾಣುತ್ತೇವೆ. ರಾಮಯ್ಯ ಅಂಧಶ್ರದ್ಧೆಗೆ ಮಾರು ಹೋಗಿ ಮತ್ತೆ ತಂದೆಯೊಂದಿಗೆ ರಾಜಿಯಾದರೆ, ಹೂವಯ್ಯ ಸಂಪ್ರದಾಯಿಕ ಯಾವ ಮೌಲ್ಯಗಳಿಗೂ ರಾಜಿಯಾಗದೆ ಹೊಂದಾಣಿಕೆ ಮಾಡಿಕೊಳ್ಳದೆ ಜೀತದಾಳುಗಳ ಮೇಲೆ ಪ್ರಭಾವ ಬೀರುತ್ತಾನೆ. ಹೂವಯ್ಯನ ಕ್ರಿಯಾಶೀಲ ಸರಳ ವ್ಯಕ್ತಿತ್ವವೇ ಜೀತದಾಳುಗಳಿಗೆ ಆಕರ್ಷಕವಾಗುತ್ತದೆ. ಹೂವಯ್ಯನ ಸಾಮೂಹಿಕ ಕ್ರಿಯಾಶೀಲ ಮನಸ್ಸು ಕಾನೂರಿನಲ್ಲಿ ಸಾಕಷ್ಟು ಬದಲಾವಣೆಯನ್ನು ತರುತ್ತದೆ. ವಿದ್ಯಾವಂತವರ್ಗ ನಗರದ ಕಡೆಗೆ ತಿರುಗದೆ, ಹಳ್ಳಿಯ ಕಡೆ ತಿರುಗಬೇಕೆಂಬ ಸೂಚನೆ ಹೂವಯ್ಯನಲ್ಲಿ ಕಾಣುತ್ತೇವೆ. ಗಾಂಧೀಜಿಯ ಪ್ರಭಾವವು ಹೂವಯ್ಯನನ್ನು ಹಳ್ಳಿಗೆ ಎಳೆದು ತರುತ್ತದೆ. ವೈದಿಕ ಪರಂಪರೆಯ ಮಾಟ, ಮಂತ್ರ, ಗೋತ್ರ, ಜೋತಿಷ್ಯ, ಚಂದ್ರೇಗೌಡರ ಮನೆತನಕ್ಕೆ ಮುಳುವಾಗುತ್ತದೆ. ಸೀತೆಗೆ ಬರೆ ಹಾಕುವ ಪ್ರಸಂಗವಂತೂ ಅಜ್ಞಾನದ ಪರಮಾವಧಿಯಾಗಿದೆ. ಚಂದ್ರೇಗೌಡರ ಅವಸಾನ ಆಧುನಿಕತೆಯಿಂದ ನಿಧಾನವಾಗಿ ಜಮೀನುದಾರಿಕೆಯ ಬೇರುಗಳು ಸಡಿಲವಾಗುವ ಸೂಚನೆಯಿದೆ.

ಹೂವಯ್ಯ ಎಷ್ಟೋ ವೈಚಾರಿಕತೆಯನ್ನು ಸ್ವೀಕರಿಸುವಲ್ಲಿ ಸೋಲುತ್ತಾನೆ. ತಂದೆ, ತಾಯಿ, ಮಾವ, ಗಂಡ ಎಲ್ಲಾ ಸಂಪ್ರದಾಯಿಕ ಬಂಧನಗಳನ್ನು ಕಡಿದುಕೊಂಡು ಮನೆಗೆ ಬಂದರೂ ಹೆಂಡತಿಯನ್ನಾಗಿ ಸ್ವೀಕರಿಸುವುದಿಲ್ಲ. ಲೌಕಿಕವನ್ನೇ ಜಯಿಸಿದ ಯೋಗಿಯಂತೆ ಬುದ್ಧನ ಅನುಯಾಯಿಯಾಗುತ್ತಾನೆ. ಸರ್ವೋದಯ ಸಮಬಾಳ್ವೆಯ ದೃಷ್ಟಿ ಆತನ ವ್ಯಕ್ತಿತ್ವದಲ್ಲಿ ವ್ಯಕ್ತವಾಗುತ್ತದೆ. ಹೂವಯ್ಯನಿಗೆ ಸಂಪೂರ್ಣವಾಗಿ ಆಧುನಿಕತೆಯನ್ನು ಸ್ವೀಕರಿಸುವ ಮನಸಿಲ್ಲ. ವಿಮರ್ಶಾತ್ಮಕವಾಗಿ ಅದನ್ನು ನೋಡುತ್ತಾನೆ. ಜಡ ವ್ಯವಸ್ಥೆಯ ಹಳೇ ತಲೆಮಾರಿನೊಂದಿಗೆ ಸಂಘರ್ಷ ಹೂಡಿದ ಹೂವಯ್ಯ ಯಶಸ್ವಿಯಾಗುತ್ತಾನೆ. ಹೊಸಗಾಳಿಗೆ ಮನುಷ್ಯ ಮೈಯೊಡ್ಡಲೇಬೇಕು. ಮೌಢ್ಯವನ್ನು ನಿವಾರಣೆ ಮಾಡುವಲ್ಲಿ ಸಂಪೂರ್ಣ ಯಶಸ್ಸನ್ನು ಸಾಧಿಸದಿದ್ದರೂ ಒಂದು ಪ್ರಯತ್ನವಂತೂ ಹೂವಯ್ಯನಲ್ಲಿ ಕಾಣುತ್ತೇವೆ. ವಸಾಹತುಶಾಹಿ ಆಧುನಿಕತೆಯಿಂದ ಬಂಡಾಯ ಪ್ರವೃತ್ತಿ ಬೆಳೆಸಿಕೊಂಡ ಹೂವಯ್ಯ ವಸಾಹತುಶಾಹಿಯನ್ನು ಅಂಧವಾಗಿ ಅನುಕರಿಸುವುದಿಲ್ಲ ಮೆಚ್ಚುವುದಿಲ್ಲ. "ಯಂತ್ರ ನಾಗರಿಕತೆ, ಇಂಗ್ಲಿಷ್, ಚಾಂಚಲ್ಯ, ಉದ್ವೇಗ, ಆಕ್ರಮಣಶೀಲವಾದ ಆ ಚಂಚಲಯಾನ ನಾಗರಿಕ ಲೋಕವು ಮಲೆನಾಡಿಗೆ ದಾಳಿಯಿಡುವ ಮೊದಲು ಮುನ್ನಿಟ್ಟಿದ್ದ ರಣಚಾರದಲ್ಲಿದೆ. ಆ ಬೀಸುಕಲ್ ಸವಾರ."[೨೦] ವಸಾಹತುಶಾಹಿ ಆಡಳಿತಕ್ಕೆ ಒಳಗಾದ ಬಡರಾಷ್ಟ್ರಗಳಿಗೆ ಆಧುನಿಕತೆಯ ಪಾದಾರ್ಪಣೆ

ಮಾಡಿದ್ದು, ಆಕ್ರಮಣಕಾರಿಯಾಗಿಯೇ ಎಂಬ ಚಾರಿತ್ರಿಕವಾದ ಸತ್ಯದಂತೆ ಕಾಣುವುದು. ಇದನ್ನು ರಹಮತ್ ತರೀಕೆರೆಯವರು ಹೀಗೆ ಗ್ರಹಿಸಿದ್ದಾರೆ. "ಆಧುನಿಕತೆಯನ್ನು ಒಂದು ವರವೆಂಬ ಸಂಭ್ರಮ ಅಥವಾ ಇದೊಂದು ಅನಿಷ್ಟವೆಂಬ ಹೇರಿಕೆಗಳಿಲ್ಲದೆ, ಸರಳೀಕರಿಸದೆ ಗ್ರಹಿಸಿದ ಕನ್ನಡ ಲೇಖಕರಲ್ಲಿ ಕುವೆಂಪು ಕೂಡ ಒಬ್ಬರು. ಅದಕ್ಕೆ ಹೂವಯ್ಯನಿಗೆ ಆ ಸೈಕಲ್ ಸವಾರನನ್ನು ಕಂಡಾಗ ಚಾಂಚಲ್ಯ, ಉದ್ವೇಗಗಳೂ ಪ್ರಗತಿಗಾಮಿತನವೂ ಒಟ್ಟಿಗೆ ಕೊಟ್ಟ ದರ್ಶನವೆನಿಸುತ್ತದೆ"[೨೧] ಹೊಸ ತಲೆಮಾರು ಶಿಕ್ಷಣ ಆಧುನಿಕತೆಯನ್ನು ಅರ್ಥಮಾಡಿಕೊಳ್ಳುವ ವಸಾಹತುಶಾಹಿಯ ವೈಚಾರಿಕತೆಯನ್ನು ಅರಗಿಸಿಕೊಂಡು ರೂಪುಗೊಂಡ ಪ್ರತಿಭೆಯಂತೆ ಅರಳಿಕೊಂಡಿದ್ದಾನೆ.

ಹೂವಯ್ಯನ ಸುಧಾರಣೆ ಇರುವುದು ವಿವೇಕಾನಂದ, ರಾಮಕೃಷ್ಣ ಪರಮ ಹಂಸರ ಸಂಪ್ರದಾಯಿಕ ಧಾರ್ಮಿಕ ತತ್ವಗಳಲ್ಲಿ. ಹಿಂದೂ ಧರ್ಮದ ಸಂವಿಧಾನದೊಳಗಿಂದಲೇ. ಅದರ ಕಿಲುಬುಗಳನ್ನು ತೊಳೆಯಬೇಕೆಂಬ ಆಶಯ ಆತನದು. ಏಕೆಂದರೆ ಈ ನೆಲದ ಎಲ್ಲಾ ಗುಣಗಳು ತಿರಸ್ಕರಿಸಿದ, ಮತ್ತೆ ಯಾವ ಗುಣಗಳನ್ನು ಈ ನೆಲದಲ್ಲಿ ತುಂಬಬೇಕು ಎಂಬ ಗೊಂದಲ ಹೂವಯ್ಯನಿಗೆ ಕಾಡಿದಂತೆ ಕಾಣುತ್ತದೆ. ಆಧುನಿಕತೆಯಿಂದ ವೈಚಾರಿಕತೆಯನ್ನು ಪಡೆದರೂ ಸಾಮಾನ್ಯರ ಬದುಕಿನ ಸುಧಾರಣೆಗೆ, ಪ್ರೀತಿಗೆ, ಅಭಿವೃದ್ಧಿಗೆ, ಬಿಡುಗಡೆಗೆ, ವಸಾಹತುಶಾಹಿ, ಆಧುನಿಕತೆಯ ಬೆಳವಣಿಗೆ ಪರ್ಯಾಯವಾಗಬಲ್ಲದೆ ಎಂಬ ಸಂಶಯ ಸಂಪೂರ್ಣವಾಗಿ ಕಿತ್ತೊಗೆಯಲಾರ. ಅದರ ವಿಷಬೇರುಗಳನ್ನು ಮಾತ್ರ ಕತ್ತರಿಸಲು ಪ್ರಯತ್ನಿಸಿದ್ದಾನೆ. ಏಕೆಂದರೆ ವಸಾಹತುಶಾಹಿ ಆಧುನಿಕತೆಯ ಇನ್ನೊಂದು ಶೋಷಣೆಯ ಮುಖದ ಬಗ್ಗೆ ಆತನಿಗೆ ಅರಿವಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ವ್ಯಕ್ತವಾದ ಎರಡು ಘಟನೆಗಳು ಹೀಗೆ ಮತಧರ್ಮವನ್ನು ಪ್ರಭಾವಿಸಿವೆ. ಚೆನ್ನಿ ತನ್ನ ಹಣೆಯ ಮೇಲಿನ ಕುಂಕುಮದ ಬಟ್ಟನ್ನಿಡಲು ನೀರಿನ ಹಂಡೆಯನ್ನು ಬಳಸಿಕೊಳ್ಳುವ ಹಳೆಯ ಪದ್ಧತಿಯಿಂದ ಬದಲಾವಣೆ ಹೊಂದುವುದು. ದಿಢೀರನೆ ಅವಳ ಮನೆಗೆ ಬಂದ ಕನ್ನಡಿ ಎಂಬ ಹೊಸ ಮಾತ್ರಿಕ ವಸ್ತುವಿನಿಂದ ಚೆನ್ನಿ ತಬ್ಬಿಬ್ಬಾಗುತ್ತಾಳೆ. ಅದರೊಳಗೆ ನೈಜವಾಗಿರುವ ತನ್ನ ಮುಖವನ್ನು ನೋಡಿಕೊಂಡು ಆಶ್ಚರ್ಯ ಪಡುತ್ತಾಳೆ. ಅದನ್ನು ಬಳಸುವ ಪರಿಯೇ ಹೊಸದು. ಇನ್ನೊಂದು ಅದೇ ಕಾದಂಬರಿಯಲ್ಲಿ ಪಾದ್ರಿ ಮೆಗರವಳ್ಳಿಗೆ ಸೈಕಲ್ ತರುವ ಸಂಗತಿ. ಇಡೀ ಊರಿಗೆ ಊರೇ ಆ ಬೈಸಿಕಲ್‌ನ್ನು ವಿಸ್ಮಯದಿಂದ, ಭಯದಿಂದ ನೋಡಿ ಅದು ತಮ್ಮ ಕೇಡಿಗೆ ಬಂದಿರುವ ಯಂತ್ರವೆಂದು ಭಾವಿಸುವುದು. ಮತ ಪ್ರಚಾರಕ್ಕೆ ಬೈಬಲ್ಲು ಯೇಸು ಕ್ರಿಸ್ತರಿಗಿಂತಲೂ ಬೈಸಿಕಲ್ಲೂ ಹೆಚ್ಚು ಪ್ರಭಾವಶಾಲಿ ಎಂದು ಮತಾಂತರಗೊಳ್ಳಲು ಇಚ್ಛಿಸಿದ ಕೆಲ ಮಲೆನಾಡಿನ ವ್ಯಕ್ತಿಗಳು ಹಾಗೂ ಪಾದ್ರಿ ಸೇವಕರೂ ಒಪ್ಪಿದ್ದರಿಂದ ಬೈಸಿಕ್ಲಲು ಹೊಸ ಸ್ವರೂಪವನ್ನು ಪಡೆಯಿತು. ಆದರೆ ಸಂಪ್ರದಾಯ

ವಾದಿಗಳಿಗೆ ಈ ಬೈಸಿಕಲ್ಲು ತಿರಸ್ಕಾರ ಅಸಹ್ಯವೆನಿಸಿತ್ತು. ಹಾಗಾಗಿಯೇ "ಸಂಪ್ರದಾಯ ನಿಷ್ಠೆಯ ವೀರಾನುಯಾಯಿಯಾಗಿದ್ದ. ಶಂಕರಪ್ಪ ಹೆಗ್ಗಡೆಗೆ ಕ್ರಿಸ್ತರ ಪಾದ್ರಿಗಳನ್ನೆಲ್ಲಾ ಮನೆಗೆ ಸೇರಿಸಿ ಅವರೊಡನೆ ಸಹಪಂಕ್ತಿ ಭೋಜನವನ್ನು ಮಾಡಿ, ಅವರು ಕೊಟ್ಟ ವಿನಾಯಿತಿ ವಸ್ತುಗಳನ್ನೆಲ್ಲಾ ಲಾಟೀನು, ಬೈಸಿಕಲ್ಲು, ಕೋವಿ, ಸೀಮೆ ಬಿಸ್ಕತ್ತು. ಕ್ರಾಪು, ಹ್ಯಾಟ್ಸ್, ಬೂಡ್ಸು ಇತ್ಯಾದಿ... ಕಂಡರೆ ತಿರಸ್ಕಾರ ಜಿಗುಪ್ಸೆ ಉಂಟಾಗುತ್ತಿತ್ತು. ಕುವೆಂಪು ಅವರು ಮಲೆನಾಡಿಗೆ ಕ್ರಿಶ್ಚಿಯಾನಿಟಿ ಪ್ರವೇಶಿಸಿದ್ದನ್ನು ದಾಖಲಿಸುತ್ತಾ ಕ್ರಿಶ್ಚಿಯಾನಿಟಿಯ ಮತಾಂತರದ ಮುಖಾಂತರ ಆಧುನಿಕತೆಯನ್ನು ತೀವ್ರಗೊಳಿಸುವ ವಿವರವನ್ನು ನೀಡುತ್ತಾರೆ."[೨೨] ಮಲೆನಾಡಿಗೆ ಪಾದ್ರಿಯೊಬ್ಬನ ಪ್ರವೇಶ ಕೇವಲ ವ್ಯಕ್ತಿಯೊಬ್ಬನ ಪ್ರವೇಶದಂತಾಗುವುದಿಲ್ಲ. ಒಂದೂರಿಗೆ ಹೊಸದಾಗಿ ರೈತನಂತ ವ್ಯಕ್ತಿ, ಪಾದ್ರಿಯಂತ ವ್ಯಕ್ತಿ ಬರುವುದಕ್ಕೂ ಅನೇಕ ವ್ಯತ್ಯಾಸಗಳಿವೆ. ಈ ವ್ಯತ್ಯಾಸವನ್ನು ಪಾದ್ರಿ ಮಲೆನಾಡಿಗೆ ಬರುವುದರ ಮೂಲಕ ಗುರುತಿಸಬಹುದು. ಪಾದ್ರಿ ಬರುವುದೆಂದರೇನೇ ಅದೊಂದು ಬದಲಾವಣೆಯ ಶಕ್ತಿ ಎಂದರ್ಥ. ಎಲ್ಲಾ ಆಧುನಿಕ ಚಿಂತನೆಯನ್ನು ನಿಯಂತ್ರಿಸಬಲ್ಲ ಮತಧರ್ಮದೊಂದಿಗೆ ಭಾವನಾತ್ಮಕ ರಾಜಕೀಯ ಸಂಬಂಧ ಹೊಂದುವ ಶಕ್ತಿಯೊಂದರ ಸಂಕೇತವಾಗುತ್ತದೆ. ಹಾಗಾಗಿಯೇ ಮಲೆನಾಡಿನ ಇಡೀ ಸಮಾಜ ಪಾದ್ರಿಯ ಪ್ರವೇಶವನ್ನು ಗುಮಾನಿಯಿಂದ ನೋಡಿ ಕೊನೆ ಕೊನೆಗೆ ಅವನ ಚಟುವಟಿಕೆಯೊಂದಿಗೆ ಒಂದಾಗಿ ಹೋಗುತ್ತದೆ.

ಪಾದ್ರಿಯ ಈ ಪ್ರವೇಶ ಕೇವಲ ಉಪದೇಶಿಕ ಕ್ರಿಯೆಯಾಗಿ ಮಾತ್ರವೇ ಉಳಿದಿಲ್ಲ. ನಿಧಾನವಾಗಿ ಪಾದ್ರಿ ಬೆಟ್ಟಳ್ಳಿ ದೇವಯ್ಯನ ಕುಟುಂಬ ಮತ್ತು ಆಸ್ತಿಯ ವಿಷಯದಲ್ಲಿ ಹಸ್ತಕ್ಷೇಪ ಮಾಡುವ ಸೂಕ್ಷ್ಮತೆಯಲ್ಲಿ ವಸಾಹತುಶಾಹಿಯ ಧೋರಣೆಯನ್ನು ಸೂಚಿಸುತ್ತಾನೆ. ಹೀಗೆ ಪಾದ್ರಿಯ ನಡವಳಿಕೆಯಂತೆಯೇ ಭಾರತಕ್ಕೆ ವಸಾಹತುಶಾಹಿಯು ಪ್ರವೇಶಿಸಿತು. ವಸಾಹತುಶಾಹಿಯಿಂದಲೇ ಪ್ರಾರಂಭವಾದ ಕ್ರೈಸ್ತ ಮತ ಪ್ರಚಾರ ಅಥವಾ ಮತಾಂತರದ ಪ್ರಕ್ರಿಯೆ ಹಳ್ಳಿಗಾಡಿನ ಸಮಾಜದಲ್ಲಿ ಮತ್ತೊಂದು ಬಗೆಯ ಸಮಸ್ಯೆಯನ್ನು ಹುಟ್ಟುಹಾಕಿತು. ಪಾದ್ರಿ ಜೀವರತ್ನಯ್ಯನಿಗೆ ಊಟ ಬಡಿಸಬೇಕಾದಾಗ ಉಂಟಾದ ಸಮಸ್ಯೆಯಿದು. ಬೆಟ್ಟಳ್ಳಿ ಗೌಡರ ಮನೆಯಲ್ಲಿ ಪಾದ್ರಿ ಜೀವರತ್ನಯ್ಯನಿಗೆ ಊಟ ಬಡಿಸುವುದು ಹೇಗೆಂಬುದೇ ಎಲ್ಲರಿಗೂ ಕಾಡುವ ಆತಂಕವಾಗುತ್ತದೆ. ಆಗ ದೇವಯ್ಯ ಮತ್ತು ಚೆನ್ನಪ್ಪರ ಮಧ್ಯೆ ನಡೆಯುವ ಮಾತುಕತೆಯಲ್ಲಿ ಈ ಸಮಸ್ಯೆಯ ಸ್ವರೂಪವನ್ನು ಗಮನಿಸಬಹುದು. ದೇವಯ್ಯ ಚೆನ್ನಪ್ಪನೊಡಗೂಡಿ ಬಂದ ಪಾದ್ರಿಯನ್ನು ಕುರಿತು,

"ಈಗ ಏನು ಮಾಡುವುದು?

ಯಾಕೆ? ಏನು ಸಮಾಚಾರ?

ಅವರಿಗೆ ಎಲ್ಲಿ ಬಳ್ಳೆ ಹಾಕುವುದು ಅಂತ ಕೇಳ್ತಾರೆ?

ಬಡಿಸಿ!

ಯಾಕೆ ನಮ್ಮ ಜೊತೆಗೆ ಕೂರ್ಲಿ.

ಥೂ, ಥೂ, ಥೂ, ಥೂ, ಹೊಲೆಗಿಂತಲೂ ಅತ್ತತ್ತ. ಅತಿಲಸ್ತರನ್ನು ಒಳಗೆ ಕೂರಿಸುವುದೇ ಸೈ? ಏನೋ ಬಟ್ಟೆ ಬರೆ ಬಂದಾನಲ್ಲಾಂತ ಜಗಲಿ ಹತ್ತಿಸಿದ್ದು. ಮತ್ತೆಲ್ಲಿ ಕೂರಿಸ್ತಾರಂತೆ.

ಹಿತ್ತಲು ಕಡೇಲಿ ಕೂರಿಸಾನು ಅಂತ ಹೇಳ್ತಾರೆ ಒಳಗೆ.

ಹಳೆ ಪೈಕದವನರನ್ನು ಕೂರಿಸೋ ಜಾಗದಲ್ಲಿ?

ಹ್ಞೂ

ಪಾದ್ರಿಗೆ ಹೆಂಗಸರಿರಲಿ, ಕೂಲಿಯಾಳುಗಳು ಕಿಲಸ್ತರನಿಗೆ ಕೈಯಾರೆ ಬಡಿಸಲು ಒಪ್ಪಲಿಲ್ಲ."[೨೩]

ಹೀಗೆ ವರ್ಣಶ್ರೇಣಿಗಳ ಹಿನ್ನಲೆಯಲ್ಲಿ ನಡೆಯುವ ಈ ಸಂಘರ್ಷದಲ್ಲಿ ಅಂತಿಮವಾಗಿ ಯಾವುದನ್ನು ಮೀರಿ ಬೆಳೆಯಿತು ಎಂದು ನಿರ್ಧರಿಸುವುದೇ ಕಷ್ಟ. ಯಾಕೆಂದರೆ ವಸಾಹತುಶಾಹಿಯಿಂದ ಕ್ರೈಸ್ತ ಮಿಷನರಿಗಳಿಂದ ಮಲೆನಾಡು ಗೌಡರಿಗೆ ಆಧುನಿಕ ಕಾಲದಲ್ಲಿ ಪ್ರಯೋಜನವೂ ಆಗಿದೆ. ಪಾದ್ರಿ ಜೀವರತ್ನಯ್ಯ ಮೇಗರಳ್ಳಿಯ ಹತ್ತಿರ ಶಾಲೆ ಕಟ್ಟಿಸುವುದಲ್ಲದೇ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಬೇಕೆಂದು ಜನರಿಗೆ ತಿಳಿ ಹೇಳುವ ಕ್ರಮ ಕೂಡಾ ಆ ಸಮಾಜವನ್ನು ನಂಬಿಸುವ ಬಗೆಯದು. ಮೂಢನಂಬಿಕೆ ಕಂದಾಚಾರಗಳನ್ನು ಬಿಡಬೇಕೆಂದು ಬೋಧಿಸುತ್ತಾನೆ. ದೇವಯ್ಯ ಗೌಡರಿಗೆ ಬೈಸಿಕಲ್ ಕಲಿಸುವುದು, ಲಲಿತಕ್ಕನ ಹೋಟೇಲಿನ ಕಾಫಿ ತಂದು ಕೊಡುವುದು ಮುಂತಾದ ಅವನ ಪ್ರಯತ್ನ ವಸಾಹತು ಪರಿಸ್ಥಿತಿಯ ಮೂಲಕ ಆಧುನಿಕತೆಯನ್ನು ಬಿಂಬಿಸುವ ಮಾರ್ಗಗಳೇ ಆಗಿವೆ. ಇಂಗ್ಲಿಷ್ ವಿದ್ಯಾಭ್ಯಾಸ ಹಾಗೂ ಅವರ ಸಾಮಾಜಿಕ ಚಟುವಟಿಕೆಗಳನ್ನು ಸ್ವಾಗತಿಸುವ ಮೂಲಕ ಕುವೆಂಪು ಅವರು ಆಧುನಿಕ ಪ್ರಕ್ರಿಯೆಯನ್ನು ಸ್ವಾಗತಿಸುತ್ತಾರೆ. ಗುತ್ತಿಯ ನಾಯಿ, ಹುಲಿಕಲ್ಲುನೆತ್ತಿ, ಕೊತ್ವಾಲ ವಸ್ತುಗಳೆಲ್ಲಾ ಹೋಗಿ, ರೂಬಿ, ಡೈಮೆಂಡು, ರೋಜಿ, ಟಾಪ್ಪಿಯಂತ ವಸಾಹತುಶಾಹಿ ರೂಪದ ಹೊಸ ನಾಯಿಮರಿಗಳು ಪ್ರವೇಶವಾಗಿದೆ. ಆಧುನಿಕತೆಯಿಂದ ಹಳೆಯ ವ್ಯವಸ್ಥೆ ಬಲಹೀನಗೊಳ್ಳುತ್ತಿವೆ. ಪೊಳ್ಳಾಗುತ್ತವೆ. ಹೊಸ ಸಂಬಂಧಗಳು ರೂಪುಗೊಳ್ಳಲು ಆರಂಭವಾಗಿದೆ. ಇದು ಅನಿವಾರ್ಯ ಪ್ರಕ್ರಿಯೆ. ಆದರೆ ಈ ಹಂತದಲ್ಲಿ ಹಳೆಯ ವ್ಯವಸ್ಥೆ ತನ್ನ ಹಿಡಿತವನ್ನು ಬಲಪಡಿಸಿಕೊಳ್ಳಲು ಯತ್ನಿಸುತ್ತದೆ. ಅದರ ಫಲವಾಗಿ ಹಿಂಸೆಯು ಸ್ಫೋಟಿಸಿದೆ. ಆಧುನಿಕತೆಯ ಮೂಲಕ ಹೊಸ ರೂಪ ಪಡೆದ ಹಿಂಸೆಯ ನೆಲೆಗೊಳ್ಳದಿರುವುದೇ ವರ್ಣ ಧರ್ಮಾಧಾರಿತ ಉಳಿಗಮಾನ್ಯತೆಯಲ್ಲಿ ಹೊನ್ನಾಳಿ ಹೊಡ್ತದ ರೂಪಕವೆ ಇದಕ್ಕೆ ಒಳ್ಳೆಯ ಉದಾಹರಣೆ. ಬ್ರಾಹ್ಮಣರು, ಹೆಗ್ಗಡೆಗಳು, ಗೌಡರು ಹಾಗೂ ಮಧ್ಯವರ್ತಿಗಳಾದ ವಸೂಲಿ

ಸಾಬರು, ಕಿಲಿಸ್ತಾರ ಜಾತಿವಂತರು ಹಿಂಸೆಯನ್ನು ಆಶ್ರಯಿಸುತ್ತಾರೆ. ಮುಕುಂದಯ್ಯ-ಚಿನ್ನಮ್ಮ, ಹೂವಯ್ಯ-ಸೀತೆ, ಗುತ್ತಿ-ತಿಮ್ಮ ಮೊದಲಾದ ಪಾತ್ರಗಳು ಇದಕ್ಕೆ ಎದುರಾದ ಪಾತ್ರಗಳು. ಇವರು ಪ್ರತಿನಿಧಿಸುವುದು ಭಾರತೀಯ ಸಂಸ್ಕೃತಿಯ ಸಂಪ್ರದಾಯದ ಒಳಸತ್ವವನ್ನು, ಆಧುನಿಕ ವಿದ್ಯಾವಂತಿಕೆಯನ್ನು ಮತ್ತು ಮಾನವೀಯತೆಯನ್ನು.

**ಸಂತೂಬಾಯಿ ನೀಲಗಾರರ "ಸದ್ಗುಣಿ ಕೃಷ್ಣಬಾಯಿ" ಕಾದಂಬರಿಯಲ್ಲಿ ಸಂಪ್ರದಾಯ ಮತ್ತು ಆಧುನಿಕತೆಯ ಮುಖಾಮುಖಿ**

ಧಾರವಾಡದಲ್ಲಿ ೧೫-೧೨-೧೮೮೧ರಲ್ಲಿ ಜನಿಸಿದರು. ೧೮೯೬ರಲ್ಲಿ ಶಿಕ್ಷಕ ತರಬೇತಿ ಮುಗಿಸಿ ೧೮೯೭ರಲ್ಲಿ ವೃತ್ತಿ ಪ್ರಾರಂಭಿಸಿದರು. ಧಾರವಾಡದ ಹೆಣ್ಣು ಮಕ್ಕಳ ಟ್ರೇನಿಂಗ್ ಕಾಲೇಜಿನ ಭಾಗವಾಗಿ ಪ್ರಾರಂಭವಾದ ಪ್ರ್ಯಾಕ್ಟಿಸಿಂಗ್ ಶಾಲೆಯ ಹೆಡ್‌ಮಾಸ್ತ್ರಾಗಿ ಸಂಗೀತ ಶಿಕ್ಷಕಿಯಾಗಿ ಸೇವೆ ಸಲ್ಲಿಸಿದ್ದಾರೆ. ಬೈಲಹೊಂಗಲದ ಶ್ರೀ ಎಲ್ಲಪ್ಪ ಕೋಪರ್ಡೆ ಅವರೊಂದಿಗೆ ವಿವಾಹ. ಸೇವೆಯಲ್ಲಿರುವಾಗಲೇ ಧಾರವಾಡದಲ್ಲಿ ನಿಧನ ಹೊಂದಿದರು(೭-೧೦-೧೯೩೧).

ಭಾರತೀಯ ಸಂಪ್ರದಾಯಿಕ ಬದುಕಿನಲ್ಲಿ ಆಧುನಿಕತೆ-ವೈಚಾರಿಕತೆ ಮತ್ತು ಪರಿವರ್ತನೆಯು ಸಂಚಲನೆಗಳನ್ನು ಮೂಡಿಸಿದ ಹತ್ತೊಂಭತ್ತನೆಯ ಶತಮಾನವು ಕನ್ನಡಿಗರ ಬದುಕಿನಲ್ಲೂ ಅನೇಕ ಹೊಸತುಗಳನ್ನು ಕಂಡರಿಸಿದ ಕಾಲ. ಸ್ವದೇಶ-ಸ್ವಸಂಸ್ಕೃತಿಯ ಅಭಿಮಾನವನ್ನು ಪುಟಗೊಳಿಸಿದ ಮಹತ್ವದ ಸಂದರ್ಭ. ವಸಾಹತು ವಿರೋಧಿ ಧೋರಣೆ ಗಟ್ಟಿಗೊಳ್ಳುತ್ತಿದ್ದ ಅಂದಿನ ಕಾಲದಲ್ಲಿಯೇ ಭಾರತೀಯರು ಪಶ್ಚಿಮದ ಸುಧಾರಣಾವಾದಿ ಆಶಯಗಳನ್ನು ಮತ್ತು ವೈಜ್ಞಾನಿಕ ಚಿಂತನಾ ಕ್ರಮವನ್ನು ತೀವ್ರ ಆಸಕ್ತಿ-ಆದರದಿಂದ ಬರಮಾಡಿಕೊಂಡರೆನ್ನುವುದು ಕುತೂಹಲಕರ ವಿದ್ಯಮಾನ. ಇದಕ್ಕೆ ಕರ್ನಾಟಕ ಹೊರತಲ್ಲ. ಸ್ವಾತಂತ್ರ್ಯ ಆಂದೋಲನ, ನಾಡು-ನುಡಿಯ ಅಭಿಮಾನ, ಹರಿದು ಹಂಚಿದ್ದ ಕನ್ನಡ ನಾಡಿನ ಏಕೀಕರಣ ಇತ್ಯಾದಿ ದೇಶಿ ಚಳುವಳಿಗೆ ನಾಯತ್ವ ನೀಡಿದ ಸಾಹಿತಿಗಳೇ ಪಶ್ಚಿಮ ಕೇಂದ್ರಿತ ವೈಚಾರಿಕತೆಗೂ ಪೂರಕವಾಗಿ ಸ್ಪಂದಿಸಿದ್ದಕ್ಕೆ ನವೋದಯ ಪೂರ್ವ-ನವೋದಯ ಸಾಹಿತ್ಯ ನಿದರ್ಶನವಾಗಿದೆ. ಹೀಗೆ ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕ-ಇಂಗ್ಲೀಷ್ ಸಾಹಿತ್ಯ ಅಧ್ಯಯನ ಕಾರಣವಾಗಿ ಆಧುನಿಕ ಸಂವೇದನೆಯ ಅಭಿವ್ಯಕ್ತಿಯ ಮಾಧ್ಯಮವಾಗಿ ಕಾದಂಬರಿ, ಸಣ್ಣಕತೆ, ಭಾವಗೀತೆ ಇತ್ಯಾದಿ ಹೊಸ ಸಾಹಿತ್ಯ ಪ್ರಕಾರಗಳು ಅಂದು ಉದಯವಾದವು. ಬದುಕಿನ ಗ್ರಹಿಕೆಗಳು ಆದ್ಯತೆಗಳು ಬದಲಾದವು. ಮನುಷ್ಯ, ಸಂಬಂಧ, ಸ್ವಭಾವ, ಸಂವೇದನೆಗಳಲ್ಲಿ ತೀವ್ರ ಆಸಕ್ತಿ. ವಾಸ್ತವತಾವಾದಿ ಚಿಂತನೆ ಸಾಹಿತ್ಯದ ಕೇಂದ್ರ ಕಾಳಜಿಗಳಾದವು. ಸಂಪ್ರದಾಯಿಕ ಸಮಾಜ ವ್ಯವಸ್ಥೆಯ ತರತಮಗಳ ಪರಿಶೀಲನೆ, ಉದಾರವಾದಿ, ಮಾನವತಾವಧಿ ಧೋರಣೆಗಳು ಸಾಮಾಜಿಕ ಪರಿವರ್ತನೆಯ ಅಗತ್ಯವನ್ನು ಸ್ಪಷ್ಟಪಡಿಸಿದವು. ಬಂಗಾಳದ ಸುಧಾರಣಾವಾದಿ

ಚಳುವಳಿಯಿಂದ ಸುಧಾರಕರು ಬೆಂಬಲಿಸಿದ ಸ್ತ್ರೀ ಶಿಕ್ಷಣ ಪ್ರಸಾರ, ಬಾಲ್ಯ ವಿವಾಹ ವಿರೋಧ, ವಿಧವೆಯರ ಸ್ಥಿತಿಗತಿ ಸುಧಾರಣೆ, ವಿಧವಾ ಮರುವಿವಾಹ ಮುಂತಾದ ಸ್ತ್ರೀಪರ ವಿಚಾರಗಳು ಕರ್ನಾಟಕದ ಸಾಮಾಜಿಕ ಪರಿಸರದಲ್ಲಿ ಸ್ತ್ರೀ ಸುಧಾರಣೆಯ ಅಗತ್ಯವನ್ನು ಮನಗಾಣಿಸಿದವು.

ಅಂತೆಯೇ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ರಚನೆಯಾಗಿರುವ ಕನ್ನಡದ ಮೊದಲ ಹಂತದ ಸಾಮಾಜಿಕ ಕಾದಂಬರಿಗಳಾಗಿರುವ ಗುಲ್ವಾಡಿ ವೆಂಕಟರಾಯರ ಇಂದಿರಾ ಬಾಯಿ ಕೆರೂರು ವಾಸುದೇವಾಚಾರ್ಯರ ಇಂದಿರೆ(೧೯೦೮) ಸ್ತ್ರೀ ಬದುಕಿನ ಜ್ವಲಂತ ಸಮಸ್ಯೆಗಳಾಗಿದ್ದ ವೈಧವ್ಯ, ಬಾಲ್ಯವಿವಾಹ, ವರದಕ್ಷಿಣೆ ಇತ್ಯಾದಿ ಅಂಶಗಳು ವಿಶ್ಲೇಷಣೆಗೊಡ್ಡಿದವು. ಸ್ತ್ರೀ ಶಿಕ್ಷಣ, ಸ್ತ್ರೀ ಸುಧಾರಣೆಯ ಮಹತ್ವವನ್ನು ಪ್ರತಿಪಾದಿಸಿ ಸಾಮಾಜಿಕ ಜಾಗೃತಿಗೆ ಪ್ರಯತ್ನಸಿದವು. ಇವುಗಳ ಮಧ್ಯೆದಲ್ಲಿಯೂ ಸಂಪ್ರದಾಯಕತೆಯನ್ನು ತೊರೆಯದೆ ಅವುಗಳನ್ನು ಸ್ವೀಕರಿಸಿರುವುದು ಮೊದಲ ಹಂತದ ಕಾದಂಬರಿಗಳಲ್ಲಿ ನೋಡಬಹುದು.

ಶತಮಾನದ ಹಿಂದಿನ ಸ್ತ್ರೀ ಸಮಾಜವು ಆಧುನಿಕತೆಗೆ ಮುಖಾಮುಖಿಯಾಗುವಲ್ಲಿ ಅನುಭವಿಸಿದ ಸಮಸ್ಯೆ ಸಂದಿಗ್ಧತೆ ಮಾಡಿಕೊಂಡ ಹೊಂದಾಣಿಕೆಯನ್ನರಿಯಲು(೧೯೦೮-೧೯೪೦) ಹಂತದ ಕಾದಂಬರಿ ಸಾಹಿತ್ಯ ಉಪಯುಕ್ತಕರವಾದುದು. ಈ ಹಿನ್ನಲೆಯಲ್ಲಿ ಈ ಅವಧಿಯ ಮೊದಲ ಲೇಖಕಿ ಸಂತೂಬಾಯಿ ನೀಲಗಾರರ 'ಸದ್ಗುಣಿ ಕೃಷ್ಣಾಬಾಯಿ' ಅಥವಾ 'ಉತ್ತಮ ಗೃಹಿಣಿ' ಕಾದಂಬರಿಯ ಪರಿಶೀಲನೆ ಗಮನಾರ್ಹ. ಮಹಿಳೆಯ ಶಿಕ್ಷಣವನ್ನು ಕುಟುಂಬದ ಕೇಂದ್ರಿತ ಹಿತಾಸಕ್ತಿಗಳೇ ಬೆಂಬಲಿಸುತ್ತಿದ್ದ ಅಂದಿನ ಸಾಮಾಜಿಕ ಸಂದರ್ಭದಲ್ಲಿ ನೀಲಗಾರರು ರಚಿಸಿರುವ ಈ ಕಾದಂಬರಿ ಸನಾತನ ಸ್ತ್ರೀಧರ್ಮ ಪ್ರತಿಪಾದನೆಗೆ ಹುಟ್ಟಿಕೊಂಡಿದ್ದರೂ ಆಧುನಿಕ ಸ್ತ್ರೀ ಶಿಕ್ಷಣದ ಬಗೆಗಿನ ಸಮಕಾಲೀನ ಸಮಾಜದ ನಿರೀಕ್ಷೆಗಳನ್ನು ಸಮರ್ಥಿಸುವ ಆಶಯ ಹೊಂದಿರುವುದು ವಿಶೇಷ. ಸಂಪ್ರದಾಯ ವಿರೋಧಿಯೆನಿಸಿದ್ದ ಆಧುನಿಕತೆಯನ್ನು ಭಯ-ಸಂಶಯಗಳಿಂದ ಕಾಣುವ ಅಂದಿನ ಸ್ತ್ರೀ ಶಿಕ್ಷಣ ವಿರೋಧಿ ನಿಲುವುಗಳಿಗೂ ಉತ್ತರ ರೂಪವಾಗಿ ರಚನೆಯಾಗಿರುವ ಪ್ರಸ್ತುತ ಕಾದಂಬರಿಯು ಸ್ತ್ರೀ ಶಿಕ್ಷಣದ ಕೌಟುಂಬಿಕ, ಸಾಮಾಜಿಕ ಹಿತಾಸಕ್ತಿಗಳ ಸ್ಪಷ್ಟೀಕರಣದ ಉದ್ದೇಶ ಹೊಂದಿದೆ. ಇದಕ್ಕೆ ಕಾದಂಬರಿಯುದ್ದಕ್ಕೂ ಅನೇಕ ನಿದರ್ಶನಗಳಿವೆ. 'ಸದ್ಗುಣಿ' ಮಹಿಳೆಯ ಮಾದರಿಯ ಮೂಲಕ ಸ್ತ್ರೀ ಶಿಕ್ಷಣದ ಸಮರ್ಥನೆಯು ಗುರಿ ಹೊಂದಿದೆ.

ಹೆಣ್ಣಿನ ತ್ಯಾಗ-ತಾಳ್ಮೆ-ಸಮರ್ಪಣೆಯ ನಿರೀಕ್ಷೆಗಳಲ್ಲಿಯೇ ದಾಂಪತ್ಯದ ಸಾರ್ಥಕತೆಯನ್ನು ವ್ಯಾಖ್ಯಾನಿಸುತ್ತ ಸಂಪ್ರದಾಯಿಕ ಕೌಟುಂಬಿಕ ಮೌಲ್ಯಗಳನ್ನು ಪುರಸ್ಕರಿಸುವ ಕಾದಂಬರಿಯು ಆಧುನಿಕತೆಯನ್ನು ಸ್ತ್ರೀ ಸಮಾಜದ ಸಂದರ್ಭದಲ್ಲಿ ಅರ್ಥೈಸುವ ವಿಧಾನದಲ್ಲಿ ಹಿಂದಿನ ಸಮಾಜ ಸುಧಾರಕರ ಸುಧಾರಣಾವಾದಿ ಧೋರಣೆಯನ್ನು ಬೆಂಬಲಿಸುತ್ತದೆ. ಇತ್ತ ಆಧುನಿಕವೂ ಅಲ್ಲದ ಅತ್ತ ಸಾಂಪ್ರದಾಯಿಕವೂ ಅಲ್ಲದ ಎರಡರ ಸಮನ್ವಯದಲ್ಲಿ ರೂಪುಗೊಳ್ಳುವ ಹೊಸ ಹೆಣ್ಣಿನ

ಮಾದರಿಯನ್ನು ಪರಿಚಯಿಸುವತ್ತ ಆಸಕ್ತವಾಗಿದೆ. ಸ್ತ್ರೀ ಶಿಕ್ಷಣ ಪರವಾದ ವಿಚಾರಗಳನ್ನು ಮತ್ತೆ ಮತ್ತೆ ಪ್ರಸ್ತಾಪಿಸುತ್ತಾ ಸಂಪ್ರದಾಯವನ್ನು ಮೃದುವಾಗಿಯೇ ಖಂಡಿಸಿದ್ದಾರೆ.

ಕಾದಂಬರಿಯ ನಾಯಕಿ ಕೃಷ್ಣಾಬಾಯಿಯ ಪೂರ್ವಿಕರು ಕರ್ನಾಟಕದವರಾದರು ಆಕೆ ಹುಟ್ಟಿ ಬೆಳೆದುದು ಮಹಾರಾಷ್ಟ್ರದ ಪ್ರಗತಿಪರ ಪರಿಸರದಲ್ಲಿ. ಕಾದಂಬರಿಯ ಎಲ್ಲಾ ಆಗು-ಹೋಗುಗಳ ರಂಗಭೂಮಿ ಪುಣೆ-ಮುಂಬಯಿ ಅಂತೆಯೇ ಇಡೀ ಕಾದಂಬರಿಯು ಮಹಾರಾಷ್ಟ್ರದ ಸ್ತ್ರೀ ಸುಧಾರಣಾ ವೈಚಾರಿಕತೆಯನ್ನು ಧ್ವನಿಸುವುದರೊಂದಿಗೆ ಆ ಕಾಲದಲ್ಲಿ ಕರ್ನಾಟಕದಲ್ಲಿಯೂ ನಿಧಾನವಾಗಿ ಪ್ರಾರಂಭವಾಗಿದ್ದ ಸ್ತ್ರೀಪರ ವಿಚಾರಗಳಿಗೆ ಸೂಕ್ತ ಚೌಕಟ್ಟನ್ನು ಒದಗಿಸುವುದಕ್ಕೆ ಪ್ರಯತ್ನಿಸಿದಂತಿದೆ.

ಕಾದಂಬರಿಯ ಪ್ರಾರಂಭಕ್ಕೆ ಬರೆಯಲಾಗಿರುವ ಉಪೋದ್ಘಾತದಲ್ಲಿ ಲೇಖಕಿ ಸದ್ಗುಣಿ ಮಹಿಳೆಯು ಪಾಲಿಸಬೇಕಾದ ಗೃಹಿಣಿ ಧರ್ಮವನ್ನು ವಿವರವಾಗಿ ಪ್ರಸ್ತಾಪಿಸಿದ್ದಾರೆ.

* ಸುಖಿ ದಾಂಪತ್ಯದ ಆಶಯ ಸಾರ್ಥಕವಾಗಬೇಕಾದರೆ ಸುಶೀಲಳಾದ ಹೆಂಡತಿ ದೊರೆಯುವುದು ಮುಖ್ಯ.
* ಸಂಸಾರದಲ್ಲಿ ನಿಜವಾದ ಸುಖ ದೊರೆಯಬೇಕಾದರೆ ಎಲ್ಲ ಸಂಗತಿಗಳಿಗಿಂತಲೂ ಉತ್ತಮ ಸ್ತ್ರೀ ದೊರೆಯುವುದು ಅವಶ್ಯವಿದೆ ಎನ್ನುವ ಪಾರಂಪರಿಕ ನಂಬಿಕೆಯನ್ನು ಸಮರ್ಥಿಸುತ್ತಾರೆ.
* ಉತ್ತಮ ಗೃಹಿಣಿಯ ಅರ್ಹತೆಗಳನ್ನು ದೀರ್ಘವಾಗಿ ಪ್ರಸ್ತಾಪಿಸುತ್ತಾರೆ.

ಸದ್ಗುಣಿಯಾದ ಕೃಷ್ಣಾಬಾಯಿ ವಿದ್ಯಾವಂತೆಯಾಗಿ, ಉತ್ತಮ ಗೃಹಿಣಿಯಾಗಿ ಕೌಟುಂಬಿಕ ಕರ್ತವ್ಯಗಳನ್ನು ಸಮರ್ಥವಾಗಿ ನಿರ್ವಹಿಸಿ, ಪತಿಗೆ ಅನುರೂಪಳಾದ ಸತಿಯಾಗಿ ಬಂಧು-ಬಳಗದವರಿಗೆಲ್ಲಾ ಹಿತಚಿಂತಕಳಾಗಿ ಸರ್ವರ ಮನ್ನಣೆಗೆ ಪಾತ್ರಳಾಗುತ್ತಾಳೆ. ಜೀವನದಲ್ಲಿ ಅನಿರೀಕ್ಷಿತ ವಾಗಿ ಎರಗಿದ ಆಪತ್ತುಗಳನ್ನು ಧೈರ್ಯ-ವಿವೇಕ-ಸಂಯಮದಿಂದ ಸ್ವೀಕರಿಸುತ್ತಾಳೆ. ಚದುರಿಹೋಗಿದ್ದ ತನ್ನ ಬದುಕನ್ನು ಕಟ್ಟಿಕೊಳ್ಳುವಲ್ಲಿ ಪ್ರಬುದ್ಧತೆಯನ್ನು ಪ್ರದರ್ಶಿಸುವ ಕೃಷ್ಣಾಬಾಯಿಯ ಮೂಲಕ ಲೇಖಕಿ ಸಂತೂಬಾಯಿ ಆಧುನಿಕ ಸುಶಿಕ್ಷಿತ ಗೃಹಿಣಿಯ ಮಾದರಿಯನ್ನು ಚಿತ್ರಿಸಿದ್ದಾರೆ. ವಿದ್ಯಾವಂತ ಸ್ತ್ರೀಯರು ಸಂಪ್ರದಾಯಿಕ ಕರ್ತವ್ಯಗಳೊಂದಿಗೆ ಬದುಕಿನ ಏರಿಳಿತಗಳಲ್ಲಿ ಕುಟುಂಬದ ಹಿತವನ್ನು ಸಂರಕ್ಷಿಸುವ ಕರ್ತವ್ಯವನ್ನು ಹೇಳಿದ್ದಾರೆ.

ಹೀಗೆ ಒಂದು ಶತಮಾನದ ಹಿಂದೆಯೇ ಸ್ತ್ರೀಯರಿಗೆ ಆಧುನಿಕ ಶಿಕ್ಷಣದ ಅಗತ್ಯವನ್ನು ಅತ್ಯಂತ ಸ್ಪಷ್ಟವಾಗಿ ಸಮರ್ಥಿಸಿಕೊಂಡಿರುವ ಪ್ರಗತಿಪರ ಲೇಖಕಿ, ಸ್ತ್ರೀ ಶಿಕ್ಷಣದ ಸ್ವರೂಪ ಮತ್ತು ಪ್ರಯೋಜನವನ್ನು ವಿವರಿಸುವಾಗ ಸಮಕಾಲೀನ ಸಂಪ್ರದಾಯಿಕ ಚಿಂತನೆಯ ಬೇಲಿಗಳನ್ನು

ಮೀರುವುದಿಲ್ಲವೆನ್ನುವುದು ಗಮನಾರ್ಹ. ಸ್ತ್ರೀಯರ ವಿದ್ಯೆ-ವಿವೇಕವೆಲ್ಲವೂ ಕುಟುಂಬದ ಸುಖ-ಶಾಂತಿಗಾಗಿ, ಮನೆ ಮಕ್ಕಳ ಕಲ್ಯಾಣಕ್ಕೆ ನಂತರ ದೇಶದ ಉನ್ನತಿಗೆ ವಿನಿಯೋಗವಾಗಬೇಕೆನ್ನುವ ಅವರ ಕುಟುಂಬ ಕೇಂದ್ರಿತ ಸುಧಾರಣಾವಾದಿ ಪರಿಕಲ್ಪನೆಯು ಅಂದಿನ ಬೌದ್ಧಿಕ ಲೋಕದ ನಿರೀಕ್ಷೆಯೂ ಆಗಿದ್ದಿತೆನ್ನುವುದು ವಿಚಾರಿಸಬೇಕಾದ ಸಂಗತಿ.

ಸಂಪ್ರದಾಯ-ಆಧುನಿಕತೆಯ ಸಮನ್ವಯದ ದಾರಿಯೊಂದನ್ನು ಹುಡುಕಿಕೊಂಡಿರುವಲ್ಲಿ ಅವರಿಗಿದ್ದ ಸಾಂದರ್ಭಿಕ ಒತ್ತಡಗಳನ್ನು ಗಮನಿಸಬೇಕಾಗುತ್ತದೆ. ಸ್ತ್ರೀ ಶಿಕ್ಷಣದ ಕುರಿತು ಹಳೆಯ ಮತ್ತು ಹೊಸ ತಲೆಮಾರಿನ ವೈಚಾರಿಕ ಭಿನ್ನತೆಯನ್ನು ಮುಖಾಮುಖಿಯಾಗಿಸುತ್ತ ಸ್ತ್ರೀ ಶಿಕ್ಷಣದ ಸಮರ್ಥನೆಗೆ ಪೂರಕವಾಗುವ ಮಧ್ಯಮ ಮಾರ್ಗವನ್ನು ಕಲ್ಪಿಸಿಕೊಂಡಿರುವಲ್ಲಿ ಲೇಖಕಿಯ ಕೇಂದ್ರ ಕಾಳಜಿ ಸ್ಪಷ್ಟವಾಗಿದೆ.

* ವಿದ್ಯಾವಂತೆ ಕೃಷ್ಣಾಬಾಯಿಯನ್ನು ಸೊಸೆಯಾಗಿಸಿಕೊಳ್ಳಲು ಹಿಂಜರಿಯುತ್ತಿದ್ದ ಸಂಪ್ರದಾಯಸ್ಥಳಾದ ತನ್ನ ತಾಯಿಗೆ ಮಾಧವರಾಯನು ಸ್ತ್ರೀ ಶಿಕ್ಷಣದ ಮಹತ್ವ ಕುರಿತು ತಿಳಿಸುವ ಸಂದರ್ಭ.
* ಅಲ್ಲದೆ ಮಾಧವರಾಯನ ತಾಯಿ ಮುಂಬಯಿಯ ಆಧುನಿಕ ಪರಿಸರದಲ್ಲಿದ್ದರೂ ಸಂಪ್ರದಾಯಸ್ಥಳಾಗಿರಲು ಕಾರಣ ಆಕೆಯು ಮೂಲ ಕರ್ನಾಟಕವಾಗಿರುವುದು.
* ವಿದ್ಯೆ ಕಲಿಯುವುದರಿಂದ ಸ್ತ್ರೀಯರ ನೀತಿಯು ಕೆಡುತ್ತದೆಂತಲೂ, ಗುರು ಹಿರಿಯರಿಗೆ ಯೋಗ್ಯ ಸನ್ಮಾನವನ್ನು ತೋರಿಸುವುದಿಲ್ಲವೆಂತಲೂ, ಸಂಸಾರದ ಕೆಲಸಗಳಲ್ಲಿ ಮನಸ್ಸು ಹಾಕುವುದಿಲ್ಲವೆಂತಲೂ ಆಕೆಯ ದೃಢ ತಿಳುವಳಿಕೆಯಾಗಿತ್ತು ಎನ್ನುವಲ್ಲಿ ಸ್ತ್ರೀ ಶಿಕ್ಷಣದ ವಿಷಯದಲ್ಲಿ ಅಂದಿನ ಕರ್ನಾಟಕವು ಹೆಚ್ಚು ಸಂಪ್ರದಾಯ ಪರವಾಗಿದ್ದಿತೆನ್ನುವ ಇಂಗಿತ ವಿಧಿತವಾಗಿದೆ.
* ತಾಯಿಯ ತಪ್ಪು ತಿಳುವಳಿಕೆಯನ್ನು ಪರಿಹರಿಸಲು ಮಾಧವರಾಯನ ಮೂಲಕ ಹೇಳಿಸಿರುವ ವಿಷಯ.
* ಜ್ಞಾನವು ಎಲ್ಲಾ ಹೆಂಗಸರಿಗೂ, ಗಂಡಸರಿಗೂ ಅಗತ್ಯವಾದುದು.
* ಜ್ಞಾನವು ಮನುಷ್ಯರಿಗೆ ಭೂಷಣ.
* ವಿದ್ಯೆಯೇ ಎಲ್ಲಾ ಕಾರ್ಯಗಳಿಗೂ ಸಾಧನೀಭೂತವಾದದ್ದು.
* ವಿದ್ಯೆ ಕಲಿತ ಹೆಂಡತಿ, ಮಕ್ಕಳಿಗೂ, ಗಂಡಂದಿರಿಗೂ, ಗುರು ಹಿರಿಯರಿಗೂ ಉಪಯುಕ್ತವಾಗಿ ದೇಶದ ಉನ್ನತಿಗಾಗಿ ಸಹ ಕಾರಣರಾಗುತ್ತಾರೆ.
* ಮಕ್ಕಳ ಪ್ರಗತಿಗೆ, ವಿದ್ಯಾಭ್ಯಾಸಕ್ಕೆ ಮಾದರಿ ಶಿಕ್ಷಣ, ಉಪದೇಶ.

* ಮೊದಲ ಎರಡು ಅಧ್ಯಾಯಗಳ ಕಥಾ ಸಂವಿಧಾನದಲ್ಲಿ ಸ್ತ್ರೀಯರನ್ನು ಉತ್ತಮ ಗೃಹಿಣಿಯರನ್ನಾಗಿಸುವ ಆಧುನಿಕ ಶಿಕ್ಷಣದ ಸಮರ್ಥನೆಯ ವಿಚಾರಗಳನ್ನು ಹಾಸುಹೊಕ್ಕಾಗಿ ಸಾಗಿದೆ.
* ಮುಂದಿನ ಅಧ್ಯಾಯಗಳಲ್ಲಿ ಕೃಷ್ಣಾಬಾಯಿ ಅನುಭವಿಸಿದ ಕಷ್ಟ ಪರಂಪರೆಗಳನ್ನು ಸಂಯಮ-ಸಚ್ಚಾರಿತ್ರ್ಯ-ಸದ್ಗುಣಗಳಿಂದ ಸಂಪಾದಿಸಿದ ಯಶಸ್ಸನ್ನು ನಿರೂಪಿಸಲಾಗಿದೆ.
* ಸಂಪ್ರದಾಯ-ಆಧುನಿಕತೆಯ ಸಂಧಿಕಾಲದ ಕುಟುಂಬ ವ್ಯವಸ್ಥೆಯ ಪಲ್ಲಟಗಳ ಸೂಕ್ಷ್ಮ ಚಿತ್ರಣವನ್ನು ನೀಡುವ ಕಾದಂಬರಿಯು ಲಿಂಗ ಶ್ರೇಣೀಕರಣದ ಸಾಮಾಜಿಕ ವರ್ತಮಾನಕ್ಕೆ ಬದ್ಧವಾಗಿದ್ದರೂ ಹೆಣ್ಣಿನ ಕಾರ್ಯಕ್ಷೇತ್ರವನ್ನು ಮನೆಗೆ ಕಟ್ಟಿಹಾಕದೆ ಸಾಮಾಜಿಕ ಆಯಾಮಗಳಿಗೂ ವಿಸ್ತರಿಸುವ ಒಲವು ತೋರುವುದು ವಿಶೇಷ ಸಂಗತಿ.
* ಸಮಾನತೆ, ಸ್ತ್ರೀಯರಿಗೆ ವಿಧಿಸಲಾಗಿರುವ ನೈತಿಕ ಸ್ಥಳಗಳನ್ನು ದಾಂಪತ್ಯ ಧರ್ಮವನ್ನು ಪುರುಷರು ಕಡ್ಡಾಯವಾಗಿ ಪಾಲಿಸಬೇಕೆನ್ನುತ್ತಾರೆ. ಪಾತಿವ್ರತ್ಯದಂತೆ, ಪತ್ನಿವ್ರತವೂ ಅಗತ್ಯವೆನ್ನುವಲ್ಲಿ ಆಧುನಿಕ ವೈಚಾರಿಕತೆಯನ್ನು ಪ್ರದರ್ಶನ ಮಾಡುತ್ತಾರೆ.
* ತಾಯಿಯಲ್ಲಿ ಗುರುವನ್ನು ಕಾಣುವ ಸನಾತನ ಆದರ್ಶವನ್ನು ಬೆಂಬಲಿಸುವ, ಮಾತೆಯ ಹೊಣೆಗಾರಿಕೆಯನ್ನು ನೆನಪಿಸುತ್ತಾರೆ.

ಹೀಗೆ ಆದರ್ಶಸತಿ-ಮಾತೆಯ ಕರ್ತವ್ಯಗಳನ್ನು ಎರಡು ಕಣ್ಣಾಗಿಸಿಕೊಂಡು ಹೆಣ್ಣು ಕುಟುಂಬಕ್ಕೆ ತನ್ನ ವಿದ್ಯೆ-ಪ್ರತಿಭೆ-ಶಕ್ತಿಯನ್ನು ಧಾರೆಯೆರೆದು, ಸದ್ಗೃಹಿಣಿಯಾಗಿ ಸಾರ್ಥಕಳಾಗಬೇಕೆನ್ನುವ ಕಾದಂಬರಿಯು 'ಸ್ತ್ರೀ ಧರ್ಮದ' ಮಾದರಿಯ 'ಹದಿಬದೆಯ ಧರ್ಮ'ದ ಮಾದರಿ ಹೋಲುತ್ತದೆ. ಹೀಗೆ ಕುಟುಂಬದ ಚಿಕ್ಕ ವರ್ತಲಕ್ಕೆ ಸೀಮಿತವಾಗಿದ್ದ ತನ್ನ ಹೊಣೆಗಾರಿಕೆಯನ್ನು ಸಮಾಜದ ವ್ಯಾಪ್ತಿಗೆ ಹಿಗ್ಗಿಸಿಕೊಳ್ಳುವ ಮೂಲಕವಾಗಿಯೇ ಆಧುನಿಕತೆಯ ಹೊಸ ಹೆಜ್ಜೆಗಳಿಗೆ ಅವಕಾಶ ಮಾಡಿಕೊಟ್ಟು, ಆಧುನಿಕತೆಯ ಮೂಲಕ ಸಾಧ್ಯವಾಗುವ ಸ್ತ್ರೀ ಸಮಾಜದ ಪ್ರಗತಿಯನ್ನು ಸಮರ್ಥಿಸುವುದನ್ನು ಕಾಣಬಹುದು.

**ತಿರುಮಲಾಂಬಾ ಅವರ ಕಾದಂಬರಿಗಳೊಂದಿಗೆ ಆಧುನಿಕತೆ ಹಾಗೂ ಸಂಪ್ರದಾಯದ ಅನುಸಂಧಾನ (ನಭಾ, ಸುಶೀಲೆ, ವಿರಾಗಿಣಿ, ವಿದ್ಯಾಲತಾ, ಮಣಿಮಾಲಾ, ಮಾತೃನಂದಿನಿ)**

ಬರಹ ಮತ್ತು ಬೌದ್ಧಿಕ ಲೋಕಕ್ಕೆ ಸ್ತ್ರೀಯರು ಪರಿಚಿತರಾಗಿರದಿದ್ದ ೨೦ನೇಯ ಶತಮಾನದ ಮೊದಲ ದಶಕಗಳಲ್ಲಿ ತಮ್ಮ ಸಾಮಾಜಿಕ-ಸಾಹಿತ್ಯಿಕ ಆಸಕ್ತಿಗಳಿಂದ ಸಮಕಾಲೀನ ಸಾಹಿತಿಗಳ, ಬುದ್ಧಿ ಜೀವಿಗಳ ಗಮನ ಸೆಳೆದ ಲೇಖಕಿ ನಂಜನಗೂಡಿನ ಶ್ರೀಮತಿ ತಿರುಮಲಾಂಬಾ ಅವರು.

೧೯೧೩ರ ಹೊತ್ತಿಗೆ ಲೇಖಕಿಯಾಗಿ ಗುರುತಿಸಿಕೊಂಡು, ಸುಶೀಲೆ, ನಭಾ, ವಿದ್ಯುಲ್ಲತಾ, ವಿರಾಗಿಣಿ, ವಿಕ್ರಮ, ನಿಶಾಕಾಂತ ಇತ್ಯಾದಿ ಕಾದಂಬರಿಗಳನ್ನು ಮತ್ತು ದಕ್ಷಕನ್ಯಾ, ಮಾತೃನಂದಿನಿ, ಹರಿಣಿ, ಚಂದ್ರವದನೆ, ಮಣಿಮಾಲೆ ಇತ್ಯಾದಿ ಸ್ತ್ರೀ ಕೇಂದ್ರಿತ ಪೌರಾಣಿಕ-ಸಾಮಾಜಿಕ ನಾಟಕಗಳನ್ನು ಬರೆದು ಅದರಲ್ಲಿ ಕ್ರಿಯಾಶೀಲತೆ ಪ್ರದರ್ಶಿಸಿದ್ದನ್ನು ಮತ್ತು ಆಧುನಿಕತೆ ಹಾಗೂ ಸಂಪ್ರದಾಯವನ್ನು ಮುಖಾಮುಖಿ ಗೊಳಿಸಿರುವುದು ಕಾಣುತ್ತೇವೆ.

ಸ್ವತಃ ಸಂಪ್ರದಾಯಿಕ ಪರಿಸರದಲ್ಲಿ ಹುಟ್ಟಿ ಬೆಳೆದರೂ ಲೇಖಕಿ ಆಧುನಿಕತೆಗೆ ವಿಮುಖರಾಗದೇ ಸಂಪ್ರದಾಯ, ಆಧುನಿಕತೆಯ ಸಂಕ್ರಮಣಾವಸ್ಥೆಯ ಒತ್ತಡಗಳಿಗೆ ಸಿಲುಕಿರುವುದು ಮತ್ತು ಒತ್ತಡಗಳಿಗೆ ಉತ್ತರವನ್ನು ತಮ್ಮ ಬರಹದ ಮೂಲಕ ವ್ಯಕ್ತಪಡಿಸಿದ್ದಾರೆ. ಹದಿಮೂರನೆಯ ವರ್ಷಕ್ಕೆ ವಿವಾಹವಾಗಿ ಹದಿನಾಲ್ಕರಲ್ಲಿ ವೈಧವ್ಯದ ಸಂಕಷ್ಟಕ್ಕೆ ತಲೆಕೊಟ್ಟು ಸಂಪ್ರದಾಯಿಕ, ವೈದಿಕ ಸಮಾಜದ ಕಟ್ಟು ನಿಟ್ಟುಗಳಿಗೆ ನಿಷ್ಠರಾಗಿಯೂ ಆಧುನಿಕ ಸಂವೇದನೆಗೆ ಕುರುಡಾಗದೇ ಬದುಕಬೇಕಾಗಿದ್ದ ಸಂದಿಗ್ಧತೆಯನ್ನು ತಿರುಮಲಾಂಬಾ ಸ್ವೀಕರಿಸಿದ ರೀತಿಯೂ ಅವರೊಳಗೆ ಸುಪ್ತವಾಗಿದ್ದ ಪ್ರಗತಿಪರ ನಿಲುವಿಗೆ ಸಂಕೇತವಾಗಿದೆ. ತಮ್ಮ ಸಮಕಾಲೀನ ಸಮಾಜದಲ್ಲಿ ಪ್ರಭಾವಶಾಲಿಯಾಗಿದ್ದ ಸ್ತ್ರೀ ಸುಧಾರಣಾ ವಿಚಾರಗಳನ್ನು, ಸ್ತ್ರೀಪರ ಧೋರಣೆಗಳನ್ನು ಬೆಂಬಲಿಸುತ್ತಾರೆ. ಸ್ತ್ರೀ ಶಿಕ್ಷಣ ಸ್ವಾವಲಂಬನೆಯ ವಿಚಾರಗಳನ್ನು ಸುಶೀಲೆ, ನಭಾ, ವಿರಾಗಿಣಿ, ವಿದ್ಯುಲ್ಲತಾ ಮುಂತಾದ ಕಾದಂಬರಿಗಳ ಮೂಲಕ ಸಮರ್ಥಿಸುವ ಅವರು ಕುಟುಂಬ-ಸಮಾಜದ ಪ್ರಗತಿಗೆ ಪ್ರತಿಕ್ರಿಯಿಸಿದ್ದಾರೆ. ಸಮಕಾಲೀನ ಸಮಾಜದಲ್ಲಿ ಬಹು ಚರ್ಚಿತ ಸಂಗಾತಿಗಳಾಗಿದ್ದ ಸ್ತ್ರೀ ಶಿಕ್ಷಣ, ಸ್ತ್ರೀಯರ ಕರ್ತವ್ಯ, ವಿಧವಾ ಸ್ಥಿತಿಗತಿ ಸುಧಾರಣೆ, ಕೇಶಮುಂಡನೆ, ಬಾಲ್ಯವಿವಾಹ, ಕುರಿತು ಅವರ ಕಾದಂಬರಿಯ ಪಾತ್ರ ಬೆಳವಣಿಗೆಯಲ್ಲಿ ಕಾಣುತ್ತೇವೆ. ಹಾಗೆಯೇ ಬಾಲ್ಯವಿವಾಹವನ್ನು, ಕೇಶ ಮುಂಡನೆಯನ್ನು ಖಂಡಿಸಿ ಸ್ತ್ರೀ ಶಿಕ್ಷಣವನ್ನು ಬೆಂಬಲಿಸಿದರೂ, ವಿಧವಾ ಮರುವಿವಾಹದ ವಿಚಾರದಲ್ಲಿ ಮಾತ್ರ ಸಂಪ್ರದಾಯವನ್ನು ಉಲ್ಲಂಘಿಸು ವುದಿಲ್ಲ.

ಮೊದಲ ಕಾದಂಬರಿ 'ಸುಶೀಲೆ' ಸ್ತ್ರೀ ವಿದ್ಯಾಭ್ಯಾಸ ಸಮರ್ಥನೆಯ ಆಶಯವಿರುವ ಕೃತಿ. ವಿದ್ಯಾವಂತೆಯರ ಬಗೆಗಿನ ಸಮಕಾಲೀನ ಸಮಾಜದ ಅಪನಂಬಿಕೆಗೆ ಉತ್ತರವೆಂಬಂತೆ ರೂಪುಗೊಂಡಿರುವ ಕಾದಂಬರಿಯ ನಾಯಕಿ ಸುಶೀಲೆ ವಿದ್ಯಾವಂತಳಾದರೂ ಸನಾತನ ದಾಂಪತ್ಯ ಧರ್ಮದಲ್ಲಿ ನಿಷ್ಠೆಯುಳ್ಳವಳು. ದಾರಿತಪ್ಪಿದ ಗಂಡನನ್ನು ಸರಿದಾರಿಗೆ ತಂದು ಸಂಸಾರ ಸುಖಕ್ಕೆ ಕಾರಣಳಾಗುತ್ತಾಳೆ. ಕೆಲವು ಮಿತಿಗಳಲ್ಲಿ ಮಹಿಳೆಯರ ಪ್ರಾಥಮಿಕ ಶಿಕ್ಷಣವನ್ನು ಬೆಂಬಲಿಸುವ ಲೇಖಕಿ ಸ್ತ್ರೀ ಶಿಕ್ಷಣದ ಸ್ವರೂಪ, ಅಗತ್ಯ, ಪ್ರಯೋಜನ, ಕುರಿತು ವ್ಯಕ್ತಪಡಿಸುವ ಅಭಿಪ್ರಾಯಗಳು ಅಂದಿನ ಸುಧಾರಣಾವಾದಿ ಚಿಂತನಾ ಕ್ರಮಕ್ಕೆ ಪೂರಕವಾಗಿದೆ.

ಹೆಣ್ಣು ಮಕ್ಕಳಿಗೆ ಅಕ್ಷರ ವಿದ್ಯೆಯ ಅಗತ್ಯವನ್ನು ಬೆಂಬಲಿಸಿದರೂ ಅದು ಕೇವಲ ಗುಣ ದೋಷಗಳ ವಿವೇಕಕ್ಕೆ ತಕ್ಕಷ್ಟಾಗಿದ್ದರೆ ಸಾಕು ಎಂದು ಭಾವಿಸುತ್ತಾರೆ. ಪುರುಷರಿಗೆ ಸರಿ ಸಮಾನವಾದ ಉನ್ನತ ಶಿಕ್ಷಣವು ಸ್ತ್ರೀ ಸಹಜ ಗುಣಗಳನ್ನು ಹಾಳು ಮಾಡುತ್ತದೆ. ಅಲ್ಲದೆ ಆಧುನಿಕ ಶಿಕ್ಷಣವು ಸ್ವೇಚ್ಛಾಚಾರಕ್ಕೆ ದಾರಿಯಾಗುತ್ತದೆ ಎನ್ನುವ ಹಿಂಜರಿಕೆಯನ್ನು ವ್ಯಕ್ತಪಡಿಸುತ್ತಾರೆ. ವಿದ್ಯೆಕಲಿತ ಹುಡುಗಿರು ಉದ್ಯೋಗಸ್ಥರಾಗಿ ಕುಟುಂಬದ ಆರ್ಥಿಕ ಸಂಪನ್ಮೂಲವಾಗಬೇಕೆನ್ನುವುದಕ್ಕೆ ಅವರ ಸಮ್ಮತಿಯಿಲ್ಲ. ಕೌಟುಂಬಿಕ ಕರ್ತವ್ಯಗಳಿಗೆ ಮೊದಲ ಆದ್ಯತೆ ನೀಡುವ ಅವರು ಗೃಹಿಣಿ ಧರ್ಮಪಾಲನೆಗೆ ಪೂರಕವಾಗಿರುವ ಶಿಕ್ಷಣ ಮಾತ್ರ ಸ್ತ್ರೀಯರಿಗೆ ಲಭ್ಯವಾದರೆ ಸಾಕು ಎಂದು ಸಂಪ್ರದಾಯಿಕ ಲಿಂಗಗ್ರಹಿಕೆಯ ಮಿತಿಯಲ್ಲಿ ಆಲೋಚಿಸಿರುವುದು ಕಂಡುಬರುತ್ತದೆ.

ಸ್ವತಃ ಬಾಲವಿಧವೆಯಾಗಿದ್ದ ತಿರುಮಲಾಂಬಾ ವಿಧವೆಯರು ಅನುಭವಿಸಬೇಕಾಗಿದ್ದ ದೀನತೆ, ಅಸಹಾಯಕತೆಗೆ ತೀವ್ರ ಸಂತಾಪ ವ್ಯಕ್ತಪಡಿಸುತ್ತಾರೆ. ಪತಿ ವಿಯೋಗದ ದುಃಖದೊಡನೆ ಕೇಶ ಮುಂಡನೆ ವ್ರತೋಪವಾಸಗಳ ಘೋರ ಶಿಕ್ಷೆಗೆ ಗುರಿಯಾಗಿ ಅನಿಷ್ಟ–ಅಪಶಕುನ ಎನ್ನುವ ತಿರಸ್ಕಾರಕ್ಕೆ ಒಳಗಾಗಬೇಕಾದ ದುಃಸ್ಥಿತಿಗಾಗಿ ಮರುಗುತ್ತಾರೆ. ವಿಧವೆಯರು ಮನಃಶಾಂತಿಗಾಗಿ ಸಾಮಾಜಿಕ ಸೇವೆಯಲ್ಲಿ ತೊಡಗಿಕೊಳ್ಳುವಂತೆ ಸಲಹೆ ನೀಡುತ್ತಾರೆ. ಮಾತ್ರವಲ್ಲ, ಸ್ವತಃ ತಾವು ಅದೇ ಮಾರ್ಗವನ್ನು ಅನುಸರಿಸಿ ಮಾದರಿಯಾಗುತ್ತಾರೆ. ಆದರೆ ವಿಧವೆಯರ ಮರು ವಿವಾಹದ ವಿಷಯದಲ್ಲಿ ಮಾತ್ರ ತಿರುಮಲಾಂಬಾ ನಕಾರಾತ್ಮಕವಾಗಿಯೇ ಪ್ರತಿಕ್ರಿಯಿಸುತ್ತಾರೆ. ಬಂಗಾಲ–ಮಹಾರಾಷ್ಟ್ರಗಳಲ್ಲಿ ಆಗ ನಡೆಯುತ್ತಿದ್ದ ಸ್ತ್ರೀ ಸುಧಾರಣೆಯ ಚಳುವಳಿಗಳು ಸ್ತ್ರೀ ಶಿಕ್ಷಣ ಮತ್ತು ವಿಧವಾ ವಿವಾಹವನ್ನು ಬೆಂಬಲಿಸಿದ್ದವೆನ್ನುವುದು ಗಮನಾರ್ಹ. ಹೀಗೆ ಸ್ತ್ರೀ ಸಮಾಜ ಸುಧಾರಣೆಯ ಅಗತ್ಯವನ್ನು ಅರಿತಿದ್ದ ತಿರುಮಲಾಂಬಾ ರೂಢಿಗತ ವಿಚಾರಗಳನ್ನು ಬೆಂಬಲಿಸಿಯೂ ಆಧುನಿಕತೆಯ ಫಲವಾದ ಪ್ರಗತಿ–ಪರಿವರ್ತನೆಗಳಿಗೆ ಸಂಪೂರ್ಣ ವಿಮುಖರಾಗದೇ ಕೆಲವು ಇತಿ–ಮಿತಿಗಳಲ್ಲಿ ಅನುಸಂಧಾನಿಸುತ್ತಾರೆನ್ನುವುದಕ್ಕೆ ಅವರ ಬರಹಗಳು ನಿದರ್ಶನವಾಗಿವೆ.

ವಿಧವೆಯರ ಸ್ಥಿತಿ–ಗತಿಗಳ ಸುಧಾರಣೆಯ ಉದ್ದೇಶದಿಂದ ತಿರುಮಲಾಂಬಾ ರಚಿಸಿರುವ ಕಾದಂಬರಿ 'ನಭಾ', 'ವಿರಾಗಿಣಿ'ಗಳಲ್ಲಿ ನಿರ್ಗತಿಕರಾದ ವಿಧವೆಯರು ಸಾಮಾಜಿಕ ಅವಮಾನಕ್ಕೆ ಗುರಿಯಾಗಿ ಕೌಟುಂಬಿಕ ತಾತ್ಸಾರದಿಂದ ನೆಲೆ ಕಳೆದುಕೊಂಡು ಅನುಭವಿಸುವ ಅಸ್ಥಿರ ಬದುಕಿನ ಹತಾಶೆಯನ್ನು ತುಂಬಾ ವಾಸ್ತವವಾಗಿ ಕಟ್ಟಿಕೊಡುವ ಲೇಖಕಿ ಗಂಡಿನ ಕಾಮ–ಪ್ರೇಮದ ಜಾಲದಲ್ಲಿ ಮೋಸ ಹೋಗುವ ಬಾಲವಿಧವೆಯರ ಸಮಸ್ಯೆಗಳಿಗೂ ಗಮನ ನೀಡಿದ್ದಾರೆ. ಸತಿತ್ವ–ಪಾತಿವ್ರತ್ಯ–ಪತಿನಿಷ್ಠೆಯನ್ನು ಬೋಧಿಸುತ್ತಾ ಸ್ತ್ರೀ ಸ್ವಾತಂತ್ರ್ಯವು ಸ್ವೇಚ್ಛಾಚಾರಕ್ಕೆ ಆಸ್ಪದ ನೀಡಿ ಶೀಲ–ಚಾರಿತ್ರ್ಯ ಪತನಕ್ಕೆ ಕಾರಣವಾಗಬಹುದೆಂದು ಸಂಶಯಿಸುತ್ತಾರೆ.

'ವಿದ್ಯುಲ್ಲತಾ' ಮತ್ತು 'ಮಣಿಮಾಲಾ' ಎರಡು ಭಾಗದಲ್ಲಿ ಪ್ರಕಟವಾಗಿರುವ ಒಂದೇ ಕಥೆಯಾಗಿದೆ. ಸ್ತ್ರೀ ಜನಾಂಗದ ಅಭ್ಯುದಯಕ್ಕೆ ಮಹಿಳಾ ಶಿಕ್ಷಣ ಅತ್ಯಗತ್ಯ ಎಂಬುದರ ಬಗ್ಗೆ ನಂಬಿಕೆಯುಳ್ಳ ಲೇಖಕಿ ವಿದ್ಯಾವತಿ ಸ್ತ್ರೀಯರಿಂದ ಹೊಂದಬಹುದಾದ ಲೋಕ ಶಿಕ್ಷಣದ ಉತ್ತಮ ಫಲವೆಂತಹುದೆಂಬುದು ಕಥಾ ನಾಯಕೀಯ ಶೀಲ, ಉದ್ಯಾಮಾದಿ ಪಾಂಡಿತ್ಯ ಪ್ರಭೆಯಲ್ಲಿ ಪ್ರತಿಫಲಿತವಾಗಿರುವುದು ಕಂಡುಬರುತ್ತದೆ. ಆಧುನಿಕತೆಯ ಪರಿಕಲ್ಪನೆಯಲ್ಲಿ ಶಚೀಕಾಂತನನ್ನು ವಿದೇಶದಲ್ಲಿ ಓದುವುದು ಹಾಗೂ ನಿನ್ನ ಪತ್ನಿ ಮತ್ತು ಅತ್ತೆ ಸುಟ್ಟು ಹೋದರೆಂದು ಸುದ್ದಿಮುಟ್ಟಿಸುವ ವಿವಾಹಿತ ಮಣಿಮಾಲೆಯನ್ನು ಒಲಿಸಿಕೊಳ್ಳುವ ಪ್ರಯತ್ನದಲ್ಲಿ ಅಮರನಾಥ ಸಫಲವಾಗುವುದಿಲ್ಲ. ಮಣಿಮಾಲೆ ಸಂಪ್ರದಾಯಿಕ ನಿಲುವಿನಿಂದ ಅವಳು ಪರಂಪರೆಯ ಬೆನ್ನಲ್ಲೆ ವಿಚಾರಧಾರೆಗಳು ಇರುವುದು ಕಂಡುಬರುತ್ತವೆ. ಮಣಿಮಾಲೆ ಸಮಾಜದ ಸುಧಾರಕ ಗೋಪಿನಾಥರಾಯರ ಬಳಿ ಆಶ್ರಯ ಪಡೆಯುತ್ತಾಳೆ. ಗೋಪಿನಾಥರ ಸಮಾಜ ಸುಧಾರಣೆಯ ಅಂಶಗಳು ಮಣಿಮಾಲೆಗೆ ಪ್ರಭಾವಿಸಿ ಅವಳು ಶಿಕ್ಷಣ, ಸ್ತ್ರೀಧರ್ಮ, ಕರ್ತವ್ಯಗಳ ಕುರಿತಾದ ಸೂಕ್ಷ್ಮ ವಿಚಾರಗಳ ಪ್ರತಿಪಾದನೆ ಕಂಡುಬರುತ್ತದೆ. ಮಣಿಮಾಲೆಯ ಮೂಲಕ ಹೆಣ್ಣು ಅಬಲೆಯಲ್ಲ, ಸಮರ್ಥಳೂ, ಬಲಾಢ್ಯಳೂ ಆಗಿ ಚಿತ್ರಿಸಿದ್ದಾರೆ.

ರಾಮಾಯಣದಲ್ಲಿ ಸೀತೆ ತನ್ನ ಪಾತಿವ್ರತ್ಯವನ್ನು ಅಗ್ನಿ ಪ್ರವೇಶ ಮಾಡಿ ಸಾಬೀತುಗೊಳಿಸಿದಂತೆ ಇಲ್ಲಿಯ ಕಥಾನಾಯಕಿ ಸಾಕ್ಷಾಧಾರ ಸಮೇತ ತಾನು ನಿರಪರಾಧಿ, ಪರಿಶುದ್ಧೆ ಎಂಬುದನ್ನು ಗಂಡನಿಗೆ ಹಾಗೂ ಸಮಾಜಕ್ಕೆ ತೋರ್ಪಡಿಸುವುದೇ ಸಂಪ್ರದಾಯದ ನಿಲುವುಗಳಿಗೆ ಬರುವುದು ಕಂಡುಬರುತ್ತದೆ. 'ಮಾತೃ ನಂದಿನಿ'ಯಲ್ಲಿ ನಂದಿನಿ ಪಾತ್ರದ ಮೂಲಕ ಸಂಪ್ರದಾಯದ ನೆಲೆಯಲ್ಲಿ ಚಿತ್ರಿಸಿದ್ದಾರೆ. ಹಾಗೂ ಆಧುನಿಕ ಚಿಂತನೆಗಳನ್ನು ಅವಳ ಮೂಲಕ ಲೇಖಕಿ ಪ್ರತಿಪಾದಿಸುತ್ತಾಳೆ. 'ಗಂಡಸರು ಹೆಂಗಸರನ್ನು ಹೇಗೆ ಶೋಷಿಸುತ್ತಾರೆ. ಹೆಣ್ಣಿನ ಮೇಲ್ಮೆ ಏನು, ಹೆಂಗಸರಿಗೆ ವಿದ್ಯೆ ಏಕೆ ಬೇಕು, ದೇಶದ ಅಭ್ಯುದಯವು ವಿದ್ಯಾವಂತೆಯಾದರೆ ಮಾತ್ರ ಸಾಧ್ಯ ಇತ್ಯಾದಿ ವಿಚಾರದ ಬಗ್ಗೆ ನಂದಿನಿ ಅವರ ಅಭಿಪ್ರಾಯಗಳನ್ನು ಖಂಡಿಸಿ ಉಪದೇಶ ನೀಡುತ್ತಾಳೆ. ನಂದಿನಿಯ ತಂದೆ, ತಂಗಿ ತಪಸ್ವಿನಿ ವಿಧವೆಯಾದ ಮೇಲೆ ತಾನು ಹೇಳಿದಂತೆ ಕೇಳಲಿಲ್ಲವೆಂದು ಗುರುಮಠದಿಂದ ಬಹಿಷ್ಕಾರ ಹಾಕಿಸಿದ್ದನ್ನೆಲ್ಲ ಬಯಲಿಗೆಳೆಯುತ್ತಾನೆ. ವರದಕ್ಷಿಣೆ, ಪ್ರೌಢ ವಿವಾಹ, ದೇಶಭಕ್ತಿ, ಸಂಘಶಕ್ತಿ ಹೀಗೆ ಹತ್ತು ಹಲವು ವಿಚಾರಗಳು ಆಧುನಿಕತೆಯಲ್ಲಿ ಪ್ರಮುಖ ಗೋಚರ ಗೊಳ್ಳುತ್ತವೆ. 'ಪೂರ್ಣಕಲಾ' ಕಾದಂಬರಿಯಲ್ಲಿ ಲೇಖಕಿ ಸ್ತ್ರೀ ಶಿಕ್ಷಣವನ್ನು ಬಯಸಿದರೂ ಮಹಿಳೆಯರಿಗೆ ಸನಾತನ ಸಂಸ್ಕೃತಿಯ ವಿಜೃಂಭಣೆಗೆ ಅಗತ್ಯವಾದ ವಿದ್ಯೆ ಬೇಕು. ಅವರಲ್ಲಿ ನಾಗರಿಕತೆಯ ಲೇಪ ಇರಕೂಡದು ಎಂದು ಸಂಪ್ರದಾಯ ಕುರಿತು ಮಾತನಾಡುತ್ತಾರೆ. ಮಹಿಳೆಯರ ಕಾರ್‍ಯಕ್ಷೇತ್ರ ಮನೆಯೇ ಹೊರತು ಮನೆಯ ಹೊರಗಲ್ಲ ಎಂಬ ಅಭಿಪ್ರಾಯಗಳು ಅಂದಿನ ಸಮಾಜಕ್ಕೆ

ಅನ್ವಯವಾಗುವಂತಹ ಇಂದಿಗೆ ಆ ವಿಚಾರಗಳು ಪ್ರಸ್ತುತ ಎನಿಸುವುದಿಲ್ಲ. ಆಧುನಿಕತೆಯನ್ನು ಕಂಡರೆ ಕೆಂಡ ಕಾರುವ ಲೇಖಕಿ ನಾಗರಿಕತೆಯನ್ನು ಸುಲಭವಾಗಿ ಸ್ವೀಕರಿಸುವುದಿಲ್ಲ. ಹೊರಗಿನ ಆಡಂಬರಕ್ಕಿಂತ ಅಂತರಂಗಕ್ಕೆ ಹೆಚ್ಚು ಮಾನ್ಯತೆ ನೀಡುವ ಅವರು ಹೊಸದಾದ ಆಮದಾದ ಉಡುಗೆ ತೊಡುಗೆಗಳ ಬಗ್ಗೆ ಲೇಖನಿಯನ್ನು ಝಳಪಿಸಿದ್ದಾರೆ.

"ಟೊಪ್ಪಿಗೆ, ಮುಖಕ್ಷೌರ, ಬೀಡಿ, ಬ್ರಾಂದಿ, ಮಂಜುಟ್ಟು, ಕುತ್ತಿಗೆಗೆ ನೇಣು ಇಷ್ಟರಿಂದಲೇ ನೀನು ಆಂಗ್ಲ ಸರದಾರ ಶ್ರೇಷ್ಠನೆನ್ನಿಸಿದೆಯಾದರೆ ನಾಟಕದ ವೇಷಧಾರಿಗಳು ಕೂಡ ಚಕ್ರೇಶ್ವರರಾಗಿ ಹೋಗುವರು"[೨೪] ಎಂದಿದ್ದಾರೆ. ಯಾರ ಅಡ್ಡಿ ಆಂತಕಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ನಾಗರಿಕತೆ ಮುಂದೆ ಹೆಜ್ಜೆಯನ್ನು ಇಟ್ಟೇ ಇಡುತ್ತದೆ. ಪರಂಪರೆಯನ್ನು ತನ್ನೊಳಗೆ ಜೀರ್ಣಿಸಿಕೊಳ್ಳುತ್ತದೆ. ಹೊಸದಾಗಿ ಬಂದದ್ದು ಕಾಲಕ್ರಮೇಣ ನಮ್ಮದೇ ಎಂಬುವಷ್ಟು ಒಗ್ಗಿ ಹೋಗುತ್ತದೆ. ಇಂದಿನ ನಾಗರಿಕತೆಯೇ ನಾಳಿನ ಸಂಸ್ಕೃತಿಯಾಗಿ ಪರಂಪರೆಯ ಅವಿಭಾಜ್ಯ ಅಂಗವಾಗಿ ಹೋಗುವುದನ್ನು ಇತಿಹಾಸ ಸಾರುತ್ತದೆ.

ಹೀಗೆ ತಿರುಮಲಾಂಬಾ ಅವರು ಆಧುನಿಕತೆ–ಸಂಪ್ರದಾಯಗಳ ಮುಖಾಮುಖಿಯಲ್ಲಿ ಆಧುನಿಕತೆಯ ಕೆಲವು ಸಂಗತಿಗಳನ್ನು ಬೆಂಬಲಿಸಿದರೂ, ಪರಿವರ್ತನೆಗಳಿಗಿಂತ ಸಂಪ್ರದಾಯ–ಪರಂಪರೆಯ ಮೌಲ್ಯಗಳಲ್ಲಿ ಒಲವು ತೋರಿರುತ್ತಾರೆನ್ನುವುದು ಸನಾತನ ಸಂಪ್ರದಾಯಕ್ಕೆ ಉದಾಹರಣೆಯಾಗಿದೆ.

### ಕಲ್ಯಾಣಮ್ಮನವರ 'ನಿಬಾರ್ಗ್ಯವನಿತೆ' ಮತ್ತು 'ಸುಖಲತಾ' ಕಾದಂಬರಿಗಳಲ್ಲಿ ಸಂಪ್ರದಾಯ ಮತ್ತು ಆಧುನಿಕತೆ

ಸಮಾಜದ ಪರಂಪರಾಗತ ಮೌಲ್ಯಗಳನ್ನು ವಿರೋಧಿಸುವ ನಿಟ್ಟಿನಲ್ಲಿ ವಿಧವೆ ಮತ್ತು ವಿಧುರನ ವಿವಾಹ ಮಾಡಿಸುವಲ್ಲಿ ಶಾಸ್ತ್ರ, ಪುರಾಣ, ಕಾನೂನುಗಳ ಸಾಕ್ಷ್ಯಾಧಾರಗಳನ್ನು ನೀಡುವುದರ ಮೂಲಕ ಯಶಸ್ವಿಯಾಗಿದ್ದು, ಸ್ತ್ರೀ ಪರಧೋರಣೆಯಾಗಿದೆ ಮರು ಮದುವೆಯ ವಿಚಾರದಲ್ಲಿ ಹೆಣ್ಣು–ಗಂಡಿನ ಕುರಿತಂತೆ ದ್ವಿಮುಖ ನೀತಿ ಕಂಡು ಬರುತ್ತದೆ. ವೈಧವ್ಯದ ಉರಿಯಲ್ಲಿ ಬೆಂದು ವಿಧವಾವಿವಾಹವನ್ನು ಸಮರ್ಥಿಸುವ ನಿರ್ಭಾಗ್ಯವನಿತೆ ಸ್ತ್ರೀಯ ಬದುಕಿಗೆ ಕಂಟಕಪ್ರಾಯವಾಗಿರುವ ವಿಷಮವಿವಾಹ, ವರದಕ್ಷಿಣೆಯಂತಹ ಸಮಸ್ಯೆಗಳನ್ನು ಎತ್ತಿಕೊಂಡು ಲೇಖನ ಕತೆಗಳನ್ನು ಬರೆದರು. ಹೆಣ್ಣು ಗಂಡಿನ ಕೇವಲ ಭೋಗ ವಸ್ತುವಾಗದೆ, ದಾಸಿಯಾಗದೆ ಆತನ ಸಹಚಾರಿಣಿಯಾಗಿ ಗೌರವದಿಂದ ಬಾಳುವಂತಾಗಬೇಕೆಂಬ ಲೇಖಕಿಯ ಕಾಳಜಿ ಬೇರೆ ಬೇರೆ ಬರಹಗಳಲ್ಲಿ ಹರಡಿಕೊಂಡಿದೆ. ಕಥಾ ನಾಯಕಿ ಇಂದಿರೆ ಮತ್ತು ಸುಂದರೇಶನ ಬಾಲ್ಯದ ನಿಕಟತೆ ಅವರಿರ್ವರಲ್ಲಿ ಗಾಢ ಪ್ರೇಮವನ್ನು ಬೆಳೆಯಿಸಿದರೂ ಆಕೆ ಅವನ ವಧುವಾಗದೇ

ದುರ್ಬಲನಾದ ನಾರಾಯಣನ ವಧುವಾಗುವಲ್ಲಿ ಇಂದಿರೆಯ ಅಜ್ಜಿಯ ಕಾಟ ಕಾರಣವಾಗುತ್ತದೆ. ವಿಧವೆಯಾಗಿ ತೌರಿನಲ್ಲಿ ಬಂದು ನಿಂತ ಕಾಳೀಮಣಿ ತನ್ನ ಸಹೋದರರ ಪತ್ನಿಯರ ಮೇಲೆ ದಬ್ಬಾಳಿಕೆಯನ್ನು ನಡೆಸುತ್ತಿದ್ದಳು. ಈ ವಿಷಯದಲ್ಲಿ ತನ್ನ ಸರ್ವಾಧಿಕಾರವನ್ನು ಸಾರುತ್ತಾಳೆ. ಈ ಎರಡೂ ಕುಟುಂಬಗಳಲ್ಲಿ ಸೊಸೆಯಂದಿರಿಗೆ ಅಧಿಕಾರವಿರದಿರುವ ಅಂಶ ಗಮನಾರ್ಹ. ಹಾಗೆಯೇ ನಿರ್ಧಾರ ತೆಗೆದುಕೊಳ್ಳುವುದು ಗಂಡಸರಲ್ಲ ಹೆಂಗಸರೇ ಎನ್ನುವುದು ಕೂಡ ಗಮನಿಸಬೇಕು. ಇಂದಿರೆಯ ಮನೆಯಲ್ಲಿ ನಿರ್ಧಾರವು ಸತೀಶನ ತಾಯಿಯನ್ನವಲಂಬಿಸಿದೆ. ನಾರಾಯಣನ ಮನೆಯಲ್ಲಿ ಅವನ ಸೋದರತ್ತೆಯನ್ನು ಅವಲಂಬಿಸಿದೆ. ನಾರಾಯಣನ ತಾಯಿ ಗೊಣಗುಟ್ಟಿಯಾದರೂ ಈ ವ್ಯವಸ್ಥೆಯನ್ನು ಪ್ರತಿಭಟಿಸುತ್ತಾಳೆ. "ಇಷ್ಟು ದಿನ ತಡೆದು ತಡೆದು ನನಗೆ ಸಾಕಾಯಿತು. ನನ್ನ ಮಗನ ವಿವಾಹಕ್ಕೆ ಸಮ್ಮತಿ ಕೊಡಲು ನನಗೆ ಸ್ವಾತಂತ್ರ್ಯವಿಲ್ಲವೇ ಎಂಬ ನೇರವಾದ ಪ್ರಶ್ನೆ ಹಾಕುತ್ತಾಳೆ."[೨೫] ಕಾಳೀಮಣಿಯ ದಬ್ಬಾಳಿಕೆಯಿಂದ ಬೇಸತ್ತ ಇತರ ಹೆಂಗಳೆಯರು ಈ ವಿಚಾರದಲ್ಲಿ ಪ್ರತಿಭಟಿಸಿದಕ್ಕಾಗಿ ನಾರಾಯಣನ ತಾಯಿಯನ್ನು ಅಭಿನಂದಿಸುವುದು ಗಮನಿಸಬೇಕಾದ ಅಂಶ. ತಿರುಮಲಾಂಬಾ ಅವರು ವಿಧವೆಯರು ದ್ವೇಷ, ಅಸೂಯೆಗಳನ್ನು ಗೆದ್ದುಕೊಂಡು ಸಂಯಮದಿಂದ ತಪಸ್ವಿಯಾಗಿ ಬಾಳಬೇಕೆಂದು ಮತ್ತೆ ಮತ್ತೆ ಹೇಳಿದರು. ಕಲ್ಯಾಣಮ್ಮನವರು ಸಮಾಜ ಸೇವೆಯ ಹಾಗೂ ನಾನಾ ವೃತ್ತಿಗಳನ್ನು ಕೈಗೊಂಡು ಸ್ವಾವಲಂಬಿಗಳಾಗಿ ಬಾಳುವ ಧ್ಯೇಯವನ್ನು ಮುಂದಿಟ್ಟರು.

ಇಂದಿರೆಯ ಅಣ್ಣ ಶಚೀಂದ್ರನ ವಿದ್ಯೆಯಿಂದಾಗಿ ಆತನಲ್ಲಿ ಸುಧಾರಣಾ ಮನೋಭಾವವಿದ್ದರೂ ತಂಗಿಯ ಮದುವೆ ಆದರ್ಶಕ್ಕೆ ವಿರುದ್ಧವಾಗಿ ವರದಕ್ಷಿಣೆ ಕೊಟ್ಟು, ಸಾಲ ಮತ್ತು ಸೋಲ ಮಾಡಿ ವೈಭವೋಪೇತವಾಗಿ ನಡೆಯುವಾಗ ಅಸಹಾಯಕನಾಗಿರುತ್ತಾನೆ.

ಇಂದಿರೆ ನಾರಾಯಣನನ್ನು ವರಿಸಿದರೂ ಆಕೆಯ ಮನಸ್ಸು ಸುಂದರೇಶನಲ್ಲಿ ಲೀನವಾಗಿದ್ದ ವಿಚಾರ ಕಾದಂಬರಿಯಲ್ಲಿ ಪ್ರಸ್ತಾಪಗೊಳ್ಳುತ್ತದೆ. ಮದುವೆಯಾದ ಬಳಿಕ ಆಕೆ ಸುಂದರೇಶನನ್ನು ಮರೆತಳು. ಸಂಪ್ರದಾಯಿಕವಾಗಿ ಪತಿವ್ರತೆಯಾಗಿ ನಾರಾಯಣನನ್ನೇ ಧ್ಯಾನಿಸಿದಳು ಎಂಬ ರೂಢಿಯ ಸುಳ್ಳನ್ನು ಹೇಳದೇ ಲೇಖಕಿ ಹೆಣ್ಣಿನ ಮನಸ್ಸಿನ ನಿಜಕ್ಕೆ ನಿಷ್ಠೆಯನ್ನು ಆಧುನಿಕತೆಯ ಮೂಲಕ ತೋರಿಸಿದ್ದಾರೆ.

ತನ್ನ ೪೫ನೆಯ ವರ್ಷದಲ್ಲಿ ವಿಧುರನಾದ ಇಂದಿರೆಯ ತಂದೆ ಸತೀಶ ಮದುವೆಯಾಗುವುದು, ಎಳೆಯ ಪ್ರಾಯದ ವಿಧವೆ ಇಂದಿರೆ ಮಲತಾಯಿಯ ಶೋಷಣೆಗೊಳಗಾಗುವುದು, ಇದರ ಹಿನ್ನೆಲೆಯಲ್ಲಿ ಮರುಮದುವೆಯ ವಿಚಾರದಲ್ಲಿ ಹೆಣ್ಣು-ಗಂಡಿನ ಕುರಿತಂತೆ ದ್ವಿಮುಖ ನೀತಿಯನ್ನು ತೋರುವ ಸಮಾಜದ ಬಗ್ಗೆ ಇಂದಿರೆಯ ಸೋದರ ಶಚೀಂದ್ರ ಯೋಚಿಸುತ್ತನೆ. ಶಚೀಂದ್ರನು ಸುಂದರೇಶನು ಇಂದಿರೆಯ ಮರುಮದುವೆಯ ಬಗ್ಗೆ ಗಾಢವಾಗಿ ಚಿಂತಿಸುತ್ತಾರೆ. ವಿಧವಾ

ವಿವಾಹಕ್ಕೆ ಶಾಸ್ತ್ರ ಸಮ್ಮತಿ ಪಡೆಯಲು ಸುಂದರೇಶನು ಪ್ರಯತ್ನಿಸುತ್ತಾನೆ. ಅವರಲ್ಲಿ ಗೆಲುವಾಗದಿದ್ದರೂ ಸೋಲದೇ ಬ್ರಹ್ಮ ಸಮಾಜಕ್ಕೆ ಸೇರಿ ಅಲ್ಲಿ ಸುಂದರೇಶ ಇಂದಿರೆಯರು ಮದುವೆಯಾಗುತ್ತಾರೆ. ವಿಧವೆಯರ ಬವಣೆಯನ್ನು ನೀಗಲು ಇಂದಿರೆಯು ಪ್ರಯತ್ನಿಸುತ್ತಾಳೆ.

ಈ ಕಾದಂಬರಿಯಲ್ಲಿ ವಿಧುರನನ್ನು ಮದುವೆಯಾಗುವ ಇಂದಿರೆ ಕೂಡ ಗರ್ಭಾದಾನವಾಗಿರದ ವಿಧವೆ ಎನ್ನುವುದು ಗುರುತಿಸಬೇಕಾದ ಅಂಶವಾಗಿದೆ. ಸ್ವತಃ ವಿಧವೆಯಾಗಿರುವ ಲೇಖಕಿ ಪುನರ್ವಿವಾಹದ ಆಶಯವನ್ನು ಇಷ್ಟರಮಟ್ಟಿಗಾದರೂ ಪ್ರತಿಪಾದಿಸಿದ್ದು ಆಧುನಿಕತೆಯ ಪ್ರತಿಫಲದ ಅಂಶಗಳು ಎನ್ನಬಹುದು. ಈ ವಿಚಾರದಲ್ಲಿ ತಿರುಮಲಾಂಬಾ ಅವರಿಗಿಂತ ಕಲ್ಯಾಣಮ್ಮ ಭಿನ್ನರಾಗಿ ತೋರುತ್ತಾರೆ.

ಕಲ್ಯಾಣಮ್ಮನವರ ಇನ್ನೊಂದು ಕೃತಿ 'ಸುಖಲತಾ' ಕಾಲ್ಪನಿಕ ಕತೆಯಾದರೂ ಸಮಕಾಲೀನ ವಿಚಾರಗಳ ಬಗ್ಗೆ ಸಾಂದರ್ಭಿಕವಾಗಿ ಟೀಕೆ ಟಿಪ್ಪಣಿಗಳಿವೆ. ತಾಯಿಯಲ್ಲದ ತಬ್ಬಲಿ ಸುಖಲತೆ ಮಲತಾಯಿಯಿಂದ ಅನುಭವಿಸುವ ಕಷ್ಟ, ಸುಖಲತೆಯ ತಂದೆ ಎಳೆ ಪ್ರಾಯದ ಹೆಂಡತಿಯ ಕೈಗೊಂಬೆಯಾಗಿರುವುದು ಸುಖಲತೆಯ ಸುಖವನ್ನು ಕಡೆಗಣಿಸುವುದು ಇತ್ಯಾದಿ ವಿಚಾರಗಳ ನಿರೂಪಣೆಯಲ್ಲಿ ವಿಷಮವಿವಾಹದ ಬಗ್ಗೆ ಟೀಕೆ ಇದೆ. ಸುಖಲತೆ ಮತ್ತು ಪದ್ಮಲತೆ ಇಲ್ಲಿ ಪ್ರಧಾನ ಪಾತ್ರಗಳಾಗಿವೆ. ಅದರಲ್ಲೂ ಜಾಣ್ಮೆ, ವಿಷಮ ಸನ್ನಿವೇಶಗಳನ್ನು ನಿಭಾಯಿಸುವ ಕೌಶಲ, ಮನೋಭಾವ, ಸ್ವಾರ್ಥತ್ಯಾಗ ಇತ್ಯಾದಿ ಗುಣಗಳಿಂದ ಕೂಡಿದ ಪದ್ಮಲತೆಯ ಪಾತ್ರ ಅತ್ಯಂತ ಕ್ರಿಯಾಶೀಲವಾಗಿದೆ. ಇಲ್ಲಿ ಸ್ತ್ರೀ ಜೋಡಿಯನ್ನು ಲೇಖಕಿ ನೀಡಿರುವುದು ವಿಶೇಷವಾಗಿದೆ. ಪ್ರತಾಪಸಿಂಹ ಹಾಗೂ ಸರ್ದಾರಸಿಂಗ್‌ರ ಅನ್ಯೋನ್ಯತೆಯೂ ಪರಸ್ಪರವಾಗಿವೆ ಈ ಕಾದಂಬರಿಯಲ್ಲಿ ಕ್ರಿಯೆ ಮುಖ್ಯವಾಗಿ ನಡೆಯುವುದು ಸ್ತ್ರೀಯರಿಂದಲೇ ಎಂಬ ಕಾರಣಕ್ಕೆ ಕೂಡ ಮುಖ್ಯವಾಗುತ್ತದೆ. ಒಳ್ಳೆಯದಕ್ಕೂ ಮತ್ತು ಕೆಟ್ಟದಕ್ಕೂ ಚಾಲಕ ಶಕ್ತಿಯಾಗಿ ಇಲ್ಲಿ ಸ್ತ್ರೀಯೇ ಇದ್ದಾಳೆ. ಸುಖಲತೆಯನ್ನು ಇಂದಿನ ಮಹಿಳೆಯರಿಗೆ ಆದರ್ಶಪ್ರಾಯಳಾಗಿ ಆಧುನಿಕತೆಯ ಅಂಶಗಳಿಗೆ ಮುಖಾಮುಖಿಯಾಗುತ್ತಾಳೆ. ನೀತಿ ಬೋಧನೆಗೆ, ಸಮಾಜ ಸುಧಾರಣೆಗೆ ಸಾಹಿತ್ಯವನ್ನು ಸಾಧನವೆಂದು ನಂಬಿದ ಲೇಖಕಿ ಈ ಕಾದಂಬರಿಯಲ್ಲೂ ಆ ಉದ್ದೇಶವನ್ನು ಸಾಧಿಸುತ್ತಾರೆ.

ವಿದ್ಯಾವಂತ ಹೆಣ್ಣು ಮಕ್ಕಳನ್ನು ಸಮಾಜ ನೋಡುವ ದೃಷ್ಟಿಕೋನ ಬದಲಾಗಬೇಕೆಂಬುದು ಕಲ್ಯಾಣಮ್ಮನವರ ಆಶಯ. ಸ್ತ್ರೀಯರ ವಿದ್ಯಾಭಿವೃದ್ಧಿಯೂ ದಿನೇ ದಿನೇ ಹೆಚ್ಚುತ್ತಿರುವುದರಿಂದ ಭಾರತ ರಮಣೀಯರು ವಿದ್ಯಾವತಿಯರಾಗಿ ತಮ್ಮ ಸ್ಥಿತಿಗತಿಗಳನ್ನು ಪಾಶ್ಚಾತ್ಯರೊಂದಿಗೆ ಹೋಲಿಸಿ ತಮ್ಮ ಹೀನಸ್ಥಿತಿಗೆ ನೊಂದು ವೇಶೋದ್ಧಾರಕ್ಕಾಗಿ ಪ್ರಯತ್ನಪಡುತ್ತಿರುವರು. ಹೀಗೆ ವಿದ್ಯಾವತಿಯರಾದ ಬಾಲಕಿಯರು ಸೊಸೆಯರಾದರೆ ಪೂರ್ವಕಾಲದ ಅತ್ತೆಯರಿಗೆ ಇವರ ನಾಗರಿಕ ನುಡಿಗಳು

ರುಚಿಸುವುದೇ ಯಾವ ಯಾವ ಕಾಲಕ್ಕೆ ಹೇಗೆ ಹೇಗೆ ನಡೆದುಕೊಳ್ಳಬೇಕೋ ಅದರಂತೆ ನಡೆಯಲೆಂದು ಸುಮ್ಮನಿರುವುದು ಮೇಲು. ಸುಮ್ಮನೆ ಅದನ್ನು ಖಂಡಿಸಿದರೆ ಅವರು ಕೇಳುವರೇ? ಸರ್ವಶಕ್ತನಾದ ಭಗವಂತನೇ ಈ ರೀತಿ ಹಿಂಸೆಗೆ ಆಳಾಗದಂತೆ ಮಾಡಿ ಅದರ ಮೇಲೆ ವಿಶ್ವಾಸವುಳ್ಳವರಾಗಿರಬಹುದೆಂದು ನಂಬಬಹುದಾಗಿರುವುದು ಎಂಬ ಮಾತುಗಳು ಹೆಣ್ಣು ಮಕ್ಕಳಿಗೆ ವಿದ್ಯೆ ಎಷ್ಟು ಮುಖ್ಯ ಎಂಬುದರ ಕಡೆಗೆ ಬೆಳಕು ಚೆಲ್ಲುತ್ತದೆ. ಅಲ್ಲದೇ ಈ ಹಿಂದೆ ವಿವರಿಸಲಾದ ವೈಧವ್ಯ, ವರದಕ್ಷಿಣೆ ಮೊದಲಾದ ಸಮಸ್ಯೆಗಳ ನಿವಾರಣೆಗೂ ವಿದ್ಯಾಭ್ಯಾಸದ ಅಗತ್ಯತೆಯನ್ನು ಅನುಮೋದಿಸುತ್ತಾರೆ. ಪ್ರಚಲಿತ ಸಾಮಾಜಿಕ ಸಮಸ್ಯೆಗಳು ಬಿಗಡಾಯಿಸಲು ನಮ್ಮ ಹಿಂದೂ ಸಮಾಜದಲ್ಲಿ ಸ್ತ್ರೀಯರು ಅವಿದ್ಯಾವಂತೆಯರಾಗಿರುವುದೇ ಕಾರಣ. ಸ್ತ್ರೀಗೆ ಆಧುನಿಕ ಶಿಕ್ಷಣವನ್ನು ಕೊಡಬೇಕು ಆಗ ವಿವೇಚನಾಯುಕ್ತ ಆಲೋಚನೆ ಮಾಡುವ ಶಕ್ತಿ ಬರುತ್ತದೆ. ಆಗ ಸಾಮಾಜಿಕ ಸಮಸ್ಯೆ ನಿವಾರಣೆಯಾಗುತ್ತದೆ ಎಂಬ ಧೋರಣೆ ಇವರದು.

**ಕೊನೆಟಿಪ್ಪಣಿಗಳು**

೧. ಗುಲ್ವಾಡಿ ವೆಂಕಟರಾಯ, **ಇಂದಿರಾಬಾಯಿ,** ೧೮೯೯, ಪು.೨೨೮

೨. ರಂಗನಾಥ ಜಿ.ಎನ್., **ಒಳನೋಟ,** ೧೯೮೦, ಪು.೬

೩. ರಾಮಚಂದ್ರನ್ ಸಿ.ಎಸ್., **ಸುಧಾರವಾದಿ ಕಾದಂಬರಿಯ ಒಂದು ವಿನ್ಯಾಸ,** ವಾಗ್ದೇವಿ ಸಾಪ್ತಾಯಿಕ ಪುರವಣಿ, ಪ್ರಜಾವಾಣಿ ದಿನಪತ್ರಿಕೆ, ೨೦೧೧

೪. ಬಾಳಾಸಾಹೇಬ ಲೋಕಾಪುರ, **ಕೆರೂರು ವಾಸುದೇವಾಚಾರ್ಯ,** ೨೦೧೦, ಪು.

೫. ಅದೇ, ಪು.೩೩

೬. **ಕೆರೂರು ವಾಸುದೇವಾಚಾರ್ಯ ಸಮಗ್ರ ಕಾದಂಬರಿ ಸಂಪುಟ,** ೨೦೦೭, ಪು.೭೫-೭೬

೭. ಗಾಳಿ ಶಿವಾನಂದ, **ಮಿರ್ಜಿ ಅಣ್ಣರಾಯ: ಒಂದು ಅಧ್ಯಯನ,** ೧೯೯೫, ಪು.೨೪

೮. ಮಾಸ್ತಿ ವೆಂಕಟೇಶ **ಅಯ್ಯಂಗಾರ್, ಭಾಗ ೨,** ೧೯೬೯, ಪು.೨೬೧

೯. ಅಮೂರ ಜಿ.ಎಸ್., **ಕನ್ನಡ ಕಥನ ಸಾಹಿತ್ಯ: ಕಾದಂಬರಿ,** ೨೦೦೬, ಪು.೫೯

೧೦. ಶಿವರಾಮ ಕಾರಂತ, **ಚೋಮನದುಡಿ,** ಪು.೧೦೬

೧೧. ಅದೇ, ಪು.೧೦೯

೧೨. ಅಶೋಕ ಟಿ.ಪಿ., **ಶಿವರಾಮ ಕಾರಂತ: ಎರಡು ಅಧ್ಯಯನಗಳು,** ೧೯೯೨, ಪು.೯೮

೧೩. ಬೆಟ್ಟದ ಜೀವ, ಪು.೧೦೭

೧೪. ಅಮೂರ ಜಿ.ಎಸ್., **ಕಾರಂತರ ಕಾದಂಬರಿಗಳಲ್ಲಿ ಬದುಕುವ ಬಗೆಗಳ ಅನ್ವೇಷಣೆ, ಕನ್ನಡ ಕಥನ ಸಾಹಿತ್ಯ ಕಾದಂಬರಿ,** ಪು.೧೩೦

೧೫. ಹಳೆಮನೆ ರಾಜಶೇಖರ, **ಕಾದಂಬರಿಗಳಲ್ಲಿ ತಲೆಮಾರುಗಳ ಸಂಘರ್ಷ,** ೨೦೧೧, ಪು.೧೧೯

೧೬. ಅದೇ, ಪು.೧೨೭

೧೭. ಕೋದಂಡರಾಮ ಎನ್.ಕೆ., **ಕನ್ನಡ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ,** ೧೯೯೯, ಪು.೪೫–೪೬

೧೮. ದೇಜಗೌ, **ರಾಷ್ಟ್ರಕವಿ ಕುವೆಂಪು ಸಂದರ್ಶನ,** ೧೯೮೪, ಪು.೧೧

೧೯. ಮ್ಯಾಗೇರಿ ಐ.ಜೆ., **ವಸಾಹತುಶಾಹಿ ಅನುಭವ ಪ್ರಮುಖ ಕನ್ನಡ ಕಾದಂಬರಿಗಳು,** ೨೦೦೮, ಪು.೧೩೬

೨೦. ಕುವೆಂಪು, **ಮಲೆಗಳಲ್ಲಿ ಮದುಮಗಳು,** ಪು.೨೫೦

೨೧. ರಹಮತ್ ತರೀಕೆರೆ, **ಪ್ರತಿ ಸಂಸ್ಕೃತಿ,** ಪು.೧೧೯

೨೨. ಕುವೆಂಪು, **ಮಲೆಗಳಲ್ಲಿ ಮದುಮಗಳು,** ಪು.೧೯೪–೧೯೬

೨೩. ಅದೇ, ಪು.೨೦೦

೨೪. ತಿರುಮಲಾಂಬಾ, **ಪೂರ್ಣಕಲಾ,** ಪು.೭೯

೨೫. ಕಲ್ಯಾಣಮ್ಮ ಆರ್., **ನಿರ್ಭಾಗ್ಯವನಿತೆ,** ಪು.೭೦

# ಅಧ್ಯಾಯ ಹನ್ನೊಂದು

## ಕಾದಂಬರಿಗಳ ಸಾಹಿತ್ಯ ಅಧ್ಯಯನ
## ಭಾಷೆ, ಶೈಲಿ, ತಂತ್ರ ಮತ್ತು ನಿರೂಪಣಾ ವಿನ್ಯಾಸ

## ಅಧ್ಯಾಯ ಹನ್ನೊಂದು

# ಕಾದಂಬರಿಗಳ ಸಾಹಿತ್ಯ ಅಧ್ಯಯನ

### ಭಾಷೆ, ಶೈಲಿ, ತಂತ್ರ ಮತ್ತು ನಿರೂಪಣಾ ವಿನ್ಯಾಸ

ಹದಿನೆಂಟನೆಯ ಶತಮಾನದ ವೇಳೆಗೆ ಕನ್ನಡ ಗದ್ಯಸಾಹಿತ್ಯ ಹೊಸ ರೂಪವನ್ನು ಪಡೆಯಿತು. ಬ್ರಿಟಿಷರ ಆಡಳಿತ, ಇಂಗ್ಲಿಷ್ ವಿದ್ಯಾಭ್ಯಾಸ, ಕ್ರೈಸ್ತ ಮಿಶನರಿಗಳ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ಹೊಸತನ ಅಂಕುರಿಸಿತು. ಹೊಸಗನ್ನಡದಲ್ಲಿ ಮುದ್ದಣ್ಣನಿಂದ ಗದ್ಯಸಾಹಿತ್ಯ ಆರಂಭವಾಯಿತು ಎಂದು ಸಾಹಿತ್ಯ ಚರಿತ್ರೆಯಿಂದ ತಿಳಿಯಲಾಗುತ್ತದೆ. ಕನ್ನಡದಲ್ಲಿ ಕಾದಂಬರಿ ಲಕ್ಷಣ ಹೊಂದಿದಂತಹ ಕಥಾನಕಗಳೆಂದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಸೌಗಂಧಿಕಾ ಪರಿಣಯ, ಯಾದವನ ಕಲಾವತಿ ಪರಿಣಯ, ಕೆಂಪು ನಾರಾಯಣನ ಮುದ್ರಾ ಮಂಜೂಷಗಳಲ್ಲಿ ಕಥನಗದ್ಯ ಹಾಗೂ ಕಲ್ಪನೆಯೇ ಪ್ರಧಾನವಾಗಿ ಬಳಸಲ್ಪಟ್ಟಿತ್ತು. ಹಾಗೆ ನೋಡುವುದಾದರೆ ದೇಸಿ ಸಾಹಿತ್ಯ ಪರಂಪರೆಯ ಲಕ್ಷಣಗಳು ಕನ್ನಡದ ಮೊದಲ ಕಾದಂಬರಿಗಳ ಗದ್ಯದಲ್ಲಿ ಕಂಡುಬಂದಿದೆ.

ಹೊಸಗನ್ನಡ ಗದ್ಯ ಸಾಹಿತ್ಯದ ಕಾದಂಬರಿಗಳಲ್ಲಿನ ಭಾಷೆಯಲ್ಲಿ ಚಂಪೂ ಶೈಲಿಯ ಲಕ್ಷಣಗಳನ್ನು ಕಾಣುತ್ತೇವೆ. ಪದ್ಯ ಮತ್ತು ಗದ್ಯಗಳೆರಡರ ಪ್ರಯೋಗವನ್ನು ಆರಂಭದ ಕಾದಂಬರಿಕಾರರು ಬಳಸಿದ್ದಾರೆ. ದೇಸಿ ಸಾಹಿತ್ಯದಲ್ಲಿಯೂ ಸಂಸ್ಕೃತ ಪರಂಪರೆಯ ಲಕ್ಷಣಗಳು ಕಂಡುಬರುತ್ತವೆ. “ಪದ್ಯ ಮತ್ತು ಗದ್ಯ ಮಿಶ್ರಣ ಭಾಷೆಯೊಂದು ಆರಂಭದ ಗದ್ಯ ಕೃತಿಗಳಲ್ಲಿ ಬಳಕೆಯಾಗಿದೆ. ಹದಿನೆಂಟನೆಯ ಶತಮಾನದ ವೇಳೆಗೆ ಮೈಸೂರಿನ ಅರಸರ ರಾಜಸ್ಥಾನದ ಪರಿಸರದಲ್ಲಿ ಕನ್ನಡ ಗದ್ಯದಲ್ಲಿ ಹೊಸ ರೂಪವೊಂದರ ಬಳಕೆ ಅಂಕುರಿಸಿದ್ದು ಕಂಡುಬರುತ್ತದೆ.”[೧] ಉದಾ: ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಗದ್ಯಕೃತಿಗಳಲ್ಲಿ ಬಳಕೆಯಾಗಿರುವ ಭಾಷೆ, ಉತ್ತರ ಕರ್ನಾಟಕದಲ್ಲಿ ಚುರುಮುರಿಯವರು ತಮ್ಮ ಕೃತಿಗಳಲ್ಲಿ ಬಳಸುತ್ತಿದ್ದ ಭಾಷೆ, ಪ್ರಾದೇಶಿಕವಾದ ಲಕ್ಷಣಗಳಿಂದ

ಕೂಡಿತ್ತು. ಈ ತರಹದ ಪ್ರಾದೇಶಿಕವಾದ ಲಕ್ಷಣಗಳಿಂದ ಕೂಡಿದ ಭಾಷಾ ಬಳಕೆಗೆ ಕಾರಣ ಆ ಹೊತ್ತಿನ ಸಾಂಸ್ಕೃತಿಕ ವಾತಾವರಣವೆಂದು ಹೇಳಬಹುದು.

ಕನ್ನಡದಲ್ಲಿ ಈ ಸಾಂಸ್ಕೃತಿಕ ಪಲ್ಲಟಗಳು ಆಯಾ ಸಂದರ್ಭ ಮತ್ತು ಪ್ರದೇಶಗಳಲ್ಲಿ ರೂಪುಗೊಂಡ ಸಾಹಿತ್ಯ ಕೃತಿಗಳ ಭಾಷೆಯ ಮೇಲೂ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಈ ತರಹದ ಅಂಶಗಳು ಆರಂಭದ ಕಾದಂಬರಿಗಳ ಭಾಷೆಯಲ್ಲಿ ಮೈದೋರಿರುವುದನ್ನು ಕಾಣಬಹುದು. ದೇಸಿ ಸಾಹಿತ್ಯ ಪರಂಪರೆಯ ಲಕ್ಷಣಗಳೆಲ್ಲವೂ ಆರಂಭದ ಕಾದಂಬರಿಗಳ ಭಾಷೆಯಲ್ಲಿ ಬೆರೆತಿವೆ. ಆರಂಭದ ಗದ್ಯ ಕಥಾನಕಗಳಲ್ಲಿ ಗಳಗನಾಥರು ವರ್ಣನಾತ್ಮಕವಾದ ಭಾಷೆ ಮತ್ತು ಸಂಪ್ರದಾಯಕ್ಕೆ ಒತ್ತು ಕೊಟ್ಟಿರುವುದನ್ನು ಕಾಣುತ್ತೇವೆ.

ಗುಲ್ವಾಡಿಯವರ 'ಇಂದಿರಾಬಾಯಿ', ಕೆರೂರು ವಾಸುದೇವಚಾರ್ಯರ 'ಇಂದಿರೆ', ಬೋಳಾರ ಬಾಬುರಾಯರ 'ವಾಗ್ದೇವಿ', ಎಂ.ಎಸ್.ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹಾರಾಯ' ಮುಂತಾದ ಕಾದಂಬರಿಗಳಲ್ಲಿ ಹತ್ತೊಂಬತ್ತನೆಯ ಶತಮಾನದ ಚಲನಶೀಲ ಸ್ವರೂಪದ ಭಾಷಾ ಪ್ರಯೋಗವೇ ನಡೆದಿದೆ. ಈ ಸ್ವಾತಂತ್ರ್ಯಪೂರ್ವ ಮೊದಲ ಕಾದಂಬರಿಗಳು ಗದ್ಯದಲ್ಲಿ ಮೈಸೂರು ಪ್ರಾಂತ್ಯದ ಜನಜೀವನದ ಸಮಸ್ಯೆಗಳು ಒಂದೆಡೆ ಬಿತ್ತರಿಸಿದರೆ ಮತ್ತೊಂದೆಡೆ ಮಿಷನರಿಗಳ ಪ್ರಭಾವ ಮತ್ತು ಆಧುನಿಕ ಶಿಕ್ಷಣದ ಪ್ರಭಾವ ಸಮಸ್ಯೆಗಳು, ದಕ್ಷಿಣ ಕನ್ನಡ ಪ್ರಾಂತ್ಯದಲ್ಲಿ ಚಿತ್ರಿಸಲ್ಪಟ್ಟವು. ಆಧುನಿಕತೆ ಹಾಗೂ ಪುನರುತ್ಥಾನದ ತಿಕ್ಕಾಟದ ಸಮಸ್ಯೆಗಳು ಮರಾಠಿ ಮೂಲಕ ಉತ್ತರ ಕರ್ನಾಟಕದ ಸಮಸ್ಯೆಗಳಾಗಿ ಬಿಂಬಿಸಲ್ಪಡುತ್ತಿದ್ದವು. ಈ ತರಹದ ಭಿನ್ನ ಸಮಸ್ಯೆಗಳು ಆಯಾ ಪ್ರಾದೇಶಿಕವಾದ ಕಾದಂಬರಿಗಳ ಭಾಷಾಶೈಲಿಗೆ ವಸ್ತುವನ್ನೊದಗಿಸಿವೆ. ಸಂಪ್ರದಾಯಿಕ ಗದ್ಯ ಕಥನದಿಂದ ಭಾಷೆಯು ರೂಪುಗೊಳ್ಳುವುದನ್ನು ಆರಂಭದ ಕಾದಂಬರಿಗಳಲ್ಲಿ ಕಾಣುತ್ತೇವೆ. "ಅನ್ಯ ಸಂಸ್ಕೃತಿ ದೇಸಿಯವಾದುದನ್ನು ಅನ್ವೇಷಿಸುವ ಬಗೆಯೇ ದೇಸಿವಾದ ಕಲಿತ ಮನಸ್ಸು, ತನ್ನ ಪರಿಸರವನ್ನು ಅನ್ವೇಷಿಸುವ ಬಗೆಗೆ ಮಾದರಿಯಾಗಿರುತ್ತದೆ. ಹಾಗೂ ಅದನ್ನು ರೂಪಿಸುತ್ತಿರುತ್ತದೆ."[೨] ಈ ರೀತಿ ಆರಂಭದ ಕಾದಂಬರಿಗಳ ಭಾಷೆಯಲ್ಲಿ ದೇಸೀಯತೆ ಮತ್ತು ಆಧುನಿಕತೆ ಎರಡೂ ಒಟ್ಟೊಟ್ಟಿಗೆ ಮೇಳೈಸಿರುವುದನ್ನು ತಿಳಿಯುವುದಕ್ಕೆ ಈ ಹೇಳಿಕೆಗೆ ಸಹಕಾರಿಯಾಗುತ್ತದೆ. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯಪೂರ್ವ ಸ್ತ್ರೀಕೇಂದ್ರಿತ ಕನ್ನಡ ಕಾದಂಬರಿಗಳನ್ನು ಪ್ರಾತಿನಿಧಿಕವಾಗಿ ಭಾಷೆಯ ಸ್ವರೂಪ ಅವಲೋಕನ ಮಾಡಬಹುದು.

ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಕನ್ನಡದ ಸ್ವತಂತ್ರ ಸಾಮಾಜಿಕ ಕಾದಂಬರಿಗಳಲ್ಲಿ ಮೊದಲನೆಯದು. ಕಾಲ-ದೇಶಗಳ ವಿಶಿಷ್ಟತೆ ಹಾಗೂ ವಸ್ತು ವೈವಿಧ್ಯತೆಯಿಂದಷ್ಟೇ ಅಲ್ಲದೇ ಭಾಷೆಯ ಸ್ವರೂಪದಿಂದಲೂ ವಿನೂತನತೆಯನ್ನು ಮೆರೆದ ಕೃತಿ. ಕಾದಂಬರಿಯಲ್ಲಿ ಬಳಕೆ

ಯಾಗಿರುವುದು ನಿರೂಪಣಾ ಭಾಷೆ. ಕಾದಂಬರಿಯಲ್ಲಿನ ಪಾತ್ರಗಳ ಸಂಭಾಷಣಾ ಭಾಷೆಗೂ, ನಿರೂಪಣಾ ಭಾಷೆಗೂ ವ್ಯತ್ಯಾಸ ಕಂಡುಬರುತ್ತದೆ. ಉದಾ: ಕೆಲವು ಪಾತ್ರಗಳು ಕೊಂಕಣಿಯಲ್ಲಿ ಮಾತನಾಡುತ್ತವೆ. ಸಂಘರ್ಷಣೆಯಲ್ಲಿ ಒಂದು ಪಾತ್ರ ಕೊಂಕಣಿಯಲ್ಲಿ ಮಾತನಾಡಿದರೆ ಎದುರು ಪಾತ್ರವು ಮಾತೃಭಾಷೆಯಾದ ಕನ್ನಡದಲ್ಲಿಯೇ ಸಂವಾದ ಮಾಡುವುದನ್ನು ನೋಡಬಹುದಾಗಿದೆ. ಕೋರ್ಟಿನ ವಿಷಯದಲ್ಲಿ ಜಮೇದಾರನು ಅಂತೋನಸೋಜನೊಡನೆ ಈ ರೀತಿಯ ಕೊಂಕಣಿಯಲ್ಲಿ ಸಂಭಾಷಣೆ ನಡೆಸುತ್ತಾನೆ.

"ಕಿತ್ತೆಂಗಾ? ಅವ್ವೈಕ ರಾಜಾರ ಜಾಂ ತೀಮು, ಒ ಬೊಡ್ಕಿ ಚೋ ಪುತ್ ಆನಿ ಈ ಬೊಡ್ಕಿಚಿ ದೂವ್ ಜಬ್ಬ ರಹಾತ್, ಆಕಾಂ ಕಾಯಿಂ ಏಕ್ ಗೊಕುನಾ ಮ್ಹಂಟಾತ್."

"ಏನಯ್ಯ? ತಾಯಿಗೆ ಮದುವೆಯಾಯಿತಷ್ಟೇ ಈ ಬೊಳಿಯ ಮಗ ಮತ್ತು ಈ ಬೋಳಿಯ ಮಗಳು ಹುಷಾರ್ ಇದ್ದಾರೆ. ಈಗ ಏನೊಂದು ಗೊತ್ತಿಲ್ಲವೆಂದು ಹೇಳುತ್ತಾರೆ."

"ತುಕಾ ಕಿತ್ತೆಂ ಮಕಾ ಕಿತ್ತೆಂ? ಆಮ್ ಜೆಂ ಕಾಮ್ ಜಾಂವ್ ಕನಾಕ್ಯಾ?

"ನಿಮಗೇನು? ನನಗೇನು? ನಮ್ಮ ನಮ್ಮ ಕೆಲಸವಾಗಲಿಲ್ಲವೆ?"[೩]

ಈ ರೀತಿ ಕೊಂಕಣಿ ಮಿಶ್ರಿತ ಕನ್ನಡ ಭಾಷೆಯನ್ನು ಗುಲ್ವಾಡಿಯವರು ಪ್ರಯೋಗಿಸಿದ್ದಾರೆ. ಹಾಗೆಯೇ ದೀರ್ಘ ಸಂಭಾಷಣೆಗಳು, ಕಾದಂಬರಿಗಳ ಮಧ್ಯೆ ಅಲ್ಲಲ್ಲಿ ಬರುವ ಕಂದ ಪದ್ಯಗಳು ಮತ್ತು ಹಾಡುಗಳು ಕಾಣಬಹುದು. ಕೃತಿಯ ಸಂಪ್ರದಾಯಿಕ ಪ್ರಾರಂಭ ("ವಿದ್ಯಾಚಲದ ದಕ್ಷಿಣ ಪ್ರಾಂತ್ಯದಲ್ಲಿ ರೋಹಿಣೀ ನದೀ ತೀರದಲ್ಲಿ ಕಮಲಪುರವೆಂಬೊಂದು ವಿಸ್ತಾರವಾದ ನಗರವಿರುವುದು" –ಇಂದಿರಾಬಾಯಿ). ಗಾದೆಗಳ ವ್ಯಾಪಕ ಬಳಕೆ. ದೀರ್ಘ ವರ್ಣನೆಗಳು. ಗ್ರಾಂಥಿಕ ಭಾಷೆ ಹಾಗೂ ಆಡುಮಾತಿನ ಸಂಮಿಶ್ರಣ ಕಾಣುತ್ತೇವೆ. ಇವೆಲ್ಲವೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇಂದಿಗೂ ಜೀವಂತವಾಗಿ ಉಳಿದಿರುವ ಒಂದು ಶ್ರೀಮಂತ ಪ್ರದರ್ಶನ ಕಲೆಯಾದ ಯಕ್ಷಗಾನದಿಂದ ಬಂದವು. 'ಇಂದಿರಾಬಾಯಿ', 'ವಾಗ್ದೇವಿ' ಮುಂತಾದ ಕಾದಂಬರಿಗಳಲ್ಲಿ ಬರುವ ಪಾತ್ರ ಚಿತ್ರಣವೂ ಯಕ್ಷಗಾನದ ಪಾತ್ರ ಚಿತ್ರಣವನ್ನೇ ಹೋಲುತ್ತದೆ(ಕಿಡಿ ಕಿಡಿ ಸಿಟ್ಟಿನಿಂದ ಹಾರಿ, ತುಟಿಗಳನ್ನು ಕಚ್ಚಿ, ಕಣ್ಣುಗಳನ್ನು ತಿರುಗಿಸಿ, ಮುಮ್ಮೂರು ಸಾರಿ ಬಲಗೈಯನ್ನು ಸಟ್ ಸಟ್ಟೆಂದು ಕೆಳಗೆ ಬಿಸಿ ಎನ್ನುವಂತಹ ಪದಗಳನ್ನು). ಗುಲ್ವಾಡಿಯವರು ಜನಪದ ಮಾಧ್ಯಮವಾದ ಯಕ್ಷಗಾನವನ್ನು ಇಂದಿರಾಬಾಯಿಯಲ್ಲಿ ಸಮರ್ಪಕವಾಗಿ ಬಳಸಿದ್ದಾರೆ.

ಭಾಷಾ ಪ್ರಭೇದಗಳ ಮಿಶ್ರಣವನ್ನು ಕಾದಂಬರಿಕಾರರು ಬಳಸಿದ್ದಾರೆ. ಎರಡು ನೆಲೆಗಳಲ್ಲಿ ಈ ಪ್ರಬೇಧ ಗುರುತಿಸಲು ಸಾಧ್ಯವಿದೆ. ೧. ಪಾತ್ರಗಳ ಸಂಭಾಷಣೆಯ ಹಂತ, ೨. ವರ್ಣನೆಯ ಹಂತ. ಲೇಖಕರು ಇಂಗ್ಲಿಷನ್ನು ಕನ್ನಡದ ಜೊತೆಗೆ ಬೆರೆಸಿರುವುದು ಕಂಡುಬರುತ್ತದೆ. ತೋರಿಸಲು

(ಟು ಷೋ) ಅಂದರೆ ಹೇಳಲು(ಟು ಟೆಲ್)ನ್ನು ವರ್ಣಿತ ವಿಷಯದ ಬಗೆಗೆ ತಮ್ಮ ದೃಷ್ಟಿಕೋನವನ್ನು ನಿರೂಪಣೆಯಲ್ಲಿ ಬಳಸಿದ್ದಾರೆ.

ಭಾಷಾ ಪ್ರಭೇದಗಳ ಮಿಶ್ರಣಕ್ಕೆ ಉದಾಹರಣೆ ಎಂದರೆ, "ಬಾಸ್ಕರನ ಜೊತೆ ಮಾತನಾಡುವ ರೀತಿ" "ದಾನೇ ಸಾಮಿ?, ಇನಾಮ್ ಮುನಿದಲಾ ಉಂಟೆ? ನನಾ ರಟ್ಟಾ ವರ್ಸೊಡ್ ಮನ್ ಶೀಪೆರಾದ್ ಬರ್ಪಾರ್, ತೂಲೆ ಅಪಗತಾ ಎಂದು ಸಂಭಾಷಿಸುತ್ತಾನೆ."[೪]

(ಏನು ಸ್ವಾಮಿ? ಇನಾಮು ಮುಂತಾದದ್ದೇನಾದರೂ ಇದೆಯೇ? ಇನ್ನು ಎರಡು ವರ್ಷದಲ್ಲಿ ಮುನ್‌ಶೀಪಲ್‌ರಾಗಿ ಬರುತ್ತೀರಿ ನೋಡಿ." ಆಗಿನ ಇನಾಮು) ಈ ಕ್ರಮ ಭಾಷೆ ಪ್ರಭೇದಗಳ ಮಿಶ್ರಣಕ್ಕೆ ಉತ್ತಮ ನಿದರ್ಶನ ಕಾದಂಬರಿಕಾರ ಈ ರೀತಿ ಮಿಶ್ರಣ ಭಾಷೆ ಮೂಲಕ ವಿವರಣೆಯನ್ನಷ್ಟೇ ಕೊಡದೆ ತಮ್ಮ ದೃಷ್ಟಿಕೋನವನ್ನು ವ್ಯಕ್ತಪಡಿಸಲು ಈ ತರಹದ ಕ್ರಿಯಾತ್ಮಕವಾದ ಭಾಷೆಯನ್ನು ಬಳಸಿದ್ದಾರೆ. ಇಂತಹ ವರ್ಣನೆ ಮತ್ತು ಸಂಭಾಷಣೆಯಲ್ಲಿನ ಭಾಷಾ ಪ್ರಬೇಧ ವ್ಯಂಗ ಮತ್ತು ವಿಡಂಬನೆಯಿಂದ ಕೂಡಿದ್ದರೂ 'ಕೋಡ್ ಮಿಕ್ಸಿಂಗ್' ಮೂಲಕ ಕಾದಂಬರಿಕಾರರು ವಸ್ತು ವಿಶ್ಲೇಷಣೆ, ತಮ್ಮ ದೃಷ್ಟಿಕೋನ, ಪಾತ್ರಗಳ ವಿಶ್ಲೇಷಣೆಗೆ ಮುಂದಾಗುತ್ತಾರೆ. ಈ ರೀತಿಯಲ್ಲಿ ಗುಲ್ವಾಡಿಯವರು ಭಾಷಾ ಪ್ರಯೋಗ ಮಾಡಿದ್ದಾರೆ.

ಎಂ.ಎಸ್.ಪುಟ್ಟಣ್ಣನವರ 'ಮಾಡಿದುಣ್ಣೊ ಮಹಾರಾಯ' ಕಾದಂಬರಿಯಲ್ಲಿ ಬಳಕೆಯಾಗಿರುವ ಭಾಷೆ ಸಂಭಾಷಣಾ ಪ್ರಧಾನವಾದ ಭಾಷೆ. ಮತ್ತು ಸಂಭಾಷಣೆಯಲ್ಲಿ ಭಾಷೆಯ ವಿಶಿಷ್ಟ ರೂಪಗಳನ್ನು ಬಳಸುವುದರ ಜೊತೆಗೆ ಆ ಪಾತ್ರಗಳ ಭಾವನೆಗಳನ್ನು ವ್ಯಕ್ತಪಡಿಸುವ ಕಲೆಗಾರಿಕೆ ಪುಟ್ಟಣ್ಣನವರಿಗಿತ್ತು. ಇವರ ನಿರೂಪಣಾ ಭಾಷೆ ಮತ್ತು ಸಂಭಾಷಣೆಯ ಶೈಲಿ ಓದುಗರಲ್ಲಿ ಕುತೂಹಲ ಮೂಡಿಸುವಂತಹದ್ದು. ಇಂತಹ ನಿರೂಪಣಾ ಶೈಲಿಯ ಮೂಲಕ ಅಂದಿನ ಸಾಂಸ್ಕೃತಿಕ ವೈರುಧ್ಯಗಳನ್ನು ಪ್ರಕಟಿಸುವ ಪ್ರಯತ್ನ ಮಾಡಿದ್ದಾರೆ. ಪುಟ್ಟಣ್ಣನವರ ಮತ್ತೊಂದು ಗುಣವೆಂದರೆ ನಿರೂಪಣೆಯ ಮೂಲಕ ಪಾತ್ರಗಳ ಒಳಮನಸ್ಸಿನ ತುಮುಲಗಳನ್ನು ಹೊರಹಾಕುವುದು. ಇಂತಹ ಸಂದರ್ಭಗಳಲ್ಲಿ ಸರಳವಾದ ನೇರವಾದ ನುಡಿಗಳನ್ನು ಪುಟ್ಟಣ್ಣನವರು ಬಳಸಿದ್ದಾರೆ. ನಿರೂಪಣಾ ವಿಧಾನ ಮತ್ತು ಘಟನಾವಳಿಗಳ ಮುಖಾಮುಖಿಯಾಗುವ ಕಾದಂಬರಿಯ ಭಾಷೆಗೆ ಬಲವಾದ ಆಯಾಮವನ್ನು ತಂದೊಡುತ್ತದೆ. ಈ ಹಿನ್ನೆಲೆಯಲ್ಲಿ ಇವರ ಕಾದಂಬರಿಗಳ ಭಾಷಾಶೈಲಿಗೆ ತಕ್ಕದಾದ ವಾತಾವರಣವನ್ನು ರೂಪಿಸುತ್ತದೆ ಎಂದರೆ ತಪ್ಪಾಗಲಾರದು.

ಆಡು ನುಡಿಯ ಸಮರ್ಪಕ ಬಳಕೆಯಿಂದ ಸೊಗಡು ಬೀರುವ ಪುಟ್ಟಣ್ಣನವರ ಭಾಷೆ ಮೊದಲ ಸುತ್ತಿನಲ್ಲೇ ನಮಗೆ ಆಕರ್ಷಕವಾಗಿ ಕಾಣುವುದು ನಿಜ. ಇದರ ಮೂಲಕ ಹೊಮ್ಮುವ ಘಟನೆಗಳ ಒಳ ಸಂಬಂಧಗಳಿಂದ ಹೊರಡುವ ಧ್ವನಿಗೂ, ಹೊರಡಿಸುತ್ತಿರುವ ವ್ಯಕ್ತಿಗೂ, ಬಳಸಿರುವ

ಭಾಷೆಗೂ ಬಿರುಕುಗಳಿಲ್ಲದೆ ಇರುವುದರಿಂದ ಅವಿನಾಭಾವ ಸಂಬಂಧ ಸ್ಥಾಪಿತವಾಗಿರುವುದರಿಂದ ಸಾಹಿತ್ಯದ ಮಹತ್ವದ ಭದ್ರ ನೆಲೆಗಟ್ಟು ಲಭಿಸಿದೆ. ಗದ್ಯ ಶೈಲಿಯನ್ನು ಹೆಚ್ಚಾಗಿ ಬಳಸಿದ್ದಾರೆ. ಉದಾ "ತಿಮ್ಮಮ್ಮನನ್ನು ಇನ್ನೂ ಆಗ್ರಹದಿಂದ ಹಾವಿಗೆ ಆಣೆ ಎಂದರೇನು, ಚೇಳಿಗೆ ಆಣೆ ಎಂದರೇನು ನನ್ನ ಮಗುವಿಗೆ ಹಾಸಿಗೆಯ ಬಳಿಯಲ್ಲಿ ಕೂತು ನೀನು ಹಾಗೆ ಆಡುವುದಕ್ಕೆ ಕಾರಣವೇನು? ರಾತ್ರಿಯಿಂದಲೂ ಸಾತಿಗೆ ಚೆನ್ನಾಗಿಲ್ಲವಲ್ಲ ತಲೆನೋವು, ಚಳಿಚಳಿ ಎನ್ನುತ್ತಾಳೆ..." ಅವಳ ತಲೆ ಕಂಡರೆ ನಿನಗೆ ಆಗದು."[೫]

ಪುಟ್ಟಣ್ಣನವರಲ್ಲಿ ಗಾದೆಗಳು, ನುಡಿಗಟ್ಟುಗಳು ಹೇರಳವಾಗಿ ಸಿಗುತ್ತಿವೆ. ಅವುಗಳನ್ನು ಸಹಜವಾಗಿ ಪುಟ್ಟಣ್ಣನವರು ಬಳಸುತ್ತಾರೆ. ಉದಾ: ಆಂಜನೇಯನು ಕಾಲನೇಮಿಯನ್ನು ಕುರಿತು ಸಂಜೀವನ ಪರ್ವತಕ್ಕೆ ದಾರಿ ಕೇಳಿದಂತೆ(ಮಾ.ಮ.೧೫೪), ಆಂಜನೇಯ ಬ್ರಹ್ಮಪಟ್ಟಕ್ಕೆ ಕಾದ ಹಾಗೆ(ಅ.೧೨೩), ಉಳ್ಳಿ ತಿಂದಮ್ಮನಿಗೆ ಉಳುಕಿತು(ಮಾ.ಮ.೯೩), ಊಟ ಹಾಗ, ಫಲಾಹಾರ ಮುಪ್ಪಾಗ(ಅ.೧೩೧), ಕೊಳ್ಳಿ ತೆಗೆದುಕೊಂಡು ತಲೆ ತುರಿಸಿಕೊಂಡರು(೧೫೪), ಒಂದೇ ಕತ್ತಿನಲ್ಲಿ ಪ್ರಾಣ ಹೋಗು(೭೨), ಕಟ್ಟು ಹರಿದ ಪಂಜು(೧೩೫) ಮುಂತಾದ ನುಡಿಗಟ್ಟುಗಳೂ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತವೆ. ಪುಟ್ಟಣ್ಣನವರು ಶಿಷ್ಟ ಕನ್ನಡ ಮತ್ತು ಮೈಸೂರು, ಬೆಂಗಳೂರುಗಳಲ್ಲಿ ಬಳಸುವ ಕನ್ನಡ, ನಿರೂಪಣೆಯಲ್ಲಿ ಈ ಪ್ರಬೇಧವನ್ನು ಬಳಸಿದ್ದಾರೆ. ಹಾಗೆ ಸಾಂಕೇತಿಕತೆಯನ್ನು ಬಳಸಿದ್ದಾರೆ.

'ಇಂದಿರೆ' ಕಾದಂಬರಿಯ ಭಾಷೆಯನ್ನು ಅವಲೋಕಿಸುವುದಾದರೆ ಕಾದಂಬರಿಯಲ್ಲಿನ ವೈಚಾರಿಕತೆಯೇ ಕಾದಂಬರಿಯ ಭಾಷಾ ಸಂದಿಗ್ಧತೆಗೆ ಕಾರಣವಾಗಿದೆ. ಯಥೇಚ್ಛವಾದ ಸಂಪ್ರದಾಯಗಳ ವರ್ಣನೆ ಒಂದೆಡೆಯಾದರೆ ಸಮಕಾಲೀನ ಸಂದರ್ಭದ ಪಾತ್ರಗಳನ್ನು ಮತ್ತು ಘಟನೆಗಳನ್ನು ಕಾದಂಬರಿಯ ಚೌಕಟ್ಟಿಗೆ ಅಳವಡಿಸುವ ಪ್ರಯತ್ನ ಮತ್ತೊಂದು ಕಡೆ. ಸಮಕಾಲೀನ ಚಿಂತನೆಗಳ ಬಗೆಗೆ ಕಾದಂಬರಿಕಾರರು ತಳೆಯುವ ನಿಲುವು ಕೂಡ ದ್ವಂದ್ವದಲ್ಲಿ ಮುಳುಗಿದೆ. ಅಂತೆಯೇ ಕಾದಂಬರಿಯ ಭಾಷಾ ಬಳಕೆಯಲ್ಲಿಯೂ ಈ ದ್ವಂದ್ವ ವ್ಯಕ್ತವಾಗಿದೆ. ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುವುದಕ್ಕಾಗಿ ಗುಲ್ವಾಡಿಯವರು ಬಳಸುವ ವರ್ಣನಾತ್ಮಕನಾದ ಭಾಷೆಯನ್ನಾಗಲಿ, ಎಂ.ಎಸ್.ಪುಟ್ಟಣ್ಣನವರು ಬಳಸುವಂತಹ ನಿರೂಪಣಾ ವಿಧಾನವನ್ನಾಗಲಿ ಇಲ್ಲಿ ಬಳಸಿಲ್ಲ. ಕೆರೂರು ವಾಸುದೇವಾಚಾರ್ಯರು ವಾಸ್ತವತೆಗಿಂತ ಆದರ್ಶವನ್ನೇ ನೆಚ್ಚುವುದರಿಂದ ತಮ್ಮ ಸಮಕಾಲೀನರು ಕಟ್ಟಿಕೊಡುವ ಭಾಷೆ, ಶೈಲಿ, ವೈಚಾರಿಕತೆ ಸಮಕಾಲೀನ ಸಂಗತಿಗಳ ಚಿತ್ರಣಗಳಿಗಿಂತ ಭಿನ್ನವಾಗಿ ತಮ್ಮ ಕಾದಂಬರಿ ಇಂದಿರೆಯನ್ನು ರಚಿಸಿದ್ದಾರೆ.

'ವಾಗ್ದೇವಿ' ಕಾದಂಬರಿಯಲ್ಲಿ ಸಂಪ್ರದಾಯ, ಸಂಸ್ಕೃತ, ಸಮಾಜ ಮತ್ತು ಮಠದ ವ್ಯವಸ್ಥೆಯನ್ನು ತನ್ನದೇ ಶೈಲಿ ಮೂಲಕ ನಿರೂಪಿಸಿದ್ದಾರೆ. ವಿಡಂಬನೆಯ ನೆಲೆಯಲ್ಲಿ ಗುಲ್ವಾಡಿಯವರ ಕಾದಂಬರಿಗಿಂತ ಹೆಚ್ಚು ಮೊನಚಾಗಿದೆ. ಒಂದು ಸಮುದಾಯದ ಧಾರ್ಮಿಕ, ನೈತಿಕ ಅಂತಸಾಕ್ಷಿ ಈ ಸಮುದಾಯವನ್ನು ನಿಯಂತ್ರಿಸುವ ಮಠ, ಮಠದಂತಹ ಸಂಸ್ಥೆಯೇ ಭ್ರಷ್ಟವಾದರೆ ಎಲ್ಲರಿಗೂ ಮಾರ್ಗದರ್ಶನ ಮಾಡಬೇಕಾದ ಮಠಾಧೀಶರೇ ಅನೈತಿಕ ಮಾರ್ಗವನ್ನು ಹಿಡಿದರೆ ಇನ್ನೂ ಆ ಸಮುದಾಯದ ಗತಿಯೇನು. ಇಲ್ಲಿಯ ಕಥಾತಂತ್ರ ಆಂತರಿಕ ಏಕತೆಯನ್ನು ತಂದುಕೊಡುತ್ತವೆ. 'ವಾಗ್ದೇವಿ' ಕಾದಂಬರಿಯ ವೈಶಿಷ್ಟ್ಯವೆಂದರೆ ಲೇಖಕರು ಎಲ್ಲೂ ಒಂದು ಪಕ್ಷವನ್ನು ವಹಿಸಿ ಮತ್ತೊಂದು ಪಕ್ಷವನ್ನು ತೆಗಳದೇ ಇರುವುದು. ಚಂಚಲನೇತ್ರ, ವೇದವ್ಯಾಸ ಉಪಾಧ್ಯಾಯನೂ ತನ್ನ ಹಠಮಾರಿತನ, ಶೀಘ್ರ ಕೋಪ ಇವುಗಳಿಗಾಗಿ ಲೇಖಕರ ಅಪಹಾಸ್ಯಕ್ಕೆ ಗುರಿಯಾಗುತ್ತಾರೆ. ಹಾಗೆಯೇ ವಾಗ್ದೇವಿ–ಚಂಚಲನೇತ್ರರ ಬಗ್ಗೆಯೂ ಸ್ವಲ್ಪ ಅನುಕಂಪವಿದೆ. ಕಾದಂಬರಿ ಬಹು ಅಸಹಜ ರೀತಿಯಲ್ಲಿ ಕೊನೆಗಾಣುತ್ತದೆ. ಅಲ್ಲಲ್ಲಿ ಭಾಷೆ ವಿನಾಕಾರಣ ಗ್ರಾಮ್ಯವಾಗುತ್ತದೆ.

'ನಿಸರ್ಗ' ಕಾದಂಬರಿ ಪ್ರಾದೇಶಿಕ ಪರಿಸರವನ್ನು ಪ್ರತಿಬಿಂಬಿಸುವ ಕಾದಂಬರಿ ಆಯಾ ಪ್ರದೇಶದ ಜನಜೀವನ, ಅದರ ಆಶೋತ್ತರಗಳು, ಅದರ ರೂಢಿ ಸಂಪ್ರದಾಯ, ಕಂದಾಚಾರಗಳು, ನಂಬುಗೆಗಳು, ಅದರ ದೈನಂದಿನ ಕಷ್ಟನಿಷ್ಠುರಗಳು, ಸುಖ, ವಿನೋದಗಳು, ಸರಸ ಸಲ್ಲಾಪಗಳು ಇವುಗಳೊಂದಿಗೆ ಜೀವನದ ಬಳಕೆಯ ಸಂವಾದ ಭಾಷೆಯನ್ನು ಬಳಸಿಕೊಂಡು ಬದುಕಿನ ಅರ್ಥಪೂರ್ಣ ಚಿತ್ರಣ ನೀಡುತ್ತಾರೆ. ಕತೆಯ ಓಟಕ್ಕೆ ಬಾಧೆ ಬರದಂತೆ, ವರ್ಣನೆ ಮಿತಿ ಮೀರದಂತೆ, ಆಯಾ ಪ್ರದೇಶದ ರೀತಿ ನಡತೆಗಳನ್ನು ಮಿರ್ಜಿ ಅಣ್ಣಾರಾಯರು ಚೆನ್ನಾಗಿ ಬಣ್ಣಿಸಿದ್ದಾರೆ. "ಮಗಳನ್ನು ಅತ್ತೆಯ ಮನೆಗೆ ಕಳಿಹಿಸುವ ಸಂದರ್ಭ, ಶೋಭನ, ಪ್ರಸ್ತ, ದೇವತೆಗಳಿಗೆ ಮಾಡುವ ಹಬ್ಬ, ಪಂಡಿತರನ್ನು ಕೇಳುವುದು, ಜಾತ್ರೆ, ಅದರಲ್ಲಿ ದೇವರು ಬರುವುದು, ಭವಿಷ್ಯ ಹೇಳುವುದು ಉಡುಕಿಯ ಸಮಾರಂಭ"[೬] ಈ ಮುಂತಾದ ಅಂಶಗಳು ಕತೆಯ ಜೀವಾಳಕ್ಕೆ ಪೋಷಕವಾಗಿ ವಿವರಣಾ ಭಾಷೆಯಲ್ಲಿ ವಿವರಿಸಿದ್ದಾರೆ. 'ನಿಸರ್ಗ' ಕಾದಂಬರಿಯಲ್ಲಿನ ಭಾಷಾ ಪ್ರಾದೇಶಿಕತೆಗೆ ಕೆಲವು ಉದಾಹರಣೆಗಳನ್ನು ನೋಡಬಹುದು.

| ಪ್ರಚಲಿತ ಶಿಷ್ಟರೂಪ | ಕಾದಂಬರಿಯಲ್ಲಿರುವ ದೇಸಿ ರೂಪ |
|---|---|
| ಏನು | ಯಾನ |
| ಏನಾದರೂ | ಯಾನರ |
| ಏನಂತ | ಯಾನತ್ತ |

| | |
|---|---|
| ಮನೆಗೆ | ಮನಿಗಿ |
| ಈಕಡೆ | ಇಕಡಿ |
| ಕಪಾಳಕ್ಕೆ | ಕಪ್ಪಾಳಿಗಿ |
| ಹೆಂಡತಿ | ಹ್ಯಾಂಡಿಟಿ |
| ನಿನ್ನ | ನಿನ್ನ |
| ಕಾಸಿನ ಕಿಮ್ಮತ್ತಿನವು | ಕಾಸಡೇವ |

ಕಾದಂಬರಿಯಲ್ಲಿ ಬರುವ ಈ ರೀತಿಯ ಭಾಷೆ ಅದರ ಶೈಲಿಗೆ ಹೊಸತನವನ್ನು ತಂದು ಕೊಡುತ್ತದೆ ಹಾಗೂ ಪ್ರಾದೇಶಿಕ ಭಾಷೆಯನ್ನು ಬಳಸಿಕೊಂಡಿರುವುದು ಗಮನಾರ್ಹ. ಈ ಕಾದಂಬರಿಯ ಕಥಾ ದ್ರವ್ಯ, ಪಾತ್ರ ಪ್ರಪಂಚ, ವರ್ಣನೆಗಳು ಮತ್ತು ವಾಸ್ತವ ಚಿತ್ರಣಗಳು, ಶೈಲಿ, ಕಥಾವಿಸ್ತಾರ, ಘಟನೆಗಳ ಆಗು-ಹೋಗುವ ಸ್ಥಳಗಳ ಕಥಾ ನಿರೂಪಣೆಯ ಭಾಷೆ, ನಾಣ್ಣುಡಿಗಳ ಬಳಕೆಯಿಂದ ನಿರೂಪಣಾ ವಿನ್ಯಾಸದಲ್ಲಿ ಭಿನ್ನತೆಯನ್ನು ತೋರುತ್ತಾರೆ.

'ಸುಬ್ಬಣ್ಣ' ಕಾದಂಬರಿಯಲ್ಲಿ ಸಾಂಕೇತಿಕತೆಯು ಅರ್ಥಪೂರ್ಣತೆಯನ್ನು ಪಡೆದುಕೊಂಡಿದೆ. ಕಾದಂಬರಿ ಮುಖ್ಯವಾಗಿ ಸುಬ್ಬಣ್ಣನ ಕತೆಯಾದರೂ ಉಳಿದ ಪಾತ್ರಗಳು ಸಹ ಪ್ರಮುಖ ಪಾತ್ರವಹಿಸುತ್ತವೆ. ಲಲತೆಯ ಸಹನೆ, ವಿವೇಕ, ಭಕ್ತಿಗಳು, ಯಜಮಾನಿಯರು, ಶಾಸ್ತ್ರಿಗಳ ತೂಕದ ನಡತೆ, ನೀಲಾಸಾನೀಯ ಔದಾರ್ಯ ಪವಿತ್ರ ಪ್ರೇಮಗಳು, ಘಟನೆಗಳು, ಪಾತ್ರಗಳ ಮೂಲಕ ವಿವರಣಾ ಭಾಷೆಯಲ್ಲಿ ಕೌಶಲ್ಯದಿಂದ ತಂತ್ರವನ್ನು ಬಳಸಿರುವುದು ಕಾಣಬಹುದು. ಇಲ್ಲಿ ನಿರೂಪಕ ಮತ್ತು ನಿರುಪಣಾ ಪ್ರಜ್ಞೆ ಅತ್ಯಂತ ಎಚ್ಚರದಿಂದ ಕಾರ್ಯನಿರ್ವಹಿಸಿರುವುದು ನೋಡಬಹುದು. "ಸುಬ್ಬಣ್ಣನ ಮುಂಬೈ, ಮೈಸೂರು, ಕಲ್ಕತ್ತಾದ ಜೀವನದ ಬಗ್ಗೆ ನಿರೂಪಣೆಗೆ ನೇರವಾದ ಪರಿಚಯವಿಲ್ಲ. ಅದನ್ನು ಸುಬ್ಬಣ್ಣ ಮತ್ತು ಇತರರಿಂದ ಕೇಳಿ ತಿಳಿದಿದ್ದು(ನಿರೂಪಕನ ಮಾವ ಸುಭೇದಾರರ ಮನೆತನದೊಂದಿಗೆ ಸುಬ್ಬಣ್ಣನ ನಿಕಟ ಸಂಬಂಧವಿದೆಯಾದ್ದರಿಂದ). ಅವನಿಗೆ ಸುಬ್ಬಣ್ಣನನ್ನು ಸಮೀಪದಿಂದ ನೋಡುವುದು ಸಾಧ್ಯವಾಗಿದೆ."[೭] ನಿರೂಪಕನ ನಿಲುವಿನಲ್ಲಿಯ ಅನುಮಾನದ ಅಂಶಗಳು ಅವನ ವಿಶ್ವಾಸರ್ಹತೆ ಹೆಚ್ಚುವುದಕ್ಕೆ ಕಾರಣವಾಗುತ್ತದೆ. ಇದು ಕಾದಂಬರಿಯಲ್ಲಿನ ತಂತ್ರದ ಆಧುನಿಕತೆಯ ಒಂದು ಲಕ್ಷಣ.

**ಕುವೆಂಪು ಅವರ ಭಾಷೆ, ಶೈಲಿ, ನಿರೂಪಣೆ ಮತ್ತು ನುಡಿಗಟ್ಟುಗಳು**

ಮಲೆನಾಡಿನ ಪ್ರಕೃತಿ ವಿವರಗಳು ಮತ್ತು ಜನಜೀವನ ನಮ್ಮ ಪಂಚೇಂದ್ರೀಯಗಳಿಗೂ ತಲುಪುವಂತೆ ಕುವೆಂಪು ಅವರು ಕನ್ನಡ ಭಾಷೆಯನ್ನು ದುಡಿಸಿಕೊಂಡಿರುವುದು ನಮ್ಮ ವಿಮರ್ಶಾ

ಕ್ಷೇತ್ರವು ಮತ್ತೆ ಮತ್ತೆ ಗಮನಿಸಿದ ವಿಷಯವಾಗಿದೆ. "ಕುವೆಂಪು ಭಾಷೆ ಕನ್ನಡದ ವೈವಿಧ್ಯವನ್ನೆಲ್ಲಾ ಕೊಳ್ಳೆ ಹೊಡೆದಿರುವ ಏಕೈಕ ಆಧುನಿಕ ನಿದರ್ಶನ ಎಂದು ವಿಮರ್ಶಕರು ಗುರುತಿಸಿದ್ದಾರೆ. ಇದರಲ್ಲಿ ಉತ್ಪ್ರೇಕ್ಷೆವೆನಿಲ್ಲ, ಒಪ್ಪಿಕೊಳ್ಳಬಹುದಾದುದು."[೮]

'ಕಾನೂರು ಹೆಗ್ಗಡಿತಿ' ಕಾದಂಬರಿಯ ಯಶಸ್ಸು, ಕಥೆಯಿಂದಲ್ಲ ನಿರೂಪಣೆಯಿಂದ, ಹಾಗೆಯೇ ವಸ್ತುವಿನ ಆಯ್ಕೆಯಲ್ಲಿಯೇ ಪಾತ್ರಗಳು ಸೃಷ್ಟಿಯಾಗಿವೆ. ಕಥಾ ವಸ್ತುವಿನ ಒಳಗೆಯೇ ಪಾತ್ರಗಳು ಲೇಖಕನ ದೃಷ್ಟಿಕೋನಕ್ಕೆ ಸರಿಯಾಗಿ ರೂಪೂಗೊಂಡಿದೆ. 'ಕಾನೂರು ಹೆಗ್ಗಡಿತಿ' ಒಂದು ಪ್ರಾದೇಶಿಕ ಕಾದಂಬರಿ ಎಂದು ಗುರುತಿಸುತ್ತೇವೆ. ಹಾಗೆಂದ ಮಾತ್ರಕ್ಕೆ ಪ್ರಾದೇಶಿಕತೆ ಕಲೆಯಲ್ಲಿ ಕಂಡು ಬರಬಹುದಾದ ಗಣನೀಯವಾದ ಅಂಶಗಳಿಂದಾಗಲಿ ವಸ್ತು, ವಿನ್ಯಾಸ, ಕಲ್ಪನೆ, ವೈಭವ, ಭಾಷಾಸಾಮರ್ಥ್ಯ, ಶೈಲಿಯ ವೈಶಿಷ್ಟ್ಯ ಇವೆಲ್ಲದರ ಜೊತೆಯಲ್ಲಿ ಪ್ರಾದೇಶಿಕತೆಯೂ ಒಂದು ವೈಶಿಷ್ಟ್ಯವಾಗಿದೆ. ಇಲ್ಲಿಯ ಪಾತ್ರಗಳು ಕೇವಲ ವಿವರಣೆಗೆ ಒಳಗಾಗುವಂಥವಲ್ಲ, ವಿಶ್ಲೇಷಣೆಯನ್ನು ಬಯಸುತ್ತವೆ. ಈ ಕಾದಂಬರಿಯಲ್ಲಿ ಕೇಂದ್ರ ಪಾತ್ರ, ಮುಖ್ಯ ಪಾತ್ರ ಮತ್ತು ಅನುಷಂಗಿಕ ಪಾತ್ರಗಳಿವೆ. ನಾವು ಹೂವಯ್ಯನನ್ನು ಕೇಂದ್ರ ಪಾತ್ರವಾಗಿ ನೋಡಿದರೆ ಅದಕ್ಕೆ ಪೂರಕವಾಗುವಂತೆ ವಸ್ತುವಿನ ಮುಂದುವರಿಕೆಗೆ ಮುಖ್ಯ ಪಾತ್ರಗಳಾಗಿ ಚಂದ್ರೇಗೌಡ, ಸುಬ್ಬಮ್ಮ, ಸೀತೆ, ರಾಮಯ್ಯರು ಬರುತ್ತಾರೆ. ಅನುಷಂಗಿಕ ಪಾತ್ರಗಳು, ಕಥೆಯ ಓಟಕ್ಕೆ ಮತ್ತು ನಿರೂಪಣೆಗೆ ಸಹಾಯ ಮಾಡುತ್ತವೆ.

ಕುವೆಂಪು ಎಷ್ಟು ವಿವರವಾಗಿ ದೀರ್ಘವಾಗಿ ವರ್ಣಿಸಬಲ್ಲರೋ ಅಷ್ಟೇ ಸಂಕ್ಷಿಪ್ತವಾಗಿ ದಟ್ಟವಾಗಿ ಹಬ್ಬಿಕೊಂಡ ಮುಖ್ಯಪಾತ್ರಗಳನ್ನು ಒಂದೊಂದು ವಾಕ್ಯದಲ್ಲಿ ಔಚಿತ್ಯಪೂರ್ಣ ರೂಪಕಗಳಿಂದ ಹಿಡಿದಿಡಬಲ್ಲರು" ಹೂವಯ್ಯನಿಂದ ದೂರವಾಗಿದ್ದ ರಾಮಯ್ಯನ ಮಾನಸಿಕ ಸ್ಥಿತಿಯು ಆಯಸ್ಕಾಂತ ಶಿಲೆಯಿಂದ ಬಹುಕಾಲ ದೂರವಾಗುವ ಕಬ್ಬಿಣ್ಣದ ಸೂಜಿಕಲ್ಲಿನಂತೆ ತನ್ನ ಶಕ್ತಿಯನ್ನು ಕಳೆದುಕೊಳ್ಳತೊಡಗಿತ್ತು."[೯] ಇದು ನಿಜಕ್ಕೂ ಶಕ್ತಿಯುತವಾದ ಪ್ರತಿಮೆ. ಅದೇ ರೀತಿ ಹೂವಯ್ಯನ ಆಧ್ಯಾತ್ಮಿಕ ಪ್ರಭಾವದಿಂದ ದೂರವಾದ ರಾಮಯ್ಯನ ಅಧೋಗತಿಯನ್ನು ಈ ವಿನೂತನ ಪ್ರತಿಮೆ ವೈಜ್ಞಾನಿಕವಾಗಿ ಹಿಡಿದಿದೆ.

ಕುವೆಂಪು ಮಲೆನಾಡಿನ ಸೃಜನಶೀಲ ಬದುಕನ್ನು ದೃಶ್ಯ ಕಾವ್ಯವಾಗಿ ಕಾದಂಬರಿಯಲ್ಲಿ ಹಿಡಿದಿಟ್ಟಿದ್ದಾರೆ. ಕುವೆಂಪುರವರಿಂದಾಗಿ ಮಲೆನಾಡಿನ ಕಾಡು, ಬೆಟ್ಟ, ಹಾವು, ಹುಲಿ, ಸಾವು-ನೋವು, ದುಃಖಗಳೆಲ್ಲ ಜೀವಂತವಾಗಿ ಮಹಾಕಾವ್ಯದ ರೂಪದಲ್ಲಿ ಕಾದಂಬರಿಯಲ್ಲಿ ದೊರೆಯುತ್ತದೆ. 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಅನ್ಯಪಾತ್ರದಿಂದ ಆರಂಭವಾಗದೆ, ಕಾದಂಬರಿ ಚಿತ್ರಿಸುತ್ತಿರುವ

ಪ್ರಪಂಚದ ಒಳಗಿನವನೆ ಆದ ಸಮಾಜದ ಕೀಳುಸ್ತರಕ್ಕೆ ಸೇರಿದ ಬೌದ್ಧಿಕವಾಗಿ ಕೆಳಮಟ್ಟದವನಾದ ನಾಯಿಗುತ್ತಿಯ ಪ್ರಯೋಗದಿಂದ ಆರಂಭವಾಗುತ್ತದೆ.

ಚಿಕ್ಕ ಪಾತ್ರಗಳ ಮೂಲಕ ಗುತ್ತಿ, ಮಾರಾಟಮಂಜ, ಹುಲಿಯ ಇವು ಕಾದಂಬರಿಯ ಪಾತ್ರಗಳಿಂದ ಆರಂಭವಾಗಿ ದೊಡ್ಡ ಪ್ರವಾಹವಾಗಿ ವಿವರಣೆ ವಿಶ್ಲೇಷಣೆಗಳಿಂದ ಮುಂದೆ ಸಾಗುವುದು ಭಾಷಾ ವೈಶಿಷ್ಟ್ಯತೆ ಮೆರೆದಿದ್ದಾರೆ. ಅದೇ ರೀತಿ ಒಂದು ದೃಕ್ ಪ್ರತಿಮೆಯ ಮೂಲಕ ಅನುಭವವನ್ನು ಇಂದ್ರೀಯ ಗ್ರಾಹ್ಯವಾಗುವಂತೆ ಭಾಷೆಯಲ್ಲಿ ಆವಿಷ್ಕರಣ ಗೊಳಿಸುವ ಕಾದಂಬರಿಕಾರರ ಸಾಮರ್ಥ್ಯವನ್ನು ಗುತ್ತಿಯನ್ನು ಮತ್ತೆ ಮರೆಯಲಾಗದಂತೆ ಪರಿಚಯಿಸಿಕೊಡುತ್ತದೆ. ಇದು ಕಾದಂಬರಿಯ ನಿರೂಪಣೆ ಅಂಶವಾಗಿದೆ.

ಗುತ್ತಿ ತನ್ನ ಮತ್ತು ಒಡೆಯರ ಕಾರ್ಯಾರ್ಥವಾಗಿ ಹೊರಟಿದ್ದಾನೆ. ಮುಖ್ಯವಾಗಿ ಅವನ ಪಯಣದ ಉದ್ದೇಶ ತನ್ನನ್ನು ಒಲಿದಿರುವ, ಆದರೆ ಪರಿಸರದ ಒತ್ತಡದಿಂದ ಬೇರೆಯವನನ್ನು ಮದುವೆಯಾಗಬೇಕಾಗಿ ಬಂದಿರುವ, ತಿಮ್ಮಿಯನ್ನು ಆ ವಿಷಮ ಪರಿಸ್ಥಿತಿಯಿಂದ ಪಾರು ಮಾಡುವುದು. ಅಂದರೆ ಮೊದಲ ಅಧ್ಯಾಯದಲ್ಲಿಯೇ ಕಾದಂಬರಿಯ ಬಂಧದ ವೈಶಿಷ್ಟ್ಯಕ್ಕೆ ಕಾರಣವಾಗಿರುವ ಆ 'ವಸ್ತು'ವನ್ನು ಸೂಚಿಸಲಾಗಿದೆ. ಪ್ರಣಯ ಪ್ರಸಂಗಗಳ ಚಿತ್ರಣ, ಸಮಾಜದ ವಿವಿಧ ಸ್ತರಗಳ ಸಂಬಂಧದ ಚಿತ್ರಣ, ನೈತಿಕ ವಿಕಾಸದ ಚಿತ್ರಣ, ಇತ್ಯಾದಿಗಳೆಲ್ಲಕ್ಕೂ ಒಂದು ಸಮಗ್ರತೆಯನ್ನು ಒದಗಿಸುವ ಕೇಂದ್ರವಸ್ತುವೆಂದರೆ ಎಲ್ಲಾ ಮುಖ್ಯ ಪಾತ್ರಗಳೂ ಕಾದಂಬರಿಯಲ್ಲಿ ಮತ್ತೊಬ್ಬ ವಿಷಮ ಸ್ಥಿತಿಗೆ ಸಿಕ್ಕಿ ಹಾಕಿಕೊಂಡಿರುವ ವ್ಯಕ್ತಿಯನ್ನು ಪಾರು ಮಾಡುವುದಕ್ಕೆ ಸಹಾಯಕರಾಗುವುದೇ ಆಗಿದೆ. ಹೀಗೆ ಈ ಕಾದಂಬರಿಯನ್ನು ನೋಡಿದಾಗ ಮಲೆಗಳಲ್ಲಿ ಮದುಮಗಳು ಕಾದಂಬರಿಗೆ 'ಬಂಧವನ್ನೊದಗಿಸುವ ವಸ್ತು' ಪಾರು ಮಾಡುವ ಮತ್ತು ಪಾರಾಗುವ ಯತ್ನವೇ ಆಗಿದೆ.

ಪ್ರಣಯದ ಸ್ತರದಲ್ಲಿ ತಿಮ್ಮಿಯನ್ನು ವಿಷಮ ಪರಿಸ್ಥಿತಿಯಿಂದ ಪಾರು ಮಾಡುವ ಪಣತೊಟ್ಟು ದೃಢತೆಯಿಂದ ಅದನ್ನು ಸಾಧಿಸುವ, ಆದರೆ ಸಂದರ್ಭವನ್ನೆದುರಿಸಿ ನಿಲ್ಲಲಾರದೆ, ಅಲ್ಲಿಂದ ತಿಮ್ಮಿಯೊಡನೆ ಬೇರೆಡೆಗೆ ಪಾರಾಗಿ ಹೋಗುವ ಗುತ್ತಿ, ಚಿನ್ನಮ್ಮನನ್ನು ಪಾರು ಮಾಡುವ ಮುಕುಂದಯ್ಯ, ಅದಕ್ಕೆ ಸಹಾಯಕರಾಗುವ ಐತ–ಪಿಂಚಲು, ಸೇಸನಾಯ್ಕನ ಬುದ್ಧಿವಂತಿಕೆಯಿಂದ ಪಾರಾಗುವುದು, ಪಾರಾಗಲಾರದೆ ದುರಂತಕ್ಕೀಡಾಗುವ ಕಾವೇರಿ; ಆ ಸ್ಥಿತಿಗೆ ಕಾರಣವಾಗಿ ಘಟ್ಟದ ಕೆಳಕ್ಕೆ ಪಾರಾಗಿ ಹೋಗುವ ಚೀಂಕ್ರ, ವೆಂಕಣ್ಣನನ್ನು ಸೀರುಡಿಕೆ ಮಾಡಿಕೊಂಡಿದ್ದರಿಂದ ಅತ್ತೆಯ ಹಿಡಿತದಿಂದ ಪಾರಾದ ನಾಗಕ್ಕ. ಧಾರ್ಮಿಕ ಸ್ತರದಲ್ಲಿ ಕ್ರಿಸ್ತನಾಗಬೇಕಾಗಿದ್ದ ದೇವಯ್ಯನನ್ನು ಮುಕುಂದಯ್ಯ ಪಾರು ಮಾಡಿದ್ದು, ಈ ರೀತಿ 'ಮಲೆಗಳಲ್ಲಿ ಮದುಮಗಳು' ಸೂತ್ರರೂಪವಾದ

ಕೇಂದ್ರಪ್ರಜ್ಞೆಯಿಲ್ಲದೆ, ವಿವರಗಳಲ್ಲಿ ಸೊಕ್ಕಿಬಿಡುತ್ತದೆ. ಹೀಗೆ ಒಂದು ಕಾದಂಬರಿಯನ್ನು ಒಂದು ಕಲಾಕೃತಿಯೆಂದೇ ಪರಿಗಣಿಸಬೇಕಾಗುತ್ತದೆ. ಅಂದರೆ ಅಲ್ಲಿ ಬರುವ ವಿಚಾರಗಳು, ಅನುಭವಗಳು, ಕಾದಂಬರಿ ಚಿತ್ರಿಸುವ ಪ್ರಪಂಚದ ಪಾತ್ರಗಳ ಜೀವನದ ಸಂದರ್ಭಗಳಲ್ಲಿ ಹುಟ್ಟಿ ರೂಪುಗೊಂಡಾಗ ಮಾತ್ರ ಅವು ಮೌಲಿಕವಾಗುತ್ತವೆ. ಹಾಗೂ ಭಾಷೆ, ಪ್ರಜ್ಞೆ, ಶೈಲಿ, ತಂತ್ರಕ್ಕೆ ಮಹತ್ವ ಪಡೆದುಕೊಳ್ಳುವ ರೀತಿಯಲ್ಲಿ ಚಿತ್ರಿಸಿದ್ದಾರೆ.

ಈ ಕಾದಂಬರಿಯಲ್ಲಿ ಒಂದೇ ದೃಷ್ಟಿಕೋನ ಇಲ್ಲ. ಒಂದು ಪಾತ್ರದ ಪ್ರಜ್ಞೆಯ ಮೂಲಕವೇ ಜೀವನವನ್ನು ಕಾಣುವ ರೀತಿ ಇಲ್ಲಿಲ್ಲಾ. ಕಾದಂಬರಿಕಾರರು ಜೀವನವನ್ನು ಹಲವಾರು ದೃಷ್ಟಿಕೋನಗಳಿಂದ ನೋಡುವ ನಿರೂಪಣಾ ಪ್ರಜ್ಞೆಯನ್ನು ಬಳಸಿದ್ದಾರೆ. ಒಮ್ಮೆ ಒಂದು ಪಾತ್ರದ ಕಡೆಯಿಂದ ನೋಡಿದರೆ, ಇನ್ನೊಮ್ಮೆ ಇನ್ನೊಂದು ಪಾತ್ರದ ಕಡೆಯಿಂದ ನೋಡುತ್ತಾರೆ. ನಾಟಕೀಯವಾಗಿ ಚಿತ್ರಿಸುತ್ತಾರೆ. ಅಂದರೆ ಈ ಕಾದಂಬರಿಯಲ್ಲಿ ಕಾದಂಬರಿಕಾರರು ತಾಳುವ ಮುಖ್ಯ ದೃಷ್ಟಿಕೋನ ಪ್ರಮುಖವಾದುದು. ಈ ಒಂದು ದೃಷ್ಟಿಕೋನ ಕಾದಂಬರಿಯಲ್ಲಿರುವುದರಿಂದಲೇ ಜೀವನವನ್ನು ಅದರ ಸಂಕ್ಲಿಷ್ಟತೆಗಳೊಂದಿಗೆ ಸಮಗ್ರವಾಗಿ ಚಿತ್ರಿಸಲು, ಮಾನವ ಸ್ವಭಾವದ, ನಡವಳಿಕೆಗಳ, ಜಟಿಲ ಚಿತ್ರಣವನ್ನು ಸಮೃದ್ಧವಾದ ವಿವರಗಳೊಂದಿಗೆ ಸಮಾಜ ಸಂದರ್ಭದಲ್ಲಿ ಚಿತ್ರಿಸಲು ಸಾಧ್ಯವಾಗಿರುವುದು.

**ಕಾರಂತರ ಕಾದಂಬರಿಗಳ ಭಾಷೆ, ತಂತ್ರ, ಶೈಲಿ ಹಾಗೂ ನಿರೂಪಣಾ ತಂತ್ರ**

ಸಾಮಾನ್ಯವಾಗಿ ಭಾಷೆ, ಶೈಲಿ ಮತ್ತು ತಂತ್ರ ಇವು ಬೇರೆ ಬೇರೆಯಲ್ಲ. ಭಾಷೆಯಿಂದ ಶೈಲಿ, ಸ್ವರೂಪ ಜನ್ಮ ತಾಳುತ್ತದೆ. ಇವೆರಡನ್ನು ಅಭಿವ್ಯಕ್ತಿಗೊಳಿಸುವ ಸಾಧನವೇ ಶೈಲಿ, ನಿರೂಪಣೆ, ಕೃತಿಯ ಒಳ ಹೊರ ಮೈಗಳ ಸಂಪೂರ್ಣ ಪರಿಚಯದೊಂದಿಗೆ ಅಭಿವ್ಯಕ್ತಿ ವಿಧಾನವನ್ನು ನಿರೂಪಿಸಲಾಗಿದೆ. ಕಾರಂತರ ಕಾದಂಬರಿಗಳ ಭಾಷೆ ಕೇವಲ ಪ್ರಾದೇಶಿಕ ಭಾಷೆ ಎನಿಸದೆ. ಸಮಗ್ರ ಕನ್ನಡ ಜನತೆಯ ಅಂತರ್ ವಾಣಿಯಾಗಿ ಸರ್ವಸಾಮಾನ್ಯವೆನಿಸುತ್ತವೆ. ಭಾಷೆಯಲ್ಲಿ ಪ್ರಾದೇಶಿಕತೆ ಬೇಕು ಅನ್ನುವವರಿಗೂ ಇದು ಮಾನ್ಯ ಭಾಷೆ. ಜಡವೆನಿಸುವ ಭಾಷೆ ಹೇಗಿರಬೇಕು, ಸರಳ ಭಾಷೆಯಲ್ಲಿ ಒಂದು ಸನ್ನಿವೇಶವನ್ನು ತೆರೆದು ಇಡಬಹುದಾದ ಅವರ ಸಾಮರ್ಥ್ಯಕ್ಕೆ ಉದಾಹರಣೆ 'ಚೋಮನದುಡಿ' ಕಾದಂಬರಿಯ ಚೋಮನು ಧಣಿಗಳಾದ ಸಂಕಪ್ಪಯ್ಯನವರಲ್ಲಿ ಗೇಣಿಗೆ ಭೂಮಿಯನ್ನು ಕೇಳುವ ಸಂದರ್ಭವನ್ನು ಇಲ್ಲಿ ಉಲ್ಲೇಖಿಸಬೇಕು.

"ಧಣಿಗಳು ಇಪ್ಪತ್ತೈದು ರೂಪಾಯಿಗಳ ಸಾಲದ ಪ್ರಸ್ತಾಪವನ್ನು ಹಿಡಿದುಕೊಂಡು ಮನ್ವೆಲ ಅಲ್ಲಿಗೆ ಬರುತ್ತಾನೆ. ಸಾಲ ನನಗಿಲ್ಲವೆಂದು ಹೇಳಿದ ಚೋಮನನ್ನೂ ಸಂಕಪ್ಪಯ್ಯ ಗದರಿಸುತ್ತಾನೆ. ಆಗ ಚೋಮನ ಮುಖ ತಗ್ಗಿತು."[೧೦] ಇಲ್ಲಿಯ "ತಗ್ಗಿತು' ಎಂಬ ಶಬ್ದ ಅರ್ಥಗರ್ಭಿತವಾದುದು.

ಚೋಮ ನಾಚಿಗೊಂಡುದು, ಅವಮಾನಕ್ಕೆ ಪಕ್ಕಾದುದು, ಬೇಸಾಯಗಾರನಾಗಬೇಕೆಂಬ ಆತನ ಆಸೆಗೆ ಕಲ್ಲು ಬಿದ್ದದ್ದು, ತನ್ನ ಹೀನ ಸ್ಥಿತಿಗಾಗಿ ತಾನೇ ದುಃಖಗೊಂಡದ್ದು ಇಷ್ಟೆಲ್ಲಾ ಧ್ವನ್ಯಾರ್ಥಗಳನ್ನು ಒಳಗೊಳ್ಳುವ ಭಾಷೆ ತೀರ ಸರಳವಾದುದು ಎಂಬುದು ಮಹತ್ವವಾಗಿದೆ. ಗುರುವ ಚನಿಯರೆಂದರೆ ಎರಡು "ಕಬ್ಬಿಣ್ಣದ ತುಂಡುಗಳು ಮುಂದಿನ ಶನಿವಾರಕ್ಕಿವೆ ಮೂರು ದಿನ, ಉದ್ದ ಗಂಜಿಯನ್ನು ಮಾಡುವುದು. ಇಂಥ ಭಾಷಾ ಪ್ರಯೋಗಗಳು ಅರ್ಥಗರ್ಭಿತವಾಗಿದ್ದು, ಮೇಲು ನೋಟಕ್ಕೆ ತೀರ ಸರಳವೆನಿಸುತ್ತವೆ. ದೀಪ ಉರಿಸಲು ಅವರೇನು ಮುತ್ತು ಸುರಿಯುತ್ತಾರೆಯೇ"[೧೧] "ಚೋಮನ ಸಾಲ ಬಿರುಮನ ಗಡಂಗಿನಲ್ಲಿ ವಸೂಲಾಗುವುದು" ಇಂಥ ಹೇಳಿಕೆಗಳು ಭೂತ, ವರ್ತಮಾನಗಳನ್ನು ಬೆಸೆಯುವ ಧ್ವನಿ ಚಿತ್ರಗಳು. ತನ್ನದೇ ಹೊಲದಲ್ಲಿ ಉಳುವ ತನ್ನ ಆಸೆಗೆ ಬೆಳ್ಳಿ ಕಲ್ಲು ಹಾಕಿದ್ದರಿಂದ ಚೋಮ ದುಃಖಿತನಾಗುತ್ತಾನೆ. ಆ ಗಳಿಗೆಯಲ್ಲಿ ಬೆಳ್ಳಿಯ ಮಾತು ಮೌನವಾಗುತ್ತದೆ. "ಅಪ್ಪನ ಕಣ್ಣಿನಿಂದ ಮಳೆಸುರಿದ ಮೇಲೆ ಬೆಳ್ಳಿ ಮಾತನಾಡುತ್ತಾಳೆಯೇ"[೧೨] ಎಂಬ ಮಾತು ಪರಿಸ್ಥಿತಿಯ ಕಾವನ್ನು ಶಾಂತಗೊಳಿಸುವ ರೀತಿಯದು. ನಂತರ ಚೋಮನದುಡಿಯಲ್ಲಿ ಕಾರಂತರು ನಿಸರ್ಗದ ಬಗ್ಗೆ ಆಸಕ್ತಿ ಹಾಗೂ ಅದನ್ನು ಮಾನವನಿಗೆ ಸಂಬಂಧಿಸಿದಂತೆ ಬಳಸಿಕೊಳ್ಳುವ ಕಲೆಗಾರಿಕೆ ಎರಡನ್ನೂ ತೋರಿಸಿದ್ದಾರೆ. ನಿರೂಪಣಾ ತಂತ್ರದ ಮೂಲಕ ಇದರ ಆರಂಭವೇ ನಮ್ಮನ್ನು ಬೆರಗುಗೊಳಿಸುವ ಕಲಾಪೂರ್ಣತೆಯನ್ನು ಬಿಂಬಿಸುತ್ತವೆ. ಉದಾ: ದೇವರ ಉತ್ಸವದ ವರ್ಣನೆ, ಅದರ ಜೊತೆಗೆ ಬರುವ ಚೋಮನ ಕುಟುಂಬದ ಪರಿಚಯ ಇವು ಕತೆಯ ಒಡಲಿನಲ್ಲಿ ಹರಿಯುತ್ತಿರುತ್ತದೆ.

'ಸರಸಮ್ಮನ ಸಮಾಧಿ' ಕಾದಂಬರಿಯಲ್ಲಿ ಸರಸಮ್ಮನ ಸಮಾಧಿಯ ಬೆಳ್ಯಕ್ಕ, ಸುನಾಲಿನಿ ಇವರ ವಿರಸ ದಾಂಪತ್ಯದ ಚಿತ್ರಣದಲ್ಲಿ, ವ್ಯಕ್ತಿ ಸ್ವಭಾವಕ್ಕೆ ಸಹಜವಾದ ಭಾಷೆ ಹೊಮ್ಮುತ್ತದೆ. ಇಲ್ಲಿ ಸಮಾಧಿಯೇ ವಸ್ತು. ಸಮಾಧಿಯೇ ಸಮಸ್ಯೆಯ ಪ್ರತೀಕ, ಸಮಾಧಿಯೇ ಎಲ್ಲಾ ಘಟನೆಗಳ ಕೇಂದ್ರ, ಅಂದ ಮೇಲೆ ಅಲ್ಲಿ ಬರುವ ಹತ್ತಾರು ವ್ಯಕ್ತಿಗಳು, ಇದರ ಸುತ್ತ ಸುಳಿಯುವುದುಂಟು. ಅವರಲ್ಲಿ ಈ ಸಮಸ್ಯೆಯ ಒಂದೊಂದು ರೀತಿಗಳು, ಒಂದೊಂದು ಸಮಸ್ಯೆಯ ಪೂರಕ ಪ್ರತೀಕಗಳ ಮೂಲಕ ನಿರೂಪಣಾಭಾಷೆಯನ್ನು ಬಳಸಿದ್ದಾರೆ. "ಎಲ್ಲರೂ ಸೇರಿ ಒಂದು ಕಡೆ ಕೇಂದ್ರಿಕೃತರಾಗುವರು. ಅದೇ ನಮ್ಮ ಸಮಾಜದಲ್ಲಿ ಬೆನ್ನು ಹತ್ತಿದ ಪ್ರೇತ. ಲೈಂಗಿಕ ಸಮಸ್ಯೆ, ಈ ಸಮಸ್ಯೆಯನ್ನು ಒಂದೊಂದು ರೀತಿಯಲ್ಲಿ ಒಂದೊಂದು ಬಗೆಯಾದ ಘಟನೆಯಿಂದ ಚಿತ್ರಿಸಲು ಪ್ರಯತ್ನಿಸಿದ್ದಾರೆ. ಕಾರಂತರಿಗೆ ಚಂದ್ರಯ್ಯನ ಪ್ರಜ್ಞಾಲೋಕದ ಮಾರ್ಪಾಡುಗಳನ್ನು ತೋರಿಸುವುದು ಹೆಚ್ಚು ಮಹತ್ವದ್ದೆನಿಸಿದ್ದರಿಂದ ಅವರಿಗೆ ಬೇರೊಂದು ತಂತ್ರ ಅವಶ್ಯವೆನಿಸಿ ಸ್ವತಃ ಕಾರಂತರೆ 'ಕಾಲ್ಪನಿಕತಂತ್ರ'ವನ್ನು ಈ ಕಾದಂಬರಿಯಲ್ಲಿ ಬಳಸಿರುವುದಾಗಿ ಹೇಳಿದ್ದಾರೆ."[೧೩]

Fantasy ಯಂಥ ಹೊಸ ಪರಿಮಾಣವನ್ನು ಕಾದಂಬರಿಯ ವಸ್ತುವಿಗೆ ಸೇರಿಸುವುದರ ಮೂಲಕ ಸತ್ವವನ್ನರಿಯದ ಶಕ್ತಿಯುತವಾದ ವಿಧಾನವೊಂದರ ಲಾಭ ಪಡೆಯುವುದು ಕಾರಂತರಿಗೆ ಸಾಧ್ಯವಾಯಿತು.

'ಬೆಟ್ಟದ ಜೀವ' ಕಾದಂಬರಿಯಲ್ಲಿ ಭಾಷೆ ನಾದದಂತೆ ಹರಿದಿದೆ. ಇಲ್ಲಿ ಕತೆ ಕಾಲವನ್ನು ಮೀರಿದುದು. ಇಂದಿನದಾಗಬಹುದು, ಹಿಂದಿನದಾಗಬಹುದು, ನಾಳಿನದಾಗಬಹುದು ಕಾಲಾತೀತವಾಗಿದೆ. ಇಲ್ಲಿ ಎಲ್ಲವೂ ಹಳೆಯ ಕಾಲದಲ್ಲಿ ಆಗಿ ಹೋಗುವುದು. ನೆನಪಿನ ನೆರವಿನಿಂದ ಹಿಂದೆ ಆದುದಲ್ಲಿ ಇಂದಿನ ರಂಗದ ಮೇಲೆ ಸ್ಫುಟವಾಗಿ ಅವಿರ್ಭವಿಸುವುದು ಗೋಪಾಲಯ್ಯ ಮತ್ತು ಶಂಕರಮ್ಮ ಹಿಂದೆ ಅನುಭವಿಸಿದುದೆಲ್ಲಾ ಬರಿಯ ನೆನಪಿನಿಂದಲೇ ಪುನರಾವೃತ್ತಿ ಯಾಗುವುದು. ಇದರಿಂದಲೇ ಹಳೆಯ ಘಟನೆಗಳು, ನೋವುಗಳು, ನಲಿವುಗಳು, ಗೆಲವುಗಳು ಚಿತ್ರಿತವಾಗಿರುವುವು ಕತೆ ರೂಪಿತವಾಗಿರುವುದು. ಇದು ಕಾರಂತರ ಉಳಿದ ಕಾದಂಬರಿಗಳ ರೀತಿಗೆ ಹೊರತಾದುದು. ಇದು ಹೊಸ ಬಗೆಯ ತಂತ್ರ, ಉಳಿದ ಕಾದಂಬರಿಗಳಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿರುವ ತಂತ್ರವನ್ನೇ ಉಪಯೋಗಿಸಿದ್ದಾರೆ ಕಾರಂತರು.

ಇಲ್ಲಿ ಕಾಡು, ಬೆಟ್ಟ, ನದಿ, ಮಂಜಿನ ಬೆಳಗು, ಹುಲಿಬೇಟೆ, ದನ, ಮೊದಲಾದವುಗಳಲ್ಲಿ ಆಕೃತಿಯ ಒಟ್ಟು ಧ್ವನಿಯ ಹೊಮ್ಮಿಕೆಗಾಗಿ ಕ್ರಿಯಾಶೀಲವಾಗಿ ದುಡಿಯುವುದನ್ನು ನಾವು ಕಾಣಬಹುದು. ಇದರ ಆಧುನಿಕ ತಂತ್ರ ನಮಗೆ ಆಶ್ಚರ್ಯವನ್ನುಂಟು ಮಾಡುತ್ತದೆ. ಇಲ್ಲಿಯ ತಂತ್ರಕತೆಯ ಹುಟ್ಟು-ಬೆಳವಣಿಗೆ, ಮುಕ್ತಾಯಗಳ ಸಂಪ್ರದಾಯಿಕ ಬಂಧದಿಂದ ದೂರ ಸರಿದು ತನ್ನದೇ ಆದ ಬಂಧವನ್ನು ಸಿದ್ದಪಡಿಸಿಕೊಳ್ಳುತ್ತದೆ. ಪಾತ್ರ, ಘಟನೆ, ಅವರಣಗಳ ವಾಸ್ತವಿಕತೆ ಅವುಗಳನ್ನೊಂದು ನಿಯಂತ್ರಿತ ಉದ್ದೇಶಕ್ಕಾಗಿ ಬಳಸಿಕೊಂಡ ಜಾಣ್ಮೆ ಸಾಹಿತ್ಯಿಕ ದೃಷ್ಟಿಯಿಂದ ನಾವಿಲ್ಲಿ ಮೆಚ್ಚಬೇಕಾದ ಮುಖ್ಯವಾದ ಗುಣಗಳಾಗಿವೆ. ಗ್ರಾಮ ಜೀವನದ ಮೌಲ್ಯಗಳನ್ನು ನಾಗರೀಕ ಸಂವೇದನೆಯ ಬೆಳವಣಿಗಾಗಿ, ವಿಕಾಸಕ್ಕಾಗಿ ಉಪಯೋಗಿಸುವುದು. ಈ ದೃಷ್ಟಿಯಿಂದ ಶಿವರಾಮಯ್ಯ ಕತೆಯ ಕೇಂದ್ರ ಪ್ರಜ್ಞೆಯಾದರೆ ಗೋಪಾಲಯ್ಯ ಕತೆಯ ಮೌಲ್ಯಗಳ ಕೇಂದ್ರ ಪ್ರತೀಕ. ಹೀಗೆ ಪ್ರಜ್ಞೆ-ಪ್ರತೀಕಗಳೆರಡರ ಸಾಹಿತ್ಯಿಕ ದೃಷ್ಟಿಯಲ್ಲಿ ಅವುಗಳ ಸಂಬಂಧವನ್ನು ನಾಟ್ಯೀಕರಿಸುವ ಸಂವಿಧಾನದ ರಚನೆಯಲ್ಲಿ ಕಾರಂತರು ಪಡೆದಿರುವ ಯಶಸ್ಸು, ಈ ಕಾದಂಬರಿಯ ಸಫಲತೆಗೆ ಕಾರಣವಾಗಿದೆ ಎಂದು ಹೇಳಬಹುದು. ಹಾಗೂ ಪ್ರಕೃತಿಯ ವರ್ಣನೆ, ಬೆಟ್ಟಗುಡ್ಡಗಳಿಂದ ತುಂಬಿದ ನಾಡಿನ ಮುಖ್ಯ ವಿವರಗಳು, ಅಬ್ಬಿಯನೀರು, ಕಾಟುಮೂಲೆ ಹಸಿರು, ಕನ್ನಡಿ ಹಾವಿನ ವಾಸನೆ, ಸಾಗುವಳಿಯನ್ನು ಕಾಣದ ಪ್ರಾಕೃತಭೂಮಿ, ಕಾಡಿನ ನಿರ್ಜನತೆ ಇವೆಲ್ಲಾ ರಹಸ್ಯ ಲೋಕವನ್ನು ಸೃಷ್ಟಿಸಿವೆಯಾದರೂ ಆಶ್ಚರ್ಯದ ಸಂಗತಿ.

ಭಾಷೆಗೆ ತೊಡಿಸುವ ಸರಳ ಉಪಮೆಯಗಳು ಕಾರಂತರದೇ ಆದ ಶೈಲಿಯನ್ನು ನಿರ್ಮಿಸುತ್ತವೆ. ಗೋಪಾಲಯ್ಯ ಕಾಡಿನ ನಡುವೆ ನಿರ್ಮಿಸಿದ ನೀರ್ಕಟ್ಟೆಯನ್ನು ಕಾಟು ಮೂಲೆಯ ನಾರಾಯಣ ಬಣ್ಣಿಸುತ್ತಾನೆ. ಬೀಳಲಿನ ಕಂಬಗಳನ್ನು ರಚಿಸಿದ ಸಾಧನೆಯೆಂದರೆ ಗೋಪಾಲಯ್ಯನ ಸಾಹಸದ ಸಂಕೇತವೆಂಬುದು ಇಲ್ಲಿ ಹೊಳೆಯುತ್ತದೆ. ಕೆರೆ ಹಾವಿನ ಹಾಗೆ ಸುತ್ತಿ ಸುತ್ತಿ ಹರಿಯುತ್ತ ಒಂದೆಡೆ ನದಿ ಅಗಲವಾಗಿದೆ. ಅಲ್ಲೆ ಗೋಪ್ಪಾಲಯ್ಯ ನೀರ್ಕಟ್ಟೆ ರಚಿಸುವುದು. ಅದೊಂದು ಅದ್ಭುತ ಕೆಲಸ. ಅದೇ ಮಾವಯ್ಯನ ಕಾರುಬಾರಕ್ಕೆ ಸಾಕ್ಷಿ ಕಂಬಗಳು; ನೋಡಿ ಅವು ಬೀಳಲಿಂದ ಮಾಡಿದವು. ಒಳಗೆ ನೀವು ಈಗ ಕೈಯಲ್ಲಿ ಹಿಡಿದಿರುವಂತಹ ಕಲ್ಲುಗಳನ್ನು ತುಂಬಿಸಿ ಕಂಬ ಮಾಡಿದ್ದಾರೆ. ಅವು ಆಧಾರಕ್ಕೆ ಕಂಬದಿಂದ ಕಂಬದ ನಡುವೆ ತುಂಬ ಸೊಪ್ಪು-ಸಲಿಕೆಗಳ ಬೇಲಿಯನ್ನು ಕಟ್ಟಿ ಹೊರಮೈಯಲ್ಲಿ ಮಣ್ಣಿನ ದಂಡೆ ಹಾಕಿ ಬಿಟ್ಟು, ಒಳಗಡೆ ನೀರು ನಿಲ್ಲಿಸಿದರೆ ನೂರು ಎಕ್ರೆ ಸಾಗುವಳೀಯಾದೀತು."೧೪ ನಿಸರ್ಗದೊಡನೆ ಹೋರಾಟ ನಡೆಸುತ್ತಾ ಬಾಳುವೆ ನಡೆಸುವ ಗೋಪಾಲಯ್ಯ ಬೆಟ್ಟಕ್ಕಿಂತ ಕಿರಿದಾಗಿ ಕಾಣಿಸಲಾರರು. ಅಷ್ಟೇತ್ತರಕ್ಕೆ ತಲೆ ಎತ್ತಿ ನಿಂತ ಬೆಟ್ಟದಂತೆ ಈ ಗೋಪಾಲಯ್ಯ ಉಪಮೆಯಗಳು, ಪ್ರತಿಮೆಗಳು ಅದೃಶ್ಯ ಪ್ರತೀಕಗಳಾಗಿ ಸಂಚಾರಿ ಭಾವದಿಂದ ಕಂಗೊಳಿಸುವುದು ಕಾರಂತರ ನಿರಾಡಂಬರ ಶೈಲಿಯಾಗಿದೆ.

'ಮರಳಿ ಮಣ್ಣಿಗೆ' ಕಾದಂಬರಿ ಕರಾವಳಿ ಬದುಕಿನ ಮೂರು ತಲೆಮಾರುಗಳ ಚಿತ್ರಣವೆಂದು ಹೇಳಬಹುದು. ಸರಳ ರೇಖಾತ್ಮಕ ಕಥನ ಕ್ರಮದಲ್ಲಿದೆ. ಶೈಲಿ ಮತ್ತು ತಂತ್ರಗಳ ಬಗ್ಗೆ ಅತಿ ಗೀಳಿಲ್ಲದ ಕಾರಂತರು ಭಾಷೆಯ ಬಗೆಗಿನ ಕಾರಂತರ ನಿಲುವು ವಿಶಿಷ್ಟವಾದುದು. ಭಾಷೆಯಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ "ಸ್ತ್ರೀ ಪ್ರಪಂಚವನ್ನು ಅವರ ಸಣ್ಣ ಪುಟ್ಟ ವಿವರಗಳನ್ನು ಬಿಡದೇ ಇವರು ಚಿತ್ರಿಸುವ ಕ್ರಿಯೆ, ಅಡುಗೆಮನೆಯಲ್ಲಿ ಓಡಾಡಿಕೊಂಡಿರುವ ಪುಟ್ಟ ಹುಡುಗನಂತೆ."೧೫ ಸ್ತ್ರೀ ಪಾತ್ರಗಳ ಸುತ್ತಮುತ್ತಲೇ ಇರುವ ಇವರು ಹಪ್ಪಳ, ಸಂಡಿಗೆ, ಉಪ್ಪಿನಕಾಯಿಗಳ ಲೋಕದ ಸೂಕ್ಷ್ಮತೆಯನ್ನು ನಮಗೆ ತಲುಪಿಸುತ್ತಾರೆ. ವೈಭವೀಕರಣವೂ ಅಲ್ಲದೆ, ಅನುಕಂಪವೂ ಅಲ್ಲದ, ಈ ನೋಟ ಸ್ತ್ರೀ ಬದುಕಿನ ಯಥಾಸ್ಥಿತಿಯನ್ನು ವಾಸ್ತವಿಕವಾಗಿ ನಿರೂಪಿಸುವಲ್ಲಿ ಯಶಸ್ವಿಯಾಗಿದೆ. ಕರಾವಳಿಯ ಜನರ ಭಾಷೆ ಗಾಂಭೀರ್ಯದಿಂದ ಸೊಗಸಾದರೆ ಬೆಟ್ಟದ ಮಡಿಲಿನ ಭಾಷೆ ಗಹನವೆನಿಸುತ್ತದೆ. ಉದಾ: ರಾಮೈತಾಳರು(ಮರಳಿ ಮಣ್ಣಿಗೆ) ದತ್ತಕ ತೆಗೆದುಕೊಳ್ಳುವ ವಿಚಾರವನ್ನು ಬಿಟ್ಟು ಎರಡನೆಯ ಲಗ್ನವಾಗಲು ಯೋಚಿಸುತ್ತಿದ್ದಾರೆ. "ನನ್ನ ಸರಸ್ವತಿ, ನಾಲ್ಕು ವರ್ಷಗಳಿಂದಲೂ ದತ್ತು ಮಾಡಿಕೋ ಎಂದು ವರತಾ ಹಿಡಿಯುತ್ತಾಳೆ. ದತ್ತುಕೊಳ್ಳುವ ಸಂಗತಿ ನನಗೆ ಹಿಡಿಸಲಿಲ್ಲ. ಯಾರ್‍ಯಾರ ಮನೆಯ ಮುಂಡಕದ ಗಿಡವನ್ನು ತಂದು ನಮ್ಮ ಮನೆಯ ಕೇದಗೆ ಮಾಡಲು ಬಂದೀತೆ. ಮುಂಡಕ, ಮುಂಡಕವೇ ಕೇದಗೆ

ಕೇದಗೆಯೇ."[೧೬] ಪರರ ಶಿಶುವನ್ನು ತಂದು ಸಾಕುವುದೆಂದರೆ ಒಂದು ಮರದ ಚಕ್ಕೆಯನ್ನು ಇನ್ನೊಂದು ಮರಕ್ಕೆ ಅಂಟಿಸಿದಂತೆ, ಅದೆಂದೂ ಹೊಂದಿಕೆಯಾಗದು ಎನ್ನುವ ಭಾವ ಅವರದು. ಮಾತಿನ ಸಮರ್ಥನೆಗೆ ಬಳಸಿಕೊಂಡ ಭಾಷೆ, ಸಾಂಕೇತಿಕವಾಗಿ ಮನುಷ್ಯನ ಅಂತರಂಗಕ್ಕೆ ಬೆಳಕು ಹಿಡಿಯುತ್ತದೆ ಹಾಗೂ ಭಾಷೆಯಲ್ಲಿ ಹಿಡಿತ ಸಂಯಮ ಕಾಣುತ್ತೇವೆ.

"ಪಾಶ್ಚಾತ್ಯ ಮಾದರಿಯಲ್ಲಿ ರೂಪುಗೊಂಡ ಏಕಮುಖ ಪ್ರಗತಿಯು ಅದಕ್ಕೆ ಹೊಂದುವ ಸಂಘಟನೆಯ ಕಲ್ಪನೆ ಇದೆ. ಆದ್ದರಿಂದಲೇ ಬೆಳೆದು ಹೂ, ಹಣ್ಣು ಬಿಡುವ ಮರದ ನಿದರ್ಶನವಿದೆ. ಆದರೆ ಚಿತ್ರದ ಗತಿಗೆ ಪ್ರಗತಿಯನ್ನು ಬೆರೆಸುವ 'ಮರಳಿ ಮಣ್ಣಿಗೆ' ಕಾದಂಬರಿಯ ಕಥೆಯ ಬಂಧ, ನಿರೂಪಣೆಗಳು ಭಾರತೀಯ ಕಥಾ ಸಾಹಿತ್ಯಕ್ಕೆ ಸಂವಾದಿಯಾದದ್ದು ಎಂದರೆ ಹೂ ಹಣ್ಣು ತಳೆಯುವ ಮರಕ್ಕಿಂತ ದಟ್ಟವಾಗಿ ಬಿಳಲು ಬಿಟ್ಟು ಮಣ್ಣಿಗೆ ಮರಳಲು ಬೆಳೆಯುವ ಆಲದ ಮರದ ನಿದರ್ಶನ ಈ ಕಥಾನಕದ ದಾಟಿಗೆ ಒಪ್ಪುತ್ತದೆ. ಸಾರ್ಥಕವನ್ನು ಸೃಷ್ಟಿಗೊಳಿಸುತ್ತದೆ. ಇಲ್ಲಿ ಬೆಳವಣಿಗೆಯೂ, ಮರಳುವಿಕೆಯೂ ಪರಸ್ಪರ ವಿರುದ್ಧವಲ್ಲ. ಸಮಾಜದ ವ್ಯಕ್ತಿ ತನ್ನ ಊರಿನಲ್ಲಿದ್ದು, ಪರಂಪರೆಯಲ್ಲಿ ಕೊಳೆತು, ಹೊರಬಿದ್ದು ಭ್ರಷ್ಟವಾಗಿ, ಬೆಳೆದು ಬದಲಾಗಿ ಊರಿಗೆ ಹಿಂತಿರುಗುವ ಕ್ರಮ ಇದರಲ್ಲಿದೆ."[೧೭] ಕಥೆಯ ಚೌಕಟ್ಟು ಈ ಚೌಕಟ್ಟಿನೊಳಗೆ ಆ ಸಂದರ್ಭಕ್ಕೆ ತಕ್ಕ ಹೆಚ್ಚು ಆಳಕ್ಕೆ ಹೋಗದ ನಿರೂಪಣೆಯ ಖಂಡ ಖಂಡಗಳು ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಸಾಹಿತ್ಯ ಕೇವಲ ಭಾಷಿಕ ರೂಪವನ್ನು ಮಾತ್ರ ಅವಲಂಬಿಸಿಲ್ಲ. ಅದು ರೂಪ, ಅಭಿವ್ಯಕ್ತಿಪಡಿಸುವ ಅರ್ಥವನ್ನು ಅವಲಂಬಿಸಿಕೊಂಡಿದೆ. ಹಾಗೆಯೇ, ನುಡಿಗಟ್ಟುಗಳಿಂದ ಮೌಲಿಕವಾದ ವಿಚಾರಗಳನ್ನು ಗರ್ಭೀಕರಿಸುವುದರಿಂದ ಒಂದು ನಾಡಿನ ಜನಮನಕ್ಕೆ ಸ್ಪಂದಿಸುವಾಗಿನ ಕ್ರಿಯೆಯಲ್ಲಿ ಅದರದೇ ಜೀವನಾಡಿ ಎನಿಸುವ ದೇಸಿಯ ಬಳಕೆಯಿಂದ ಅನ್ಯಭಾಷಾ ಸಂಸರ್ಗದ ಕೊಡುಕೊಳ್ಳುವಿಕೆಯ ಸೌಹಾರ್ದತನದಿಂದ ಕಾರಂತರು ತಮ್ಮ ಬರವಣಿಗೆಯಲ್ಲಿ ಇದೆಲ್ಲವನ್ನೂ ಗಮನಿಸಿ ಭಾಷೆಯನ್ನು ಸರಳತೆಯಲ್ಲೇ ಸುಂದರಗೊಳಿಸುತ್ತಾರೆ. ಪ್ರಾದೇಶಿಕತೆಯನ್ನು ಮೈಗೂಡಿಸಿಕೊಳ್ಳದ ಭಾಷೆ ಎಂದಿಗೂ ಬರಡೇ. ದಕ್ಷಿಣ ಕನ್ನಡದ ಕರಾವಳಿಯ ಸಮೃದ್ಧತೆ, ಅಲ್ಲಿಯ ಭಾಷೆಗೂ ವೈವಿಧ್ಯತೆಯ ಅಂದ ನೀಡಿದೆ. ಕಾರಂತರು ಬಳಸುವ ದೇಸಿ ಕರಾವಳಿಯ ಉಸಿರಿನಂತೆ ಬೆಟ್ಟದ ಹಸಿರಿನಂತೆ, ಕರಿಮಣಿ ಸರದಲ್ಲಿ ಚೆಂಬದಳ ಮಂಕೋದಂತೆ. ಉದಾ: (ಸರಸಮ್ಮನ ಸಮಾಧಿ) ಬೆಳೆದವರ ಬುದ್ಧಿ ತಿರುಗುವುದು, ಹಾದಿಗೆ ಬರುವುದು ಒಂದೇ ದಿವಸ, ಜಾತಿಗೆಟ್ಟರೂ ಸ್ವರ್ಗ ಸಿಕ್ಕಿತ್ತಲ್ಲ(ಜೋಮನ ದುಡಿ), ಉಣ್ಣಲಿಕ್ಕೆ ಬೇಡದ ಸಂಪತ್ತು ಯಾವ ಮಣ್ಣಿಗೆ ಇರುವುದು?(ಮರಳಿ ಮಣ್ಣಿಗೆ), "ಬಡವನ ಸಿಟ್ಟು ಹೊಟ್ಟೆಗೆ ಮಾರಿ".

ಅನೇಕ ವ್ಯವಹಾರಿಕ ಶಬ್ದಗಳು: ಗೀಸು-ನಯಮಾತು, ಪಸಂದ-ಚೆನ್ನ, ಮುಸುಡಿ-ಮೂತಿ, ಮೂಖ, ಪಚ್ಚಮಾಡು-ನಾಶಮಾಡು, ಹಿಸಿ-ಹಿಂಡು, ಅರಾಲು-ಸಮುದ್ರದಂಡೆ, ಸಾಪಾಗಿ-ಚೆನ್ನಾಗಿ, ಸಂಕ-ಕಿರುಸೇತುವೆ, ಪಾಪು-ಹಳ್ಳಿ ದಾಟಲು ಹಾಕಿದ ಮರದ ಹಲಗೆ, ಕಣ್ಣಾಬಾಡು-ನಿದ್ದೆ ಆವರಿಸು, ಹುಳಿ-ಜಂಭ ಇತ್ಯಾದಿ ಭಿನ್ನ ಭಿನ್ನ ಭಾಷೆಯ ಜನರಾಡುವ ಅನೇಕ ಶಬ್ದಗಳನ್ನು ಬಳಸಿ ಕಾರಂತರು ತನ್ನದೇ ಶೈಲಿಯೊಂದನ್ನು ರೂಪಿಸಿಕೊಳ್ಳುತ್ತಾರೆ. ಇದು ವ್ಯವಹಾರಿಕ ಭಾಷೆಯೂ ಹೌದು.

ಕಾರಂತರ ಬರಹಗಳ ಶೈಲಿಯು ಯಾವಾಗಲೂ ವಸ್ತುವಿನ ಭಾವನಾತ್ಮಕ ಸ್ತರಗಳನ್ನು ನಿರ್ದೇಶಿಸುತ್ತದೆ. "ಕಾರಂತರ ಕಾದಂಬರಿಗಳಲ್ಲಿ ಕಾಣುವ ನಿರೂಪಣಾ ತಂತ್ರದ ಬಗ್ಗೆ ಬರೆಯುತ್ತಾ ಸಿ.ಎನ್.ರಾಮಚಂದ್ರನ್ ಅಲ್ಲಿಯ ಹೆಚ್ಚಿನ ನಿರೂಪಕರು ರೂಪರಹಿತ ನಿರೂಪಕರು ಎನ್ನುತ್ತಾರೆ. ಅವರಲ್ಲಿ ಬೆಟ್ಟದ ಜೀವ, ನಿರೂಪಕ ರೂಪ ನಿರ್ದಿಷ್ಟವಾಗುವುದು. ಆತನು ಕಥೆಯ ಆಗು-ಹೋಗುಗಳಲ್ಲಿ ಸಕ್ರಿಯವಾಗಿ ಭಾಗವಹಿಸದೇ ಇರುವುದರಿಂದ."[೧೮] ಕಾರಂತರ ಕಾದಂಬರಿಗಳ ವಸ್ತುವಿನ್ಯಾಸವು ಕಥಾಸೂತ್ರವನ್ನು ಸಮರ್ಥವಾಗಿ ಬಿಂಬಿಸುವ ಕೆಲಸ ಮಾಡವುದಲ್ಲದೆ ಕಥಾ ಬೆಳವಣಿಗೆ ಮತ್ತು ಬದುಕಿನ ಮೂಲೋದ್ದೇಶಗಳನ್ನು ಒಟ್ಟೊಟ್ಟಾಗಿ ಹಿಡಿದಿಟ್ಟುಕೊಂಡು ಸಾಗುತ್ತದೆ. ಹೀಗಾಗಿ ಕಾರಂತರ ಅನುಭವಗಳೇ ಅವರ ಕಾದಂಬರಿಗಳ 'ತಂತ್ರ' ಚಲನಶೀಲತೆಯ ಗುಣ.

**"ಸದ್ಗುಣಿ ಕೃಷ್ಣಾಬಾಯಿ" ಕಾದಂಬರಿಯ ಭಾಷೆ, ಶೈಲಿ, ತಂತ್ರ, ನಿರೂಪಣಾ ವಿಧಾನ**

ಸಂತೂಬಾಯಿ ನೀಲಗಾರರು ಈ ಕಾದಂಬರಿಯಲ್ಲಿ ಬಳಸಿರುವ ಭಾಷೆ ಸಹಜ ಹಾಗೂ ಸುಲಲಿತವಾಗಿದೆ. ಪ್ರಾರಂಭದಲ್ಲಿ "ಉಪೋದ್ಘಾತ"ದಲ್ಲಿ ಲೇಖಕಿ ಸದ್ಗುಣಿ ಮಹಿಳೆಯು ಪಾಲಿಸಬೇಕಾದ ಗೃಹಿಣಿ ಧರ್ಮವನ್ನು ವಿವರವಾಗಿ ಪ್ರಸ್ತಾಪಿಸಿದ್ದಾರೆ. ಅವರ ನಿರೂಪಣಾ ತಂತ್ರದಲ್ಲಿ ಪಾತ್ರಗಳ ಮೂಲಕ ನಿರೂಪಿಸಿರುವುದು ಸರಳವಾದ ಭಾಷಾಶೈಲಿಯ ಮೂಲಕ. ಕಾದಂಬರಿ ಮೂರು ಭಾಗಗಳಲ್ಲಿ ನಿರೂಪಿಸಿದ್ದಾರೆ. ಮೊದಲನೇ ಭಾಗದಲ್ಲಿ ಕೃಷ್ಣಾಬಾಯಿಯ ಜೀವನ ವೃತ್ತಾಂತ, ಸ್ತ್ರೀ ಶಿಕ್ಷಣದ ಮಹತ್ವ ಮತ್ತು ಎರಡನೇ ಭಾಗದಲ್ಲಿ ಸ್ತ್ರೀಯರನ್ನು ಉತ್ತಮ ಗೃಹಿಣಿಯರನ್ನಾಗಿಸುವ ಆಧುನಿಕ ಶಿಕ್ಷಣದ ಸಮರ್ಥನೆಯ ವಿಚಾರಗಳು, ಮೂರನೇ ಅಧ್ಯಾಯದಲ್ಲಿ ಕೃಷ್ಣಾಬಾಯಿ ಅನುಭವಿಸಿದ ಕಷ್ಟ ಪರಂಪರೆಯನ್ನು, ಹಾಗೆಯೇ ಕೊನೆಯದಾಗಿ ಸದ್ಗುಣಿಯ ವ್ಯಕ್ತಿತ್ವ, ಕರ್ತವ್ಯ, ದಾಂಪತ್ಯ ಧರ್ಮವನ್ನು ನಿರೂಪಿಸಿದ್ದಾರೆ. ಹೀಗೆ ನಿರೂಪಣಾ ಶೈಲಿ ಸರಾಗವಾಗಿ ಹರಿದು ಬಂದಿರುವುದು ಗಮನಿಸಬಹುದು. ತಮ್ಮ ಪಾರಂಪರಿಕ ಧೋರಣೆಗಳನ್ನು ನಿರೂಪಿಸುವುದರ ಮೂಲಕ ಕಾದಂಬರಿಯ ಭಾಷೆ, ಹರಿತವಾಗಿ ಸಾಗಿರುವುದು ಕಂಡುಬರುತ್ತದೆ.

**ತಿರುಮಲಾಂಬಾ ಅವರ ಕಾದಂಬರಿಗಳಲ್ಲಿ ಭಾಷೆ, ಶೈಲಿ, ತಂತ್ರ, ನಿರೂಪಣೆ**

ತಿರುಮಲಾಂಬಾ ಅವರು ತಮ್ಮ ಕಾದಂಬರಿಗಳಲ್ಲಿ ನೀತಿ ಬೋಧೆ, ಪಾತಿವ್ರತ್ಯದ ಮಹತ್ವ, ಸ್ತ್ರೀ ವಿದ್ಯಾಭ್ಯಾಸದ ಅಗತ್ಯ, ಸಂಸ್ಕೃತಿ, ಪರಂಪರೆಗಳ ಬಗ್ಗೆ ಅತೀವ ಕಳಕಳಿಯನ್ನು ಅಂದಿನ ಕಾಲಕ್ಕೆ ಅತ್ಯಂತ ರೋಚಕವಾಗಿಯೇ ಪ್ರಕಟಿಸಿದ್ದಾರೆ. ಕನ್ನಡ ಜನರ ಆಚಾರ-ವಿಚಾರ, ಸ್ವಭಾವ, ರೀತಿ-ನೀತಿ, ಮಠಮಾನ್ಯ ಪೀಠಾಧಿಪತಿಗಳ ಉಪಟಳ, ಆಸ್ತಿಗಾಗಿ ಸ್ಪರ್ಧಿಗಳ ತಂತ್ರ-ಕುತಂತ್ರ, ಬಡಿದಾಟ, ಅಬಲೆಯರ ದೌರ್ಜನ್ಯ ಮುಂತಾದ ಸಮಕಾಲೀನ ಮತ್ತು ಸರ್ವಕಾಲಿಕ ವಿಚಾರಗಳನ್ನು ಅವರ ಕಾದಂಬರಿಗಳಲ್ಲಿ ಕಾಣುತ್ತೇವೆ.

'ಸುಶೀಲೆ' ಕಾದಂಬರಿಯಲ್ಲಿ ನೀಳ್ಗತೆಯಂತೆ ಕಾಣುವ ಶೈಲಿಯನ್ನು ನೋಡಬಹುದು. ಯಾವುದೇ ಪಾತ್ರ ಪೂರ್ಣವಾಗಿ ಬೆಳೆವಣಿಗೆ ಹೊಂದುವುದಿಲ್ಲ. ಲೇಖಕಿಯ ಸಂಕಲ್ಪದಂತೆ ಕೆಟ್ಟ ಪಾತ್ರಗಳೆಲ್ಲಾ ಒಳ್ಳೆಯವಾಗಿವೆ. ಸುಶೀಲೆ ಒಳ್ಳೆಯವಳಾದರೆ, ಚಂಚಲೆ ಕೆಟ್ಟವಳೂ. ಅವಳು ಏಕೆ ಕೆಟ್ಟವಳು? ಕಾರಣವೇನು ಎಂಬ ಅಂಶ ಕಾದಂಬರಿಯ ಚೌಕಟ್ಟಿನಲ್ಲಿ ಗೊತ್ತಾಗುವುದಿಲ್ಲ. ಎಲ್ಲಾ ಪಾತ್ರಗಳು ಲೇಖಕಿಯ ಕೈಗೊಂಬೆಗಳಾಗಿ ಅವರ ಧೋರಣೆಯನ್ನು ಉಪನ್ಯಾಸ ಕೊಡುವುದರ ಮೂಲಕ ಅಭಿವ್ಯಕ್ತಿಸಿ, ಕಥೆಯ ಬೆಳವಣಿಗೆಗೆ ಸಹಕಾರ ನೀಡುತ್ತದೆ.

ಲೇಖಕಿಯು ಉದ್ದುದ್ದ ಉಪದೇಶಗಳ ಮೂಲಕ ಕಾದಂಬರಿಯ ಶೈಲಿ ಹೆಣೆಯಲಾಗಿದೆ. ಭಾಷೆಯಲ್ಲಿ ನಿರಾಯಸವಾಗಿ ಓದಿಸಿಕೊಂಡು ಹೋಗುವ ಶೈಲಿ ಕಾಣಬಹುದು.

'ನಭಾ ಮತ್ತು ವಿರಾಗಿಣಿ' ಕಾದಂಬರಿಯಲ್ಲಿ ಆಕಸ್ಮಿಕವಾಗಿ ಅರಸಿನ ಕುಂಕುಮದ ಸೌಭಾಗ್ಯವನ್ನು ಕಳೆದುಕೊಂಡ ನತದೃಷ್ಟ ಭಗಿನಿಯರು ಭೂಮಿಗೆ ಭಾರವಾಗದೆ ಸಮಾಜಸೇವೆಯನ್ನು ಮಾಡುತ್ತಾ ಹೇಗೆ ಬದುಕಬಹುದು ಎಂಬುದರ ಸುಂದರ ಚಿತ್ರಣ ವಿರಾಗಿಣಿ ಕಾದಂಬರಿಯದು. ನಭಾ ಕಾದಂಬರಿ ಬಾಲವಿಧವೆಯಾದ ಕಥಾನಾಯಕಿ, ವಿರಾಗಿಣಿಯಾಗಿ ಪರಿವರ್ತನೆಗೊಂಡು ಸಮಾಜದಲ್ಲಿ ಒಂದು ಗೌರವ ಸ್ಥಾನವೆನಿಸಿಕೊಳ್ಳುವ ಕಥೆಯಲ್ಲಿ ತೆಗೆದುಕೊಳ್ಳುವ ನಿರ್ಧಾರಗಳು, ಲೇಖಕಿಯ ಧೋರಣೆಗಳಿಗೆ ಕನ್ನಡಿ ಹಿಡಿದಿವೆ. ಕಾದಂಬರಿಯಲ್ಲಿ ನೆರೆ-ಹೊರೆಯವರ ಹಿಂಸೆ, ದೌರ್ಜನ್ಯ, ದಬ್ಬಾಳಿಕೆಗಳನ್ನೆಲ್ಲ ಕಣ್ಣಿಗೆ ಕಟ್ಟುವಂತೆ 'ನಭಾ' ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಇದರಲ್ಲಿ ನೀತಿಬೋಧನೆ, ಸಂಪ್ರದಾಯಿಕ ಪತಿನಿಷ್ಠೆಯ ಬಗ್ಗೆ ಒಲವು ತೋರಿಸುವುದರ ಮೂಲಕ ಪಾತ್ರವನ್ನು ಚಿತ್ರಿಸಿದ್ದಾರೆ ಮತ್ತು ಕಥಾರೂಪಕವಾಗಿ ಪ್ರತಿಪಾದಿಸಿದ್ದಾರೆ. ಸಂಭಾಷಣಾ ಶೈಲಿಯಲ್ಲಿ ನಿರೂಪಕರು ನಿರೂಪಣೆ ಮಾಡಿದ್ದಾರೆ.

"ನಭಾ – ಅಮ್ಮ; ಮೈಲಿಗೆಯು ತಲೆಯ ಕೂದಲಿನಲ್ಲಿಲ್ಲ, ಅವಿರುವುದು ಮನಸ್ಸಿನಲ್ಲಿ.

ಶರಾವತಿ – ಅಹುದಹುದು; ಶಾಸ್ತ್ರವೇ ಸುಳ್ಳು, ಶಾಸ್ತ್ರವನ್ನು ಬರೆದವರು ದಡ್ಡರು."[೯೯]

ಇಲ್ಲಿ ಲೇಖಕಿಯ ಆಲೋಚನೆಯ ದಾಟಿಯನ್ನು ನಿರೂಪಿಸಿರುವುದು ಶ್ಲಾಘನೀಯ. ಕಥೆಯ ಪರಿಸರ, ಪಾತ್ರಗಳ ಹೆಸರುಗಳಲ್ಲಿ ಪ್ರಾದೇಶಿಕತೆಯಿದ್ದು, ಓದುಗರಿಗೆ ಬೇಸರ ತರಿಸುವುದಿಲ್ಲ.

'ವಿದ್ಯುಲತಾ' ಮತ್ತು 'ಮಣಿಮಾಲಾ' ಕಾದಂಬರಿಗಳಲ್ಲಿ ಪ್ರಕಟವಾಗಿರುವ ಕಥೆ ಒಂದೇಯಾಗಿದೆ. ಲೇಖಕಿಯ ಕಲ್ಪನೆಯ ಆದರ್ಶಗಳಿಗೆ ಅನುಗುಣವಾಗಿ ಪಾತ್ರಸೃಷ್ಟಿ, ಸಂಸ್ಕೃತ ಪದಗಳ ಬಳಕೆ ಅತಿಯಾಗಿದೆಯಾದರೂ ಆಕರ್ಷಕವಾಗಿ ಕಣ್ಣಿಗೆ ಕಟ್ಟುವಂತೆ ಬರೆದಿದ್ದಾರೆ. ಮಣಿಮಾಲಾ ಕಾದಂಬರಿಯಲ್ಲಿ ಹೆಜ್ಜೆ ಹೆಜ್ಜೆಗೂ ಮುಂದೇನಾಗುತ್ತದೆ ಎಂಬ ಕುತೂಹಲವನ್ನು ಕೆರಳಿಸುತ್ತಾ ಕಥೆ ಹೇಳುವ ಕಲೆ ಲೇಖಕಿಗೆ ಕರಗತವಾಗಿದೆ.

ಕಥಾ ನಿರೂಪಣಾ ತಂತ್ರ ಸುಂದರವಾಗಿ ಚಿತ್ರಿತವಾಗಿದೆ. ಹಣಕ್ಕಾಗಿ ಊರಿನ ಆಸ್ತಿವಂತನೂ ಗಣ್ಯನೂ, ಮುದುಕನೂ ಆದ ವ್ಯಕ್ತಿಯನ್ನು ಅಪಹರಿಸಿ ಇಂಥ ಕಡೆ ಇಂತಿಷ್ಟು ಹಣವನ್ನು ಈ ದಿನದೊಳಗೆ ನೀಡಿದರೆ ಜೀವ ಸಹಿತ ಸೋದರಳಿಯನ ಆಸ್ತಿಪಾಸ್ತಿಯನ್ನೆಲ್ಲ ಗಂಡುಮಕ್ಕಳೇ ಇಲ್ಲದ ಮಣಿಮಾಲೆಯ ತಾಯಿ ಲಪಟಾಯಿಸುವುದು. ಬಾಲ್ಯದಿಂದಲೂ ಗಂಡ-ಹೆಂಡಿರೆಂದು ಛೇಡಿಸುತ್ತಿದ್ದವರು ಸಮಯ ಬಂದಾಗ ಸಂಬಂಧವನ್ನೇ ಮರೆತು ಶ್ರೀಮಂತ ಗಂಡ-ಹೆಂಡಿರೆಂದು ಮದುವೆ ಮಾಡುವುದು, ತನಗಾಗಿ ಮೀಸಲಿದ್ದ ಹೆಣ್ಣನ್ನು ಮತ್ತೊಬ್ಬ ಅದರಲ್ಲಿಯೂ ಗೆಳೆಯ ಮದುವೆಯಾದಾಗ ಅಸಹನೆಯಿಂದ ಕುದಿದು, ಮನುಷ್ಯತ್ವವನ್ನೇ ಮರೆತು ಮೃಗವಾಗಿ ವಿವಾಹಿತ ಹೆಣ್ಣನ್ನೇ ಅಪಹರಿಸುವುದು, ತನ್ನ ಆಸ್ತಿಯನ್ನೆಲ್ಲಾ ಕಿತ್ತುಕೊಂಡು ಮಗಳನ್ನೂ ಕೊಡದೇ ಮತ್ತೊಬ್ಬರಿಗೆ ಮದುವೆ ಮಾಡಿದ ಅತ್ತೆ ಇದ್ದ ಮನೆಗೆ ಬೆಂಕಿ ಹೊತ್ತಿಸಿ, ಜೀವ ಸಹಿತ ಸುಟ್ಟು ಹೋಗುವಂತೆ ಮಾಡುವುದು ನಿರೂಪಣಾ ದೃಷ್ಟಿಕೋನದಿಂದ ಮಹತ್ವವಾಗಿದೆ. ಬರೆಯಬೇಕಾಗಿರುವ ಸನ್ನಿವೇಶ, ಪರಿಸರಗಳ ಸ್ಪಷ್ಟಕಲ್ಪನೆ ಲೇಖಕಿಗಿದ್ದು, ಓದುಗರಿಗೆ ಗೊಂದಲವಾಗದಂತೆ ನಿರೂಪಿಸುತ್ತಾರೆ. ಪರಿಸರದ ವರ್ಣನೆಯ ಜೊತೆಯಲ್ಲಿ ಸುವ್ಯಕ್ತವಾಗುತ್ತದೆ. ಗೋಪಿನಾಥರ ಅಪಹರಣವಾದ ನಂತರ ಆನಂದ ಭವನದ ಸ್ಥಿತಿ ಹೇಗಿತ್ತು ನೋಡಿ. ಪ್ರಾತಃಕಾಲದ ವರ್ಣನೆಯೊಡನೆ ಮೂಡಿ ಬಂದಿರುವ ರೀತಿ ಮೆಚ್ಚುವಂತಹದು.

"ಅರುಣೋದಯವಾಗಿದ್ದಿತ್ತು; ಹಿರಿಯರಲ್ಲಿ ಕೆಲವರು ಎದ್ದು ಪ್ರಾತಃ ಕೃತ್ಯಗಳಿಗಾಗಿ ಹೊರ ಹೊರಡುತ್ತಿದ್ದರು....."[೨೦] ಪ್ರಾಸಪೂರ್ಣವಾಗಿ ಬರೆಯುವುದೆಂದರೆ ಅಚ್ಚುಮೆಚ್ಚು. ನಾಟಕೀಯವಾಗಿ ಪದಗಳಲ್ಲಿ ಲಾಲಿತ್ಯ ತರಲು ಹೆಣಗಾಡುವುದು, ಅಲ್ಪ ವಿರಾಮ, ಆಶ್ಚರ್ಯ ಚಿಹ್ನೆಗಳನ್ನು ಭಾವನೆಗೆ ಕಾವು ತರಲು ಪ್ರಯತ್ನಿಸುವುದು, ಕೆಲವು ಕಡೆ ಸಹಜವಾಗಿ ಕಂಡುಬಂದ ಸೊಗಸೆನ್ನಿಸಿದರೂ ಬಹಳ ಕಡೆ ಕೃತಕತೆಯಂತೆ ಕಾಣುತ್ತದೆ. ಸಂಭಾಷಣೆಯಿಂದ ನಿರೂಪಿಸಿರುವುದು ಕಥೆಯ ಓಟಕ್ಕೆ ಪೂರಕವಾಗುವ ಹಾಗೆ ಪಾತ್ರಗಳಿಂದ ಮಾತನಾಡಿಸುವ ಚಾಕಚಕ್ಯತೆ,

ಸಂಭಾಷಣೆಯಲ್ಲಿ ಪ್ರಶ್ನೋತ್ತರದ ಜೊತೆಗೆ ವಿಚಾರ ಗಾಂಭೀರ್ಯ ಮಹತ್ತರವಾದವು. ಒಂದು ವಿಚಾರ, ವಿಚಾರದ ವಿಶ್ಲೇಷಣೆ, ಅದಕ್ಕನುಗುಣವಾದ ಪದ ಪ್ರಯೋಗಗಳು ಇಲ್ಲಿನ ವಿಶೇಷ ತನಿಖೆ ಮಾಡುವ ಪರಿಯನ್ನು ಚಿಕ್ಕ, ಚೊಕ್ಕ ಪ್ರಶ್ನೋತ್ತರದ ಶೈಲಿಯ ತುಣುಕು ಮಹತ್ವದೆನಿಸುತ್ತದೆ.

"ಶಚಿ : ಅಯ್ಯ ನೀನಿಲ್ಲಿಗೆ ಬಂದುದ್ದು ಯಾವಾಗ?

ತರಣ : ನಾವೀವೂರಿಗೆ ಬಂದು ನಾಲ್ಕೈದು ದಿವಸಗಳಾದವು.

ಶಚಿ : ನಿನ್ನ ಹೆಸರೇನು?

ತರಣ : ನನ್ನನ್ನು ನವೀನ ಗೋಪಾಲನೆಂದು ಕರೆಯುವರು.

ಶಚಿ : ನಿನ್ನ ವಯಸ್ಸೆಷ್ಟು?"[೨೧]

ನಾಟಕೀಯವಾಗಿ ಬರೆಯುವುದರ ಜೊತೆಗೆ ಹಾಸ್ಯಪೂರ್ಣವಾಗಿಯೂ, ಗಂಭೀರವಾಗಿಯೂ, ಸಂಭಾಷಣೆಯನ್ನು ಲೇಖಕಿ ನಿರೂಪಿಸುತ್ತಾರೆ. ಮಾತಿನಿಂದ ಮಾತಿಗೆ, ಪುಟದಿಂದ ಪುಟಕ್ಕೆ ಓದುಗರ ಕೌತುಕವನ್ನು ಕೆರಳಿಸುತ್ತಾ ಹೋಗುವ ಕತೆ ಸ್ವಾರಸ್ಯಕರವಾಗಿದೆ.

'ಮಾತೃ ನಂದಿನಿ', ಮತ್ತು 'ಪೂರ್ಣಕಲಾ' ಕಾದಂಬರಿಯಲ್ಲಿ ಸನ್ನಿವೇಶ ಸಂದರ್ಭವನ್ನು ಕಣ್ಣಿಗೆ ಕಟ್ಟುವಂತೆ ವರ್ಣನೆ ಮಾಡುವ ಪ್ರತ್ಯಕ್ಷ ವರದಿಯನ್ನು ಓದುಗರಿಗೆ ಬೇಸರವಾಗದಂತೆ ನೀಡುವ ಜಾಣ್ಮೆ ಲೇಖಕಿಗೆ ಕರಗತ. ಸಂಬೋಧನೆಗಳು, ವ್ಯಂಗ್ಯಗಳು ಬರವಣಿಗೆಯಲ್ಲಿ ಕಾಣಬಹುದು. ಕುತೂಹಲಕಾರಿಯಾಗಿ ನಿರೂಪಿಸಿಕೊಂಡು ಹೋಗುತ್ತಾರೆ. ವಿಷಯ ಓದುಗನಿಗೆ ಗೊತ್ತಾದ ಮೇಲೆ ವಿವರಿಸಿ ನಿಧಾನವಾಗಿ ಮುಕ್ತಾಯದತ್ತ ಹೆಜ್ಜೆ ಹಾಕುತ್ತಾರೆ.

'ಪೂರ್ಣಕಲೆ' ಕಾದಂಬರಿಯಲ್ಲಿ ಕಥೆ ಸಾಮಾಜಿಕವಾದರೂ ಪೌರಾಣಿಕ ಗುರುಕುಲಾಶ್ರಮದ ನೆನಪು ತರುವಂತೆ ಭಾಸವಾಗುತ್ತದೆ. ಕಾಲೇಜು, ಹಾಸ್ಟೆಲ್, ಕುಡಿತ, ಕುಣಿತಗಳ ವರ್ಣನೆ ಇಂದಿನ ಕಥೆಗಳ ನೆನಪು ತರುತ್ತವೆ.

**ಕಲ್ಯಾಣಮ್ಮನವರ ಕಾದಂಬರಿಯಲ್ಲಿ ಭಾಷೆ, ಶೈಲಿ, ತಂತ್ರ, ನಿರೂಪಣಾ ವಿಧಾನ**

ಕಲ್ಯಾಣಮ್ಮನವರು ಅನೇಕ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರಿಂದ ಕಾದಂಬರಿ ಮೂಲಕ ಪ್ರಚಲಿತ ವಿದ್ಯಮಾನಗಳ ವಿಶ್ಲೇಷಣೆಯನ್ನು ಸಂದರ್ಭೋಚಿತವಾಗಿ, ನಿದರ್ಶನಗಳೊಂದಿಗೆ ವಿವರಣೆ, ವಿಶ್ಲೇಷಣೆ, ಸಂಭಾಷಣೆ ಮೂಲಕ ಕಥೆಯನ್ನು ಹಿಡಿದಿಟ್ಟಿರುವ ಶೈಲಿಯು ಅತ್ಯುನ್ನತ ಹಾಗೂ ಅವರ ನಿರೂಪಣಾ ವಿಧಾನವು ಪಾತ್ರಗಳ ಮೂಲಕ ಮುಖಾಮುಖಿ ಯಾಗಿಸಿರುವುದನ್ನು ನೋಡಬಹುದು.

'ನಿರ್ಭಾಗ್ಯ ವನಿತೆ ಅಥವಾ ಇಂದಿರೆ' ಈ ಕಾದಂಬರಿಯಲ್ಲಿ ವಿಧವಾ ಸಮಸ್ಯೆಯನ್ನು ವಿಶ್ಲೇಷಿಸಿರುವುದನ್ನು ನೋಡಬಹುದು. ತನ್ನ ಪತಿ ಎನಿಸಿಕೊಂಡವನು ಗತಿಸಿದಾಗ ಹೇಗೆ ಪ್ರತಿಕ್ರಿಯಿಸಬೇಕೆಂದೇ ತಿಳಿಯದ ಬಾಲಕಿ ಇಂದಿರೆ. ಅವರಿವರ ಕುಹಕ ಮಾತು ನೋಟಗಳಿಗೀಡಾಗ ಬೇಕಾಗುವುದು, ತಾಯಿಯ ಮನೋವ್ಯಥೆಗೆ ಕಾರಣವಾಗುತ್ತದೆ. ಈ ಭಾಗದಲ್ಲಿ ಇಂದಿರೆ ಮತ್ತು ಅವಳ ತಾಯಿ ನಡುವಣ ಸಂಭಾಷಣೆ, ವಿಧವೆ ಹೂ ಮುಡಿದುಕೊಳ್ಳುವ, ಮುಡಿಯಬಾರದ ಬಗೆಗೆ ನಾರಾಯಣ ಸತ್ತ ಕಾರಣದಿಂದ ಅಲಂಕಾರ ಮಾಡಿಕೊಳ್ಳಕೂಡದು, ತಲೆಗೂದಲನ್ನು ತೆಗೆಸಿ ಬಿಡುವುದು"[೨೨] ಇವರಿಬ್ಬರ ಸಂಭಾಷಣಾ ವಿಧಾನದ ಮೂಲಕ ನಿರೂಪಣೆಯನ್ನು ಗಮನಿಸಬಹುದಾಗಿದೆ. ಕಲ್ಯಾಣಮ್ಮನವರೂ ಆದರ್ಶ ಸ್ತ್ರೀಯ ಕಲ್ಪನೆಯನ್ನು ಮಾಡಿಕೊಳ್ಳುತ್ತಾರೆ. ಆದರೆ ತಿರುಮಲಾಂಬಾ ಅವರಂತೆ ಇವರು ಸ್ತ್ರೀಯ ಸಂಕಲ್ಪ ಶಕ್ತಿಯನ್ನು ತೀರ್ಪಿಸುವುದಿಲ್ಲ. ತಮ್ಮ ಸಮಕಾಲೀನ ಸಮಾಜದಲ್ಲಿ ಸ್ತ್ರೀಗೆ ಒದಗುವ ದುಃಖ, ಕಷ್ಟಗಳನ್ನು ಜಾಣ್ಮೆಯಿಂದ ಎದುರಿಸಬೇಕು ಎನ್ನುವ ಧೋರಣೆ ಕಲ್ಯಾಣಮ್ಮನವರ ಈ ಕಾದಂಬರಿಯಲ್ಲಿ. ಭಾವಾವೇಶವಿಲ್ಲದ ಸರಳ ಸಂಸಾರ ಚಿತ್ರಗಳಿಂದ ಅವರು ಕೃತಿ ರಚಿಸಿರುವರು. ತಮಗೆ ಒಲ್ಲದ ಆಯ್ಕೆಗಳನ್ನು ಮಾಡುವುದರಿಂದ ಈ ಗಂಡು ಹೆಣ್ಣು ಅನುಭವಿಸಬೇಕಾಗಿರುವ ಕಷ್ಟ ನಿಷ್ಠುರದ ವಾಸ್ತವವನ್ನು ಲೇಖಕಿ ಸರಳ ಸಂಕೇತವಾಗಿ ಪರಿವರ್ತಿಸುತ್ತಾರೆ. ಇಲ್ಲಿ ಇಂದಿರೆ ವಿವಾಹವಾಗುವ ನಾರಾಯಣ ಪೆದ್ದನಾಗಿಯೂ, ಸುಂದರೇಶ ವಿವಾಹವಾಗುವ ಕೃಷ್ಣೆ ಕ್ರೂರಿಯಾಗಿಯೂ ಚಿತ್ರಿಸಲ್ಪಟ್ಟಿದ್ದಾರೆ. ಆದರ್ಶ ಪಾತ್ರಗಳಿಗೆ ಮುಖಾಮುಖಿಯಾಗುವ ಪಾತ್ರ, ಸನ್ನಿವೇಶಗಳು ಯಾವಾಗಲೂ ತದ್ವಿರುದ್ಧ ನೆಲೆಯನ್ನು ಮಾತ್ರ ತೋರಿಸುವಂತೆ ಕಾದಂಬರಿಯ ವಿನ್ಯಾಸವನ್ನು ಗುರುತಿಸಬಹುದು.

'ಸುಖಲತಾ'(೧೯೨೭) ಕಾದಂಬರಿಯಲ್ಲಿ ಪ್ರೇಮದ ಮಹತ್ವವನ್ನು ವಿವರಿಸುವುದು ಮುಖ್ಯವಾದುದು. ಐತಿಹಾಸಿಕವೆನ್ನುವ ಕಲ್ಪಿತ ವಾತಾವರಣವನ್ನು ಕಾದಂಬರಿಯಲ್ಲಿ ತರಲಾಗಿದೆ. ದ್ವಿತೀಯ ವಿವಾಹವಾದ ಅಮರಸಿಂಹ, ಎರಡನೆಯ ವಶವರ್ತಿಯಾಗಿ ಸುಖಲತಾಳನ್ನು ಕೋಡಂಗಿಯಂತಹ ರಾಜ ಪುತ್ರನಾದ ಬೆಪ್ಪು ಮಾನಸಿಂಹನಿಗೆ ವಿವಾಹ ಮಾಡಲು ಯತ್ನಿಸುವುದು, ಧೀರನಾದ ಸರ್ದಾರ್‌ಸಿಂಹ ಸುಖಲತಾಳನ್ನು ಅಪಹರಿಸಿ ವಿವಾಹವಾಗುವುದು ಚಿತ್ರಿತವಾಗಿದೆ. ಐತಿಹಾಸಿಕ ಕಲ್ಪಿತ ವಾತಾವರಣವಿದ್ದರೂ ಕಾದಂಬರಿಯು ಶೈಲಿಯಿಂದ ತನ್ನ ಸಮಕಾಲೀನ ವಾಸ್ತವದ ಪ್ರತಿಮೆಯಾಗಿದೆ. ಉದಾ: ಕಾದಂಬರಿಯಲ್ಲಿ ಬರುವ ಒಂದು ಮಾತು ಹೀಗಿದೆ.

"ರೀತಿಯಾದ ದೃಶ್ಯವು ನಮ್ಮ ದಿನ ನಾಟಕಗಳಲ್ಲೆಷ್ಟನ್ನೋ ನಾವು ಕಾಣಬಹುದು. ವಿಷಯಾಸಕ್ತರಾದ ವೃದ್ಧರು, ಪುನರ್ವಿವಾಹವಾಗುವುದು, ಇದರಿಂದ ಸಪತ್ನಿ ಸಪುತ್ರಿ, ಮಾತ್ಸರವು ಹೆಚ್ಚಾಗಿ, ತಾನಿದರ ಕಾರಣವನ್ನು ಅರಿತಿದ್ದರೂ ಪತ್ನಿಯ ಕಡೆಗೂ ಮಾತನಾಡಲಾರದೆ, ಪುತ್ರಿಯ

ಕಡೆಗೂ ಮಾತನಾಡಲಾರದೆ ಧರ್ಮ ಸಂಕಟದಲ್ಲಿ ಸಿಕ್ಕಿ ಬಿದ್ದು ಒದ್ದಾಡುವ ವ್ಯಕ್ತಿಗಳೆಷ್ಟನ್ನು ನಾವೀಗಲೂ ನೋಡಬಹುದು."[೨೩]

ಇವರಲ್ಲಿಯೂ ತಿರುಮಲಾಂಬಾರಂತೆ ಕೆಲಮಟ್ಟಿಗೆ ಮೃದು ಮಧುರವಾದ ಮಾತುಗಳಿಂದ ಶಾಂತಾ ಸಮ್ಮಿತಿಯೋ ಎಂಬಂತೆ ಕಥೆಯನ್ನು ಹೇಳಿ ಓದುಗರನ್ನು ಆಕರ್ಷಿಸಿಕೊಂಡು ಅವರ ಅಭಿರುಚಿಯನ್ನು ಉತ್ತಮಗೊಳಿಸಿದರು, ಸಾಮಾಜಿಕ ವಿಮರ್ಶೆ, ನೀತಿಬೋಧನೆ, ಇವರ ಶೈಲಿಯ ಮುಖ್ಯ ಅಂಶ. ಇವರ ಭಾಷೆ ವಿಡಂಬನೆಯಿಂದ ಸಾಗಿರುವುದು ನೋಡಬಹುದು. ಕುತೂಹಲಕಾರಿಯಾಗಿ ನಿರೂಪಿಸಿರುವುದು ಕಾಣುತ್ತೇವೆ. ಪಾತ್ರಗಳ ಸ್ವಭಾವ ಚಿತ್ರಣದಲ್ಲಿ ತಮ್ಮ ವೈಚಾರಿಕತೆಯನ್ನು ಕಲ್ಯಾಣಮ್ಮ ತೋರಿಸುತ್ತಾರೆ. ಸುಖಲತೆ ಪದ್ಮಲತೆಯರು ಮಾನಸಿಂಹನನ್ನು ಕೀಟಲೆ ಮಾಡುವ ಪ್ರಸಂಗ, ಅಪಹೃತಳಾದ ಸುಖಲತೆ ಮತ್ತೆ ದೊರೆವ ಪ್ರಸಂಗ ಬಹು ಕುತೂಹಲಕಾರಿಯಾಗಿ ನಿರೂಪಿಸಿದ್ದಾರೆ.

**ಕೊನೆಟಿಪ್ಪಣಿಗಳು**

೧. ಮಹೇಶ ಆರ್., **'ತರಾಸು ಕಾದಂಬರಿಗಳಲ್ಲಿ ಸ್ತ್ರೀ ಸಂವೇದನೆ'**, ಪು.೧೮೯.

೨. ನಾರಾಯಣ ಕೆ.ವಿ., **'ಬೇರು ಕಾಂಡ ಚಿಗುರು'**, ಪು.೨೮೧.

೩. ಗುಲ್ವಾಡಿ ವೆಂಕಟರಾಯ, **'ಇಂದಿರಾಬಾಯಿ'**, ಪು.೪೫.

೪. ಅದೇ, ಪು.೭೪.

೫. ಪುಟ್ಟಣ್ಣ ಎಂ.ಎಸ್., **'ಮಾಡಿದುಣ್ಣೊ ಮಹಾರಾಯ'**, ಪು.೧೨೬.

೬. ಮಿರ್ಜಿ ಅಣ್ಣಾರಾಯ, **'ನಿಸರ್ಗ'**, ಪು.೫

೭. ಅಮೂರ ಜಿ.ಎಸ್., **'ಕನ್ನಡ ಕಥನ ಸಾಹಿತ್ಯ, ಕಾದಂಬರಿ'**, ಪು.೯೫.

೮. ಭಗವಾನ್ ಕೆ.ಎಸ್., **'ಶ್ರೀ ಕುವೆಂಪು ಅವರ ಗದ್ಯ'**, ಪು.೧೪೧.

೯. ಕುವೆಂಪು, **'ಕಾನೂರು ಹೆಗ್ಗಡಿತಿ'**, ಪು.೪೧೩.

೧೦. ಶಿವರಾಮ ಕಾರಂತ, **'ಜೋಮನದುಡಿ'**, ಪು.೨೩.

೧೧. ಅದೇ, ಪು.೧೦.

೧೨. ಅದೇ, ಪು.೧೩.

೧೩. ಅಶೋಕ ಟಿ.ಪಿ.(ಸಂ), **'ಶಿವರಾಮಕಾರಂತ'**, ಪು.೯೫.

೧೪. ಸುನಿತಾಶೆಟ್ಟಿ, **‘ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಸ್ತ್ರೀ’**, ಪು.೨೩೩.

೧೫. ಮೀರಾ ಎಲ್.ಜಿ., **‘ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ’**, ಪು.೩೮.

೧೬. ಕಾರಂತ, **‘ಮರಳಿ ಮಣ್ಣಿಗೆ’**, ಪು.೬೨.

೧೭. ಅಶೋಕ ಟಿ.ಪಿ., **‘ಶಿವರಾಮ ಕಾರಂತ’**, ಪು.೧೨೭.

೧೮. ಸುನೀತಶೆಟ್ಟಿ, **‘ಶಿವರಾಮಕಾರಂತ ಕಾದಂಬರಿಗಳಲ್ಲಿ ಸ್ತ್ರೀ’**, ಪು.೨೫.

೧೯. ಅರ್ಜುನಪುರಿ ಅಪ್ಪಾಜಿಗೌಡ, **‘ತಿರುಮಲಾಂಬಾ ಒಂದು ಅಧ್ಯಯನ’**, ಪು.೮೭.

೨೦. ಅದೇ, ಪು.೧೨೧.

೨೧. ತಿರುಮಲಾಂಬಾ, **‘ಮಣಿಮಾಲಾ’**, ಪು.೧೫.

೨೨. ಗೀತಾ ಪ್ರಸಾದ್, **‘ಸ್ವಾತಂತ್ರ್ಯಪೂರ್ವ ಮಹಿಳಾ ಸಾಹಿತ್ಯ ಸ್ವರೂಪ ಮತ್ತು ತಾತ್ವಿಕತೆ’**, ಪು.೭೪.

೨೩. ಕಲ್ಯಾಣಮ್ಮ ಆರ್., **‘ಸುಖಲತಾ’**, ಪು.೯

ಅಧ್ಯಾಯ ಹನ್ನೆರಡು

# ಸಮಾರೋಪ ಮತ್ತು ಫಲಿತಗಳು

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾದಂಬರಿಯು ಹೆಚ್ಚು ಜನಪ್ರಿಯವು ಮತ್ತು ಗಂಭೀರವೂ ಆದ ಸಾಹಿತ್ಯ ಪ್ರಕಾರವಾಗಿದೆ. ಈ ಕಾರಣದಿಂದ ಕಡಿಮೆ ಅವಧಿಯಲ್ಲಿಯೇ ಕನ್ನಡದಲ್ಲಿ ಹೆಚ್ಚು ಕಾದಂಬರಿಗಳು ಪ್ರಕಟವಾಗಿವೆ. ಭಾರತೀಯ ಸಂದರ್ಭದಲ್ಲಿ ಸ್ವಾತಂತ್ರ್ಯಪೂರ್ವ ಕಾಲಘಟ್ಟವು ಅತ್ಯಂತ ಮಹತ್ವದ್ದಾಗಿದೆ. ಈ ಕಾಲದಲ್ಲಿ ರಚನೆಯಾದ ಕಾದಂಬರಿಗಳಲ್ಲಿ ಸಮಾಜವನ್ನು ತಿದ್ದುವ ಮತ್ತು ಮುನ್ನಡೆಸುವ ಬಗ್ಗೆ ಚಿಂತನೆಗಳು ಪ್ರಕಟವಾಗಿವೆ. ಇಂಗ್ಲಿಷ್ ಭಾಷೆಯ ಸಂಪರ್ಕದಿಂದಾಗಿ ಸಣ್ಣಕಥೆ ಮತ್ತು ಕಾದಂಬರಿಯಂತಹ ಗದ್ಯಸಾಹಿತ್ಯದ ಪ್ರಕಾರಗಳು ಕನ್ನಡ ಭಾಷೆಯಲ್ಲಿ ರೂಪುಗೊಂಡವು. ವಿಶೇಷವಾಗಿ ಕಾದಂಬರಿ ಪ್ರಕಾರವು ಉಳಿದ ಸಾಹಿತ್ಯ ಪ್ರಕಾರಗಳಿಗಿಂತ ಜನಪ್ರಿಯ ಮಾಧ್ಯಮವಾಗಿ ಬೆಳೆಯಲು ಸಾಧ್ಯವಾಯಿತು. ಸಂಸ್ಕೃತಿ ದೃಷ್ಟಿಯಿಂದಲೂ ಈ ಕಾಲಘಟ್ಟವನ್ನು ಸಂಕ್ರಮಣ ಕಾಲವೆನ್ನಬಹುದು. ಹೊರಗಿನ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗಳು ಪಾರಂಪರಿಕ ಜೀವನದ ಮೇಲೆ ಪ್ರಭಾವ ಬೀರಿರುವುದರಿಂದಾಗಿ ಇಲ್ಲಿ ಹೊಸ ಆವಿಷ್ಕಾರಗಳು ತಲೆದೂರಿದವು. ಇದರಿಂದಾಗಿ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಹೊಸ ಸಂಚಲನ ಉಂಟಾಗಿ ಹೆಚ್ಚು ಕಡಿಮೆ ಸ್ವಾತಂತ್ರ್ಯಪೂರ್ವ ಕನ್ನಡ ಕಾದಂಬರಿಗಳು ಸ್ತ್ರೀ ಜೀವನ ಸ್ವರೂಪವನ್ನು ಕೌಟುಂಬಿಕ, ಸಾಮಾಜಿಕ, ಆರ್ಥಿಕ ಅಂಶಗಳು ಒಳಗೊಂಡಿದ್ದು ಆಗಿದೆ ಮತ್ತು ಕಾದಂಬರಿ ಪ್ರಕಾರದ ಉಗಮದ ಹಿನ್ನಲೆಯಲ್ಲಿ ಅದರ ಸಾಮಾಜಿಕ ಸಂದರ್ಭಗಳನ್ನು ಗಮನಿಸುತ್ತಾ ಕನ್ನಡದ ಮೊದಲ ಕಾದಂಬರಿಗಳನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ಅಧ್ಯಯನ ಮಾಡುವುದು ಅತ್ಯಂತ ಫಲಪ್ರದವಾಗಿದೆ.

ಸ್ತ್ರೀ ಸುಧಾರಣೆಯ ಕುರಿತಾದ ಕಲ್ಪನೆಯಲ್ಲಿ ಭಿನ್ನಾಭಿಪ್ರಾಯವಿದ್ದು, ಕೆಲವರಿಗೆ ಸುಧಾರಣೆ ಎಂದರೆ ಪಾಶ್ಚಾತ್ಯ ಮಾದರಿಯ ಸುಧಾರಣೆ. ಇನ್ನು ಕೆಲವರಿಗೆ ನಮ್ಮದೆ ಪ್ರಾಚೀನ ಪರಂಪರೆಯ ಪುನರುಜ್ಜೀವನ. ಸೀತೆ ಸಾವಿತ್ರಿಯಂಥವರ ಆದರ್ಶವನ್ನು ಮೈಗೂಡಿಸಿಕೊಳ್ಳುವುದೇ ಸುಧಾರಣೆ.

ಮತ್ತೆ ಕೆಲವರಿಗೆ ನಮ್ಮ ಪರಂಪರೆಯ ಹಾಗೂ ಪಾಶ್ಚಾತ್ಯ ಸಮನ್ವಯದಿಂದ ಮಾಡಿದ ಸ್ವರೂಪವೇ ಸುಧಾರಣೆ. ಈ ಭಿನ್ನಾಭಿಪ್ರಾಯಗಳ ತಿಕ್ಕಾಟದ ಪ್ರತಿಧ್ವನಿಯನ್ನು ಕಾದಂಬರಿಗಳ ಅಧ್ಯಯನವು ತೋರಿಸುತ್ತದೆ. ಹಾಗೆಯೇ ಆದರ್ಶ ಮತ್ತು ವಾಸ್ತವ, ಸಂಪ್ರದಾಯ ಮತ್ತು ಆಧುನಿಕತೆಯ ನಡುವಿನ ಸಂಘರ್ಷವನ್ನು ಕುರಿತಾದ ಅಂಶಗಳನ್ನು ಗುರುತಿಸಲಾಗಿದೆ. ಒಟ್ಟಾರೆಯಾಗಿ ಕನ್ನಡದ ಮೊದಲ ಕಾದಂಬರಿಗಳು ಸ್ತ್ರೀವಾದಿ ಅಭ್ಯಾಸಕ್ಕೆ ಅತ್ಯಂತ ಯೋಗ್ಯವಾಗಿದೆ. ಅವು ಬಹುಪಾಲು ಸ್ತ್ರೀಯರ ಕುರಿತಾಗಿ, ಸ್ತ್ರೀಯರಿಗಾಗಿ ಬರೆದವುಗಳಾಗಿವೆ. ಎನ್ನಬಹುದು.

ಮೊದಲ ಕಾದಂಬರಿಕಾರ್ತಿಯರು ಮಹಿಳೆಯರನ್ನು ಕುರಿತು ಬರೆದ ರೀತಿ, ಲೇಖಕರಿಗಿಂತ ಭಿನ್ನವಾಗಿಸುತ್ತದೆ. ಲೇಖಕಿ ತಿರುಮಲಾಂಬಾ ಅವರ ಕಾದಂಬರಿಯಲ್ಲಿ ಸಂಪ್ರದಾಯಿಕ ಮನೋಧರ್ಮವನ್ನು ಕಾಣಬಹುದು. ಆದರೆ ಲೇಖಕಿಯು ಉಳಿದ ಕಾದಂಬರಿಗಳಲ್ಲಿ ಕಾಣಿಸಿದ ಬಗೆಯ ವಿಡಂಬನೆ, ಸುಧಾರಣಾವಾದಿ ನಿಲುವು 'ಮಾತೃನಂದಿನಿ'ಯಲ್ಲಿ ಕಾಣುತ್ತೇವೆ. ಮಹಿಳೆಯ ದುಡಿಮೆಗೆ ಗೌರವ ಹಾಗೂ ಆರ್ಥಿಕ ಸ್ವಾವಲಂಬನೆಯ ಪರವಾಗಿ ಬರೆದ ಕಲ್ಯಾಣಮ್ಮ ವಿಧವಾ ವಿವಾಹದ ಪರವಾಗಿ ತಳೆಯುವ ನಿಲುವಿನಲ್ಲಿ ತಿರುಮಲಾಂಬಾ ಅವರಿಗಿಂತ ಭಿನ್ನರಾಗುತ್ತಾರೆ. 'ಪ್ರಿಯಂವದಾ' ಕಾದಂಬರಿಯಲ್ಲಿ ವರದಕ್ಷಿಣೆ ಸಮಸ್ಯೆ ವಸ್ತುವಾಗಿರುವುದು ಸಾಮಾಜಿಕ ಸಮಸ್ಯೆಗಳ ಬಗ್ಗೆ ಪುರುಷರು ಎಂತೊ ಮಹಿಳೆಯರು ಬರೆದು ಜಾಗೃತಿಗೆ ಶ್ರಮಿಸಿರುವುದು ಕಾಣಬಹುದು. ಶಿವರಾಮಕಾರಂತರ 'ಸರಸಮ್ಮನ ಸಮಾಧಿ' ಕಾದಂಬರಿಯಲ್ಲಿ ಪರಂಪರಾಗತ 'ಆರ್ಯ ಮಹಿಳೆ' ಕಲ್ಪನೆಯಿಂದ ಸಿಡಿದು ನಿಂತ, ಎಚ್ಚೆತ್ತ ಸ್ತ್ರೀ ಪ್ರಜ್ಞೆಯ ಪ್ರತಿನಿಧಿಗಳಾಗಿ ಸುನಾಲಿನಿ ಹಾಗೂ ಭಾಗೀರಥಿಯ ಪಾತ್ರಗಳು ಬರುತ್ತವೆ. ಮಾಸ್ತಿ ಅವರ 'ಸುಬ್ಬಣ್ಣ' ಕಾದಂಬರಿಯಲ್ಲಿ ಪರಂಪರಾಗತ ಭಾರತೀಯ ನಾರಿಯ ಆದರ್ಶವಿದೆ. ಆದರೆ ಬಾಳಿನಲ್ಲಿ ಪರಿಪಕ್ವತೆಗೊಂಡ ಸುಬ್ಬಣ್ಣನು ಪತ್ನಿಯಲ್ಲಿ ದೇವಿಯನ್ನು ಕಾಣುವುದು, ಲೇಖಕರ ಮನೋಧರ್ಮದ ವಿಶಿಷ್ಟತೆಯಾಗಿದೆ. ಕುವೆಂಪು ಅವರ ಕಾನೂರು ಹೆಗ್ಗಡತಿಯಲ್ಲಿ ಹೂವಯ್ಯನನ್ನು ಮದುವೆಯಾಗಲಿಚ್ಛಿಸಿದ ಸೀತೆ, ತನ್ನ ಮೇಲೆ ಬಲವಂತವಾಗಿ ಹೇರಿದ ಅನ್ಯರ ಜೊತೆಗಿನ ಮದುವೆಯನ್ನು ಸರ್ವಥಾ ಒಪ್ಪಿಕೊಳ್ಳದಿರುವುದು ಸ್ತ್ರೀ ಬಂಡಾಯದ ನಿಲುವಾಗಿ ಕಾಣುತ್ತದೆ.

**ಫಲಿತಗಳು**

ಕನ್ನಡ ಕಾದಂಬರಿಕಾರರು ಮಹಿಳೆಯ ಬದುಕಿನ ಬಗೆಗೆ ಮತ್ತು ಆಕೆಯ ಸಮಸ್ಯೆಗಳ ಬಗೆಗೆ ಅವರು ಯಾವ ಬಗೆ ಕಾಳಜಿಗಳನ್ನು ಇರಿಸಿಕೊಂಡಿದ್ದಾರೆ ಎಂಬುದನ್ನು ಕಂಡುಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ. ಈ ಸಂಶೋಧನೆಯಿಂದ ಕಂಡುಕೊಂಡ ಫಲಿತಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

೧. ಕನ್ನಡ ಕಾದಂಬರಿ ಹಾಗೂ ಚಾರಿತ್ರಿಕ ಸಂದರ್ಭವನ್ನು ಗಮನಿಸಿದಾಗ ಬಂಗಾಳದ ಸುಧಾರಣಾವಾದಿ ಚಳುವಳಿಗಳಿಂದ ಮತ್ತು ಮಹಾರಾಷ್ಟ್ರದ ಜನಪರ, ಸ್ತ್ರೀಪರ ಚಿಂತಕರ ಪ್ರಗತಿಪರ ನಿಲುವಿನಿಂದ ಕನ್ನಡದಲ್ಲಿ ಈ ಆಲೋಚನೆಗೆ ಸಹಕಾರಿಯಾಗಿದೆ.

೨. ಭಾರತೀಯ ಸಮಾಜದ ಜ್ವಲಂತ ಸಮಸ್ಯೆಗಳಾಗಿ ತಲೆಯೆತ್ತಿ ನಿಂತಿರುವ ಸ್ತ್ರೀ ಶಿಕ್ಷಣ, ಬಾಲ್ಯವಿವಾಹ, ವಿಧವಾವಿವಾಹ, ವರದಕ್ಷಿಣೆ, ವೈಧವ್ಯ, ಕೇಶಮುಂಡನೆ, ವಿಷಮದಾಂಪತ್ಯ ಇವುಗಳ ನಿವಾರಣೆಗಾಗಿ ಕಾದಂಬರಿಕಾರರು ಮತ್ತು ಕಾದಂಬರಿಕಾರ್ತಿಯರು ಸ್ಪಂದಿಸಿರುವುದನ್ನು ಕಾಣಬಹುದು.

೩. ಪುರುಷ ಹಾಗೂ ಸ್ತ್ರೀಯರಿಂದ ರಚನೆಯಾದ ಸ್ತ್ರೀ ಪ್ರಧಾನ ವಸ್ತುವುಳ್ಳ ಕಾದಂಬರಿಗಳ ದೃಷ್ಟಿಕೋನ ಮೌಲ್ಯವಾಗಿ ಸ್ತ್ರೀ ಸುಧಾರಣೆಯನ್ನು ಉದ್ದೇಶವಾಗಿರಿಸಿಕೊಂಡಿದೆ. ಈ ಕಾಲದಲ್ಲಿ ಕಾದಂಬರಿ ರಚನೆಯಲ್ಲಿ ಪಾಲ್ಗೊಂಡಿದ್ದವರು ಸಾಮಾನ್ಯವಾಗಿ ಮೇಲ್ವರ್ಗದ ಲೇಖಕರಾಗಿದ್ದರಿಂದ ಮೇಲ್ವರ್ಗ ಅಥವಾ ಮಧ್ಯಮ ವರ್ಗದ ಸ್ತ್ರೀಯರ ಸಮಸ್ಯೆಗಳತ್ತ ಲಕ್ಷ ಹರಿಸಿರುವುದು ಗಮನಾರ್ಹವಾಗಿದೆ.

೪. ಕಾದಂಬರಿಕಾರ್ತಿಯರಿಂದ ರಚಿತವಾದ ಕಾದಂಬರಿಗಳಲ್ಲಿ ಸಂಪ್ರದಾಯಿಕ ಬದುಕಿನ ಬಗೆಗೆ ಹೆಚ್ಚಿನ ಶ್ರದ್ಧೆ ಇದೆ. ಆದರೂ ಕೆಲವು ಅಂಶಗಳಲ್ಲಿ ಸುಧಾರಣೆಯಾಗಬೇಕೆಂಬುದನ್ನು ಇವರು ಒತ್ತಿ ಹೇಳಿದ್ದಾರೆ.

೫. ಸ್ವಾತಂತ್ರ್ಯ ಪೂರ್ವ ಕಾಲಘಟ್ಟದಲ್ಲಿ ಕಾದಂಬರಿಕಾರ್ತಿಯರು ಕಾದಂಬರಿ ರಚನೆಯಲ್ಲಿ ಹೆಚ್ಚು ಪಾಲ್ಗೊಂಡಿಲ್ಲವೆಂಬುದು ಮೇಲ್ನೋಟಕ್ಕೆ ಕಾಣುತ್ತದೆ. ಸಂತೂಬಾಯಿ ನೀಲಗಾರ, ತಿರುಮಲಾಂಬಾ ಮತ್ತು ಕಲ್ಯಾಣಮ್ಮನಂಥವರು ಕಾದಂಬರಿ ಕ್ಷೇತ್ರದಲ್ಲಿ ಕಾಣಿಸಿಕೊಂಡಿರುವುದು ಗುರುತಿಸಲಾಗಿದೆ.

೬. ಸಂಪ್ರದಾಯ, ಆಧುನಿಕತೆಯ ಸಂಧಿಕಾಲದ ಕುಟುಂಬ ವ್ಯವಸ್ಥೆಯ ಪಲ್ಲಟಗಳ ಸೂಕ್ಷ್ಮ ಚಿತ್ರವನ್ನು ನೀಡುವ ಸದ್ಗುಣಿ ಕೃಷ್ಣಾಬಾಯಿ ಕಾದಂಬರಿಯು ಲಿಂಗ ಶ್ರೇಣೀಕರಣದ ಸಾಮಾಜಿಕ ವರ್ತಮಾನಕ್ಕೆ ಬದ್ಧವಾಗಿದ್ದರೂ ಹೆಣ್ಣಿನ ಕಾರ್ಯಕ್ಷೇತ್ರವನ್ನು ಮನೆಗೆ ಕಟ್ಟಿ ಹಾಕದೆ ಸಾಮಾಜಿಕ, ಆಯಾಮಗಳಿಗೂ ವಿಸ್ತರಿಸುವ ಒಲವು ತೋರಿರುವುದನ್ನು ಗುರುತಿಸಿದೆ.

೭. ಸ್ತ್ರೀಯರು ಹಿಂದುಳಿಯಲೂ ಅವರ ಮೇಲೆ ಹೇರಲ್ಪಟ್ಟ ಕಟ್ಟುಪಾಡುಗಳೇ ಮುಖ್ಯಕಾರಣವೆಂಬ ಅಂಶ ಕನ್ನಡ ಸ್ತ್ರೀ ಕೇಂದ್ರಿತ ಕಾದಂಬರಿಗಳಲ್ಲಿ ದಾಖಲಾಗಿದೆ. ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಕಟ್ಟುಪಾಡುಗಳನ್ನು ಸಡಿಲಿಸಿದರೆ ಮಹಿಳೆ ಎಲ್ಲಾ ರೀತಿಯಿಂದಲೂ ಪ್ರಗತಿ ಹೊಂದಲು ಸಾಧ್ಯವೆಂಬುದು ಈ ಕಾಲದ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ.

೮. ಆರಂಭದ ಕಾದಂಬರಿಕಾರ್ತಿಯರು ಸಮಾಜದಲ್ಲಿ ಬ್ರಿಟಿಷ್ ವಸಾಹತುಶಾಹಿ ಆಡಳಿತದಿಂದ ಹೊಸ ಶಿಕ್ಷಣ ಪದ್ಧತಿ ಆಧುನಿಕತೆ ಮತ್ತು ಸಂಪ್ರದಾಯದ ನಡುವೆ ಏರ್ಪಟ್ಟ ಸಂಘರ್ಷವನ್ನು ತಮ್ಮದೇ ನೆಲೆಯಲ್ಲಿ ಗ್ರಹಿಸಲು ಪ್ರಯತ್ನಿಸಿದ್ದಾರೆ. ಮುಖ್ಯವಾಗಿ ಪಾರಂಪರಿಕ ಬದುಕಿನ ವಿನ್ಯಾಸಗಳಲ್ಲಿ ಆಧುನಿಕತೆಯಿಂದ ಉಂಟಾದ ಬಿರುಕುಗಳನ್ನು ಗ್ರಹಿಸುವಾಗ ಈ ಮಹಿಳೆಯರು ಹೆಚ್ಚು ಕುಟುಂಬ ಮತ್ತು ಸ್ತ್ರೀ ಎದುರಿಸಿದ ಬಿಕ್ಕಟ್ಟುಗಳನ್ನು ಚಿತ್ರಿಸಲು ಪ್ರಯತ್ನಿಸಿದ್ದಾರೆ.

೯. ಆಧುನಿಕತೆ ಮತ್ತು ಸಂಪ್ರದಾಯದ ನಡುವಿನ ಸಂಘರ್ಷದಲ್ಲಿ ಪೆಟ್ಟನ್ನು ಅನುಭವಿಸುವುದು ಮಹಿಳೆಯೇ ಆಗಿದ್ದಾಳೆ ಎಂಬುವುದನ್ನು ಕಾದಂಬರಿಕಾರ್ತಿಯರು ಚಿಂತಿಸಿದ್ದಾರೆ. ವಿಧವಾ ಸಮಸ್ಯೆ, ಬಾಲ್ಯವಿವಾಹ ಮತ್ತು ಅತಂತ್ರ ಮಹಿಳೆಯರು, ಅಂದರೆ ವೇಶ್ಯೆಯರ ಬದುಕುಗಳನ್ನು ಕುರಿತು ವೈಚಾರಿಕವಾಗಿ, ಕ್ರಾಂತಿಕಾರಕವಾಗಿ ಆಲೋಚಿಸಲು ಮೊದಲ ತಲೆಮಾರಿನ ಕಾದಂಬರಿಕಾರ್ತಿಯರಿಗೆ ಸಾಧ್ಯವಾಗಿಲ್ಲ. ಆದರೆ ಮಾನವೀಯ ನೆಲೆಯಲ್ಲಿ ಪರಿಹಾರ ಸೂಚಿಸಿರುವುದು ಕಂಡುಬರುತ್ತದೆ.

೧೦. ಪುರುಷ ಪ್ರಧಾನ ಸ್ಥಾಪಿತ ಮೌಲ್ಯಗಳ ಒಳಗೆ ಸ್ತ್ರೀ ತನ್ನತನವನ್ನು ಕಳೆದುಕೊಂಡು ಪುರುಷನ ಅಭಿವೃದ್ಧಿಗಾಗಿಯೇ ತನ್ನ ಇಡೀ ಜೀವನ ಸವೆಸಿದ್ದಾರೆ.

೧೧. ಸ್ವಾತಂತ್ರ್ಯಪೂರ್ವದ ಕನ್ನಡ ಕಾದಂಬರಿಕಾರರು ಸ್ತ್ರೀಯರ ಕುರಿತು ಹೆಚ್ಚಿನ ಸಹಾನುಭೂತಿ ಮತ್ತು ಕಾಳಜಿಗಳನ್ನು ಪ್ರಕಟಿಸಿರುವುದು ಎದ್ದು ಕಾಣುತ್ತವೆ. ವಿಶೇಷವಾಗಿ ಶಿಕ್ಷಣದ ಸೌಲಭ್ಯಗಳಿಂದ ವಂಚಿತರಾದ ಸ್ತ್ರೀಯರಿಗೆ ಶಿಕ್ಷಣ ದೊರಕಬೇಕೆಂಬುದು ಇಲ್ಲಿಯ ಪ್ರಮುಖ ಅಂಶ.

೧೨. ಕಲ್ಯಾಣಮ್ಮ, ಸಂತೂಬಾಯಿ ನೀಲಗಾರ, ತಿರುಮಲಾಂಬಾ, ಅವರ ರಚನೆಗಳಲ್ಲಿ ಪ್ರಖರವಾದ ವೈಚಾರಿಕತೆ, ಪ್ರಗತಿಪರ ಅಂಶಗಳನ್ನು ನಭಾ, ವಿರಾಗಿಣಿ, ಮಣಿಮಾಲಾ, ವಿದ್ಯುಲತಾ, ಸುಖಲತಾ, ಇಂದಿರೆ, ವಾಗ್ದೇವಿ, ಕೃಷ್ಣಾಬಾಯಿ, ತಾರಾ ಪಾತ್ರಗಳ ಮೂಲಕ ಓದುಗರಿಗೆ ತಲುಪಿಸುವ ಪ್ರಯತ್ನವನ್ನು ಮಾಡಿದ್ದಾರೆ.

೧೩. ಆಧುನಿಕತೆ ಮತ್ತು ಸುಧಾರಣಾವಾದಿಗೆ ಪ್ರೇರಣೆಗೊಳಗಾದ ಆರಂಭದ ಕಾದಂಬರಿಕಾರರಿಗೆ ಎದುರಾದ ಸವಾಲುಗಳಲ್ಲಿ ಬ್ರಿಟಿಷರ ಆಕ್ಷೇಪಣೆಗೆ ಗುರಿಯಾಗಿದ್ದ ಮಧ್ವಮತದ ಚಿತ್ರಣ, ವಿಡಂಬನೆ ಜೊತೆಯಲ್ಲಿಯೇ ಸ್ತ್ರೀ ಸಂವೇದನೆಯನ್ನು 'ವಾಗ್ದೇವಿ'ಯಲ್ಲಿ ಗುರುತಿಸಲಾಗಿದೆ.

೧೪. ಕಾದಂಬರಿಗಳ ಸ್ವರೂಪ ಹಾಗೂ ತಾತ್ವಿಕತೆಯನ್ನು ಗಮನಿಸಿದಾಗ ಎರಡು ರೀತಿಯ ಧೋರಣೆಗಳು ಕಂಡುಬರುತ್ತವೆ. ಅವುಗಳಲ್ಲಿ ಮೊದಲನೆಯದು ಪಾಶ್ಚಾತ್ಯ ಪ್ರಭಾವಕ್ಕೆ

ಒಳಗಾಗಿ ಭಾರತೀಯ ಸಂಸ್ಕೃತಿಯನ್ನು ಸುಧಾರಣೆ ಮಾಡಿಕೊಳ್ಳಬೇಕೆಂಬ ಧೋರಣೆ ಮತ್ತೊಂದು ಸಂಪ್ರದಾಯಿಕ ಮೌಲ್ಯಗಳೇ ಶ್ರೇಷ್ಠವಾಗಿದ್ದು ಅವುಗಳ ಹಿರಿಮೆಯನ್ನು ಎತ್ತಿ ಹಿಡಿಯಬೇಕೆಂಬ ಧೋರಣೆ.

೧೫. ಕಾದಂಬರಿಕಾರರು ಮತ್ತು ಕಾದಂಬರಿಕಾರ್ತಿಯರ ದೃಷ್ಟಿಕೋನ ಸ್ತ್ರೀಪರವಾಗಿದ್ದರಿಂದಲೇ ಸ್ತ್ರೀ ಜೀವನವನ್ನೊಳಗೊಂಡ ಕಾದಂಬರಿಗಳು ಹೊರಬರಲು ಸಾಧ್ಯವಾಗಿದೆ.

೧೬. ಸ್ವಾತಂತ್ರ್ಯಪೂರ್ವ ಕಾದಂಬರಿಗಳಲ್ಲಿ ಲೇಖಕರು ಹಾಗೂ ಲೇಖಕಿಯರು ಆಯ್ದುಕೊಂಡ ವಸ್ತು ಒಂದೇ ಆಗಿದ್ದರೂ ಹೇಳುವ ವಿಧಾನದಲ್ಲಿ ಭಿನ್ನತೆಯಿಂದ ಹಾಗೂ ದೃಷ್ಟಿಕೋನದಲ್ಲಿ ವ್ಯತ್ಯಾಸವಿದೆ. ಲೇಖಕರು ಲೇಖಕಿಯರಿಗಿಂತ ಹೆಚ್ಚಾಗಿ ಸ್ತ್ರೀ ಸುಧಾರಣೆಯನ್ನು ಬಯಸಿ ದನಿ ಎತ್ತಿದರು ಮತ್ತು ಲೇಖಕಿಯರಿಗಿಂತ ದೃಢ ನಿರ್ಧಾರ ಮತ್ತು ದಿಟ್ಟತನದಿಂದ ಹೆಜ್ಜೆಯಿಟ್ಟಿದ್ದಾರೆ.

೧೭. ಮೇಲ್ವರ್ಗದ ಸ್ತ್ರೀಯರು ಎದುರಿಸಿದ್ದ ಸಮಸ್ಯೆಗಳನ್ನು ಕುರಿತು ಕನ್ನಡ ಕಾದಂಬರಿಕಾರರು ಹೆಚ್ಚಿನ ಆಸಕ್ತಿ ವಹಿಸಿದ್ದಾರೆ. ಸ್ತ್ರೀ ಶಿಕ್ಷಣ, ವೈವಾಹಿಕ ಸಮಸ್ಯೆ, ವಿಧವಾ ಸಮಸ್ಯೆ, ಅನೈತಿಕ ಸಮಸ್ಯೆಗಳು, ಬಾಲ್ಯ ವಿವಾಹ, ವರದಕ್ಷಿಣೆ ಸಮಸ್ಯೆಗಳು ಮುಖ್ಯವಾಗಿ ಕಾದಂಬರಿಗಳಲ್ಲಿ ಚರ್ಚಿತವಾಗಿವೆ.

೧೮. ಭಾಷಾ ಪ್ರಭೇದಗಳ ಮಿಶ್ರಣವನ್ನು ಕಾದಂಬರಿಕಾರರು ಬಳಸಿದ್ದಾರೆ. ಎರಡು ನೆಲೆಗಳಲ್ಲಿ ಈ ಪ್ರಭೇದ ಗುರುತಿಸಲು ಸಾಧ್ಯವಾಗಿದೆ.

೧. ಪಾತ್ರಗಳ ಸಂಭಾಷಣೆಯ ಹಂತ

೨. ವರ್ಣನೆಯ ಹಂತ.

ಹಾಗೂ ಕಾದಂಬರಿಕಾರರು ಇಂಗ್ಲಿಷನ್ನು ಕನ್ನಡದ ಜೊತೆಗೆ ಬೆರೆಸಿರುವುದು ಕಂಡುಬರುತ್ತದೆ.

ಒಟ್ಟಾರೆಯಾಗಿ ಸ್ವಾತಂತ್ರ್ಯಪೂರ್ವ ಸ್ತ್ರೀ ಕೇಂದ್ರಿತ ಕನ್ನಡ ಕಾದಂಬರಿಗಳ ಅಧ್ಯಯನ ಮಾಡಿರುವುದು ಹೆಚ್ಚು ಪ್ರಯೋಜನಕಾರಿ ಎನಿಸಿದೆ. ಇದರಿಂದ ಕನ್ನಡ ಕಾದಂಬರಿಕಾರರು ಸ್ತ್ರೀ ಸಮಸ್ಯೆಗಳಿಗೆ ಸ್ಪಂದಿಸಿರುವ ರೀತಿ, ವ್ಯಕ್ತಪಡಿಸಿರುವ ಕಾಳಜಿಗಳನ್ನು ಗುರುತಿಸಲು ಸಾಧ್ಯವಾಗಿದೆ.

# ಅನುಬಂಧಗಳು

೧. ಮೂಲ ಪಠ್ಯಗಳು

೨. ಪರಾಮರ್ಶನ ಗ್ರಂಥಗಳು

೩. ಪತ್ರಿಕಾ ಲೇಖನಗಳು

೪. ನಿಯತಕಾಲಿಕೆಗಳು

ಒಂದು

# ಮೂಲ ಪಠ್ಯಗಳು

## ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಮುಖ್ಯ ಕಾದಂಬರಿಗಳು


೧. ಕಲ್ಯಾಣಮ್ಮ ಆರ್., **ಸುಖಲತಾ**, ಶಾರದಾ ಗ್ರಂಥಮಾಲಾ, ಚಾಮರಾಜಪೇಟೆ, ಬೆಂಗಳೂರು, ೧೯೨೭.

೨. ಕಲ್ಯಾಣಮ್ಮ ಆರ್., **ನಿರ್ಭಾಗ್ಯ ವನಿತೆ**, ಬಿ.ಎನ್.ಸುಮಿತ್ರಾಬಾಯಿ(ಸಂ), ಕಲ್ಯಾಣ ಸರಸ್ವತಿ, ಕರ್ನಾಟಕ ಲೇಖಕೀಯ ಸಂಘ(ರಿ), ಬೆಂಗಳೂರು, ೧೯೯೨.

೩. ಕಲ್ಯಾಣಮ್ಮ ಆರ್., **ಪ್ರಿಯಂವದೆ**, ಶಾರದಾಗ್ರಂಥಮಾಲೆ, ಬೆಂಗಳೂರು, ೧೯೧೮.

೪. ಕಾರಂತ ಶಿವರಾಮ, **ಬೆಟ್ಟದ ಜೀವ**, ಮನೋಹರ ಗ್ರಂಥಮಾಲಾ, ಧಾರವಾಡ, ೧೯೪೩.,

೫. ಕಾರಂತ ಶಿವರಾಮ, **ಸರಸಮ್ಮನ ಸಮಾಧಿ**, ಸ್ವಪ್ನ ಬುಕ್‌ಹೌಸ್, ಬೆಂಗಳೂರು, ೧೯೨೨.

೬. ಕಾರಂತ ಶಿವರಾಮ, **ಮರಳಿ ಮಣ್ಣಿಗೆ**, ಮನೋಹರ ಗ್ರಂಥಮಾಲಾ ಧಾರವಾಡ, ೧೯೪೧.

೭. ಕಾರಂತ ಶಿವರಾಮ, **ಜೋಮನದುಡಿ**, ಎಸ್.ಬಿ.ಎಸ್. ಪಬ್ಲಿಷರ್ಸ್, ಬೆಂಗಳೂರು, ೧೯೯೮.

೮. ಕುವೆಂಪು, **ಕಾನೂರು ಸುಬ್ಬಮ್ಮ ಹೆಗ್ಗಡಿತಿ**, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ ಮೈಸೂರು, ೨೦೧೨.

೯. ಕುವೆಂಪು, **ಮಲೆಗಳಲ್ಲಿ ಮದುಮಗಳು**, ಉದಯರವಿ ಪ್ರಕಾಶನ, ಮೈಸೂರು, ೨೦೧೨.

೧೦. ಕೆರೂರುವಾಸುದೇವಾಚಾರ್ಯ, **ಇಂದಿರೆ**, ಮನೋಹರ ಗ್ರಂಥಮಾಲಾ, ಧಾರವಾಡ, ೨೦೦೭

೧೧. ಗುಲ್ವಾಡಿ ವೆಂಕಟರಾಯ, **ಇಂದಿರಾಬಾಯಿ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೧.

೧೨. ನಂಜನಗೂಡು ತಿರುಮಲಾಂಬಾ, **ಸುಶೀಲೆ**, (ಸಂ)ವಿಜಯಾದಬ್ಬೆ ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

೧೩. ನಂಜನಗೂಡು ತಿರುಮಲಾಂಬಾ, **ನಭಾ**, (ಸಂ) ವಿಜಯಾದಬ್ಬೆ ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

೧೪. ನಂಜನಗೂಡು ತಿರುಮಲಾಂಬಾ, **ವಿರಾಗಿಣಿ**, (ಸಂ) ವಿಜಯಾದಬ್ಬೆ ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

೧೫. ನಂಜನಗೂಡು ತಿರುಮಲಾಂಬಾ, **ವಿದ್ಯುಲತಾ**, (ಸಂ) ವಿಜಯಾದಬ್ಬೆ ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

೧೬. ನಂಜನಗೂಡು ತಿರುಮಲಾಂಬಾ, **ಮಣಿಮಾಲಾ**, (ಸಂ) ವಿಜಯಾದಬ್ಬೆ ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

೧೭. ನಂಜನಗೂಡು ತಿರುಮಲಾಂಬಾ, **ಮಾತೃ ನಂದಿನಿ**, (ಸಂ) ವಿಜಯಾದಬ್ಬೆ ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

೧೮. ನಂಜನಗೂಡು ತಿರುಮಲಾಂಬಾ, **ಪೂರ್ಣಕಲಾ**, (ಸಂ) ವಿಜಯಾದಬ್ಬೆ ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

೧೯. ಪುಟ್ಟಣ್ಣ ಎಂ.ಎಸ್., **ಮಾಡಿದುಣ್ಣೋ ಮಹಾರಾಯ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು. ೨೦೧೨.

೨೦. ಬೋಳಾರ ಬಾಬುರಾಯ, **ವಾಗ್ದೇವಿ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೮೫.

೨೧. ಮಾಸ್ತಿ ವೆಂಕಟೇಶ ಐಯ್ಯಂಗಾರ್, **ಸುಬ್ಬಣ್ಣ**, ಜೀವನಕಾರ್ಯಾಲಯ ಬೆಂಗಳೂರು, ೧೯೯೭.

೨೨. ಮಿರ್ಜಿ ಅಣ್ಣಾರಾಯ, **ನಿಸರ್ಗ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೨.

೨೩. ಸಂತೂಬಾಯಿ ನೀಲಗಾರ, **ಸದ್ಗುಣಿ ಕೃಷ್ಣಾಬಾಯಿ ಮತ್ತು ಉತ್ತಮ ಗೃಹಿಣಿ**, ೧೯೦೭.

ಎರಡು

## ಪರಾಮರ್ಶನ ಗ್ರಂಥಗಳು


೧. ಅನಂತನಾರಾಯಣ ಎಸ್., **ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ,** ಗಂಗಾ ತರಂಗ ಪ್ರಕಾಶನ, ಮೈಸೂರು, ೧೯೯೧.

೨. ಅನಂತನಾರಾಯಣ ಎಸ್., **ಕಾರಂತರ ಕಾದಂಬರಿಗಳು,** ಉಪಸಾಹಿತ್ಯಮಾಲೆ, ಮೈಸೂರು, ೧೯೪೮.

೩. ಅನಂತಮೂರ್ತಿ ಯು.ಆರ್., **ಪೂರ್ವಾಪರ,** ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ, ೧೯೯೦.

೪. ಅರ್ಜುನ ಪುರಿ ಅಪ್ಪಾಜಿಗೌಡ, **ನಂಜನಗೂಡು ತಿರುಮಲಾಂಬಾ ಒಂದು ಅಧ್ಯಯನ,** ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೫೫.

೫. ಅನುಪಮಾ ನಿರಂಜನ, **ದಾಂಪತ್ಯ ದೀಪಿಕೆ,** ಡಿವಿಕೆ. ಮೂರ್ತಿ, ಮೈಸೂರು, ೧೯೮೦.

೬. ಅಮರೇಶ ನುಗಡೋಣಿ, (ಸಂ) **ಕನ್ನಡ ಸಂಶೋಧನೆಯ ವೈಧಾನಿಕತೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೭. ಅಶೋಕ ಟಿ.ಪಿ., **ಸಾಹಿತ್ಯ ಸಂದರ್ಭ,** ಅಕ್ಷರ ಪ್ರಕಾಶನ, ಸಾಗರ, ೧೯೯೧.

೮. ಅಶೋಕ ಟಿ.ಪಿ., **ಶಿವರಾಮ ಕಾರಂತ ಎರಡು ಅಧ್ಯಯನಗಳು,** ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ, ೧೯೯೯.

೯. ಅಶೋಕ ಟಿ.ಪಿ.(ಸಂ)., **ಶಿವರಾಮ ಕಾರಂತ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩.

೧೦. ಅಶೋಕ ಟಿ.ಪಿ., **ವಾಸ್ತವವಾದ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೯.

೧೧. ಅರವಿಂದ ಮಾಲಗತ್ತಿ(ಸಂ)., **ಕಾದಂಬರಿಗಳ ವಿಮರ್ಶೆ**, ಮೈಸೂರು ವಿಶ್ವವಿದ್ಯಾಲಯ, ೨೦೦೦.

೧೨. ಅಮೂರ ಜಿ.ಎಸ್., **ಕನ್ನಡ ಕಾದಂಬರಿಯ ಬೆಳವಣಿಗೆ**, ಪ್ರಸಾರಾಂಗ ಬೆಂಗಳೂರು, ೧೯೮೩.

೧೩. ಅಮೂರ ಜಿ.ಎಸ್., **ಸಮಕಾಲೀನ ಕಥೆ ಕಾದಂಬರಿ ಹೊಸ ಪ್ರಯೋಗಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೬.

೧೪. ಅಮೂರ ಜಿ.ಎಸ್., **ಅರ್ಥಲೋಕ**, ಸ್ನೇಹ ಪ್ರಕಾಶನ, ಬೆಂಗಳೂರು, ೧೯೮೮.

೧೫. ಅಮೂರ ಜಿ.ಎಸ್., **ಕನ್ನಡ ಕಥನ ಸಾಹಿತ್ಯ ಕಾದಂಬರಿ**, ಶ್ರೀ ಹರಿಪ್ರಕಾಶನ, ಧಾರವಾಡ, ೧೯೯೪.

೧೬. ಅಮೂರ ಜಿ.ಎಸ್., **ಕಾದಂಬರಿ ಸ್ವರೂಪ**, ಕನ್ನಡ ಸಂಘ ಕ್ರೈಸ್ಟ ಕಾಲೇಜು, ಬೆಂಗಳೂರು, ೧೯೯೯.

೧೭. ಅಂದನೂರು ಶೋಭಾ, **ಮಹಿಳೆಯ ಮುನ್ನಡೆ**, ಸ್ವಪ್ನ ಬುಕ್‌ಹೌಸ್, ಬೆಂಗಳೂರು, ೧೯೮೮.

೧೮. ಆಶಾದೇವಿ ಎಂ.ಎಸ್., **ಸ್ತ್ರೀ ಮತವನುತ್ತರಿಸಲಾಗದೇ?**, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೬.

೧೯. ಇಂದಿರಾ ಆರ್., **ಸ್ತ್ರೀವಾದಿ ದಿಕ್ಸೂಚಿ**, ಸಮತಾ ಅಧ್ಯಯನ ಕೇಂದ್ರ, ಮೈಸೂರು, ೧೯೯೬.

೨೦. ಇಂದಿರಾ ಆರ್., **ಮಹಿಳೆ ಸಮಾಜ ಮತ್ತು ಸಂಸ್ಕೃತಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ೨೦೦೨.

೨೧. ಇನಾಂದಾರ್, **ಕುವೆಂಪು ಕಾದಂಬರಿಗಳು**, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೭೯.

೨೨. ಉಷಾ ಎಂ., **ಮಹಿಳಾ ಚಳವಳಿ ಮತ್ತು ಮಹಿಳಾ ವಿಷಯಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೨೩. ಉಷಾ ಎಂ., **ಆಧುನಿಕ ಮಹಿಳಾ ಸಾಹಿತ್ಯ ಇನ್ನಷ್ಟು ಪುಟಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೨೪. ಎಲಿಗಾರ ಚೆನ್ನಪ್ಪ, **ಸಾಹಿತ್ಯ ಚೈತ್ರ**, ಚೆನ್ನಗಂಗಾ ಪ್ರಕಾಶನ, ಧಾರವಾಡ, ೧೯೯೩.

೨೫. ಕವಿತಾ ರೈ., **ಮಹಿಳಾ ಅಸ್ತಿತ್ವದ ಸಂಕಥನ**, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೦೯.

೨೬. ಕಿಶೋರಿ ನಾಯಕ ಕೆ., **ಸ್ತ್ರೀವಾದದ ನೆಲೆಗಳು ಮತ್ತು ನಿಲುವುಗಳು**, ಪ್ರಸಾರಾಂಗ, ಬೆಂಗಳೂರು ವಿ.ವಿ., ೧೯೯೯.

೨೭. ಕೀರ್ತಿನಾಥ ಕುರ್ತಕೋಟಿ, **ಯುಗಧರ್ಮ ಮತ್ತು ಸಾಹಿತ್ಯ ದರ್ಶನ**, ಮನೋಹರ ಗ್ರಂಥ ಮಾಲಾ, ಧಾರವಾಡ, ೨೦೦೨.

೨೮. ಕುವೆಂಪು, **ವಿಚಾರ ಕ್ರಾಂತಿಗೆ ಆಹ್ವಾನ**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೭೭.

೨೯. ಕುಮುದಾ ಪ್ರಿಯಾ, **ಕಾನೂರು ಹೆಗ್ಗಡಿತಿಯ ವಿಮರ್ಶೆ**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೫.

೩೦. ಕೇಶವಶರ್ಮ ಕೆ., **ಬಹುಮುಖಿ**, ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು, ೨೦೦೫.

೩೧. ಕೇಶವಶರ್ಮ ಕೆ., **ವಿಮರ್ಶೆ**, ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು, ೧೯೯೩.

೩೨. ಕೇಶವಶರ್ಮ ಕೆ., **ಸ್ತ್ರೀವಾದಿ ವಿಮರ್ಶೆ**, ಅನ್ವೇಷಣೆ ಪ್ರಕಾಶನ, ಬೆಂಗಳೂರು, ೧೯೯೨.

೩೩. ಕೋದಂಡರಾಮ ಎನ್.ಕೆ., **ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ**, ಗಾಯತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೯.

೩೪. ಗಾಯತ್ರಿ ಎನ್., **ಮಹಿಳೆ ಬಿಡುಗಡೆಯ ಹಾದಿಯಲ್ಲಿ**, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೮.

೩೫. ಗಾಯತ್ರಿ ನಾವಡ., **ಮಹಿಳಾ ಸಂಕಥನ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩.

೩೬. ಗಿರಡ್ಡಿ ಗೋವಿಂದರಾಜ, **ಕನ್ನಡ ಕಾದಂಬರಿಯಲ್ಲಿ ನವ್ಯತೆ**, ಸ್ನೇಹ ಪ್ರಕಾಶನ, ಬೆಂಗಳೂರು, ೧೯೭೬.

೩೭. ಗಿರಡ್ಡಿ ಗೋವಿಂದರಾಜ, **ನವ್ಯ ವಿಮರ್ಶೆ**, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೭೫.

೩೮. ಗಿರಡ್ಡಿ ಗೋವಿಂದರಾಜ, **ಕಾದಂಬರಿ: ವಸ್ತು ಮತ್ತು ತಂತ್ರ**, ಸ್ನೇಹ ಪ್ರಕಾಸನ, ಬೆಂಗಳೂರು, ೧೯೮೭.

೩೯. ಗಿರಡ್ಡಿ ಗೋವಿಂದರಾಜ, **ಸಮಗ್ರ ವಿಮರ್ಶೆ**, ಸ್ವಪ್ನ ಬುಕ್‌ಹೌಸ್, ಬೆಂಗಳೂರು, ೨೦೦೧.

೪೦. ಗಿರಡ್ಡಿ ಗೋವಿಂದರಾಜ, **ಈ ಶತಮಾನದ ಕನ್ನಡ ಕವಯಿತ್ರಿಯರು**, ಚಿನ್ಮಯ ಪ್ರಕಾಶನ, ಬೆಂಗಳೂರು, ೧೯೮೮.

೪೧. ಗೀತಾ ಪ್ರಸಾದ್, **ಆಧುನಿಕ ಮಹಿಳಾ ಅಭಿವ್ಯಕ್ತಿ**, ಧಾತ್ರಿ ಪುಸ್ತಕಮಾಲೆ, ಬೆಂಗಳೂರು, ೨೦೦೯.

೪೨. ಗುರುಪಾದ ಮರಿಗುದ್ದಿ(ಸಂ), **ಕುವೆಂಪು ಕಾದಂಬರಿಗಳು**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

೪೩. ತಿರುಮಲೇಶ ಕೆ.ವಿ., **ಅಸ್ತಿತ್ವವಾದ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯.

೪೪. ತೇಜಸ್ವಿನಿ ನಿರಂಜನ, **ಸ್ತ್ರೀವಾದಿ ಸಾಹಿತ್ಯ ವಿಮರ್ಶೆ**, ಕನ್ನಡ ಸಂಘ, ಬೆಂಗಳೂರು, ೧೯೯೪.

೪೫. ಧರಣಿದೇವಿ ಮಾಲಗತ್ತಿ, **ಸಾಹಿತ್ಯ ವಾಣಿಜ್ಯ ಮತ್ತು ಮಹಿಳಾ ಪ್ರಜ್ಞೆ**, ರಾಜ್ ಪ್ರಕಾಶನ, ಮೈಸೂರು, ೨೦೦೪.

೪೬. ಧರಣಿದೇವಿ ಮಾಲಗತ್ತಿ, **ಸ್ತ್ರೀವಾದಿ ಮತ್ತು ಭಾರತೀಯತೆ**, ಚೇತನ ಬುಕ್‌ಹೌಸ್, ಮೈಸೂರು, ೧೯೯೪.

೪೭. ನರಹಳ್ಳಿ ಬಾಲಸುಬ್ರಹ್ಮಣ್ಯ, **ನವ್ಯತೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೦.

೪೮. ನಟರಾಜ್ ಹುಳಿಯಾರ್., **ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ**, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೪.

೪೯. ನಾಗರಾಜ್ ಡಿ.ಆರ್., **ಶಕ್ತಿ ಶಾರದೆಯ ಮೇಳ**, ಅಕ್ಷರ ಪ್ರಕಾಶನ, ಹೆಗ್ಗೊಡು ಸಾಗರ, ೧೯೯೩.

೫೦. ನಾಗರಾಜ್ ಡಿ.ಆರ್., **ಅಮೃತ ಮತ್ತು ಗರುಡ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೯೦.

೫೧. ನಾಗರಾಜ್ ಡಿ.ಆರ್., **ಸಾಹಿತ್ಯ ಕಥನ**, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೬.

೫೨. ನಾಗರಾಜ್ ಡಿ.ಆರ್., **ಸಂಸ್ಕೃತಿ ಕಥನ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨.

೫೩. ನಾಗರಾಜಪ್ಪ ಕೆ.ಜಿ.(ಸಂ)., **ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯.

೫೪. ನಾಯಕ ಜಿ.ಎಚ್., **ಸಮಕಾಲೀನ**, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೭೩.

೫೫. ನಾಯಕ ಜಿ.ಎಚ್., **ನಿಜದನಿ**, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೭೩.

೫೬. ನಾರಾಯಣ ಕೆ.ವಿ., ಬಿ.ಕೃಷ್ಣಮೂರ್ತಿ(ಸಂ), **ಅನ್ಯಜ್ಞಾನ ಶಿಸ್ತುಗಳ ಮೂಲಕ ಕನ್ನಡ ಸಾಹಿತ್ಯ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೨.

೫೭. ನಾರಾಯಣ ಕೆ.ವಿ., **ಬೇರು ಕಾಂಡ ಚಿಗುರು**, ವಿವೇಕ ಪ್ರಕಾಶನ, ಬೆಂಗಳೂರು, ೧೯೯೭.

೫೮. ನಾರಾಯಣ ಕೆ.ವಿ., ಕಾಳೆಗೌಡ ನಾಗವಾರ(ಸಂ), **ವಿಚಾರ ಸಾಹಿತ್ಯ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೦.

೫೯. ನಾವಡ ಎ.ವಿ., **ಕನ್ನಡ ವಿಮರ್ಶೆಯ ಮೊದಲ ಹೆಜ್ಜೆಗಳು**, ಆರ್‌ಎಎಂ. ಪ್ರಕಾಸನ, ೧೯೯೨.

೬೦. ನೇಮಿಚಂದ್ರ, **ಮಹಿಳಾ ಅಧ್ಯಯನ**, ಅಂಕಿತ ಪುಸ್ತಕ, ಬೆಂಗಳೂರು, ೨೦೦೩.

೬೧. ಪುರುಷೋತ್ತಮ ಬಿಳಿಮಲೆ, **ಬಂಡಾಯ ದಲಿತ ಸಾಹಿತ್ಯ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, (೧೯೯೦).

೬೨. ಪ್ರಭುಶಂಕರ, **ಸಾಹಿತ್ಯ ಮತ್ತು ಆಧುನಿಕತೆ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೯.

೬೩. ಪ್ರಭಾವತಿ ಎಸ್.ವಿ., **ಕನ್ನಡ ಮಹಿಳಾ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು**, ಪ್ರಭಾವತಿ ಪ್ರಕಾಶನ, ಕುವೆಂಪು ನಗರ, ಬೆಂಗಳೂರು.

೬೪. ಪ್ರೀತಿ ಶುಭಚಂದ್ರ, **ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು**, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ.

೬೫. ಬಸವರಾಜ ಕಲ್ಗುಡಿ, **ನಕ್ಷೆ–ನಕ್ಷತ್ರ**, ಕನ್ನಡ ಕ್ರೈಸ್ಟ ಕಾಲೇಜ್, ಬೆಂಗಳೂರು, ೧೯೯೯.

೬೬. ಬರಗೂರು ರಾಮಚಂದ್ರಪ್ಪ, **ಬಂಡಾಯ ಸಾಹಿತ್ಯ ಮೀಮಾಂಸೆ**, ಅನ್ವೇಷಣೆ ಪ್ರಕಾಶನ, ಬೆಂಗಳೂರು, ೧೯೯೧.

೬೭. ಬರಗೂರು ರಾಮಚಂದ್ರಪ್ಪ, **ಸಾಹಿತ್ಯ ಮತ್ತು ರಾಜಕಾರಣ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮.

೬೮. ಬರಗೂರು ರಾಮಚಂದ್ರಪ್ಪ, **ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೩.

೬೯. ಬಸವರಾಜ ಸಬರದ, **ಸಾಹಿತ್ಯ ವಿಮರ್ಶೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೫.

೭೦. ಬಾಳಾ ಸಾಹೇಬ ಲೋಕಾಪುರ(ಸಂ)., **ಕೆರೂರು ವಾಸುದೇವಾಚಾರ್ಯ**, ಕನ್ನಡ ಸಾಹಿತ್ಯ ಅಕಾಡೆಮಿ, ೨೦೧೦.

೭೧. ಬೆಳಗಲಿ ದು.ನಿಂ., **ಕನ್ನಡದಲ್ಲಿ ಕಾದಂಬರಿ ಸಾಹಿತ್ಯ**(ಉಪನ್ಯಾಸ ಗ್ರಂಥಮಾಲೆ–೨೨೮), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೫.

೭೨. ಬೋರಲಿಂಗಯ್ಯ ಎನ್., **ಕಾನೂರು ಹೆಗ್ಗಡತಿಯ ವಿವೇಚನೆ**, ಪೃಥ್ವಿ ಪ್ರಕಾಶನ, ಮೈಸೂರು, ೧೯೭೨.

೭೩. ಬೋರಲಿಂಗಯ್ಯ ಹಿ.ಚಿ.(ಸಂ)., **ಕುವೆಂಪು: ಮಹಿಳಾ ಮಂಥನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೭೪. ಮಂಗಳಾ ಚಿ.ನಾ., **ಎಚ್ಚೆತ್ತ ಹಾದಿಯಲ್ಲಿ ಮಹಿಳೆ**, ಪ್ರಸಾರಾಂಗ, ಬೆಂಗಳೂರು, ವಿಶ್ವವಿದ್ಯಾಲಯ, ಬೆಂಗಳೂರು, ೧೯೯೦.

೭೫. ಮನು ಚಕ್ರವರ್ತಿ(ಸಂ), **ಭಾರತೀಯ ಸ್ತ್ರೀವಾದ**, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೧೯೯೩.

೭೬. ಮಹೇಶ್ವರಿ ಯು., **ಇದು ಮಾನುಷಿಯ ಓದು**, ಶಿವರಾಮ ಕಾರಂತ ಅಧ್ಯಯನ ಕೇಂದ್ರ, ವಿವೇಕಾನಂದ ಕಾಲೇಜು, ಪುತ್ತೂರು, ೨೦೦೧.

೭೭. ಮುಗಳಿ ರಂ.ಶ್ರೀ., **ಕನ್ನಡ ಸಾಹಿತ್ಯ ಚರಿತ್ರೆ**, ಗೀತಾ ಬುಕ್‌ಹೌಸ್, ಬೆಂಗಳೂರು, ೧೯೯೩.

೭೮. ಮುಕ್ತಾಯಕ್ಕ ಎಚ್.ಎಸ್., **ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೭.

೭೯. ಮೀರಾ ಎಲ್.ಜಿ., **ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ**, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್,

೮೦. ಮ್ಯಾಗೇರಿ ಐ.ಜಿ., **ವಸಾಹತುಶಾಹಿ ಅನುಭವ ಮತ್ತು ಕನ್ನಡ ಕಾದಂಬರಿಗಳು**, ಕನ್ನಡ ಸಾಹಿತ್ಯ ಪರಿಷತ್ತು, ೨೦೦೮.

೮೧. ರಂಗನಾಥ ರಾವ್ ಜಿ.ಎನ್., **ಒಳನೋಟ**, ಸ್ನೇಹ ಪ್ರಕಾಶನ, ಬೆಂಗಳೂರು, ೧೯೮೦.

೮೨. ರಂಗನಾಥರಾವ್ ಜಿ.ಎನ್.(ಸಂ), **ಕನ್ನಡದ ಮೊದಲ ಕಾದಂಬರಿಗಳು**, ವಸಂತ ಪ್ರಕಾಶನ, ಬೆಂಗಳೂರು, ೨೦೧೧.

೮೩. ರಹಮತ್ ತರೀಕೆರೆ, **ಪ್ರತಿ ಸಂಸ್ಕೃತಿ**, ಕನ್ನಡ ಸಂಘ, ಕ್ರೈಸ್ಟ ಕಾಲೇಜು, ಬೆಂಗಳೂರು, ೧೯೯೩.

೮೪. ರಹಮತ್ ತರೀಕೆರೆ, **ಮರದೊಳಗಣ ಕಿಚ್ಚು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ೧೯೯೬.

೮೫. ರಹಮತ್ ತರೀಕೆರೆ, **ಸಂಸ್ಕೃತಿ ಅಧ್ಯಯನ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

೮೬. ರಹಮತ್ ತರೀಕೆರೆ(ಸಂ), **ಕನ್ನಡ ಸಂಶೋಧನೆ ತಾತ್ವಿಕ ವಿಚಾರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೨೦೦೭.

೮೭. ರಹಮತ್ ತರೀಕೆರೆ, **ಸಾಹಿತ್ಯ ವಿಮರ್ಶೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೨.

೮೮. ರಾಮಚಂದ್ರ ಸಿ.ಎನ್., **ಸಾಹಿತ್ಯ ವಿಮರ್ಶೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೭.

೮೯. ರಾಘವೇಂದ್ರರಾವ್ ಎಚ್.ಎಸ್., **ವಿಶ್ಲೇಷಣೆ**, ಕನ್ನಡ ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೮೧.

೯೦. ರಾಘವೇಂದ್ರರಾವ್ ಎಚ್.ಎಸ್., **ಪ್ರಗತಿಶೀಲ**, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯.

೯೧. ರಾಘವೇಂದ್ರರಾವ್ ಎಚ್.ಎಸ್., **ನಿಲುವು**, ಕನ್ನಡ ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೮೯.

೯೨. ರಾಘವೇಂದ್ರರಾವ್ ಎಚ್.ಎಸ್., **ಹಾಡೆ ಹಾದಿಯ ತೋರಿತು**, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೫.

೯೩. ರಾಘವೇಂದ್ರರಾವ್ ಎಚ್.ಎಸ್., ಶತಮಾನದ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧.

೯೪. ವಿಜಯಾದಬ್ಬೆ(ಸಂ), **ಹಿತೈಷಿಣಿಯ ಹೆಜ್ಜೆಗಳು**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨.

೯೫. ವಿವೇಕ ರೈ ಬಿ.ಎ.(ಸಂ), **ಕನ್ನಡ ಕಾದಂಬರಿಯ ಮೊದಲ ಹೆಜ್ಜೆಗಳು**, ಮಂಗಳೂರು, ವಿಶ್ವವಿದ್ಯಾಲಯ, ಮಂಗಳೂರು ೧೯೮೨.

೯೬. ವಿಜಯಶ್ರೀ ಕೆ., **ಕನ್ನಡ ನವ್ಯ ಕಾದಂಬರಿಗಳು**, ರಾಮಕೃಷ್ಣ ಪ್ರಕಾಶನ, ಬೆಂಗಳೂರು, ೨೦೦೨.

೯೭. ವಿವಿಧ ಲೇಖಕರು, **ಕನ್ನಡ ಸಾಹಿತ್ಯ ಸಮೀಕ್ಷೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೨.

೯೮. ವಿವಿಧ ಲೇಖಕರು, **ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬.

೯೯. ಶಿವರಾಮ ಪಡಿಕ್ಕಲ್, **ನಾಡು ನುಡಿಯ ರೂಪಕ**, ಪ್ರಸಾರಾಂಗ, ಮಂಗಳೂರು ವಿ.ವಿ., ೨೦೦೧.

೧೦೦. ಶಿವಾನಂದ ಗಾಳಿ, **ಮಿರ್ಜಿ ಅಣ್ಣಾರಾಯ ಒಂದು ಅಧ್ಯಯನ**, ಸತ್ಯಶ್ರೀ, ಪ್ರಿಂಟರ್ಸ್, ಬೆಂಗಳೂರು, ೧೯೯೫.

೧೦೧. ಶಿವರುದ್ರಪ್ಪ ಜಿ.ಎಸ್.(ಸಂ), **ಕಾದಂಬರಿಕಾರರಾಗಿ ಕಾರಂತ**, ಪ್ರಸಾರಾಂಗ, ಬೆಂಗಳೂರು, ೧೯೮೩.

೧೦೨. ಶಿವರುದ್ರಪ್ಪ ಜಿ.ಎಸ್.(ಸಂ), **ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ** ಪ್ರಸಾರಾಂಗ, ಬೆಂಗಳೂರು ವಿ.ವಿ., ೧೯೯೭.

೧೦೩. ಶಿವರುದ್ರಪ್ಪ ಜಿ.ಎಸ್.(ಸಂ)., **ಸಮಗ್ರ ಗದ್ಯ**(ಸಂ.೨), ಸ್ನೇಹ ಪ್ರಕಾಶನ, ಬೆಂಗಳೂರು, ೧೯೯೫.

೧೦೪. ಶಿವರುದ್ರಪ್ಪ ಜಿ.ಎಸ್.(ಸಂ)., **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ**, ಪ್ರಸಾರಾಂಗ, ಬೆಂಗಳೂರು(೧೯೮೮).

೧೦೫. ಶಿವರುದ್ರಪ್ಪ ಜಿ.ಎಸ್., **ಕನ್ನಡದ ಕೆಲವು ಪ್ರಮುಖ ಕಾದಂಬರಿಗಳು**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೦.

೧೦೬. ಶ್ರೀನಿವಾಸ ಹಾವನೂರು, **ಹೊಸಗನ್ನಡದ ಅರುಣೋದಯ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, (೨೦೦೦).

೧೦೭. ಶೇಷಗಿರಿರಾವ್ ಎಲ್.ಎಸ್., **ಹೊಸಗನ್ನಡ ಸಾಹಿತ್ಯ ಚರಿತ್ರೆ**, ಅಂಕಿತ ಪ್ರಕಾಶನ, ಬೆಂಗಳೂರು(೧೯೯೯).

೧೦೮. ಶ್ರೀಮತಿ ಎಚ್.ಎಸ್.(ಅನು), **ಆಧುನಿಕ ಭಾರತದಲ್ಲಿ ಮಹಿಳೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೧೦೯. ಶ್ರೀಮತಿ ಎಚ್.ಎಸ್.(ಸಂ)., **ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ**, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೬.

೧೧೦. ಶ್ರೀಮತಿ ಎಚ್.ಎಸ್., **ಸ್ತ್ರೀವಾದ**, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೩.

೧೧೧. ಶ್ರೀಮತಿ ಎಚ್.ಎಸ್., **ಸೇರಿಕೊಂಡ ಎಳೆಗಳು**, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩.

೧೧೨. ಶ್ರೀಮತಿ ಎಚ್.ಎಸ್., **ದ ಸೆಕೆಂಡ್ ಸೆಕ್ಸ್**, ಒಂದು ಕನ್ನಡ ಓದು, ಅಧ್ಯಯನ ಮಂಡಲ, ಬೆಂಗಳೂರು.

೧೧೩. ಶ್ರೀಮತಿ ಎಚ್.ಎಸ್., **ಸ್ತ್ರೀವಾದಿ ಸಂಶೋಧನೆ: ವಿಧಿವಿಧಾನಗಳು**, ಬರಹ ಪಬ್ಲಿಷಿಂಗ್, ಬೆಂಗಳೂರು, ೨೦೧೨.

೧೧೪. ಶೈಲಜಾ ಹಿರೇಮಠ, **ಪಾತರದವರು**, ಕನ್ನಡ ವಿ.ವಿ., ಹಂಪಿ, ೧೯೯೮.

೧೧೫. ಸಬಿಹಾ ಭೂಮಿಗೌಡ, **ಮಹಿಳಾ ಸಾಹಿತ್ಯ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೬.

೧೧೬. ಸಬಿಹಾ ಭೂಮಿಗೌಡ, **ಬಗೆ**, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೧.

೧೧೭. ಸರೋಜ, **ಮಹಿಳೆ ಮತ್ತು ಸಮೂಹ ಮಾಧ್ಯಮಗಳು**, ಪ್ರಸಾರಾಂಗ, ಕನ್ನಡ ವಿ.ವಿ., ಹಂಪಿ, ೨೦೦೪.

೧೧೮. ಸಿದ್ಧಲಿಂಗಯ್ಯ ಜಿ.ಎಸ್., ಕೃಷ್ಣಯ್ಯ ಎಂ.ಎಸ್., (ಸಂ) **ಸಾಲುದೀಪಗಳು**, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೦.

೧೧೯. ಸುಮಿತ್ರಾಬಾಯಿ ಬಿ.ಎನ್., **ಸ್ತ್ರೀವಾದ ಕನ್ನಡ ಸಾಹಿತ್ಯ ಅಕಾಡೆಮಿ**, ಬೆಂಗಳೂರು, ೧೯೯೯.

೧೨೦. ಸುಮಿತ್ರಾಬಾಯಿ ಬಿ.ಎನ್., **ವಿಚಯ**, ಇಳಾ ಪ್ರಕಾಶನ, ಬೆಂಗಳೂರು, ೧೯೯೫.

೧೨೧. ಸುಮಿತ್ರಾಬಾಯಿ ಬಿ.ಎನ್., **ಕಲ್ಯಾಣ ಸರಸ್ವತಿ**, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೧೯೯೨.

೧೨೨. ಸುನೀತಾ ಎಂ.ಶೆಟ್ಟಿ, **ಶಿವರಾಮ ಕಾರಂತರ ಕಾದಂಬರಿಗಳಲ್ಲಿ ಸ್ತ್ರೀ**, ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ, ೨೦೦೦.

೧೨೩. ಸುಜಾತ ಎಚ್.ಎಸ್., **ಎಂ.ಎಸ್.ಪುಟ್ಟಣ್ಣ ಒಂದು ಅಧ್ಯಯನ**, ಐ.ಬಿ.ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು.

೧೨೪. ಸುಧಾ ಸೀತಾರಾಮನ್, **ಮಹಿಳಾ ಅಧ್ಯಯನ**, ಸ್ತ್ರೀ ಲೇಖ ಪ್ರಕಟಣೆ, ಬೆಂಗಳೂರು, ೨೦೧೦.

೧೨೫. ಹಳ್ಳಿಕೇರಿ ಎಫ್.ಟಿ., ರವೀಂದ್ರನಾಥ್ ಕೆ.(ಸಂ)., **ದಶಕದ ಕನ್ನಡ ಸಾಹಿತ್ಯ**, ಕನ್ನಡ ವಿ.ವಿ., ಹಂಪಿ, ೨೦೦೨.

೧೨೬. ಹರಿಕೃಷ್ಣ ಭರಣ್ಯ, **ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ**, ಪ್ರ.ಭ.ಸ. ಬಿಡುಗಡೆ, ಮಧುರೈ, ೧೯೯೦.

ಮೂರು

## ಪತ್ರಿಕಾ ಲೇಖನಗಳು


೧. ಉಷಾ ಎಂ., *ಕನ್ನಡ ಮೊದಲ ವಸ್ತುನಿಷ್ಠ ವಿಮರ್ಶೆಯ ಸುತ್ತ*, **ಸಂಕ್ರಮಣ ೨೨೨,** ಸೆಪ್ಟೆಂಬರ್, ಅಕ್ಟೋಬರ್ ಸಂಚಿಕೆ, ಬೆಂಗಳೂರು, ೨೦೦೦.

೨. ಕುಮಾರ ಚಲ್ಯ, *ಕೆರೂರು ವಾಸುದೇವಾಚಾರ್ಯರ ಮೊದಲ ಕೃತಿ.* **ಸಾಪ್ತಾಹಿಕ ಪುರಾವಣಿ, ಪ್ರಜಾವಾಣಿ ದಿನಪತ್ರಿಕೆ,** ೨೦೧೧.

೩. ರಾಮಚಂದ್ರನ್ ಸಿ.ಎನ್., *ಸುಧಾರಣಾವಾದಿ ಕಾದಂಬರಿಯ ಒಂದು ವಿನ್ಯಾಸ*, **ವಾಗ್ದೇವಿ ಸಾಪ್ತಾಹಿಕ ಪುರಾವಣಿ, ಪ್ರಜಾವಾಣಿ ದಿನಪತ್ರಿಕೆ,** ೨೦೧೧.

೪. ಶಂಕರ ನಾರಾಯಣ ತೀ.ನಂ., *ಮಾಡಿದುಣ್ಣೋ ಮಹಾರಾಯ*, **ಸಾಪ್ತಾಹಿಕ ಪುರಾವಣಿ, ಪ್ರಜಾವಾಣಿ ದಿನ ಪತ್ರಿಕೆ,** ೨೦೧೧.

೫. ಶಾಂತಾ ಇಮ್ರಾಪುರ, *ಸದ್ಗುಣಿ ಕೃಷ್ಣಬಾಯಿ ಅಥವಾ ಉತ್ತಮ ಗೃಹಿಣಿ*, **ಸಾಪ್ತಾಹಿಕ ಪುರಾವಣಿ, ಪ್ರಜಾವಾಣಿ ದಿನಪತ್ರಿಕೆ,** ೨೦೧೧.

೬. ಶ್ರೀನಿವಾಸ ಹಾವನೂರು, *ಹೊಸಗನ್ನಡದ ಪ್ರಥಮ ಕಾದಂಬರಿ*, **ಕಲಾವತಿ ಪರಿಣಯ, ಸಾಪ್ತಾಹಿಕ ಪುರಾವಣಿ, ಪ್ರಜಾವಾಣಿ ದಿನಪತ್ರಿಕೆ,** ೨೦೧೧.

೭. ಶ್ರೀನಿವಾಸ ಶರ್ಮ ಎಚ್.ವಿ., *ಇಂದಿರಾಬಾಯಿ*, **ಸಾಪ್ತಾಹಿಕ ಪುರಾವಣಿ, ಪ್ರಜಾವಾಣಿ ದಿನಪತ್ರಿಕೆ,** ೨೦೧೧.

ನಾಲ್ಕು

## ನಿಯತ ಕಾಲಿಕೆಗಳು


೧. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ.

೨. ಪ್ರಭುದ್ಧ ಕರ್ನಾಟಕ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೧೯.

೩. ವಿಚಾರ ತರಂಗಿಣಿ, ೧೯೨೯.

೪. ಸಂಕ್ರಮಣ ಪತ್ರಿಕೆಗಳು.

